॥ ಶ್ರೀ ॥

ವ್ಯಾಸಮಹರ್ಷಿಪ್ರಣೀತ

# ಶ್ರೀಮಹಾಭಾರತವು

## ದ್ರೋಣಪರ್ವವು

(ಎರಡನೆಯ ಭಾಗ)



**ಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯ ವಿರಚಿತವು.**




ಶ್ರೀವತ್ಸ ಪ್ರೆಸ್, ತಿರುವಲ್ಲಿಕ್ಕೇಣಿ, ಮದ್ರಾಸ್.

ಪ್ರಕಾಶಕರು :

**ಕರ್ನಾಟಕ ಡೆಪೋ,**

**40, ಸೌತ್ ಟ್ಯಾಂಕ್ ಸ್ಕ್ವೇರ್, ತಿರುವಲ್ಲಿಕ್ಕೇಣಿ, ಮದ್ರಾಸ್**

**1940**

# ವಿಷಯಾನುಕ್ರಮಣಿಕೆ.

---

## ದ್ರೋಣಪರ್ವ (ಎರಡನೆಯಭಾಗ)

### ಜಯದ್ರಥವಧಪರ್ವವು.

ಅಧ್ಯಾಯ. | ಪುಟ.

## ಘಟೋತ್ಕಚವಧಪರ್ವವು.

## ದ್ರೋಣವಧಪರ್ವವು.

# ಚಿತ್ರಪಟಗಳ ಪಟ್ಟಿ

## ಜಯದ್ರಥನನ್ನು ಹಿಡಿಯುವುದಕ್ಕಾಗಿ ಹೋಗುತ್ತಿದ್ದ ಅರ್ಜುನನನ್ನು, ದುರ್ಯೋಧನನು ಇದಿರಿಸಿ ತಡೆದುದು.

ಧೃತರಾಷ್ಟ್ರಮಹಾರಾಜಾ! ಹೀಗೆ ಕೃಷ್ಣಾರ್ಜುನರಿಬ್ಬರೂ ಮುಂದೆ ಮುಂದೆ ಅತಿಕ್ರಮಿಸಿಬರುವುದನ್ನು ನೋಡಿ, ನಮ್ಮಕಡೆಯ ಸೈನ್ಯಗಳೆಲ್ಲ ಭಯದಿಂದ ತತ್ತ್ರಳಿಸಿದುವು. ಓಡಿಹೋದವರೆಲ್ಲ ತಿರುಗಿ ಲಜ್ಜೆಯಿಂದಲೂ, ಯುದ್ಧೋತ್ಸಾಹದಿಂದಲೂ ಪ್ರೇರಿತರಾಗಿ, ಮನಸ್ಸನ್ನು ದೃಢಮಾಡಿಕೊಂಡು, ಅರ್ಜುನನನ್ನು ಇದಿರಿಸಿಬಂದರು. ಆದರೆ, ಅವರು ಯಾರೂ ಸಮುದ್ರದಲ್ಲಿ ಬಿದ್ದ ನದಿಗಳಂತೆ ಇದುವರೆಗೆ ಹಿಂತಿರುಗಿದುದನ್ನೇ ಕಾಣಲಿಲ್ಲ. ನಾಸ್ತಿಕರು ವೇದಗಳಿಂದ ವಿಮುಖರಾಗುವಂತೆ, ಅಸತ್ತ್ವಗಳಾದ ಕೆಲವರುಮಾತ್ರ ಪ್ರಾಣಭಯದಿಂದ ಹಿಂತಿರುಗಿ, ಪಾಪಕ್ಕೀಡಾಗಿ ನರಕಕ್ಕೆ ಹೋಗತಕ್ಕವರಾದರು. ಹೀಗಿರುವಾಗ, ಪುರುಷಶ್ರೇಷ್ಠರಾದ ಕೃಷ್ಣಾರ್ಜುನರಿಬ್ಬರೂ ತಮಗಿದಿರಾದ ರಥಸೈನ್ಯಗಳನ್ನೆಲ್ಲ ಭೇದಿಸಿಕೊಂಡು, ರಾಹುವಿನ ಬಾಯಿಂದ ತಪ್ಪಿಬಂದ ಸೂರ್ಯಚಂದ್ರರಂತೆಯೂ, ಬಲೆಗೆ ಸಿಕ್ಕಿದ ದೊಡ್ಡ ಮೀನುಗಳೆರಡು ಬಲೆಯನ್ನು ಕತ್ತರಿಸಿಕೊಂಡು ನಿರಾಯಾಸವಾಗಿ ಹೊರಟುಬಂದಂತೆಯೂ, ಶತ್ರುಸೇನಾಜಾಲವನ್ನು ಭೇದಿಸಿಕೊಂಡು ಬಂದು ಹೊರಗೆ ಕಾಣಿಸಿದರು. ಅಷ್ಟು ಸೈನ್ಯಗಳ ಗುಂಪಿನಲ್ಲಿಯೂ ಅವರು ಶಸ್ತ್ರಾಸ್ತ್ರಗಳ ಪ್ರಹಾರಕ್ಕೀಡಾಗದೆ, ದುರ್ಭೇದ್ಯವಾದ ದ್ರೋಣಸೈನ್ಯವನ್ನು ಚದರಿಸಿ, ಆಗಲೇ ಉದಿಸಿಬಂದ ಕಾಲಸೂರ್ಯರಂತೆ ಕಾಣುತ್ತಿದ್ದರು. ತಮ್ಮ ಶಸ್ತ್ರಗಳಿಂದ ಶತ್ರುಸೈನ್ಯವನ್ನೂ ಮುಚ್ಚುತ್ತಿದ್ದರು. ಮಹಾಮಕರದ ಬಾಯಿಂದ ತಪ್ಪಿಸಿಕೊಂಡುಬಂದ ಮೀನುಗಳು ಸಮುದ್ರವನ್ನು ಕಲಗಿಸುವಂತೆ ನಮ್ಮ ಸೇನೆಯನ್ನೆಲ್ಲ ಕಲಗಿಸುತ್ತಿದ್ದರು. ಮಹಾರಾಜಾ! ಮೊದಲು ನಿನ್ನ ಮಕ್ಕಳೂ, ನಿನ್ನ ಕಡೆಯವರೂ ಕೃಷ್ಣಾರ್ಜುನರು ದ್ರೋಣಸೈನ್ಯದ ನಡುವೆ ಸಿಕ್ಕಿಬಿದ್ದುದನ್ನು ನೋಡಿದಾಗ, ಅವರು ಆ ದ್ರೋಣನ ಕೈಯಿಂದ ತಪ್ಪಿಬರುವುದು ಸಾಧ್ಯವೇ ಇಲ್ಲವೆಂದು ತಿಳಿದಿದ್ದರು. ಅವರ ನಿರೀಕ್ಷಣೆಗೆ ವಿರುದ್ಧವಾಗಿ, ಕೃಷ್ಣಾರ್ಜುನರು ಮುಂದೆಮುಂದೆ ನಿರಾಯಾಸವಾಗಿ ಸಾಗಿಬರುವುದನ್ನು ಕಂಡು, ಇನ್ನು ಸಿಂಧುರಾಜನನ್ನು ಬದುಕಿಸಿಕೊಳ್ಳುವುದು ತಮಗೆ ಸಾಧ್ಯವಿಲ್ಲವೆಂದು ನಿರಾಶರಾದರು. ಮಹಾರಾಜಾ! ಮನುಷ್ಯನಿಗೆ ಆಸೆಯಿಂ

ಬುದು ಬಲವತ್ತರವಾದುದು. ಸಿಂಧುರಾಜನನ್ನು ಬದುಕಿಸಿಕೊಳ್ಳುವುದ ರಲ್ಲಿ ಅವರಿಗೆ ಸಂಪೂರ್ಣವಾದ ಭರವಸೆಯಿದ್ದಿತು. ಆ ಕೃಷ್ಣಾರ್ಜುನರು ದ್ರೋಣನ ಮತ್ತು ಕೃತವರ್ಮನ ಸೈನ್ಯಗಳಿಂದ ತಪ್ಪಿಸಿಕೊಂಡು ಬರುವುದೇ ಸಾಧ್ಯವಿಲ್ಲವೆಂದೂ ಅವರು ನೆನೆಸಿದ್ದರು. ಆ ಆಸೆಯೆಲ್ಲವೂ ವಿಫಲವಾಯಿತು. ಆ ಇಬ್ಬರ ಸೈನ್ಯಗಳನ್ನೂ ಕೃಷ್ಣಾರ್ಜುನರು ದಾಟಿ ಬಂದುಬಿಟ್ಟರು. ಉರಿಯುವ ಬೆಂಕಿಯಂತೆ ತೇಜಸ್ಸಿನಿಂದ ಬೆಳಗುತ್ತಿರುವ ಆ ಕೃಷ್ಣಾರ್ಜುನರನ್ನು ನೋಡಿ, ಸೈಂಧವನ ಬದುಕಿನಲ್ಲಿ ನಿನ್ನವರೆಲ್ಲರೂ ಆಸೆಯನ್ನು ಬಿಟ್ಟರು. ಇದಲ್ಲದೆ ಕೃಷ್ಣಾರ್ಜುನರು ಮುಂದೆಮುಂದೆ ಬರುತ್ತ, ಸಂತೋಷದಿಂದ ಒಬ್ಬರಿಗೊಬ್ಬರು ಜಯದ್ರಥನನ್ನು ಕೊಲ್ಲುವ ವಿಷಯವಾಗಿ ಶತ್ರುಗಳಿಗೆ ಭಯವನ್ನು ಹುಟ್ಟಿಸುವಂತೆ ಮಾತಾಡುತ್ತಿದ್ದರು. ಆಗ ಅರ್ಜುನನು ಕೃಷ್ಣನನ್ನು ಕುರಿತು "ವಾಸುದೇವಾ! ಧಾರ್ತರಾಷ್ಟ್ರರ ಕಡೆಯ ಆರುಮಂದಿ ಮಹಾರಥಿಕರಿಂದ ಸೈಂಧವನು ಬಚ್ಚಿಡಲ್ಪಟ್ಟಿರುವನು. ಆದರೇನು? ನನ್ನ ಕಣ್ಣಿಗೆ ಬಿದ್ದರೆಮಾತ್ರ ಅವನು ಜೀವದಿಂದ ತಪ್ಪಿಸಿಕೊಂಡುಹೋಗಲಾರನು. ದೇವಗಣಗಳೊಡನೆ ಸೇರಿ ದೇವೇಂದ್ರನೇ ಆ ಸೈಂಧವನನ್ನು ಯುದ್ಧದಲ್ಲಿ ರಕ್ಷಿಸಿಕೊಳ್ಳಬೇಕೆಂದು ಬಂದರೂ, ನಾವುಬೇರೆ ಅವನನ್ನು ಕೊಲ್ಲದೆ ಬಿಡುವುದಿಲ್ಲ" ಎಂದು ಹೇಳುತ್ತಿದ್ದನು. ಹೀಗೆ ಸೈಂಧವನಮೇಲೆ ಕಣ್ಣಿಟ್ಟು, ಕೃಷ್ಣಾರ್ಜುನರಿಬ್ಬರೂ ಅನ್ಯೋನ್ಯವಾಗಿ ವಾದಿಸುತ್ತಿರುವುದನ್ನು ಕೇಳಿ ನಿನ್ನ ಮಕ್ಕಳಿಗೆ ಎದೆ ನಡುಗಿತು. ಅವರಲ್ಲಿ ದೊಡ್ಡ ಹಾಹಾಕಾರವೆದ್ದಿತು. ಬಹಳ ದಾಹಗೊಂಡ ಮದದಾನೆಗಳೆರಡು, ದೊಡ್ಡ ಮರುಭೂಮಿಯನ್ನು ದಾಟಿ ಬಂದು, ಸ್ವಚ್ಛಜಲವುಳ್ಳ ಕೊಳವನ್ನು ಕಂಡು, ಅದರ ನೀರನ್ನು ಕುಡಿದು ಉಲ್ಲಾಸಹೊಂದುವಂತೆ, ಕೃಷ್ಣಾರ್ಜುನರು ಆ ಎರಡು ಸೈನ್ಯಗಳನ್ನೂ ದಾಟಿ ಮಹೋತ್ಸಾಹದಿಂದಿದ್ದರು. ಹುಲಿಕರಡಿಗಳಿಂದಲೂ, ಕಾಡಾನೆಗಳಿಂದಲೂ, ಸಿಂಹಗಳಿಂದಲೂ ತುಂಬಿದ ಪರ್ವತಗಳನ್ನು ದಾಟಿ, ಪ್ರಾಣಾಪಾಯದಿಂದ ತಪ್ಪಿಬಂದ ವರ್ತಕನಂತೆ, ಆ ಕೃಷ್ಣಾರ್ಜುನರು ಅತ್ಯುತ್ಸಾಹದಿಂದಿರುವುದನ್ನೂ, ಅವರ ಕಳೆಯೇರಿದ ಮುಖವರ್ಣವನ್ನೂ ನೋಡಿ ನಿನ್ನ ಸೈನ್ಯಗಳೆಲ್ಲ ಭಯದಿಂದ ಕೂಗಿಕೊಂಡುವು. ಕೋಪಗೊಂಡ ಸರ್ಪದಂತೆಯೂ, ಉರಿಯುವ ಬೆಂಕಿಯಂತೆಯೂ ಕಾಣುವ ದ್ರೋಣನನ್ನೂ, ಅವನಕಡೆಯ ಬೇರೆ ಎಲ್ಲಾ

ರಾಜರನ್ನೂ ನಿರಾಕರಿಸಿ, ಸಮುದ್ರಪಂತಿದ್ದ ದ್ರೋಣಸೈನ್ಯವನ್ನೂ ದಾಟಿ, ಸೂರ್ಯತೇಜಸ್ಸಿನಿಂದ ಬೆಳಗುತ್ತಿದ್ದ ಆ ಕೃಷ್ಣಾರ್ಜುನರು ಮಹಾಸಾಗರವನ್ನು ದಾಟಿ ಬಂದವರಂತೆ ಸಂತೋಷಯುಕ್ತರಾಗಿ, ಆ ಸೈನ್ಯದ ನಡುವೆ ಇಂದ್ರಾಗ್ನಿಗಳಿಗೆ ಸಮಾನರಾಗಿ ಬೆಳಗುತ್ತಿದ್ದರು. ನಡುನಡುವೆ ಭರದ್ವಾಜನ ಬಾಣಪ್ರಹಾರಗಳಿಂದ ಅವರ ಮೈಯಲ್ಲಿ ರಕ್ತಸ್ರಾವಗಳು ಕಾಣಿಸುತ್ತಿರಲು, ಪುಷ್ಪಿತಗಳಾದ ಕರ್ಣಿಕಾರವೃಕ್ಷಗಳಿಂದ ಕೂಡಿದ ಎರಡು ಪರ್ವತಗಳಂತೆ ತೋರುತ್ತಿದ್ದರು. ದ್ರೋಣನೆಂಬ ದೊಡ್ಡ ಮೊಸಳೆಯಿಂದಲೂ, ಶಕ್ತ್ಯಾಯುಧಗಳೆಂಬ ಸರ್ಪಗಳಿಂದಲೂ, ಉಕ್ಕಿನ ಬಾಣಗಳೆಂಬ ಮಕರಗಳಿಂದಲೂ, ಕ್ಷತ್ರಿಯವೀರರೆಂಬ ನೀರಿನಿಂದಲೂ, ಜ್ಯಾಘೋಷವೆಂಬ ಗುಡುಗಿನಿಂದಲೂ, ಗದಾಖಡ್ಗಗಳೆಂಬ ಮಿಂಚಿನಿಂದಲೂ ಕೂಡಿದ ದ್ರೋಣನ ಅಸ್ತ್ರಸಮೂಹಗಳೆಂಬ ಮೇಘಗಳಿಂದ ತಪ್ಪಿಬಂದ ಆ ಕೃಷ್ಣಾರ್ಜುನರು, ಮಹಾಂಧಕಾರದಿಂದ ಮರೆಸಲ್ಪಟ್ಟಿದ್ದ ಸೂರ್ಯಚಂದ್ರರು ತಿರುಗಿ ಕಾಣಿಸುವಂತೆ ಸೈನಿಕರ ಕಣ್ಣಿಗೆ ಗೋಚರಿಸುತ್ತಿದ್ದರು. ವರ್ಷಾಕಾಲದಲ್ಲಿ ತುಂಬಿದ ಪ್ರವಾಹವೇಗದಿಂದ ದಾಟಲಸಾಧ್ಯವಾಗಿ, ಸಮುದ್ರಕ್ಕೆ ಹೋಗುವ * ಸಿಂಧು ಮೊದಲಾದ ಆರು ಮಹಾನದಿಗಳನ್ನೂ, ಬರಿ ತೋಳುಗಳಿಂದಲೇ ದಾಟಿ ಬಂದವರಂತೆ, ಕೃಷ್ಣಾರ್ಜುನರು ದ್ರೋಣಸೈನ್ಯವೆಂಬ ಭಯಂಕರವಾದ ಮಹಾನದಿಯನ್ನು ದಾಟಿ, ಆ ದ್ರೋಣನ ಅಸ್ತ್ರಬಲಗಳನ್ನೆಲ್ಲ ನಿವಾರಿಸಿಕೊಂಡು ಬಂದುದರಿಂದ, ಸಮಸ್ತಭೂತಗಳೂ ಆ ಕೃಷ್ಣಾರ್ಜುನರಿಗಿಂತಲೂ ಮಹಾಧನುರ್ಧಾರಿಗಳೂ, ಲೋಕಪ್ರಖ್ಯಾತರೂ ಬೇರೊಬ್ಬರಿಲ್ಲವೆಂದು ತಿಳಿದುವು. ಅವರಿಬ್ಬರೂ ಜಿಂಕೆಯನ್ನು ಹಿಡಿಯುವುದಕ್ಕೆ ಹೋಗುವ ಹುಲಿಗಳಂತೆ ಜಯದ್ರಥನನ್ನು ಸಮೀಪಿಸಿ, ಅವನನ್ನು ಕೊಲ್ಲುವುದಕ್ಕಾಗಿ ಸಮಯನಿರೀಕ್ಷಣೆಯಲ್ಲಿದ್ದರು. ಅವರ ಮುಖದ ಕಳೆಯನ್ನು ನೋಡಿದಾಗಲೇ' ನಿನ್ನವರು ಜಯದ್ರಥನು ಸತ್ತನೆಂದೇ ತಿಳಿದರು. ಕೃಷ್ಣಾರ್ಜುನರಿಬ್ಬರೂ, ದೂರದಲ್ಲಿ ಜಯದ್ರಥನಿರುವ ಸಂಚನ್ನು ತಿಳಿದು, ಆಗಾಗ ಸಂತೋಷದಿಂದ ಸಿಂಹನಾದವನ್ನು ಮಾಡುತ್ತಿದ್ದರು. ಕುದುರೆಯ ಹಗ್ಗವನ್ನು ಹಿಡಿದ

* ಶತದ್ರು, ವಿಪಾಶೆ, ಇರಾವತಿ, ಚಂದ್ರಭಾಸೆ, ವಿತಸ್ತೆ, ಎಂಬಿವು ಉಳಿದ ಐದು ಮಹಾನದಿಗಳು.

ಕೃಷ್ಣನ, ಮತ್ತು ರಥದಲ್ಲಿ ಧನುರ್ಧಾರಿಯಾಗಿ ಕುಳಿತಿದ್ದ ಅರ್ಜುನನ ಮುಖ ತೇಜಸ್ಸು ಸೂರ್ಯಾಗ್ನಿಗಳ ಸೇರುವೆಯಂತೆ ಕಾಣಿಸಿತು. ದ್ರೋಣನ ಸೈನ್ಯವನ್ನು ದಾಟಿಬಂದುದೊಂದು, ಸೈಂಧವನು ತಮಗೆ ದೃಷ್ಟಿಗೋಚರ ವಾಗುವಷ್ಟು ಸಮೀಪಿಸಿದುದೊಂದು, ಇವೆರಡೂ ಅವರಿಗೆ, ಗಿಡುಗಗಳಿಗೆ ಮಾಂಸಾಹಾರವು ಸಿಕ್ಕಿದಷ್ಟು ಉತ್ಸಾಹವನ್ನುಂಟುಮಾಡಿತು. ಸೈಂಧವನನ್ನು ಕಂಡೊಡನೆ ಅವರು ಗಿಡುಗದಂತೆ ವೇಗದಿಂದ ಮುಂದುವರಿದರು. ಇದನ್ನು ಕಂಡು ನಿನ್ನ ಮಗನಾದ ದುರ್ಯೋಧನನು ಅವರಿಂದ ಸೈಂಧವನನ್ನು ರಕ್ಷಿಸಿಕೊಳ್ಳುವುದಕ್ಕಾಗಿ, ವೇಗದಿಂದಿದಿರಿಸಿಬಂದು ತಡೆದನು. ಮಹಾರಾಜಾ! ದ್ರೋಣನಿಂದ ಅನುಗ್ರಹಿಸಲ್ಪಟ್ಟ ಮಂತ್ರಕವಚವುಳ್ಳ ನಿನ್ನ ಮಗನು, ಕುದುರೆಗಳ ಸಂಸ್ಕಾರಕ್ರಮವನ್ನೂ ಸರಿಯಾಗಿ ಒಲ್ಲವನಾದುದರಿಂದ ಏಕರಥ ನಾಗಿಯೇ ಮುಂದೆ ಬಂದು, ಕೃಷ್ಣಾರ್ಜುನರನ್ನು ತಡೆದು, ರಥದ ಮೂಕಿಯು ಲ್ಲಿದ್ದ ಶ್ರೀಕೃಷ್ಣನಿಗಿದಿರಾದನು. ಇದನ್ನು ಕಂಡು ನಿನ್ನ ಸೈನ್ಯಗಳೆಲ್ಲ ಸಂತೋ ಷದಿಂದ ಸಿಂಹನಾದಮಾಡಿದುವು! ರಣವಾದ್ಯಗಳನ್ನು ನುಡಿಸಿದುವು! ಈ ಶಂಖದುಂದುಭಿನಾದಗಳೂ, ಸಿಂಹನಾದಗಳೂ ಮೇಲೆಮೇಲೆ ಪ್ರಬಲವಾ ದುವು. ದುರ್ಯೋಧನನು ತಾನಾಗಿಯೇ ಕೃಷ್ಣಾರ್ಜುನರಿಗೆ ಇದಿರಾದುದನ್ನು ಕಂಡು, ಸೈಂಧವನ ರಕ್ಷಣೆಗಾಗಿ ಕೈಕಟ್ಟಿನಿಂತಿದ್ದ ನಿನ್ನವರಿಗೆಲ್ಲಾ ಅತ್ಯುತ್ಸಾಹ ವುಂಟಾಯಿತು. ಹೀಗೆ ದುರ್ಯೋಧನನು ಮೀರಿಬಂದು, ಅರ್ಜುನನ ರಥ ವನ್ನು ತಡೆದು ನಿಂತಾಗ, ಕೃಷ್ಣನು ಅರ್ಜುನನನ್ನು ನೋಡಿ ಕಾಲೋಚಿತ ವಾದ ಮಾತಿನಿಂದ ಹೀಗೆಂದನು.

ಇದು ನೂರ ಒಂದನೆಯ ಅಧ್ಯಾಯವು.

ಕೃಷ್ಣನು ಹಿಂದೆ ದುರ್ಯೋಧನನಿಂದ ನಡೆದ ಅಪರಾಧಗ ಳನ್ನೆಲ್ಲಾ ಅರ್ಜುನನಿಗೆ ಜ್ಞಾಪಿಸಿ, ಆಗಲೇ ದುರ್ಯೋಧನ ನನ್ನು ವಧಿಸಿಬಿಡುವಂತೆ ಪ್ರೇರಿಸಿದುದು. ಅರ್ಜುನ ನೊಡನೆ ದುರ್ಯೋಧನನ ವೀರವಾದಗಳು.

ಕೃಷ್ಣನು ಅರ್ಜುನನನ್ನು ಕುರಿತು “ಪಾರ್ಥಾ! ದುರ್ಯೋಧನನು ನಮ್ಮಮೇಲೆ ಹೇಗೆ ಮೀರಿಬರುತ್ತಿರುವನೋ ನೋಡು? ಈಗ ಇವನು

ದೊಡ್ಡ ವಿಪತ್ತಿಗೆ ಗುರಿಯಾದನೆಂದೇ ನನಗೆ ತೋರುವುದು. ಇವನಿಗೆ ಸಮಾನರಾದ ರಥಿಕರಿಲ್ಲ. ಬಹುದೂರಕ್ಕೆ ಬಾಣಗಳನ್ನೆಸೆಯತಕ್ಕವನು. ಮಹಾಧನುರ್ಧರನು. ಅಸ್ತ್ರಗಳಲ್ಲಿ ಪರಿಚಿತನು! ಯುದ್ಧದಲ್ಲಿ ಹೆಮ್ಮೆಯುಳ್ಳವನು. ದೃಢವಾದ ಹಸ್ತವುಳ್ಳವನು. ಚಿತ್ರವಿಚಿತ್ರವಾಗಿ ಯುದ್ಧಮಾಡಬಲ್ಲವನು. ಮಹಾಬಲಾಢ್ಯನು! ಅಲ್ಲದೆ ಇವನು ಮೊದಲಿಂದಲೂ ವಿಶೇಷಸುಖದಿಂದಲೇ ಬೆಳೆದವನು. ಅನೇಕ ಮಹಾರಥರಿಂದ ಗೌರವಿಸಲ್ಪಟ್ಟವನು. ಒಳ್ಳೇ ಧೀಮಂತನು! ಆದರೆ, ಪಾಂಡವರಾದ ನಿಮ್ಮನ್ನು ಇವನು ಯಾವಾಗಲೂ ದ್ವೇಷಿಸುತ್ತಲೇ ಇದ್ದವನು. ಅಂತವನು ತಾನಾಗಿ ಈಗ ಇದಿರುಬಿದ್ದು ಬಂದುದರಿಂದ, ಅವನೊಡನೆ ಯುದ್ಧಕ್ಕೆ ಇದು ನಿನಗೆ ಒಳ್ಳೇ ಸಮಯವೇ! ಜೂಜಿನಲ್ಲಿ ಹೇಗೋ ಹಾಗೆ, ಈಗ ಇವನೊಡನೆ ಜಯಕ್ಕಾಗಿಯೋ, ಪರಾಜಯಕ್ಕಾಗಿಯೋ ನೀನು ಯುದ್ಧಮಾಡಿಯೇತೀರಬೇಕು. ಧನಂಜಯಾ! ನಿನ್ನ ಮನಸ್ಸಿನಲ್ಲಿ ಬಹುಕಾಲದಿಂದ ಅಡಗಿಸಿಕೊಂಡಿರುವ ಕ್ರೋಧವೆಂಬ ವಿಷವನ್ನು ಆ ದುರ್ಯೋಧನನಮೇಲೆ ಕಾರುವುದಕ್ಕೆ ಇದು ಸಕಾಲವು. ಪಾಂಡವರ ಅನರ್ಥಗಳಿಗೆಲ್ಲ ಇವನೇ ಮೂಲವು. ಅಂತವನು ಈಗ ನಿನ್ನಿದಿರಾಗಿ ನಿಂತಿರುವನು. ಈಗ ನಿನ್ನ ಪರಾಕ್ರಮಕ್ಕೆ ಸಾಫಲ್ಯವನ್ನು ತೋರಿಸು. ರಾಜ್ಯದಾಸೆಯುಳ್ಳ ಈತನು, ನಿನ್ನೊಡನೆ ಯುದ್ಧಕ್ಕೆ ಇದಿರಾದುದೇ ವಿಶೇಷವು! ನಿನ್ನ ಅದೃಷ್ಟವಶದಿಂದ ಈಗ ಇವನು ನಿನ್ನ ಬಾಣಗಳಿಗೆ ಗೋಚರನಾಗಿರುವನು. ಈಗಲೇ ಅವನನ್ನು ಕೊನೆಮುಟ್ಟಿಸುವ ಪ್ರಯತ್ನವನ್ನು ಮಾಡು. ಐಶ್ವರ್ಯಮದದಿಂದ ಕೊಬ್ಬಿದ ಇವನಿಗೆ, ಇದುವರೆಗೆ ದುಃಖವೆಂಬುದೇ ತಿಳಿಯದು. ಯುದ್ಧದಲ್ಲಿ ನಿನ್ನ ಪರಾಕ್ರಮವನ್ನು ಅವನು ಇದುವರೆಗೆ ಕಂಡುತಿಳಿದವನಲ್ಲ. ಅರ್ಜುನಾ! ದೇವಾಸುರಮನುಷ್ಯರೊಡಗೂಡಿದ ಮೂರು ಲೋಕಗಳೂಕೂಡ ಯುದ್ಧದಲ್ಲಿ ನಿನ್ನ ಪರಾಕ್ರಮವನ್ನು ಸಹಿಸಲಾರವು. ಇನ್ನು ಏಕಾಕಿಯಾಗಿ ಬಂದುನಿಂತಿರುವ ಈ ದುರ್ಯೋಧನನ ಪಾಡೇನು? ಅದೃಷ್ಟವಶದಿಂದ ಅವನು ಈಗ ನಿನ್ನ ರಥದ ಬಳಿಯಲ್ಲಿಯೇ ಬಂದುನಿಂತಿರುವನು. ಇಂದ್ರನು ವೃತ್ರನನ್ನು ಹೇಗೋ ಹಾಗೆ ಇವನನ್ನು ಈಗಲೇ ಕೊಂದುಬಿಡು. ಇವನು ಯಾವಾಗಲೂ ನಿನಗೆ ಅನರ್ಥವನ್ನುಂಟುಮಾಡುವುದರಲ್ಲಿಯೇ ದೃಷ್ಟಿಯುಳ್ಳವನು. ಧರ್ಮರಾಜ

ನನ್ನು ಮೋಸದಿಂದ ಜೂಜಿನಲ್ಲಿ ಜಯಿಸಿದನು! ಪಾಪಬುದ್ಧಿಯುಳ್ಳ ಇವನು ನಿರಪರಾಧಿಗಳಾದ ನಿಮ್ಮಲ್ಲಿ ಎಷ್ಟೋ ಘೋರಕೃತ್ಯಗಳನ್ನು ನಡೆಸಿದನು! ಈತನನ್ನು ವಿಚಾರವಿಲ್ಲದೆ ನೀನು ಕೊಲ್ಲಬಹುದು! ಯುದ್ಧದಲ್ಲಿ ಕ್ಷತ್ರಿಯನು ವರ್ತಿಸಬೇಕಾದ ನೀತಿಯನ್ನು ಹಿಡಿದು, ನೀನು ಇವನನ್ನು ಈಗಲೇ ತೀರಿಸಿ ಬಿಡು. ಮೋಸದಿಂದ ನಿಮ್ಮ ರಾಜ್ಯವನ್ನು ಕಿತ್ತುಕೊಂಡುದು, ನಿಮ್ಮನ್ನು ವನವಾಸಕ್ಕೆ ಕಳುಹಿಸಿದುದು, ನಿಮ್ಮ ಪತ್ನಿಯಾದ ದ್ರೌಪದಿಗೆ ಅನೇಕವಿಧದಲ್ಲಿ ಕಷ್ಟವನ್ನು ಕೊಟ್ಟುದು, ಇವನ್ನೆಲ್ಲ ನೀನು ಮನಸ್ಸಿಗೆ ತಂದುಕೊಂಡು, ಇವನನ್ನು ಈಗಲೇ ವಧಿಸು. ಇವನು ನಿನ್ನ ಕಾರ್ಯೋದ್ದೇಶವನ್ನು ತಪ್ಪಿಸಬೇಕೆಂದು ನಿನ್ನನ್ನು ತಡೆಯಲು ಮುಂದೆ ಬಂದುದು ನಿನ್ನ ಅದೃಷ್ಟವೇ! ನಿನ್ನೊಡನೆ ಯುದ್ಧಮಾಡಬೇಕೆಂಬ ಮನಸ್ಸು ಅವನಿಗೆ ಹುಟ್ಟಿದುದೂ ನಿನ್ನ ಅದೃಷ್ಟವೇ! ಪಾರ್ಥಾ! ನಿನ್ನ ಕೋರಿಕೆಗಳೆಲ್ಲವೂ ಪ್ರಯತ್ನವಿಲ್ಲದೆ ಈಗ ಅದೃಷ್ಟವಶದಿಂದ ಕೈಗೂಡಿಬರುವಂತಿವೆ! ಆದುದರಿಂದ ಕುಲಗೇಡಿಯಾದ ಈತನನ್ನು ನೀನು, ಇಂದ್ರನು ಜಂಭಾಸುರನನ್ನು ಕೊಂದಂತೆ ಈಗಲೇ ಕೊಂದುಬಿಡು. ಇವನನ್ನು ನೀನು ಕೊಂದರೆ, ಕೌರವಸೈನ್ಯವು ಅನಾಯಕವಾಗಿ ತಾನಾಗಿಯೇ ಚದರಿಹೋಗುವುದು. ಕುರುಕುಲದಲ್ಲಿ ಹುಟ್ಟಿದ ವೈರದ ಮೂಲವನ್ನೇ ಕತ್ತರಿಸಿದಂತಾಗುವುದು" ಎಂದನು. ಓ ಧೃತರಾಷ್ಟ್ರಮಹಾರಾಜಾ! ಆಗ ಅರ್ಜುನನು ಕೃಷ್ಣನನ್ನು ಕುರಿತು "ಪ್ರಭೂ! ಹಾಗೆಯೇ ಆಗಲಿ! ಈಗ ನನ್ನ ಮೊದಲಿನ ಕರ್ತವ್ಯವೇ ಇದು! ಇತರ ವಿಷಯಗಳೆಲ್ಲ ಹಾಗಿರಲಿ! ಆ ಸುಯೋಧನನು ಇರುವಲ್ಲಿಗೆ ರಥವನ್ನು ಬಿಡು. ಬಹುಕಾಲದಿಂದ ನಮ್ಮ ರಾಜ್ಯವನ್ನು ನಿಷ್ಕಂಟಕವಾಗಿ ಅನುಭವಿಸಿದ ಈತನ ತಲೆಯನ್ನು ಇದೇ ಯುದ್ಧದಲ್ಲಿ ಕತ್ತರಿಸಿಕೆಡಹುವೆನು. ಕೃಷ್ಣಾ! ನಿಜವಾಗಿ ಈ ಕಾರ್ಯವು ನನಗೆ ಸಾಧ್ಯವೆ? ಇವನ ತಲೆಯನ್ನು ನಾನು ಕಡಿಯುವೆನೆ? ದುಃಖಾರ್ಹಳಲ್ಲದ ಆ ನನ್ನ ಪತ್ನಿ ದ್ರೌಪದಿಯ ತಲೆಕೂದಲನ್ನು ಹಿಡಿದೆಳೆಯಿಸಿದ ಈ ನೀಚನಮೇಲೆ ನಾನು ಅದಕ್ಕೆತಕ್ಕಂತೆ ಹಗೆತೀರಿಸಿಕೊಳ್ಳಬಲ್ಲೆನೆ? ದುರ್ಯೋಧನನನ್ನು ಕೊಂದು, ಹಿಂದೆ ನಾನು ಅವನಿಂದ ಅನುಭವಿಸಿದ ದುಃಖಗಳನ್ನೆಲ್ಲ ತೀರಿಸಿಕೊಳ್ಳಬಲ್ಲೆನೇ?" ಎಂದು ಅರ್ಜುನನು ಕೃಷ್ಣನೊಡನೆ ಹೇಳುತ್ತಿರುವಾ

ಗಲೇ, ಕೃಷ್ಣನು ರಥವನ್ನು ಮುಂದೆ ಬಿಟ್ಟನು. ಅಂತಹ ಭಯಕಾಲದ ಲ್ಲಿಯೂ ಭಯವನ್ನು ತೋರಿಸಿಕೊಳ್ಳದೆ, ನಿನ್ನ ಮಗನೂ ಪಾರ್ಥನ ರಥಕ್ಕಿದಿ ರಾಗಿಬಂದನು. ನಿನ್ನ ಮಗನ ಈ ಸಾಹಸವನ್ನು ಎಲ್ಲರೂ ಕೊಂಡಾಡಿ ದರು. ನಿನ್ನ ಸೈನ್ಯಗಳಲ್ಲಿ ದೊಡ್ಡ ಸಿಂಹನಾದವನ್ನು ಮಾಡಿದುವು. ಈ ದೊಡ್ಡ ಗದ್ದಲದಲ್ಲಿ ನಿನ್ನ ಮಗನು ಅರ್ಜುನನ ರಥವನ್ನು ತಡೆದನು. ಅರ್ಜುನನು ವಿಸ್ಮಿತನಾದನು. ಅರ್ಜುನನನ್ನು ನೋಡಿ ನಿನ್ನ ಮಗನೂ ವಿಸ್ಮಿತನಾದನು. ಸುತ್ತುಮುತ್ತಲೂ ನೆರೆದಿದ್ದ ರಾಜರೆಲ್ಲರೂ ಆಶ್ಚರ್ಯಪಟ್ಟರು. ನಿನ್ನ ಮಗನು ಯುದ್ಧೋತ್ಸಾಹದಿಂದ ನಿಂತು, ನಗುಮುಖದಿಂದಲೇ ಅರ್ಜು ನನನ್ನು ಯುದ್ಧಕ್ಕಾಗಿ ಕರೆದನು. ಆ ಉತ್ಸಾಹವನ್ನು ನೋಡಿ ಕೃಷ್ಣಾ ರ್ಜುನರು ಸಂತೋಷದಿಂದ ಸಿಂಹನಾದಮಾಡಿದರು. ಇಬ್ಬರೂ ತಮ್ಮ ತಮ್ಮ ಶಂಖಗಳನ್ನೂದಿದರು. ಅವರ ಉತ್ಸಾಹವನ್ನು ನೋಡಿ ನಿನ್ನಕಡೆ ಯವರಿಗೆ "ಇನ್ನು ದುರ್ಯೋಧನನು ಬದುಕುವ ಆಸೆಯೇ ಇಲ್ಲ"ವೆಂದು ತೋರಿತು. ನಿನ್ನ ಮಗನು ಬೆಂಕಿಯಬಾಯಿಗೆ ಬಿದ್ದನೆಂದೇ ಎಲ್ಲರೂ ನಿಶ್ಚ ಯಿಸಿ, ರಾಜನು ಸತ್ತನು. "ಇನ್ನು ದುರ್ಯೋಧನನ ಆಸೆಯು ತೀರಿತು!" ಎಂದು ಕೂಗಿಕೊಂಡರು. ಹೀಗೆ ಭಯದಿಂದ ಕೂಗುತ್ತಿರುವ ತನ್ನವರನ್ನು ನೋಡಿ ದುರ್ಯೋಧನನು "ಎಲೈ ಯೋಧರೇ! ನೀವೇಕೆ ಹೀಗೆ ಭಯಪ ಡುವಿರಿ? ಹೆದರಬೇಡಿರಿ! ಈ ಕೃಷ್ಣಾರ್ಜುನರಿಬ್ಬರನ್ನೂ ನಾನು ಈಗಲೇ ಮೃತ್ಯುವಿನ ಬಾಯಿಗೆ ತಳ್ಳುವೆನು" ಎಂದು ಅವರನ್ನು ಉತ್ಸಾಹಗೊಳಿಸುತ್ತ, ಅರ್ಜುನನನಕಡೆಗೆ ತಿರುಗಿ ದರ್ಪದಿಂದ "ಎಲ ಪಾರ್ಥಾ! ನೀನು ನಿಜ ವಾಗಿಯೂ ಪಾಂಡುವಿಗೆ ಹುಟ್ಟಿದ ಮಗನಾಗಿದ್ದರೆ, ಹಿಂದೆ ನೀನು ಈ ಭೂಮಿ ಯಲ್ಲಿ ಮತ್ತು ಆಕಾಶದಲ್ಲಿ ಕಲಿತುಬಂದ ದಿವ್ಯಾಸ್ತ್ರಗಳ ಶಕ್ತಿಯನ್ನೆಲ್ಲಾ ಈಗ ನನ್ನಲ್ಲಿ ತೋರಿಸು. ನಿನ್ನ ಮತ್ತು ಕೃಷ್ಣನ ಬಲವೀರ್ಯಗಳ ನ್ನೆಲ್ಲ ನನ್ನಲ್ಲಿ ಉಪಯೋಗಿಸು. ನಾವೂ ನಿನ್ನ ಪುರುಷತ್ವವನ್ನು ನೋಡು ವೆವು. ನೀನು ನನ್ನ ಪರೋಕ್ಷದಲ್ಲಿ ಏನೇನೋ ಸಾಹಸಕಾರ್ಯಗನ್ನೆಲ್ಲ ಮಾಡಿದುದಾಗಿ ಅವರವರು ನನ್ನ ಮುಂದೆ ಹೇಳಿರುವರು. ಅವನ್ನೆಲ್ಲ ಈಗ ನನ್ನಲ್ಲಿ ತೋರಿಸು! ನೋಡುವೆನು" ಎಂದನು.

ಇದು ನೂರ ಎರಡನೆಯ ಅಧ್ಯಾಯವು.

## ಅರ್ಜುನನು ದುರ್ಯೋಧನನನ್ನು ಜಯಿಸಿದುದು.

ಮಹಾರಾಜಾ! ಹೀಗೆಂದು ಹೇಳುತ್ತಲೇ ನಿನ್ನ ಮಗನು, ಮರ್ಮಭೇದಕಗಳಾದ ಮೂರು ಬಾಣಗಳಿಂದ ಅರ್ಜುನನನ್ನೂ ಹೊಡೆದನು. ಬೇರೆ ನಾಲ್ಕು ಬಾಣಗಳಿಂದ ಅರ್ಜುನನ ನಾಲ್ಕು ರಥಾಶ್ವಗಳನ್ನು ಹೊಡೆದನು. ಹತ್ತುಬಾಣಗಳನ್ನು ಶ್ರೀಕೃಷ್ಣನ ಎದೆಗೆ ಗುರಿಯಿಟ್ಟು ಪ್ರಯೋಗಿಸಿದನು. ಒಂದು ಭಲ್ಲಾಯುಧದಿಂದ ಕೃಷ್ಣನ ಕೈಯಲ್ಲಿದ್ದ ಕುದುರೆಯ ಚಾಟಿಯನ್ನು ತುಂಡಿಸಿದನು. ಇದನ್ನು ನೋಡಿ ಅರ್ಜುನನು ಸಹಿಸಲಾರದೆ, ಏಕಕಾಲದಲ್ಲಿ ಹದಿನಾಲ್ಕು ಬಾಣಗಳನ್ನು ನಿನ್ನ ಮಗನಿಗೆ ಗುರಿಯಿಟ್ಟು ಹೊಡೆದನು. ಅವು ನಿನ್ನ ಮಗನ ಮಂತ್ರಕವಚವನ್ನು ಭೇದಿಸಲಾರದೆ ಮೊನೆಮುರಿದು ಕೆಳಗೆ ಬಿದ್ದುವು. ಅವು ವಿಫಲವಾದುದನ್ನು ನೋಡಿ ತಿರುಗಿ ಅರ್ಜುನನು ಬೇರೆ ಹದಿನಾಲ್ಕು ಬಾಣಗಳನ್ನು ಪ್ರಯೋಗಿಸಿದನು. ಅವೂ ದುರ್ಯೋಧನನ ಕವಚವನ್ನು ಭೇದಿಸಲಾರದೆ ವಿಫಲವಾಗಿ ಬಿದ್ದುವು. ಇದನ್ನು ನೋಡುತ್ತಿದ್ದ ಕೃಷ್ಣನು ಅರ್ಜುನನನ್ನು ಕುರಿತು “ಅರ್ಜುನಾ! ಇದೇನೋ ನನಗೆ ಆಶ್ಚರ್ಯವಾಗಿರುವುದು. ಕಲ್ಲುಗಳು ತಾವಾಗಿ ಮುಂದೆ ನಡೆದುಬಂದಂತೆ, ಇವು ನನಗೆ ಅದ್ಭುತವಾಗಿ ಕಾಣುತ್ತಿವೆ. ನೀನು ಪ್ರಯೋಗಿಸಿದ ಬಾಣಗಳೊಂದೂ ಪ್ರಯೋಜನಕ್ಕೆ ಬಾರದೆಹೋದ ಕಾರಣವೇನು? ನಿನ್ನ ಗಾಂಡೀವದಲ್ಲಿ ಮೊದಲಿನಂತೆ ಶಕ್ತಿಯಿರುವುದಷ್ಟೆ? ನಿನ್ನ ಮುಷ್ಟಿಬಲವೂ, ಭುಜಬಲವೂ ಕುಂದಿಲ್ಲದೆ ಮೊದಲಿನಂತೆಯೇ ಇರುವುವಷ್ಟೆ? ಒಂದುವೇಳೆ ನಿನಗೆ ಏನಾದರೂ ಕಾಲವು ವಿಪರೀತವಾಯಿತೋ? ನಿನ್ನ ಶತ್ರುವಿಗೇನಾದರೂ ಕಾಲವು ಬದಲಾಯಿಸಿತೋ? ಇದರ ರಹಸ್ಯವೇನು ಹೇಳು? ನಿನ್ನ ಬಾಣಗಳು ದುರ್ಯೋಧನನ ರಥದಲ್ಲಿ ನಿಷ್ಫಲವಾಗುವುದನ್ನು ನೋಡಿ ನನಗೆ ಮಹತ್ತಾದ ಆಶ್ಚರ್ಯವುಂಟಾಗಿದೆ. ನಿನ್ನ ಬಾಣಗಳೋ ಇಂದ್ರನ ವಜ್ರಕ್ಕೂ, ಸಿಡಿಲಿಗೂ ಸಮಾನವಾದವುಗಳು! ಅತಿಭಯಂಕರಗಳು! ಇದಿರಾದ ಶತ್ರುಗಳನ್ನೆಲ್ಲ ಭೇದಿಸತಕ್ಕವುಗಳು. ಅಂತಹ ಬಾಣಗಳು ನಿನ್ನ ಪ್ರಯತ್ನವನ್ನೆಲ್ಲ ಈಗ ವಿಫಲಮಾಡುತ್ತಿರುವುವಲ್ಲಾ! ಇದೇನು ಇಂತಹ ವಿಪರೀತವು?” ಎಂದನು. ಅದಕ್ಕಾ ಅರ್ಜುನನು “ವಾಸುದೇವಾ? ದ್ರೋಣನು ಇದಕ್ಕಾಗಿ ಒಂದು ತಂತ್ರವನ್ನು

ಮಾಡಿದಂತಿದೆ. ದುರ್ಯೋಧನನ ಕವಚವು ಎಂತಹ ಅಸ್ತ್ರಗಳಿಗೂ ದುರ್ಭೇದ್ಯವಾಗಿರುವಂತೆ ದ್ರೋಣನು ಮಂತ್ರಿಸಿಕೊಟ್ಟಿರುವನು. ಅದರ ರಹಸ್ಯವನ್ನು ಆ ದ್ರೋಣನೊಬ್ಬನು ಬಲ್ಲನು! ಅವನಿಂದ ನಾನೂ ತಿಳಿದಿರುವೆನು. ಆ ಕವಚವನ್ನು ಬಾಣಗಳಿಂದ ಭೇದಿಸುವುದು ಸಾಧ್ಯವಲ್ಲ. ಅಷ್ಟೇಕೆ? ಸಾಕ್ಷಾತ್ತಾಗಿ ದೇವೇಂದ್ರನೇ ತನ್ನ ವಜ್ರಾಯುಧವನ್ನು ಪ್ರಯೋಗಿಸಿದರೂ, ಅದನ್ನು ಭೇದಿಸುವುದು ಸಾಧ್ಯವಲ್ಲ. ಕೃಷ್ಣಾ! ಇವೆಲ್ಲವೂ ನಿನಗೂ ತಿಳಿಯದುದಲ್ಲ! ಹಾಗಿದ್ದರೂ ನೀನು ನನ್ನನ್ನು ಮೋಹಗೊಳಿಸುವುದಕ್ಕಾಗಿ ಪ್ರಶ್ನೆಮಾಡುತ್ತಿರುವೆ. ಈ ಮೂರು ಲೋಕಗಳಲ್ಲಿ ಹಿಂದೆ ನಡೆದುದು, ಈಗ ನಡೆಯುತ್ತಿರುವುದು, ಮುಂದೆ ನಡೆಯತಕ್ಕುದು, ಇವೆಲ್ಲವನ್ನೂ ನೀನು ತಿಳಿಯಬಲ್ಲವನು. ಕೃಷ್ಣಾ! ನಿನಗೆ ತಿಳಿದಷ್ಟು ಬೇರೆ ಯಾರಿಗೂ ತಿಳಿಯದು. ದ್ರೋಣಕಲ್ಪಿತವಾದ ಆ ಕವಚವನ್ನು ಧರಿಸಿಯೇ ದುರ್ಯೋಧನನು ಯುದ್ಧದಲ್ಲಿ ನಿರ್ಭಯವಾಗಿ ಇದಿರಿಸಿ ನಿಂತಿರುವನು. ಆದರೇನು? ದುರ್ಯೋಧನನಿಗೆ ಆ ಕವಚವು ಲಭಿಸಿದ್ದರೂ, ಆಯಾ ಕಾಲೋಚಿತವಾಗಿ ನಡೆಸಬೇಕಾದ ಕಾರ್ಯವೇನೆಂಬುದನ್ನುಮಾತ್ರ ಅವನು ತಿಳಿಯನು. ಇವನು ಸ್ತ್ರೀಯರಿಗೆ ಕುಪ್ಪಸವನ್ನು ತೊಡಿಸಿದಂತೆ, ಆ ದ್ರೋಣನಿಂದ ತೊಡಿಸಲ್ಪಟ್ಟ ಕವಚವನ್ನು ಧರಿಸಿ ನಿಂತಿರುವುದುಮಾತ್ರವಲ್ಲದೆ, ಬೇರೆ ಯಾವುದೂ ಅವನಿಂದ ಸಾಧ್ಯವಲ್ಲ. ಓ ಜನಾರ್ದನಾ! ಆ ದಿವ್ಯಕವಚದಿಂದ ಇವನು ರಕ್ಷಿತನಾಗಿದ್ದರೂ ಇರಲಿ. ನಾನೇನೋ ಅವನನ್ನು ಜಯಿಸದೆ ಬಿಡೆನು. ನನ್ನ ಬಾಹುವಿನ, ಮತ್ತು ನನ್ನ ಬಿಲ್ಲಿನ ಶಕ್ತಿಯನ್ನಾದರೂ ನೋಡು. ಇದೇ ಕವಚವನ್ನು ಮೊದಲು ಬ್ರಹ್ಮನು ಅಂಗಿರಸ್ಸಿಗೆ ಕೊಟ್ಟನು. ಅಂಗಿರಸ್ಸು ಬೃಹಸ್ಪತಿಗೆ ಕೊಟ್ಟನು. ಅವನಿಂದ ಇಂದ್ರನು ಅದನ್ನು ಪಡೆದನು. ಇಂದ್ರನಿಂದ ನಾನು ಅದನ್ನು ಪಡೆದೆನು. ಈ ಕವಚವು ದೇವಸಂಬಂಧಿಯಾಗಿರಲಿ! ಬ್ರಹ್ಮನೇ ಸಾಕ್ಷಾತ್ತಾಗಿ ಅದನ್ನು ನಿರ್ಮಿಸಿದ್ದರೂ ಇರಲಿ! ನನ್ನ ಬಾಣದಿಂದ ಪ್ರಹರಿಸಲ್ಪಡುವ ಈ ದುರ್ಯೋಧನನನ್ನು ಆ ಕವಚವೇನೂ ರಕ್ಷಿಸಲಾರದು" ಎಂದನು. ಮಹಾರಾಜಾ! ಹೀಗೆಂದು ಹೇಳಿ ಅರ್ಜುನನು ತನ್ನ ಬಾಣಗಳನ್ನು ಮಾನವಾಸ್ತ್ರದಿಂದ ಅಭಿಮಂತ್ರಿಸಿ, ಧನುಸ್ಸಿನಲ್ಲಿ ಸಂಧಿಸಿ, ನಾಣನ್ನೆಳೆದನು. ಇಷ್ಟರಲ್ಲಿಯೇ ಅತ್ತಲಾಗಿ ಇದನ್ನು

ನೋಡುತ್ತಿದ್ದ ಅಶ್ವತ್ಥಾಮನು, ತನ್ನ ಬಾಣಗಳಿಂದ ಅರ್ಜುನನ ಕೈಯಲ್ಲಿದ್ದ ಬಾಣಗಳನ್ನು ಕತ್ತರಿಸಿದನು. ಇದನ್ನು ನೋಡಿ ಅರ್ಜುನನು ವಿಸ್ಮಿತನಾಗಿ ಶ್ರೀಕೃಷ್ಣನನ್ನು ನೋಡಿ "ಜನಾರ್ದನಾ! ಈಗ ನಾನು ಮಾನವಾಸ್ತ್ರವನ್ನು ಮಂತ್ರಿಸಿ ಪ್ರಯೋಗಿಸುವುದರಲ್ಲಿದ್ದೆನು. ಅದು ಅಶ್ವತ್ಥಾಮನಿಂದ ಭೇದಿಸಿ ಕೆಡಹಲ್ಪಟ್ಟಿತು. ತಿರುಗಿ ಅದೇ ಅಸ್ತ್ರವನ್ನು ನಾನು ಪ್ರಯೋಗಿಸಲಾರೆನು. ಈ ಅಸ್ತ್ರವನ್ನು ಎರಡಾವರ್ತಿ ಪ್ರಯೋಗಿಸಬಾರದು. ಹಾಗೆ ಪ್ರಯೋಗಿಸಿದರೆ, ಅದು ನನ್ನನ್ನೂ, ನನ್ನ ಸೈನ್ಯವನ್ನೂ ಕೊಂದುಬಿಡುವುದು" ಎಂದನು. ಇಷ್ಟರಲ್ಲಿ ದುರ್ಯೋಧನನು ಕೃಷ್ಣಾರ್ಜುನರಿಬ್ಬರನ್ನೂ ಬೇರೆಬೇರೆ ಒಂಭತ್ತೊಂಭತ್ತು ಬಾಣಗಳಿಂದ ಹೊಡೆದು, ಮೇಲೆ ಮೇಲೆ ಬಾಣವರ್ಷಗಳನ್ನೂ ಕರೆಯುತ್ತಿದ್ದನು. ಇದನ್ನು ಕಂಡು ನಿನ್ನವರು ಸಂತೋಷದಿಂದ ಸಿಂಹನಾದಮಾಡಿದರು. ನಿನ್ನ ಕಡೆಯಲ್ಲಿ ಉತ್ಸಾಹದಿಂದ ರಣವಾದ್ಯಗಳು ನುಡಿಸಲ್ಪಟ್ಟುವು. ಇಷ್ಟರಲ್ಲಿ ಅರ್ಜುನನು ಕೋಪದಿಂದ ಕಡೆಬಾಯಿಗಳನ್ನು ನಕ್ಕುತ್ತ, ದುರ್ಯೋಧನನ ಮೈಯನ್ನು ದೃಷ್ಟಿಸಿ ನೋಡಿದನು. ಅವನ ದೇಹದಲ್ಲಿ ಮಂತ್ರಕವಚದಿಂದ ರಕ್ಷಿತವಲ್ಲದ ಸ್ಥಳವು ಒಂದಾದರೂ ಕಾಣಿಸಲಿಲ್ಲ. ಆಮೇಲೆ ತೀಕ್ಷ್ಣಬಾಣಗಳನ್ನು ಬಿಟ್ಟು ದುರ್ಯೋಧನನ ರಥಾಶ್ವಗಳನ್ನು ಕೊಂದುಬಿಟ್ಟನು. ಅವನ ಪಾರ್ಶ್ವರಕ್ಷಕರನ್ನು ಕೊಂದನು. ದುರ್ಯೋಧನ ಕೈಯಲ್ಲಿದ್ದ ಧನುಸ್ಸನ್ನು ಕತ್ತರಿಸಿದನು. ಅವನ ರಥವನ್ನು ಪುಡಿಪುಡಿಯಾಗಿ ಮಾಡತೊಡಗಿದನು. ವಿರಥನಾಗಿ ನಿಂತ ಆ ದುರ್ಯೋಧನ ಅಂಗೈಗಳಿಗೆ ಗುರಿಯಿಟ್ಟು ಕೆಲವು ತೀಕ್ಷ್ಣಬಾಣಗಳನ್ನು ಹೊಡೆದನು. ಮರ್ಮಜ್ಞನಾದ ಅರ್ಜುನನು ದುರ್ಯೋಧನನ ಉಗುರುಕಣ್ಣುಗಳ ಸಂದಿಗೆ ಗುರಿಯಿಟ್ಟು ಆ ಬಾಣಗಳನ್ನು ಬಿಟ್ಟನು. ಆ ಬಾಣಪ್ರಹಾರದಿಂದ ದುರ್ಯೋಧನನು ಬಹಳವಾಗಿ ನೊಂದು, ಆ ವೇದನೆಯನ್ನು ಸಹಿಸಲಾರದೆ, ರಣರಂಗದಿಂದ ಓಡಿಹೋಗುವ ಉದ್ದೇಶದಲ್ಲಿದ್ದನು. ಹೀಗೆ ನಿನ್ನ ಮಗನು ಕಷ್ಟಕ್ಕೆ ಗುರಿಯಾಗಿರುವುದನ್ನು ಕಂಡು, ನಿನ್ನ ಕಡೆಯ ಧನುರ್ಧಾರಿಗಳೆಲ್ಲ ಅರ್ಜುನನಿಂದ ಅವನನ್ನು ರಕ್ಷಿಸಿಕೊಳ್ಳುವುದಕ್ಕಾಗಿ ನಾನಾಕಡೆಗಳಿಂದ ಓಡಿಬಂದರು. ನಿನ್ನ ಕಡೆಯ ಚತುರಂಗಸೈನ್ಯಗಳೂ ಅರ್ಜುನನ ರಥವನ್ನು ಮುತ್ತಿಕೊಂಡು, ಸುತ್ತಿಮುತ್ತಿ

ಹೊಡೆಯಲಾರಂಭಿಸಿದುವು. ಆ ಅಸ್ತ್ರವರ್ಷದಲ್ಲಿ ಕೃಷ್ಣಾರ್ಜುನರಾಗಲಿ ಅವರ ರಥವಾಗಲಿ ಜನರ ಕಣ್ಣಿಗೆ ಬೀಳದಂತಾಯಿತು. ಅರ್ಜುನನು ತಿರುಗಿ ತನ್ನ ಬಾಣಗಳಿಂದ ಆ ಸೈನ್ಯವನ್ನೆಲ್ಲ ಚದರಿಸುತ್ತಬಂದನು ಎಷ್ಟೋ ರಥಗಳೂ, ಆನೆಗಳೂ ಬಾಣಗಳಿಂದ ಭಿನ್ನವಾದುವು. ಆನೆಕುದುರೆಗಳು ಅಂಗಹೀನಗಳಾದುವು. ಕೆಲವು ಆನೆಗಳು ಬಾಣಪ್ರಹಾರದಿಂದ ನೊಂದಿದ್ದರೂ, ಮೇಲೆಮೇಲೆ ಬಾಣಗಳಿಂದ ಪ್ರಹರಿಸಲ್ಪಡುತ್ತಿದ್ದರೂ ಲಕ್ಷ್ಯಮಾಡದೆ, ಮುಂದೆ ನುಗ್ಗಿ ಅರ್ಜುನನ ರಥವನ್ನು ತಡೆದುಬಿಟ್ಟುವು. ರಥವು ಮುಂದೆ ಸಾಗಲಾರದೆ, ಸೈಂಧವನಿರುವ ಸ್ಥಳಕ್ಕೆ ಒಂದು ಕ್ರೋಶದೂರದಲ್ಲಿಯೇ ನಿಂತುಹೋಯಿತು. ಆಗ ಕೃಷ್ಣನು ಆತುರದಿಂದ ಅರ್ಜುನನನ್ನು ನೋಡಿ "ಅರ್ಜುನಾ! ಈಗ ನೀನು ಸುಮ್ಮನಿರಬಾರದು! ನಿನ್ನ ಗಾಂಡೀವವನ್ನು ಬಲವಾಗಿ ಧ್ವನಿಮಾಡು! ನಾನೂ ನನ್ನ ಪಾಂಚಜನ್ಯವನ್ನು ಬಲವಾಗಿ ಧ್ವನಿಮಾಡುವೆನು" ಎಂದನು. ಒಡನೆಯೇ ಅರ್ಜುನನು ಶತ್ರುಸೈನ್ಯಕ್ಕೆ ಭೀತಿ ಹುಟ್ಟುವಂತೆ ತನ್ನ ಧನುಸ್ಸಿನ ನಾಣನ್ನು ಕಟ್ಟಿ ಧ್ವನಿಮಾಡಿ, ಎಡೆಬಿಡದೆ ಬಾಣವರ್ಷಗಳನ್ನು ಕರೆದನು. ಕೃಷ್ಣನೂ ಅದೇ ಸಮಯದಲ್ಲಿ ಉಚ್ಚಧ್ವನಿಯಿಂದ ತನ್ನ ಶಂಖವನ್ನು ಊದಿದನು. ಸೇನಾಧೂಳಿಯಿಂದ ಕವಿದು ಕುಗ್ಗಿದ ರೆಪ್ಪೆಗಳಿಂದಲೂ, ಬೆವರಿದ ಮುಖದಿಂದಲೂ ಕೂಡಿದ ಶ್ರೀಕೃಷ್ಣನು ಪ್ರಯತ್ನಪಟ್ಟು ತನ್ನ ಪಾಂಚಜನ್ಯವನ್ನು ಧ್ವನಿಮಾಡಿದೊಡನೆ, ದೇವಾಸುರರೊಡನೆಯೂ, ಸಮಸ್ತ ಲೋಕಪಾಲಕರೊಡನೆಯೂ ಕೂಡಿದ ಜಗತ್ತೆಲ್ಲ ಆ ಮಹಾಧ್ವನಿಗೆ ಭೇದಿಸಿಹೋಗುವಂತಾಯಿತು. ಮಹಾತ್ಮನಾದ ಕೃಷ್ಣನ ತುಟಿಗಳ ಮಧ್ಯದಿಂದ ಹೊರಬಿದ್ದು, ಪಾಂಚಜನ್ಯವೆಂಬ ಶಂಖದೊಳಗೆ ತುಂಬಿ, ಅಲ್ಲಿಂದ ಹೊರಗೆ ಬರುತ್ತಿದ್ದ ಆ ಮಹಾಧ್ವನಿಯೂ, ಅರ್ಜುನನ ಧನುಸ್ಸಿನ ಧ್ವನಿಯೂ ಲೋಕಭಯಂಕರವಾಯಿತು. ಅನೇಕ ಜನರು ಇದ್ದಕ್ಕಿದ್ದಹಾಗೆ ಮೂರ್ಛಿತರಾಗಿ ಕೆಳಗೆ ಬಿದ್ದರು. ವಾಯುಪ್ರೇರಿತವಾದ ಮೇಘದಂತೆ ಕೃಷ್ಣಾರ್ಜುನರ ರಥವು ವೇಗದಿಂದ ಮುಂದೆ ಬರುತ್ತಿತ್ತು. ಅದನ್ನು ನೋಡಿ ಜಯದ್ರಥನ ರಕ್ಷಣೆಗಾಗಿ ಕೈಕಟ್ಟಿ ನಿಂತಿದ್ದವರೆಲ್ಲರ ಎದೆಯೂ ನಡುಗಿತು. ಆ ಧನುರ್ಧಾರಿಗಳೆಲ್ಲ ಕೋಪದಿಂದ ಭೂಮಿಯನ್ನು ನಡುಗಿಸುವಂತೆ ಸಿಂಹನಾದಮಾಡಿ

ದರು. ಅವರ ಬಾಣಪ್ರಯೋಗಶಬ್ದಗಳೂ, ಶಂಖಧ್ವನಿಗಳೂ, ಸಿಂಹನಾದಗಳೂ ಪ್ರಬಲವಾದುವು. ಈ ಧ್ವನಿಯನ್ನು ಕೇಳಿ ಕೃಷ್ಣಾರ್ಜುನರಿಬ್ಬರೂ ತಮ್ಮ ಶಂಖಗಳನ್ನೂದಿದರು. ಆ ಧ್ವನಿಗೆ ಪರ್ವತಾರಣ್ಯದ್ವೀಪಗಳೊಡಗೂಡಿದ ಭೂಮಿಯೆಲ್ಲವೂ ಮೊಳಗಿ, ಪಾತಾಳದೊಳಗೂ ಒಂದೇ ಶಬ್ದಮಯವಾಯಿತು. ಎಲ್ಲಾ ದಿಕ್ಕುಗಳಲ್ಲಿಯೂ ಪ್ರತಿಧ್ವನಿ ಹೊರಟಿತು. ಕೃಷ್ಣಾರ್ಜುನರ ಈ ಆರ್ಭಟವನ್ನು ನೋಡಿ ನಮ್ಮಕಡೆಯ ರಥಿಕರ ಮನಸ್ಸು ಕಳವಳಿಸಿತು. ಆಗಲೂ ಕೆಲವರು ಯುದ್ಧಸನ್ನದ್ಧರಾಗಿ ಬರುತ್ತಿದ್ದ ಆ ಕೃಷ್ಣಾರ್ಜುನರನ್ನು ಕೋಪದಿಂದ ಇದಿರಿಸಿ ತಡೆದರು. ಇದು ಆಶ್ಚರ್ಯಕರವಾಯಿತು.

ಇದು ನೂರ ಮೂರನೆಯ ಅಧ್ಯಾಯವು.

{ ಅರ್ಜುನನಿಗೆ ಭೂರಿಶ್ರವಸ್ಸು ಮೊದಲಾದ ಎಂಟುಮಂದಿ ಯೋಧರೊಡನೆ ಪ್ರಬಲಯುದ್ಧವು. }

ಓ ಮಹಾರಾಜಾ! ಕೃಷ್ಣಾರ್ಜುನರು ಬರುವುದನ್ನು ಕಂಡೊಡನೆ ಅವರನ್ನು ಕೊನೆಮುಟ್ಟಿಸಬೇಕೆಂದು ನಿನ್ನವರು ವೇಗದಿಂದ ಬಂದರು. ಅರ್ಜುನನೂ ನಿನ್ನವರನ್ನು ತೀರಿಸಿಬಿಡಬೇಕೆಂದು ಕೋಪದಿಂದ ಮುಂದುವರಿದನು. ಸುವರ್ಣಚಿತ್ರಿತಗಳಾಗಿ, ವ್ಯಾಘ್ರಚರ್ಮಗಳಿಂದ ಹೊದಿಸಲ್ಪಟ್ಟ ಮಹಾರಥಗಳು ಉರಿಯುವ ಬೆಂಕಿಗಳಂತೆ ದಿಕ್ಕುಗಳನ್ನೆಲ್ಲ ಬೆಳಗುತ್ತ, ಒಂದನ್ನೊಂದು ಇದಿರಾದುವು. ಬಿಲ್ಲುಬಾಣಗಳ ಮೊರೆತಗಳು ಕೋಪಗೊಂಡ ಹಾವುಗಳು ಬುಸುಗುಟ್ಟುವ ಧ್ವನಿಯಂತೆ ಕೇಳುತ್ತಿದ್ದುವು. ಇಂತಹ ರಥಗಳನ್ನೇರಿ, ದೊಡ್ಡ ಧನುಸ್ಸನ್ನು ಕೈಯಲ್ಲಿ ಹಿಡಿದು, ಭೂರಿಶ್ರವಸ್ಸು, ಶಲನು, ಕರ್ಣನು, ವೃಷಸೇನನು, ಜಯದ್ರಥನು, ಕೃಪನು, ಶಲ್ಯನು, ಅಶ್ವತ್ಥಾಮನು, ಈ ಎಂಟುಮಂದಿ ಮಹಾರಥರೂ ಆಕಾಶವನ್ನೇ ನುಂಗಿಬಿಡುವಷ್ಟು ಆತುರದಿಂದ ಯುದ್ಧಕವಚಗಳನ್ನು ಧರಿಸಿ, ಬಾಣಗಳನ್ನು ಬಿಡುತ್ತ ನಾನಾಕಡೆಗಳಿಂದಲೂ ಅರ್ಜುನನನ್ನು ಮುತ್ತಿದರು. ಹತ್ತುದಿಕ್ಕುಗಳೂ ಬಾಣಗಳಿಂದ ಮರೆಸಿಹೋಗುವು.

ಕುಲೂತದೇಶದ ವಿಚಿತ್ರವರ್ಣವುಳ್ಳ ಉತ್ತಮಾಶ್ವಗಳು ಅವರ ಮಹಾ ರಥಗಳನ್ನೆಳೆಯುತ್ತಿದ್ದುವು. ಒಳ್ಳೇ ಜಾತಿಯಲ್ಲಿ ಹುಟ್ಟಿದ ಇನ್ನೂ ನಾನಾ ದೇಶದ ಕುದುರೆಗಳು ಬೇರೆಬೇರೆ ರಥಗಳಲ್ಲಿ ಹೂಡಲ್ಪಟ್ಟಿದ್ದುವು. ಅವುಗಳಲ್ಲಿ ಪರ್ವತಪ್ರಾಂತವವು ಕೆಲವು! ನದೀತೀರದಲ್ಲಿ ಹುಟ್ಟಿದವು ಕೆಲವು! ಸಿಂಧು ದೇಶದವು ಕೆಲವು. ಇಂತಹ ಉತ್ತಮಾಶ್ವಗಳೇ ಆ ರಥಗಳಿಗೆ ಹೂಡಲ್ಪಟ್ಟಿದ್ದುವು. ನಿನ್ನ ಮಗನನ್ನು ರಕ್ಷಿಸುವುದಕ್ಕಾಗಿ ಅನೇಕ ಕೌರವಯೋಧರು ಅರ್ಜುನನ ರಥವನ್ನು ಸುತ್ತಲೂ ಮುತ್ತಿಕೊಂಡು, ಭೂಮ್ಯಾಕಾಶಗಳನ್ನೆಲ್ಲ ಮೊಳಗಿಸುವಂತೆ ಶಂಖಧ್ವನಿಗಳನ್ನು ಮಾಡಿದರು. ಇದನ್ನು ಕಂಡು ಅರ್ಜುನನು ದೇವದತ್ತವನ್ನೂ, ಕೃಷ್ಣನು ಪಾಂಚಜನ್ಯವನ್ನೂ ಧ್ವನಿ ಮಾಡಿದನು. ಎಲ್ಲಾ ಶಂಖಧ್ವನಿಗಳನ್ನೂ ಮೀರಿಸುವಂತೆ ದೇವದತ್ತ ಧ್ವನಿಯು ದಿಕ್ಕುಗಳನ್ನು ವ್ಯಾಪಿಸಿತು. ಅದರ ಶಬ್ದವನ್ನೂ ಮರೆಸುತ್ತ ಕೃಷ್ಣನ ಪಾಂಚಜನ್ಯವು ಮೊಳಗಿತು. ಅದರಿಂದ ಜಗತ್ತೆಲ್ಲವೂ ಒಂದೇ ಶಬ್ದಮಯವಾಗಿ, ಭೀರುಗಳಿಗೆ ಭಯವನ್ನೂ, ಶೂರರಿಗೆ ಹರ್ಷವನ್ನೂ ಹೆಚ್ಚಿಸುತ್ತಿದ್ದಿತು. ಪಾಂಡವಸೈನ್ಯಗಳಲ್ಲಿ ಭೇರಿ, ಜರ್ಝರಿ, ಮೃದಂಗ, ಆನಕ, ಮುಂತಾದ ನಾನಾವಾದ್ಯಗಳು ಮೊಳಗಿದುವು. ಈ ಶಬ್ದವನ್ನು ಕೇಳಿ ಸಹಿಸಲಾರದೆ ದ್ರೋಣನೇ ಮೊದಲಾದ ಧನುರ್ಧಾರಿಗಳೆಲ್ಲ ಅದಕ್ಕೆಮೇಲೆ ರಣವಾದ್ಯಗಳನ್ನು ಮೊಳಗಿಸಿದರು. ಮಹಾಶಂಖಗಳನ್ನು ಧ್ವನಿಮಾಡಿದರು. ಹೀಗೆ ಕೃಷ್ಣಾರ್ಜುನರೂ, ನಿನ್ನವರೂ ಪ್ರತಿಗೆ ಪ್ರತಿಮಾಡುತ್ತಿರಲು, ಆ ಭೇರೀ ಶಂಖಾದಿ ವಾದ್ಯಧ್ವನಿಗೆ ಉಭಯಸೈನ್ಯಗಳೂ ಹೆದರಿ, ದಿಗ್ಭ್ರಮೆಹಿಡಿದಂತಾದುವು. ಸೈನ್ಯಗಳೆಲ್ಲ ಅಸ್ವಸ್ಥವಾದಂತೆ ತೋರಿತು. ಆಕಸ್ಮಿಕವಾದ ಸಿಡಿಲಿನ ಧ್ವನಿಯನ್ನು ಕೇಳಿದಂತೆ ಅನೇಕ ಸೈನ್ಯಗಳು ತಬ್ಬಿಬ್ಬಾಗಿ ಕಳವಳಿಸುತ್ತಿದ್ದಿತು. ಆಗಿನ ಶಬ್ದವು ಎಲ್ಲಾ ದಿಕ್ಕುಗಳನ್ನೂ ಮೊಳಗಿಸುತ್ತ, ಪ್ರಳಯಕಾಲದ ಮೇಘದಂತೆ ಸಮಸ್ತಸೈನ್ಯವನ್ನೂ ನಡುಗಿಸಿತು. ಜಯದ್ರಥನ ರಕ್ಷಣೆಗಾಗಿ ದುರ್ಯೋಧನನೊಡನೆ ಸೇರಿ ಎಂಟುಮಂದಿ ಮಹಾರಥರು ಅರ್ಜುನನ ರಥವನ್ನು ಆವರಿಸಿಕೊಂಡರು. ಮೊದಲು ಅಶ್ವತ್ಥಾಮನು ಎಪ್ಪತ್ತುಮೂರು ಬಾಣಗಳಿಂದ ಕೃಷ್ಣನನ್ನೂ, ಮೂರು ಬಾಣಗಳಿಂದ ಅರ್ಜುನನನ್ನೂ, ಒಂದು ಬಾಣದಿಂದ ಅವನ ಧ್ವಜ

ವನ್ನೂ, ನಾಲ್ಕು ಬಾಣಗಳಿಂದ ಅವನ ನಾಲ್ಕು ಕುದುರೆಗಳನ್ನೂ ಹೊಡೆದನು. ಕೃಷ್ಣನ ಮೈಗೆ ಬಾಣಗಳು ತಗುಲಿದೊಡನೆ, ಅರ್ಜುನನು ಅತ್ಯಾಕ್ರೋಶಗೊಂಡು, ಆರುನೂರು ಬಾಣಗಳನ್ನು ಪ್ರಯೋಗಿಸಿ ಅಶ್ವತ್ಥಾಮನ ಬಾಣಗಳನ್ನು ತುಂಡುಮಾಡಿದನು. ಹತ್ತು ಬಾಣಗಳಿಂದ ಕರ್ಣನನ್ನೂ, ಮೂರು ಬಾಣಗಳಿಂದ ವೃಷಸೇನನನ್ನೂ ಹೊಡೆದು, ಶಲ್ಯನಲ್ಲಿದ್ದ ಧನುರ್ಬಾಣಗಳನ್ನು ಮುಷ್ಟಿಸ್ಥಾನದಲ್ಲಿ ಕತ್ತರಿಸಿಬಿಟ್ಟನು. ಒಡನೆಯೇ ಶಲ್ಯನು ಬೇರೆ ಬಿಲ್ಲನ್ನು ಹಿಡಿದು, ಅರ್ಜುನನಮೇಲೆ ಬಾಣಗಳನ್ನು ಬಿಡಲಾರಂಭಿಸಿದನು. ಒಡನೆಯೇ ಭೂರಿಶ್ರವಸ್ಸು ಮೂರು ಬಾಣಗಳನ್ನೂ, ಕರ್ಣನು ಮೂವತ್ತೆರಡು ಬಾಣಗಳನ್ನೂ, ವೃಷಸೇನನು ಏಳು ಬಾಣಗಳನ್ನೂ, ಜಯದ್ರಥನು ಎಪ್ಪತ್ತುಮೂರು ಬಾಣಗಳನ್ನೂ, ಕೃಪಶಲ್ಯರಿಬ್ಬರೂ ಹತ್ತುಹತ್ತು ಬಾಣಗಳನ್ನೂ, ಅಶ್ವತ್ಥಾಮನು ಅರುವತ್ತು ಬಾಣಗಳನ್ನೂ ಅರ್ಜುನನಮೇಲೆ ಏಕಕಾಲದಲ್ಲಿ ಪ್ರಯೋಗಿಸಿದರು. ತಿರುಗಿ ಅಶ್ವತ್ಥಾಮನು ಕೃಷ್ಣನಿಗೆ ಇಪ್ಪತ್ತುಬಾಣಗಳನ್ನೂ, ಅರ್ಜುನನಿಗೆ ಐದು ಬಾಣಗಳನ್ನೂ ಗುರಿಯಿಟ್ಟು ಹೊಡೆದನು. ಇದನ್ನೆಲ್ಲ ನೋಡಿ ಅರ್ಜುನನು ನಗುಮುಖದಿಂದಲೇ ತನ್ನ ಹಸ್ತಲಾಘವವನ್ನು ತೋರಿಸುತ್ತ, ಆ ಬಾಣಗಳನ್ನೆಲ್ಲ ಕತ್ತರಿಸಿ ವಿಫಲಮಾಡಿದನು. ಹನ್ನೆರಡು ಬಾಣಗಳನ್ನು ಕರ್ಣನಿಗೂ, ಮೂರು ಬಾಣಗಳನ್ನು ವೃಷಸೇನನಿಗೂ ಹೊಡೆದನು. ತಿರುಗಿ ಶಲ್ಯನ ಧನುಸ್ಸನ್ನು ಭೇದಿಸಿ, ಹತ್ತು ಬಾಣಗಳಿಂದ ಅವನನ್ನು ಹೊಡೆದನು. ಮೂರು ಬಾಣಗಳಿಂದ ಸೌಮದತ್ತಿಯನ್ನೂ, ಎಂಟು ಬಾಣಗಳಿಂದ ಅಶ್ವತ್ಥಾಮನನ್ನೂ ಹೊಡೆದನು. ಇಪ್ಪತ್ತೈದು ಬಾಣಗಳನ್ನು ಕೃಪನಿಗೂ, ನೂರು ಬಾಣಗಳನ್ನು ಸೈಂಧವನಿಗೂ ಗುರಿಯಿಟ್ಟು ಹೊಡೆದನು. ಎಪ್ಪತ್ತು ಬಾಣಗಳಿಂದ ಅಶ್ವತ್ಥಾಮನನ್ನು ಹೊಡೆದನು. ಇಷ್ಟರಲ್ಲಿ ಭೂರಿಶ್ರವಸ್ಸು ಕೃಷ್ಣನ ಕೈಯಲ್ಲಿದ್ದ ಕುದುರೆಯ ಚಾಟಿಯನ್ನು ಕತ್ತರಿಸಿ, ಎಪ್ಪತ್ತುಮೂರು ಬಾಣಗಳಿಂದ ಅರ್ಜುನನನ್ನು ಪ್ರಹರಿಸಿದನು. ಆದರೇನು? ಅರ್ಜುನನು ಬಿರುಗಾಳಿಯು ಮೇಘಗಳನ್ನು ತೂರಿಬಿಡುವಂತೆ ತನ್ನ ಶತ್ರುಗಳೆಲ್ಲರನ್ನೂ ನೂರಾರು ಬಾಣಗಳಿಂದ ತಡೆದು ಮುಂದೆಬಾರದಂತೆ ಮಾಡಿದನು.

ಇದು ನೂರನಾಲ್ಕನೆಯ ಅಧ್ಯಾಯವು.

—{ ಸಂಜಯನು ರಥಿಕರ ಧ್ವಜಚಿಹ್ನಗಳನ್ನು ಬೇರೆಬೇರೆಯಾಗಿ ವರ್ಣಿಸಿದುದು. }—

ಆಗ ಧೃತರಾಷ್ಟ್ರನು ಸಂಜಯನನ್ನು ಕುರಿತು "ಸಂಜಯಾ! ಪಾಂಡವ ಕೌರವ ಸೈನ್ಯಗಳಲ್ಲಿ ವಿಚಿತ್ರಾಕಾರವುಳ್ಳ ಬೇರೆಬೇರೆ ಚಿಹ್ನದ ಧ್ವಜಗಳು ಅತ್ಯಂತಕಾಂತಿವಿಶಿಷ್ಟವಾಗಿ ಶೋಭಿಸುತ್ತಿದ್ದುವೆಂದು ಹೇಳುವೆಯಲ್ಲವೆ? ಆ ವಿವರವನ್ನೂ ನನಗೆ ತಿಳಿಸಬೇಕು" ಎನಲು, ಸಂಜಯನು "ಮಹಾರಾಜಾ! ಆ ಉಭಯಸೈನ್ಯಗಳಲ್ಲಿಯೂ ಬೇರೆಬೇರೆವರ್ಣಗಳಿಂದಲೂ, ಆಕೃತಿಗಳಿಂದಲೂ, ಹೆಸರುಗಳಿಂದಲೂ ಕೂಡಿದ ನಾನಾಜಾತಿಯ ಧ್ವಜಗಳು ಅಗ್ನಿಯಂತೆ ಬೆಳಗುತ್ತಿದ್ದುವು. ಅವುಗಳ ವಿವರವನ್ನೆಲ್ಲ ತಿಳಿಸುವೆನು ಕೇಳು. ಒಂದೊಂದು ಧ್ವಜವೂ ಸುವರ್ಣದಂಡಗಳಿಂದಲೂ, ಸುವರ್ಣಕಲಶಗಳಿಂದಲೂ, ಸುವರ್ಣಮಾಲಿಕೆಗಳಿಂದಲೂ ಅಲಂಕೃತಗಳಾಗಿ, ಸುವರ್ಣಶೃಂಗಗಳಿಂದ ಕೂಡಿದ ಮಹಾಮೇರು ಪರ್ವತಗಳನ್ನು ಹೋಲುತ್ತಿದ್ದುವು. ಬಣ್ಣದಲ್ಲಿಯೂ, ಆಕಾರದಲ್ಲಿಯೂ ವಿಧವಿಧಗಳಾದ ಪತಾಕೆಗಳಿಂದ ಶೋಭಿಸುತ್ತಿದ್ದುವು. ರಂಗಸ್ಥಳದಲ್ಲಿ ವಿಚಿತ್ರವೇಷದಿಂದ ಬಂದು ನರ್ತಿಸುವ ವಿಲಾಸಿನಿಯರಂತೆ ಆ ಧ್ವಜಪತಾಕೆಗಳು ಗಾಳಿಯಿಂದ ಅಲೆದಾಡುತ್ತಿದ್ದುವು. ಇಂದ್ರಧನುಸ್ಸಿಗೆ ಸಮಾನವಾದ ವಿಚಿತ್ರವರ್ಣವುಳ್ಳ ಆ ಪತಾಕೆಗಳಿಂದ ಅಲ್ಲಿನ ರಥಗಳಿಗೆಲ್ಲ ಒಂದು ಅಪೂರ್ವಶೋಭೆಯುಂಟಾಗುತ್ತಿದ್ದಿತು. ಭಯಂಕರವಾಗಿ ಬಾಯನ್ನು ತೆರದು, ಸಿಂಹದಂತೆ ಬಾಲವುಳ್ಳ ವಾನರಚಿಹ್ನದಿಂದ ಕೂಡಿದ ಧ್ವಜವು, ಅರ್ಜುನನ ರಥದಮೇಲೆ ಕಾಣಿಸುತ್ತ ಕೌರವಸೈನ್ಯವನ್ನೆಲ್ಲ ನಡುಗಿಸುತಿದ್ದಿತು. ಇತ್ತಲಾಗಿ ಅಶ್ವತ್ಥಾಮನ ರಥವಮೇಲೆ ಬಾಲಸೂರ್ಯಕಾಂತಿಯುಳ್ಳ ಸಿಂಹದ ಬಾಲದ ಗುರುತುಳ್ಳ ಕಾಂಚನಧ್ವಜವು ಇಂದ್ರಧ್ವಜದಂತೆ ಶೋಭಾಯಮಾನವಾಗಿ, ಗಾಳಿಯಿಂದ, ಆಡುತ್ತ ಕೌರವಸೈನಿಕರಿಗೆ ಆನಂದವನ್ನು ಹೆಚ್ಚಿಸುತ್ತಿದ್ದಿತು. ಅಧಿರಥಪುತ್ರನಾದ ಕರ್ಣನ ಧ್ವಜವು, ಆನೆಯನ್ನು ಕಟ್ಟುವ ಹೊರಜೆಯ ಗುರುತುಳ್ಳುದಾಗಿ, ಆಕಾಶವನ್ನೆಲ್ಲ ಆವರಿಸುವಂತೆ ಕಾಣಿಸುತ್ತ, ಆಗಾಗ ವಾಯುಪ್ರೇರಿತವಾಗಿ ರಥಾಗ್ರದಲ್ಲಿ ಉತ್ಸಾಹದಿಂದ ನರ್ತಿಸುವಂತೆ ತೋರುತ್ತಿದ್ದಿತು. ಪಾಂಡವರಿಗೆ ಆಚಾರ್ಯನೂ, ತಪೋನಿರತನೂ, ಗೌತಮಪುತ್ರನೂ, ಬ್ರಾಹ್ಮ

ಜೋತ್ತಮನೂ ಆದ ಕೃಪಾಚಾರ್ಯನ ರಥವು, ಎತ್ತಿನ ಗುರುತುಳ್ಳುದಾಗಿ, ವಿಚಿತ್ರಾಲಂಕೃತವಾಗಿ, ತ್ರಿಪುರಸಂಹಾರಿಯಾದ ವೃಷಧ್ವಜನ ರಥಕ್ಕೆ ಸಮಾನವಾಗಿ ಕಾಣಿಸುತ್ತಿದ್ದಿತು. ಮಯೂರಚಿಹ್ನವುಳ್ಳ ರತ್ನಖಚಿತವಾದ ವೃಷಸೇನನ ಧ್ವಜವು, ಕೌರವಸೈನ್ಯಕ್ಕೆಲ್ಲ ಒಂದು ಶೋಭಾಸ್ಪದವಾಗಿ, ಸಾಕ್ಷಾತ್ ಷಣ್ಮುಖಸ್ವಾಮಿಯ ಮಯೂರಧ್ವಜದಂತೆ ತೋರುತ್ತಿದ್ದಿತು. ಶಲ್ಯನ ರಥಾಗ್ರದಲ್ಲಿ ಸ್ವರ್ಣಮಯವಾದ ನೇಗಿಲಿನ ಗೆರೆಯ ಗುರುತುಳ್ಳ ಧ್ವಜವು ಅಗ್ನಿ ಶಿಖೆಯಂತೆ ಜ್ವಲಿಸುತ್ತಿದ್ದಿತು. ಅದು, ಸಮಸ್ತಬೀಜಗಳಿಗೂ ಉತ್ಪತ್ತಿ ಸ್ಥಾನವೆನಿಸಿದ ಅಂದವಾದ ನೇಗಿಲಿನ ಗೆರೆಯಂತೆಯೇ ಕಾಣಿಸುತ್ತಿದ್ದಿತು. ಸೈಂಧವನ ರಥಾಗ್ರದಲ್ಲಿ ಸುವರ್ಣರೇಖೆಗಳಿಂದ ಅಲಂಕರಿಸಲ್ಪಟ್ಟ ಲೋಹಿತ ವರ್ಣವುಳ್ಳ ವರಾಹಚಿಹ್ನವು ಅತ್ಯಂತಕಾಂತಿವಿಶಿಷ್ಟವಾಗಿದ್ದಿತು. ಆ ಧ್ವಜದಿಂದ ನಿನ್ನ ಅಳಿಯನು, ಹಿಂದೆ ದೇವಾಸುರಯುದ್ಧದಲ್ಲಿ ದೈತ್ಯರಿಗಿದಿರಾದ ಪೂಷನಂತೆ ಕಾಣಿಸುತ್ತಿದ್ದನು. ಯಜ್ಞಶೀಲನಾದ ಸೌಮದತ್ತಿಯ (ಭೂರಿಶ್ರವಸ್ಸಿನ) ರಥವು ಯೂಪಚಿಹ್ನವುಳ್ಳ ಧ್ವಜದಿಂದ ಕೂಡಿದುದಾಗಿ, ಸೂರ್ಯನಂತೆ ಶೋಭಿಸುತ್ತಿದ್ದಿತು. ಅದರಲ್ಲಿ ಚಂದ್ರನ ಚಿಹ್ನಗಳೂ ಕಾಣಿಸುತ್ತಿದ್ದಿತು. ಆ ಧ್ವಜದಮೇಲಿನ ಯೂಪಚಿಹ್ನವು ರಾಜಸೂಯಯಾಗದಲ್ಲಿ ಎತ್ತಿ ನಿಲ್ಲಿಸಲ್ಪಟ್ಟ ಯೂಪಸ್ತಂಭದಂತೆ ಕಾಣಿಸಿತು. ಶಲನ ರಥದ ಮೇಲೆ ಆನೆಯ ಚಿಹ್ನವುಳ್ಳ ದೊಡ್ಡ ಧ್ವಜವು ಸುವರ್ಣರೇಖೆಗಳಿಂದ ಚಿತ್ರಿತವಾದ ನವಿಲುಗಳ ಆಕೃತಿಯಿಂದ ಕೂಡಿ, ದೇವಸೈನ್ಯದಲ್ಲಿ ಐರಾವತವೆಂಬ ಆನೆಯಹಾಗೆ ನಿನ್ನ ಸೈನ್ಯಕ್ಕೆಲ್ಲ ಭೂಷಣಪ್ರಾಯವಾಗಿದ್ದಿತು. ನಿನ್ನ ಮಗನ ರಥಾಗ್ರದಲ್ಲಿ ರತ್ನದಿಂದ ಕೆತ್ತಲ್ಪಟ್ಟ ಸರ್ಪಚಿಹ್ನವು ತನ್ನ ಕಾಂತಿಯಿಂದ ದಿಕ್ಕುಗಳನ್ನೆಲ್ಲ ಬೆಳಗುವಂತಿದ್ದಿತು. ಆ ರಥವು ಚಲಿಸುವಾಗ ನೂರಾರು ಕಿರುಗೆಜ್ಜೆಗಳ ಮನೋಹರವಾದ ಶಬ್ದವು ಕೇಳಿಸುವುದು! ಓ ಮಹಾರಾಜಾ! ನಿನ್ನ ಸೈನ್ಯದಲ್ಲಿ ಮೇಲೆ ಹೇಳಿದ ಒಂಭತ್ತು ಮಹಾಧ್ವಜಗಳೂ ಪ್ರಳಯಕಾಲದ ಸೂರ್ಯನಂತೆ ಶತ್ರುಗಳಿಗೆ ಭಯಂಕರವಾಗಿ, ನಿನ್ನ ಸೈನ್ಯಕ್ಕೂ ಅಧಿಕಶೋಭೆಯನ್ನು ಕೊಡುತ್ತಿದ್ದುವು. ಅತ್ತಲಾಗಿ ಅರ್ಜುನನ ರಥದಲ್ಲಿದ್ದ ಕಪಿಧ್ವಜವೊಂದೇ ಹತ್ತನೆಯದಾಗಿ ಕಾಣಿಸುತ್ತಿದ್ದಿತು. ಆ ವಾನರಧ್ವಜವುಳ್ಳ ರಥದಲ್ಲಿ ಅರ್ಜುನನು ಕುಳಿತಾಗ, ರುದ್ರನಿಂದ ಹಿಮವತ್ಪ

ರ್ವತವು ಹೇಗೋ ಹಾಗೆ ಆ ಧನಂಜಯನಿಂದ ರಥಕ್ಕೆ ಒಂದು ಅಧಿಕಶೋಭೆಯುಂಟಾಯಿತು. ಇಷ್ಟರಲ್ಲಿಯೇ ನಿನ್ನ ಕಡೆಯ ಆ ಒಂಭತ್ತುಮಂದಿ ವೀರರೂ ಅರ್ಜುನನನ್ನು ತಡೆಯುವುದಕ್ಕಾಗಿ ತಮ್ಮತಮ್ಮ ಧನುಸ್ಸುಗಳನ್ನು ಹಿಡಿದು ಸಿದ್ಧರಾದರು. ಅತ್ತಲಾಗಿ ಅರ್ಜುನನೂಕೂಡ ತನ್ನಕಡೆಯ ಗಾಂಡೀವವನ್ನು ಬಾಗಿಸಿ, ನಿಮ್ಮವರನ್ನು ಕೊಲ್ಲುವುದಕ್ಕೆ ಸಿದ್ಧನಾದನು. ರಾಜಾ! ಇವೆಲ್ಲವೂ ನಿನ್ನ ದುರ್ಮಂತ್ರದ ಫಲವೆಂದೇ ತಿಳಿ! ನಿನ್ನ ಅಪರಾಧದಿಂದಲೇ ನಿನ್ನ ಮಗನ ಸಹಾಯಕ್ಕಾಗಿ ನಾನಾದಿಕ್ಕುಗಳಿಂದ ಬಂದ ಅನೇಕರಾಜರು, ತಮ್ಮ ಚತುರಂಗಸೈನ್ಯಗಳೊಡನೆ ಯುದ್ಧದಲ್ಲಿ ಹತರಾದರು. ಅದು ಹಾಗಿರಲಿ! ಇತ್ತಲಾಗಿ ದುರ್ಯೋಧನಾದಿಗಳೂ, ಅತ್ತಲಾಗಿ ಅರ್ಜುನನೂ ಒಬ್ಬರಿಗೊಬ್ಬರು ಕೋಪದಿಂದ ಗರ್ಜಿಸುತ್ತ, ಯುದ್ಧವನ್ನಾರಂಭಿಸಿದರು. ಆಗ ಕೃಷ್ಣನನ್ನು ಸಾರಥಿಯಾಗಿ ಉಳ್ಳ ಅರ್ಜುನನು ಪರಮಾಶ್ಚರ್ಯಕರಗಳಾದ ಕಾರ್ಯಗಳನ್ನು ನಡೆಸಿದನು. ತಾನು ಏಕಾಕಿಯಾಗಿದ್ದು ನಿರ್ಭಯವಾಗಿ ಅನೇಕ ಶತ್ರುವೀರರಿಗೆ ಎದೆಗೊಟ್ಟು ಯುದ್ಧಮಾಡಿದನು. ಹೇಗಾದರೂ ಜಯದ್ರಥನನ್ನು ಹಿಡಿದು ಕೊಲ್ಲಬೇಕೆಂಬ ಒಂದೇ ದೃಢಸಂಕಲ್ಪದಿಂದ, ಗಾಂಡೀವಧನುಸ್ಸನ್ನು ಒದರುತ್ತ, ಎಲ್ಲರನ್ನೂ ತಡೆಯುತ್ತಿದ್ದನು. ಅವನ ಧನುಸ್ಸಿನಿಂದ ಏಕಕಾಲದಲ್ಲಿ ಸಾವಿರಾರು ಬಾಣಪರಂಪರೆಗಳು ಹೊರಟು, ನಿನ್ನ ಸೈನ್ಯವನ್ನೆಲ್ಲ ಮರೆಸಿದುವು. ನಿನ್ನವರು ಯಾರೂ ಕಣ್ಣಿಗೆ ಕಾಣದಂತಾದರು. ಆಗಲೂ ನಿನ್ನವರು ಧೈರ್ಯಗೆಡದೆ ಬಾಣಪರಂಪರೆಗಳನ್ನು ಬಿಡುತ್ತ ಅರ್ಜುನನ ರಥವನ್ನು ಮರೆಸಿದರು. ಇದನ್ನು ನೋಡಿ ಪಾಂಡವಸೈನ್ಯದಲ್ಲಿ ಭಯದಿಂದ ದೊಡ್ಡ ಹಾಹಾಕಾರವೆದ್ದಿತು" ಎಂದನು.

ಇದು ನೂರೈದನೆಯ ಅಧ್ಯಾಯವು.

## ದ್ರೋಣಯುಧಿಷ್ಠಿರ ಯುದ್ಧವು.

ತಿರುಗಿ ಧೃತರಾಷ್ಟ್ರನು ಸಂಜಯನನ್ನು ಕುರಿತು "ಸಂಜಯಾ! ಅರ್ಜುನನು ಮುಂದುವರಿದು, ಸೈಂಧವನನ್ನು ಸಮೀಪಿಸುತಿದ್ದಾಗ, ಅತ್ತಲಾಗಿ

ದ್ರೋಣನಿಂದ ನಿವಾರಿಸಲ್ಪಟ್ಟ ಪಾಂಚಾಲರು ಮಾಡಿದುದೇನು? ಅವರು ಕೌರವರೊಡನೆ ಕೈಕಲೆತುದು ಹೇಗೆ?" ಎನಲು, ಸಂಜಯನು "ರಾಜಾ! ಅಪರಾಹ್ಣಸಮಯದಲ್ಲಿ ಪಾಂಚಾಲರಿಗೂ, ಕೌರವರಿಗೂ ಪ್ರಬಲಯುದ್ಧವಾಯಿತು. ಇವರಿಬ್ಬರ ಯುದ್ಧವೆಂಬ ಜೂಜಿಗೆ ದ್ರೋಣನೇ ಪಂಥಕ್ಕೆ ಒಡ್ಡಿದ ಪಣದಂತಿದ್ದನು. ಏಕೆಂದರೆ, ಪಾಂಚಾಲರು ದ್ರೋಣನನ್ನು ಕೊಲ್ಲಬೇಕೆಂದು ಸರ್ವಪ್ರಯತ್ನದಿಂದ ಹೋರಾಡಿದರು. ಕೌರವರು ಅವನನ್ನು ರಕ್ಷಿಸಿಕೊಳ್ಳಬೇಕೆಂದು ತಮ್ಮ ಸರ್ವಪ್ರಯತ್ನದಿಂದ ಇದಿರಿಸುತ್ತಿದ್ದರು. ಉಭಯಸೈನಿಕರೂ ಗರ್ಜಿಸುತ್ತ ಬಾಣವರ್ಷಗಳನ್ನು ಕರೆದರು. ಅವರಬ್ಬರ ಯುದ್ಧವು ದೇವಾಸುರಯುದ್ಧದಂತೆ ನೋಡುವವರಿಗೆ ಭಯಂಕರವೂ, ಅದ್ಭುತವೂ ಆಯಿತು. ಪಾಂಚಾಲರೆಲ್ಲಾ ದ್ರೋಣನ ರಥವನ್ನು ಇದಿರಿಸಿ, ಅವನ ಸೈನ್ಯವನ್ನು ಚದರಿಸುವುದಕ್ಕಾಗಿ ತಮ್ಮ ಮಹಾಸ್ತ್ರಗಳನ್ನೆಲ್ಲ ಉಪಯೋಗಿಸಿದರು. ಪಾಂಡವರು ಅವರಿಗೆ ಬೆಂಬಲವಾಗಿದ್ದರು. ರಥಾರೂಢರಾದ ನಮ್ಮ ರಥಿಕರು ದ್ರೋಣನ ರಥದ ಸಮೀಪದಲ್ಲಿ ಅವನ ರಕ್ಷಣೆಗಾಗಿ ಕಾದಿದ್ದರು. ಪಾಂಚಾಲರಥಿಕರು ದ್ರೋಣನನ್ನು ಹಿಡಿಯುವುದಕ್ಕಾಗಿ ಮುಂದುವರಿದರು. ಕೇಕಯರೊಳಗೆಲ್ಲ ಮಹಾರಥನೆನಿಸಿದ ಬೃಹತ್ಕ್ಷತ್ರನೆಂಬುವನು ವಜ್ರಸಮಾನಗಳಾದ ತೀಕ್ಷ್ಣಬಾಣಗಳನ್ನು ಪ್ರಯೋಗಿಸುತ್ತ ದ್ರೋಣನಿಗೆ ಇದಿರಾದನು. ಇವನ್ನು ಕಂಡು ಕ್ಷೇಮಧೂರ್ತಿಯೆಂಬವನು ಇತ್ತಲಿಂದ ನೂರುಸಾವಿರ ಸಂಖ್ಯೆಯ ಬಾಣಗಳನ್ನು ಬಿಡುತ್ತ ಅವನನ್ನಿದಿರಿಸಿದನು. ಅದಕ್ಕೆ ಪ್ರತಿಯಾಗಿ ಚೇದಿರಾಜನಾದ ಧೃಷ್ಟಕೇತುವು ಇಂದ್ರನನ್ನಿದಿರಿಸುವ ಶಂಬರಾಸುರನಂತೆ ದ್ರೋಣನನ್ನು ವೇಗದಿಂದಿದಿರಿಸಿಬಂದನು. ಬಾಯನ್ನು ತೆರೆದುಕೊಂಡುಬರುವ ಮೃತ್ಯುವಿನಂತೆ ವೇಗದಿಂದ ಬರುತ್ತಿರುವ ಆತನನ್ನು ವೀರಧನ್ವನೆಂಬವನು ತಡೆದನು. ಇಷ್ಟರಲ್ಲಿ ದ್ರೋಣನು ತನ್ನನ್ನು ಜಯಿಸಬೇಕೆಂದು ಸೇನಾಸಮೇತನಾಗಿ ಬರುತ್ತಿರುವ ಯುಧಿಷ್ಠಿರನನ್ನು ಕಂಡು ಬಾಣಗಳಿಂದ ಅವನನ್ನು ತಡೆದನು. ಇದೇಸಮಯದಲ್ಲಿ ನಿನ್ನ ಮಗನಾದ ವಿಕರ್ಣನು ನಕುಲನನ್ನೂ, ದುರ್ಮುಖನು ಸಹದೇವನನ್ನೂ ಇದಿರಿಸಿ, ಅನೇಕ ಸಹಸ್ರಬಾಣಗಳನ್ನು ವರ್ಷಿಸಿದರು. ವ್ಯಾಘ್ರದತ್ತನು, ಸಾತ್ಯಕಿಯನ್ನಿದಿರಿಸಿ, ಅವನ ಸೈನ್ಯವನ್ನೆಲ್ಲ ನಡುಗಿಸುವಂತೆ ತೀಕ್ಷ್ಣಬಾಣಗಳನ್ನು ಬಿಟ್ಟನು.

ಸೋಮದತ್ತನ ಮಗನು ಉಪಪಾಂಡವರನ್ನು ಇದಿರಿಸಿದನು. ಕೋಪಗೊಂಡ ಭೀಮಸೇನನನ್ನು ಭಯಂಕರರೂಪವುಳ್ಳ ಆರ್ಷಶೃಂಗಿಯೆಂಬ ರಾಕ್ಷಸನು ಇದಿರಿಸಿ ನಿಂತನು. ಭೀಮನಿಗೂ, ಆ ರಾಕ್ಷಸನಿಗೂ ನಡೆದ ಯುದ್ಧವು, ಹಿಂದೆ ನರರೂಪನಾದ ರಾಮನಿಗೂ, ರಾಕ್ಷಸನಾದ ರಾವಣನಿಗೂ ನಡೆದ ಯುದ್ಧದಂತೆ ಅತಿಘೋರವಾಗಿ ಕಾಣಿಸಿತು. ಈ ಸಮಯದಲ್ಲಿ ಯುಧಿಷ್ಠಿರನು ತೊಂಭತ್ತು ತೀವ್ರಬಾಣಗಳನ್ನು ದ್ರೋಣನ ಎಲ್ಲಾ ಮರ್ಮಗಳಿಗೂ ತಗುಲುವಂತೆ ಪ್ರಯೋಗಿಸಿದನು. ಇದನ್ನು ಕಂಡು ಕೋಪಗೊಂಡ ದ್ರೋಣನು, ಧರ್ಮರಾಜನ ಎದೆಗೆ ಗುರಿಯಿಟ್ಟು ಇಪ್ಪತ್ತೈದು ಬಾಣಗಳನ್ನು ಪ್ರಯೋಗಿಸಿದುದಲ್ಲದೆ, ತನ್ನ ಬಾಣವರ್ಷಗಳಿಂದ ಧರ್ಮರಾಜನನ್ನು ಅವನ ರಥರಥಾಶ್ವಸಾರಥಿಗಳೊಡನೆ ಕಣ್ಣಿಗೇ ಬೀಳದಂತೆ ಮುಚ್ಚಿಬಿಟ್ಟನು. ಆಗಲೂ ಧರ್ಮರಾಜನು ಎದೆಗುಂದದೆ, ಆ ಬಾಣಗಳನ್ನೆಲ್ಲ ತನ್ನ ಬಾಣಗಳಿಂದ ನಿವಾರಿಸುತ್ತ, ಜನರಿಗೆ ತನ್ನ ಹಸ್ತವೇಗವನ್ನು ತೋರಿಸಿದನು. ಇದನ್ನು ನೋಡಿ ದ್ರೋಣನು ಕುಪಿತನಾಗಿ, ಧರ್ಮರಾಜನ ಕೈಯ್ಯಲ್ಲಿದ್ದ ಬಿಲ್ಲನ್ನು ಕತ್ತರಿಸಿ, ಅವನನ್ನು ಅನೇಕಸಹಸ್ರಬಾಣಗಳಿಂದ ಹೊಡೆದನು. ದ್ರೋಣನ ಬಾಣಗಳಲ್ಲಿ ಮರೆಸಿಹೋದ ಧರ್ಮರಾಜನ ಸುಳಿವನ್ನೇ ಕಾಣಲಾರದೆ, ಜನರೆಲ್ಲರೂ ಧರ್ಮರಾಜನು ಹತನಾದಂತೆಯೇ ಎಣಿಸಿದರು. ಧರ್ಮರಾಜನು ರಣರಂಗವನ್ನೇ ಬಿಟ್ಟು ಓಡಿಹೋಗಿರಬೇಕೆಂದು ಕೆಲವರು ಎಣಿಸಿದರು. ಇನ್ನು ಕೆಲವರು ಧರ್ಮರಾಜನು ಕೌರವಸೈನಿಕರಿಂದ ಸೆರೆಹಿಡಿದು ಸಾಗಿಸಲ್ಪಟ್ಟನೆಂದು ತಿಳಿದರು. ಈ ಮಹಾಕಷ್ಟದಲ್ಲಿ ಸಿಕ್ಕಿದರೂ ಧರ್ಮರಾಜನು ಹೆದರದೆ, ಮುರಿದ ಧನುಸ್ಸನ್ನು ಬಿಸುಟು, ಅದಕ್ಕಿಂತಲೂ ವೇಗವುಳ್ಳ ಬೇರೊಂದು ದಿವ್ಯಧನುಸ್ಸನ್ನು ಕೈಗೆತ್ತಿಕೊಂಡು, ದ್ರೋಣನ ಬಾಣಗಳನ್ನೆಲ್ಲ ತನ್ನ ಬಾಣಗಳಿಂದ ಪುಡಿಪುಡಿಮಾಡಿ ಕೆಡಹಿದನು. ಇದು ನೋಡುವವರಿಗೆ ಆಶ್ಚರ್ಯವನ್ನುಂಟುಮಾಡಿತು. ಅಲ್ಲದೆ, ದ್ರೋಣನನ್ನು ತೀರಿಸಿಬಿಡಬೇಕೆಂಬ ಆತುರದಿಂದ ಸುವರ್ಣದಂಡದಿಂದಲೂ, ಅಷ್ಟಘಂಟೆಗಳಿಂದಲೂ ಶೋಭಿತವಾಗಿ, ಪರ್ವತಗಳನ್ನೂ ಭೇದಿಸುವ ಶಕ್ತಿಯುಳ್ಳ ಭಯಂಕರ ಶಕ್ತ್ಯಾಯುಧವನ್ನು ಕೈಗೆತ್ತಿಕೊಂಡು ನಿಂತು, ಸಮಸ್ತಭೂತಗಳನ್ನೂ ನಡುಗಿಸುವಂತೆ ದೊಡ್ಡ ಸಿಂಹನಾದವನ್ನು ಮಾಡಿದನು. ಧರ್ಮರಾಜನು ಹೀಗೆ

ಅತ್ಯಾಕ್ರೋಶದಿಂದ ಶಕ್ತಿಯನ್ನು ಹಿಡಿದು ನಿಂತಿರುವುದನ್ನು ನೋಡಿ, ಸಮಸ್ತ ಭೂತಗಳೂ ದ್ರೋಣನಿಗೆ ಅಪಾಯವಾಗುವುದೆಂದು ಹೆದರಿ “ಆಚಾರ್ಯ ನಿಗೆ ಮಂಗಳವಾಗಲಿ!” ಎಂದು ಕೂಗಿಕೊಂಡುವು. ಪರೆಯುರ್ಚಿದ ಸರ್ಪ ದಂತೆ ಘೋರವಾದ ಆ ಶಕ್ತಿಯು ಧರ್ಮರಾಜನ ಕೈಯಿಂದ ಪ್ರೇರಿತವಾಗಿ, ಆಕಾಶದಲ್ಲಿ ಮಹಾಜ್ವಾಲೆಗಳನ್ನುಗುಳುತ್ತ ತನ್ನ ಕಾಂತಿಯಿಂದ ದಿಕ್ಕುವಿದಿ ಕ್ಕುಗಳನ್ನೆಲ್ಲ ಬೆಳಗುವಂತೆ ದ್ರೋಣನ ಸಮೀಪದವರೆಗೆ ಬಂದಿತು. ಬಾಯಿ ತೆರೆದುಕೊಂಡು ಅಗ್ನಿಜ್ವಾಲೆಯನ್ನು ಕಕ್ಕುತ್ತಬರುವ ಸರ್ಪದಂತೆ, ತನಗಿದಿ ರಾಗಿ ಬರುತ್ತಿರುವ ಆ ಶಕ್ತಿಯನ್ನು ಕಂಡು ದ್ರೋಣನು ಅದರ ನಿಗ್ರಹ ಕ್ಕಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಆ ಬ್ರಹ್ಮಾಸ್ತ್ರವು ತನ್ನ ವೀರ್ಯ ದಿಂದ ಆ ಶಕ್ತಿಯನ್ನು ಸುಟ್ಟು ಭಸ್ಮಮಾಡಿ, ಯುಧಿಷ್ಠಿರನಮೇಲೆ ಬೀಳು ವುದಕ್ಕಾಗಿ ಮುಂದುವರಿಯಿತು. ಆಗ ಯುಧಿಷ್ಠಿರನೂ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿ, ಆ ಅಸ್ತ್ರವನ್ನು ಅಡಗಿಸಿದನು. ಐದು ತೀವ್ರಬಾಣಗಳನ್ನು ದ್ರೋಣನಮೇಲೆ ಬಿಟ್ಟನು. ಒಂದು ಕ್ಷುರಪ್ರದಿಂದ ಆ ದ್ರೋಣನ ಕೈಯಲ್ಲಿದ್ದ ಧನುಸ್ಸನ್ನು ಕತ್ತರಿಸಬಿಟ್ಟನು. ಆಗ ದ್ರೋಣನು ಮುರಿದ ಧನುಸ್ಸನ್ನು ಬಿಸುಟು, ಒಡನೆಯೇ ಒಂದು ದೊಡ್ಡ ಗದೆಯನ್ನೆತ್ತಿ, ಧರ್ಮರಾಜನ ಮೇಲೆ ಬೀಸಿದನು. ಅದನ್ನು ನೋಡಿ ಧರ್ಮರಾಜನೂ ತನ್ನ ಗದೆಯನ್ನೆತ್ತಿ ಪ್ರಯೋಗಿಸಿದನು. ಆ ಗದೆಗಳೆರಡೂ ಒಂದಕ್ಕೊಂದು ತಾಗುವುದರಿಂದ ದೊಡ್ಡ ಬೆಂಕಿಯನ್ನು ಹುಟ್ಟಿಸಿ, ಎರಡೂ ನಿಸ್ತೇಜವಾಗಿ ಕೆಳಗೆ ಬಿದ್ದುವು. ಇದನ್ನು ನೋಡಿ ದ್ರೋಣನು ಅತ್ಯಂತಕುಪಿತನಾಗಿ ನಾಲ್ಕು ಬಾಣಗಳಿಂದ ಧರ್ಮರಾಜನ ನಾಲ್ಕು ರಥಾಶ್ವಗಳನ್ನು ಕೊಂದುಬಿಟ್ಟನು. ಬೇರೊಂದು ಭಲ್ಲದಿಂದ ಧರ್ಮರಾಜನ ಕೈಯ್ಯಲ್ಲಿದ್ದ ಬಿಲ್ಲನ್ನೂ, ಇನ್ನೊಂದು ಬಾಣ ದಿಂದ ಅವನ ಧ್ವಜವನ್ನೂ ತುಂಡುಮಾಡಿದನು. ಮೂರು ಬಾಣಗಳಿಂದ ಧರ್ಮರಾಜನನ್ನು ಹೊಡೆದನು. ಹೀಗೆ ರಥವು ಮುರಿದು, ಕೈಯ್ಯಲ್ಲಿದ್ದ ಆಯುಧವೂ ಹೋಗಿ, ನಿರಾಶ್ರಯನಾದ ಧರ್ಮರಾಜನು, ಥಟ್ಟನೆ ರಥ ದಿಂದ ಕೆಳಕ್ಕೆ ಹಾರಿ, ಬರೀ ತೋಳನ್ನೇ ಮೇಲಕ್ಕೆತ್ತಿ ದ್ರೋಣನಿಗಿದಿರಾ ದನು. ಹೀಗೆ ವಿರಥನಾಗಿ, ಆದರಮೇಲೆ ನಿರಾಯುಧನಾಗಿಯೂ ನಿಂತಿದ್ದ ಆ ಧರ್ಮರಾಜನನ್ನು ನೋಡಿ, ಯುದ್ಧಧರ್ಮವನ್ನು ಬಲ್ಲ ದ್ರೋಣನು,

ಶತ್ರುಸೈನ್ಯಗಳೆಲ್ಲ ಮೋಹಕ್ಕೀಡಾಗುವಂತೆ ಸಮ್ಮೋಹನಾಸ್ತ್ರವನ್ನು ಬಿಟ್ಟನು. ಅಲ್ಲದೆ ತನ್ನ ಹಸ್ತವೇಗದಿಂದ ಮೇಲೆಮೇಲೆ ತೀಕ್ಷ್ಣಬಾಣಗಳನ್ನು ಬಿಡುತ್ತ, ಸಿಂಹವು ಮೃಗವನ್ನು ಹಿಡಿಯಲು ಬರುವಂತೆ, ಆ ರಾಜನನ್ನು ಹಿಡಿಯುವುದಕ್ಕಾಗಿ ಮುಂದೆ ಹೊರಟನು. ದ್ರೋಣನ ಈ ಪ್ರಯತ್ನವನ್ನು ನೋಡಿ ಪಾಂಡವಸೈನ್ಯವೆಲ್ಲಾ ಭಯದಿಂದ ದೊಡ್ಡ ಹಾಹಾಕಾರವನ್ನು ಮಾಡಿತು. "ಓಹೋ! ಧರ್ಮರಾಜನು ದ್ರೋಣನಿಂದ ಹಿಡಿಯಲ್ಪಟ್ಟನು. ದ್ರೋಣನ ಕೈಗೆ ಸಿಕ್ಕಿಬಿದ್ದನು!" ಎಂದು ಎಲ್ಲೆಲ್ಲಿಯೂ ದೊಡ್ಡ ಗದ್ದಲವೆದ್ದಿತು. ಇಷ್ಟರಲ್ಲಿಯೇ ಧರ್ಮರಾಜನು ಥಟ್ಟನೆ ಸಮೀಪದಲ್ಲಿದ್ದ ಸಹದೇವನ ರಥವನ್ನೇರಿ ಕುಳಿತು, ಕುದುರೆಗಳನ್ನು ಅತಿವೇಗದಿಂದ ನಡೆಸಿಕೊಂಡು, ರಣರಂಗದಿಂದ ಓಡಿಹೋದನು.

ಇದು ನೂರ ಆರನೆಯ ಅಧ್ಯಾಯವು.



ಸಂಕುಲಯುದ್ಧವು.

ಓ ಮಹಾರಾಜಾ! ಕೇಕಯರಾಜನಾದ ಬೃಹತ್‌ಕ್ಷತ್ರನನ್ನು ಇದಿರಿಸಿನಿಂತ ಕ್ಷೇಮಧೂರ್ತಿಯು, ಅವನ ಎದೆಗೆ ಗುರಿಯಿಟ್ಟು ಬಾಣಗಳನ್ನು ಹೊಡೆದನು. ಅದನ್ನು ಸಹಿಸಲಾರದೆ ಬೃಹತ್‌ಕ್ಷತ್ರನು ತೊಂಭತ್ತು ಬಾಣಗಳನ್ನು ಪ್ರಯೋಗಿಸಿ, ಅತಿವೇಗದಿಂದ ದ್ರೋಣನ ಸೈನ್ಯವನ್ನು ಚದರಿಸುವುದಕ್ಕೆ ಯತ್ನಿಸಿದನು. ಇಷ್ಟರಲ್ಲಿ ಕ್ಷೇಮಧೂರ್ತಿಯು ಒಂದು ಭಲ್ಲಾಯುಧದಿಂದ ಆ ಕೇಕಯರಾಜನ ಬಿಲ್ಲನ್ನು ತುಂಡುಮಾಡಿದುದಲ್ಲದೆ, ಅವನನ್ನೂ ತೀಕ್ಷ್ಣಬಾಣಗಳಿಂದ ಹೊಡೆದನು. ಇಷ್ಟಾದರೂ ಬೃಹತ್‌ಕ್ಷತ್ರನು ನಗುತ್ತಿರುವವನಂತೆಯೇ ಬೇರೊಂದು ಬಿಲ್ಲನ್ನು ಎತ್ತಿಕೊಂಡು, ಕ್ಷೇಮಧೂರ್ತಿಯ ರಥರಥಾಶ್ವಸಾರಥಿಗಳನ್ನು ಹೊಡೆದು, ಅವನನ್ನು ವಿರಥನನ್ನಾಗಿ ಮಾಡಿದನು. ಒಡನೆಯೇ ಕುಂಡಲಾಲಂಕೃತವಾದ ಅವನ ತಲೆಯನ್ನು ಬಾಣದಿಂದ ಕತ್ತರಿಸಿ ದೇಹದಿಂದ ಬೇರ್ಪಡಿಸಿದನು. ಆಕಾಶದಿಂದ ಬಿದ್ದ ಜ್ಯೋತಿಯಂತೆ ಕಿರೀಟಕುಂಡಲಾಲಂಕೃತವಾದ ಆ ಕ್ಷೇಮಧೂರ್ತಿಯ

ತಲೆಯು ನೆಲಕ್ಕೆ ಬಿದ್ದಿತು. ಹೀಗೆ ಬೃಹತ್‌ಕ್ಷತ್ರನು ಕ್ಷೇಮಧೂರ್ತಿಯನ್ನು ಕೊಂದಮೇಲೆ, ಅರ್ಜುನನನ್ನು ಸೇರುವ ಆತುರದಿಂದ ನಿನ್ನ ಸೈನ್ಯವನ್ನು ಚದರಿಸತೊಡಗಿದನು. ಇದೇ ಸಮಯದಲ್ಲಿ ದ್ರೋಣನಿಗಾಗಿ ಆತುರದಿಂದ ಬರುತ್ತಿರುವ ಧೃಷ್ಟಕೇತುವನ್ನು ವೀರಧನ್ವನೆಂಬ ಮಹಾಧನುರ್ಧಾರಿಯು ತಡೆದು ನಿಂತನು. ಅವರಿಬ್ಬರಿಗೂ ಪ್ರಬಲಯುದ್ಧವಾಯಿತು. ಒಬ್ಬರಮೇಲೊಬ್ಬರು ಸಾವಿರಾರು ಬಾಣಗಳನ್ನು ಪ್ರಯೋಗಿಸಿದರು. ಅವರಿಬ್ಬರೂ ಯುದ್ಧಮದವುಳ್ಳವರಾದುದರಿಂದ, ಮಹಾಬಲವುಳ್ಳ ಎರಡು ಕಾಡಾನೆಗಳಂತೆಯೂ, ಕೋಪಗೊಂಡ ಹುಲಿಗಳಂತೆಯೂ ಹೋರಾಡಿದರು. ಸಿದ್ಧಚಾರಣರೆಲ್ಲರೂ ಅವರಿಬ್ಬರ ಯುದ್ಧವನ್ನು ಆಶ್ಚರ್ಯವಶರಾಗಿ ನೋಡುತ್ತಿದ್ದರು. ಈ ನಡುವೆ ವೀರಧನ್ವನು ಧೃಷ್ಟಕೇತುವಿನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿದನು. ಚೇದಿರಾಜನಾದ ಆ ಧೃಷ್ಟಕೇತುವು ಮುರಿದ ಧನುಸ್ಸನ್ನು ಬಿಸುಟು, ಸುವರ್ಣದಂಡವುಳ್ಳ ಲೋಹಮಯವಾದ ದೊಡ್ಡ ಶಕ್ತಿಯೊಂದನ್ನು ಕೈಗೆತ್ತಿಕೊಂಡು, ವೀರಧನ್ವನ ರಥದಮೇಲೆ ಬೀಸಿದನು. ಆ ಶಕ್ತಿಯು ಬಿದ್ದೊಡನೆ ವೀರಧನ್ವನು ಎದೆಯೊಡೆದು ರಥದಿಂದ ಕೆಳಕ್ಕುರುಳಿದನು. ತ್ರಿಗರ್ತರಿಗೆಲ್ಲ ಮಹಾರಾಜನೆನಿಸಿಕೊಂಡ ಆ ವೀರಧನ್ವನು ಹತನಾದುದನ್ನು ನೋಡಿ ನಿನ್ನ ಸೈನ್ಯಕ್ಕೆ ಬಹುಭೀತಿಯುಂಟಾಯಿತು. ಇದೇಸಮಯದಲ್ಲಿ ಪಾಂಡವರು ನಿನ್ನ ಸೈನ್ಯಗಳನ್ನು ಚದರಿಸುತ್ತಬಂದರು. ಇಷ್ಟರಲ್ಲಿ ನಿನ್ನ ಮಗನಾದ ದುರ್ಮುಖನು ಸಹದೇವನಮೇಲೆ ಅರುವತ್ತುಬಾಣಗಳನ್ನು ಪ್ರಯೋಗಿಸಿ, ಪಾಂಡವಸೈನ್ಯವೆಲ್ಲಾ ನಡುಗುವಂತೆ ಸಿಂಹನಾದವನ್ನು ಮಾಡಿದನು. ಇದನ್ನು ಸಹಿಸಲಾರದೆ ಸಹದೇವನು ತೀಕ್ಷ್ಣಬಾಣಗಳಿಂದ ದುರ್ಮುಖನನ್ನು ಹೊಡೆದನು. ಆ ಅಣ್ಣತಮ್ಮಂದಿರಿಬ್ಬರೂ ನಗುಮುಖದಿಂದಲೇ ಒಬ್ಬರನ್ನೊಬ್ಬರು ಮೂದಲಿಸುತ್ತ ಯುದ್ಧಮಾಡಿದರು. ಮಹಾಬಲಾಢ್ಯನಾದ ಸಹದೇವನ ವೇಗವನ್ನಡಗಿಸಬೇಕೆಂದು ದುರ್ಮುಖನು ಅವನಮೇಲೆ ಒಂಭತ್ತುಬಾಣಗಳನ್ನು ಬಿಟ್ಟನು. ಇಷ್ಟರಲ್ಲಿ ಸಹದೇವನು ದುರ್ಮುಖನ ಧ್ವಜವನ್ನು ತುಂಡುಮಾಡಿ, ಅವನ ನಾಲ್ಕು ಕುದುರೆಗಳನ್ನೂ ನಾಲ್ಕು ಬಾಣಗಳಿಂದ ಕೊಂದುಬಿಟ್ಟನು. ಬೇರೊಂದು ಭಲ್ಲದಿಂದ ಅವನ ಸಾರಥಿಯ ತಲೆಯನ್ನು ಕತ್ತರಿಸಿಕೆಡಹಿದನು. ಒಂದು ಕ್ಷುರಪ್ರದಿಂದ

ದುರ್ಮುಖನ ಕೈಯಲ್ಲಿದ್ದ ಧನುಸ್ಸನ್ನು ತುಂಡುಮಾಡಿ, ಅವನಮೇಲೆಯೂ ಐದು ಬಾಣಗಳನ್ನು ಪ್ರಯೋಗಿಸಿದನು. ಇದರಿಂದ ಬಹಳವಾಗಿ ನೊಂದು ಎದೆಗುಂದಿದ ದುರ್ಮುಖನು, ತನ್ನ ರಥದಿಂದ ಹಾರಿ, ಸಮೀಪದಲ್ಲಿದ್ದ ನಿರಮಿತ್ರನ ರಥವನ್ನೇರಿ ಕುಳಿತನು. ಕೂಡಲೇ ಸಹದೇವನು ಕೋಪದಿಂದ ಒಂದು ತೀಕ್ಷ್ಣವಾದ ಭಲ್ಲಾಯುಧವನ್ನೆತ್ತಿ ನಿರಮಿತ್ರನಿಗೆ ಗುರಿಯಿಟ್ಟು ಪ್ರಯೋಗಿಸಿದನು. ಆ ಬಾಣವು ತಗುಲಿದೊಡನೆ ನಿರಮಿತ್ರನು ರಥದಿಂದ ಕೆಳಕ್ಕುರುಳಿದನು. ತ್ರಿಗರ್ತರಾಜಕುಮಾರನಾದ ನಿರಮಿತ್ರನು ಹತನಾದುದನ್ನು ಕಂಡು, ನಿನ್ನ ಸೈನ್ಯವೆಲ್ಲಾ ಬಹಳ ದುಃಖಕ್ಕೊಳಗಾಯಿತು. ಹೀಗೆ ನಿರಮಿತ್ರನನ್ನು ಕೊಂದ ಸಹದೇವನು, ಪೂರ್ವದಲ್ಲಿ ಮಹಾಬಲಾಢ್ಯನಾದ ಖರನನ್ನು ಕೊಂದ ರಾಮನಂತೆ, ರಣರಂಗದಲ್ಲಿ ಶೋಭಿಸುತ್ತಿದ್ದನು. ತಮ್ಮ ರಾಜನು ಹತನಾದುದನ್ನು ನೋಡಿ ತ್ರಿಗರ್ತಸೈನ್ಯದಲ್ಲಿ ದೊಡ್ಡ ಹಾಹಾಕಾರ ವೆದ್ದಿತು. ಆಮೇಲೆ ನಿನ್ನ ಮಗನಾದ ವಿಕರ್ಣನನ್ನೂ ಒಂದೇ ಮುಹೂರ್ತ ಮಾತ್ರದಲ್ಲಿ ಜಯಿಸಿ ಯುದ್ಧರಂಗದಿಂದ ಓಡಿಸಿಬಿಟ್ಟನು. ಇದು ಲೋಕಕ್ಕೆ ಆಶ್ಚರ್ಯಕರವಾಯಿತು. ಇಷ್ಟರಲ್ಲಿ ನಮ್ಮಕಡೆಯ ವ್ಯಾಘ್ರದತ್ತನು ಸಾತ್ಯಕಿಯನ್ನು ಅವನ ರಥರಥಾಶ್ವಧ್ವಜಸಾರಥಿಗಳೊಡನೆ ತನ್ನ ಬಾಣಗಳಿಂದ ಮರೆಸಿಬಿಟ್ಟನು. ಆದರೆ ಅತ್ಯಂತಹಸ್ತಲಾಘವವುಳ್ಳ ಸಾತ್ಯಕಿಯು, ತನ್ನ ಬಾಣಗಳಿಂದ ಆ ವ್ಯಾಘ್ರದತ್ತನನ್ನೂ ಅವನ ರಥರಥಾಶ್ವಸಾರಥಿಗಳನ್ನೂ ಕ್ಷಣಮಾತ್ರದಲ್ಲಿ ಕೊನೆಮುಟ್ಟಿಸಿಬಿಟ್ಟನು. ಮಾಗಧರಾಜಕುಮಾರನಾದ ವ್ಯಾಘ್ರದತ್ತನು ಹತನಾದುದನ್ನು ನೋಡಿ, ಮಾಗಧಸೈನ್ಯಗಳೆಲ್ಲವೂ ನಾನಾಕಡೆಗಳಿಂದ ಬಾಣಗಳನ್ನೂ, ಭಿಂಡಿವಾಲ, ತೋಮರ, ಪ್ರಾಸ, ಮುದ್ಗರ, ಮುಸಲ, ಮೊದಲಾದ ಆಯುಧಗಳನ್ನೂ ಸಾವಿರಾರು ಸಂಖ್ಯೆಯಿಂದ ಪ್ರಯೋಗಿಸುತ್ತ ಮುಂದುವರಿದುವು. ಮಹಾಬಲಾಢ್ಯನಾದ ಸಾತ್ಯಕಿಯು ಅಷ್ಟು ಜನರನ್ನೂ ಲೀಲಾಮಾತ್ರದಿಂದ ನಗುಮುಖದಿಂದಲೇ ಜಯಿಸಿ ಓಡಿಸಿದನು. ಮಾಗಧಸೈನ್ಯಗಳು ಪರಾಜಿತವಾಗಿ ಓಡಿಹೋಗುತ್ತಿರುವುದನ್ನು ನೋಡಿ, ನಮ್ಮಕಡೆಯ ಇತರ ಸೈನ್ಯಗಳು ಭಯದಿಂದ ಚದರಲಾರಂಭಿಸಿದುವು. ಸಾತ್ಯಕಿಯು ರಣರಂಗದಲ್ಲಿ ಜಯಶೀಲನಾಗಿ ಶೋಭಿಸುತ್ತಿರುವುದನ್ನೂ, ನಿನ್ನ ಸೈನ್ಯವು ಚದರುವುದನ್ನೂ ನೋಡಿ ದ್ರೋಣನು

ಅತ್ಯಂತಕುಪಿತನಾಗಿ, ತಾನೇ ಸಾತ್ಯಕಿಗೆ ಇದಿರಾಗಿ ಬಂದು ಯುದ್ಧವನ್ನು ತೊಡಗಿದನು.

ಇದು ನೂರಏಳನೆಯ ಅಧ್ಯಾಯವು.

ದ್ರೌಪದಿಯ ಪುತ್ರರಾದ ಉಪಪಾಂಡವರಿಂದ ಶಲನು ಹತನಾದುದು. ಭೀಮಸೇನನು ಅಲಂಬುಸನೆಂಬ ರಾಕ್ಷಸನನ್ನು ಜಯಿಸಿ ಓಡಿಸಿದುದು.

ಓ ಮಹಾರಾಜಾ! ಸೋಮದತ್ತಪುತ್ರನಾದ ಶಲನು ಉಪಪಾಂಡವರಲ್ಲಿ ಒಬ್ಬೊಬ್ಬರನ್ನೂ ಮೊದಲು ಐದುಬಾಣಗಳಿಂದಲೂ, ಆಮೇಲೆ ತಿರುಗಿ ಏಳೇಳು ಬಾಣಗಳಿಂದಲೂ ತೀವ್ರವಾಗಿ ಪ್ರಹರಿಸಿದನು. ಈ ಪ್ರಹಾರದಿಂದ ಅವರಿಗೆ ಯುದ್ಧದಲ್ಲಿ ಹಿಂದುಮುಂದು ತೋರದಂತಾಯಿತು ಆದರೆ ಅವರು ತಿರುಗಿ ಮೆಲ್ಲಗೆ ಚೇತರಿಸಿಕೊಂಡು ಯುದ್ಧವನ್ನಾರಂಭಿಸಿದರು. ನಕುಲಪುತ್ರನಾದ ಶತಾನೀಕನು ಸೌಮದತ್ತಿಯನ್ನು ಎರಡು ತೀವ್ರಬಾಣಗಳಿಂದ ಹೊಡೆದನು. ಆಮೇಲೆ ಬೇರೆ ನಾಲ್ಕುಮಂದಿ ಉಪಪಾಂಡವರೂ ಆ ಸೋಮದತ್ತಿಯಮೇಲೆ ಮೂರುಮೂರು ಬಾಣಗಳನ್ನು ಪ್ರಯೋಗಿಸಿದರು. ಅದಕ್ಕೆ ಪ್ರತಿಯಾಗಿ ಸೌಮದತ್ತಿಯು ಐದು ತೀವ್ರಬಾಣಗಳನ್ನು ತೆಗೆದು, ಒಬ್ಬೊಬ್ಬನ ಎದೆಗೆ ಒಂದೊಂದು ಬಾಣವನ್ನು ಗುರಿಯಿಟ್ಟು ಹೊಡೆದನು. ಇದರಿಂದ ಆ ಐದುಮಂದಿಯೂ ಕ್ರುದ್ಧರಾಗಿ, ಆ ಸೌಮದತ್ತಿಯನ್ನು ಸುತ್ತಲೂ ಮುತ್ತಿಕೊಂಡು ಏಕಕಾಲದಲ್ಲಿ ಅವನಮೇಲೆ ಬಾಣಗಳನ್ನು ಬಿಡಲಾರಂಭಿಸಿದರು. ಅರ್ಜುನಕುಮಾರನು ನಾಲ್ಕು ಬಾಣಗಳಿಂದ ಆತನ ನಾಲ್ಕು ರಥಾಶ್ವಗಳನ್ನು ಯಮಪುರಿಗೆ ಕಳುಹಿಸಿದನು. ಭೀಮಸೇನನ ಮಗನು ಆ ಸೌಮದತ್ತಿಯ ಬಿಲ್ಲನ್ನು ಕತ್ತರಿಸಿ ಸಿಂಹನಾದಮಾಡುತ್ತ, ಬೇರೆ ಬಾಣಗಳಿಂದ ಅವನನ್ನು ಬಲವಾಗಿ ನೋಯಿಸಿದನು. ಯುಧಿಷ್ಠಿರಪುತ್ರನು ಅವನ ಧ್ವಜವನ್ನು ತುಂಡುಮಾಡಿದನು. ನಕುಲಕುಮಾರನು ಅವನ ಸಾರಥಿಯನ್ನು ರಥದಿಂದ ಕೆಳಕ್ಕೆ ಕೆಡಹಿದನು. ಸಹದೇವಪುತ್ರನು ಒಂದು ಕ್ಷುರಪ್ರದಿಂದ ಆತನ ತಲೆಯನ್ನು ಕತ್ತರಿಸಿ ಕೆಡಹಿದನು. ಸ್ವರ್ಣ

ಕಿರೀಟಾಲಂಕೃತವಾದ ಅವನ ತಲೆಯು ಬಾಲಸೂರ್ಯನಂತೆ ರಣರಂಗವನ್ನು ಬೆಳಗುತ್ತ ಕೆಳಕ್ಕೆ ಬಿದ್ದಿತು. ಸೌಮದತ್ತಿಯ ಶಿರಸ್ಸು ಬಿದ್ದುದನ್ನು ನೋಡಿ ನಮ್ಮ ಸೈನ್ಯಗಳೆಲ್ಲ ಭಯದಿಂದ ಓಡಲಾರಂಭಿಸಿದುವು. ಇದು ಹೀಗಿರಲು, ಅಲಂಬುಸನೆಂಬ ರಾಕ್ಷಸನು ಭೀಮಸೇನನನ್ನು ಇದಿರಿಸಿ ಯುದ್ಧಕ್ಕೆ ನಿಂತನು. ಆ ನರರಾಕ್ಷಸರಿಬ್ಬರ ಮಹಾಯುದ್ಧವು, ಹಿಂದೆ ಲಕ್ಷ್ಮಣನಿಗೂ, ಇಂದ್ರಜಿತ್ತಿಗೂ ನಡೆದ ಯುದ್ಧವನ್ನು ನೆನಪಿಗೆ ತರುತ್ತ, ಸಮಸ್ತಭೂತಗಳಿಗೂ ಭಯವನ್ನೂ, ಆಶ್ಚರ್ಯವನ್ನೂ ಉಂಟುಮಾಡಿತು. ಋಷ್ಯಶೃಂಗಪುತ್ರನಾದ ಆ ಅಲಂಬುಸನನ್ನು ಭೀಮನು ಒಂಭತ್ತು ತೀವ್ರ ಬಾಣಗಳಿಂದ ಹೊಡೆದನು. ಅದನ್ನು ಸಹಿಸಲಾರದೆ ಅಲಂಬುಸನು ಭಯಂಕರಧ್ವನಿಯನ್ನು ಮಾಡಿ ಅತಿವೇಗದಿಂದ ಭೀಮನಿಗಿದಿರಾದನು. ಅವನ ಅನುಚರರಾದ ಅನೇಕರಾಕ್ಷಸರು ಅವನನ್ನು ಹಿಂಬಾಲಿಸಿದರು. ಆ ರಾಕ್ಷಸನು ಭೀಮನಮೇಲೆ ಐದು ಬಾಣಗಳನ್ನು ಬಿಟ್ಟು, ಆ ಭೀಮನಕಡೆಯ ಮುನ್ನೂರುಮಂದಿ ರಥಿಕರನ್ನು ತೀರಿಸಿಬಿಟ್ಟನು. ಆಮೇಲೆ ತಿರುಗಿ ನಾನೂರುಮಂದಿ ರಥಿಕರನ್ನು ಕೊಂದು, ಅತಿತೀವ್ರವಾದ ಒಂದು ಬಾಣವನ್ನು ಭೀಮನಿಗೆ ಗುರಿಯಿಟ್ಟು ಹೊಡೆದನು. ಆ ಪ್ರಹಾರಕ್ಕೆ ಭೀಮನು ಮೂರ್ಛಿತನಾಗಿ ರಥದ ಗದ್ದುಗೆಯಮೇಲೆಯೇ ಒರಗಿ ಕುಳಿತನು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಚೇತರಿಸಿಕೊಂಡು, ಕೋಪದಿಂದ ಭಯಂಕರವಾದ ತನ್ನ ಬಿಲ್ಲನ್ನೆಳೆದು, ತೀಕ್ಷ್ಣಬಾಣಗಳನ್ನು ಆ ರಾಕ್ಷಸನಮೇಲೆ ಪ್ರಯೋಗಿಸಿದನು. ಆ ರಾಕ್ಷಸನ ಅಂಗಾಂಗಗಳೊಳಗೆಲ್ಲ ಬಾಣಗಳು ನಾಟಿ, ರಕ್ತಧಾರೆಯು ಹರಿಯುತ್ತಿರಲು, ಪುಷ್ಪಿತವಾದ ಮುತ್ತುಗದ ಮರದಂತೆ ಕಾಣಿಸಿದನು. ಆ ರಾಕ್ಷಸನು ಅದರಿಂದ ಕುಪಿತನಾಗಿ ತನ್ನ ಸಹೋದರನು (ಬಕನು) ಭೀಮನಿಂದ ಹತನಾದುದನ್ನು ನೆನೆಸಿಕೊಂಡು, ಮಾಯೆಯಿಂದ ಭಯಂಕರರೂಪವನ್ನು ತಾಳಿ, ಭೀಮನ ಮುಂದೆ ನಿಂತು “ಎಲಾ ಪಾರ್ಥಾ! ಈಗ ನನ್ನ ಪರಾಕ್ರಮವನ್ನು ನೋಡು. ನನ್ನ ಮುಂದೆ ಯುದ್ಧಕ್ಕೆ ನಿಲ್ಲು! ನನ್ನ ಪರೋಕ್ಷದಲ್ಲಿ ನೀನು ನನ್ನ ಒಡಹುಟ್ಟಿದವನಾದ ಬಕನನ್ನು ವಧಿಸಿದೆ. ಆಗ ನಾನಿಲ್ಲದಿದ್ದುದರಿಂದಲೇ ನಿನಗೆ ಆ ಕಾರ್ಯವು ಸಾಧ್ಯವಾಯಿತು” ಎಂದನು. ಹೀಗೆಂದು ಹೇಳಿದೊಡನೆ ಆ ರಾಕ್ಷಸನು ಮಾಯೆಯಿಂದ ಅದೃಶ್ಯನಾಗಿ, ಭೀಮನ

ಮೇಲೆ ಬಾಣಗಳನ್ನು ಸುರಿಯಲಾರಂಭಿಸಿದನು. ಅವನು ಕಣ್ಣಿಗೆ ಕಾಣಿಸ ದಿದ್ದರೂ ಭೀಮನು ತನ್ನ ಬಾಣಗಳನ್ನು ಆಕಾಶಕ್ಕೆಲ್ಲ ಹರಡುತ್ತಿದ್ದನು. ಆದರೆ ಆ ರಾಕ್ಷಸನು ಭೀಮನ ಬಾಣಗಳಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಭೂಮಿ ಯಿಂದ ಆಕಾಶಕ್ಕೂ, ಆಕಾಶದಿಂದ ಭೂಮಿಗೂ ಹಾರುತ್ತ, ಒಮ್ಮೆ ದೊಡ್ಡ ಆಕೃತಿಯಿಂದ ನಿಲ್ಲುವನು! ಇನ್ನೊಮ್ಮೆ ಬಹುಸೂಕ್ಷ್ಮವಾದ ರೂಪದಿಂದ ಕಾಣಿಸುವನು! ಒಮ್ಮೆ ಅಣುಮಾತ್ರವಾಗಿರುವನು! ಹಾಗೆಯೇ ಎತ್ತರ ವಾಗಿ ಕಾಣುವನು! ಇನ್ನೊಮ್ಮೆ ಸ್ಥೂಲಾಕಾರದಿಂದ ನಿಲ್ಲುವನು! ಆಗಾಗ ಮೇಘದಂತೆ ಗರ್ಜಿಸುವನು! ಕ್ಷಣಕ್ಷಣಕ್ಕೂ ಹೀಗೆ ಬೇರೆಬೇರೆ ರೂಪಗ ಳನ್ನು ತೋರಿಸುತಿದ್ದು, ಹಾಗೆಯೇ ಅದೃಶ್ಯನಾಗುವನು. ಆ ರಾಕ್ಷಸನು ಅದೃಶ್ಯನಾಗಿದ್ದಾಗ, ಆಕಾಶದಿಂದ ಶಕ್ತಿಗಳೂ, ಕಣವಗಳೂ, ಪ್ರಾಸ, ಶೂಲ, ಪಟ್ಟಸ, ತೋಮರ, ಶತಘ್ನಿ, ಪರಿಘ, ಭಿಂಡಿವಾಲ, ಕೊಡಲಿ, ಕತ್ತಿ, ಕಲ್ಲು, ಗುಂಡು, ಗುಡಾಯುಧ, ಋಷ್ಟಿ, ವಜ್ರ ಮೊದಲಾದ ವಿವಿಧಾಯುಧಗಳೂ, ಬಾಣಧಾರೆಗಳೂ ಸಾವಿರಾರು ಕಡೆಯಿಂದ ಭಯಂ ಕರವಾಗಿ ಬೀಳುತ್ತಿದ್ದುವು. ಈ ಶಸ್ತ್ರಗಳಿಂದ ಪಾಂಡವರ ಸೈನ್ಯಗಳು ಬಹಳವಾಗಿ ನಾಶಹೊಂದಿದುವು. ಆ ರಾಕ್ಷಸನು ನಾನಾಕಡೆಗಳಿಂದ ಉಚ್ಚ ಧ್ವನಿಯಿಂದಲೂ, ಮೃದುಧ್ವನಿಯಿಂದಲೂ, ಒಮ್ಮೊಮ್ಮೆ ಕಠಿನವಾಗಿಯೂ ಮೃದುವಾಗಿಯೂ ಕೂಗುತ್ತಿರುವನು. ರಾಕ್ಷಸನ ಬಾಣಗಳಿಂದ ಪಾಂಡವ ಸೈನ್ಯಗಳಲ್ಲಿದ್ದ ಆನೆಕುದುರೆಕಾಲಾಳುಗಳೆಲ್ಲ ಅಪರಿಮಿತವಾಗಿ ಸತ್ತುಬಿದ್ದುವು. ರಥಗಳಿಂದ ರಥಿಕರು ಕೆಳಕ್ಕುರುಳಿದರು. ಪ್ರಬಲವಾದ ರಕ್ತನದಿಯು ರಣ ರಂಗದಲ್ಲಿ ಹರಿಯಿತು. ರಥಗಳೇ ಸುಳಿಗಳು! ಆನೆಗಳೇ ಮೊಸಳೆಗಳು! ಛತ್ರಗಳೇ ಹಂಸಗಳು! ರಕ್ತದ ಕೆಸರೇ ಕೆಸರು! ತುಂಡಾಗಿ ಬಿದ್ದ ತೋಳು ಗಳೇ ನೀರುಹಾವುಗಳು! ದಾಹಗೊಂಡ ರಾಕ್ಷಸಗಣಗಳಿಂದ ತುಂಬಿದ ಆ ರಕ್ತನದಿಯು, ಚೇದಿ, ಪಾಂಚಾಲ, ಸೃಂಜಯಸೈನ್ಯಗಳನ್ನೆಲ್ಲ ತನ್ನಲ್ಲಿ ಕೊಚ್ಚಿ ಸಿಕೊಂಡುಹೋಗುತ್ತಿದ್ದಿತು. ಹೀಗೆ ಆ ರಾಕ್ಷಸನು ನಿರ್ಭಯನಾಗಿ, ಮತ್ತು ನಿರಾತಂಕನಾಗಿ ಪಾಂಡವಸೈನ್ಯವನ್ನೆಲ್ಲ ಸೂರೆಗೊಳ್ಳುತ್ತಿರುವುದನ್ನು ನೋಡಿ, ಪಾಂಡವಸೈನ್ಯಗಳು ಎದೆಗೆಟ್ಟು ಕಳವಳಿಸುತ್ತಿದ್ದುವು. ನಿನ್ನ ಸೈನಿಕರು ಸಂತೋಷದಿಂದ ಸಿಂಹನಾದ ಮಾಡಿದರು. ನಿನ್ನ ಸೈನ್ಯದಲ್ಲಿ ದೊಡ್ಡ ಜಯ

ಭೇರಿಗಳು ಮೊಳಗಿದುವು. ಈ ಉತ್ಸಾಹಕೋಲಾಹಲಗಳನ್ನು ಕೇಳಿ ಭೀಮನಿಗೆ ಸಹಿಸಲಾರದ ಕೋಪವುಂಟಾಯಿತು. ಕಾಡಿನಲ್ಲಿ ಮನುಷ್ಯರ ತಲಶಬ್ದವನ್ನು ಕೇಳಿ ರೇಗಿಬರುವ ಮದದಾನೆಯಂತೆ, ಭೀಮನು ಕಣ್ಣುಗಳಿಂದಲೇ ಶತ್ರುಗಳನ್ನು ದಹಿಸುವಂತೆ ಕೆಂಪೇರಿದ ಕಣ್ಣುಳ್ಳವನಾಗಿ, ತ್ವಷ್ಟೃದೇವತಾತ್ಮಕವಾದ ಒಂದು ಮಹಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರವನ್ನು ಪ್ರಯೋಗಿಸಿದೊಡನೆ, ಅದರಿಂದ ಪರಂಪರೆಯಾಗಿ ನೂರುಸಾವಿರಲೆಕ್ಕದಲ್ಲಿ ಬಾಣಗಳು ಹೊರಡುತ್ತಿದ್ದುವು. ಕೌರವಸೈನ್ಯವೆಲ್ಲ ಅದರಿಂದ ಬಹಳವಾಗಿ ನಷ್ಟವಾದುವು. ಆ ಅಸ್ತ್ರಪ್ರಭಾವದಿಂದ ರಾಕ್ಷಸನ ಮಾಯೆಯು ಅಡಗಿ, ಆ ರಾಕ್ಷಸನಿಗೂ ಪ್ರಬಲವಾದ ಬಾಧೆಯುಂಟಾಯಿತು. ಅದನ್ನು ತಡೆಯಲಾರದೆ ಆ ಅಲಂಬುಸನು ರಣರಂಗವನ್ನು ಬಿಟ್ಟು ಪಲಾಯನಮಾಡಿ, ದ್ರೋಣನ ಸೇನಾಮಧ್ಯದಲ್ಲಿ ಅಡಗಿಕೊಂಡನು. ರಾಕ್ಷಸನು ಪರಾಜಿತನಾಗಲು, ಪಾಂಡವಸೈನ್ಯದಲ್ಲಿ ಎಲ್ಲಾ ಕಡೆಯೂ ಸಂತೋಷಸಿಂಹನಾದಗಳು ಹೊರಟುವು. ಎಲ್ಲರೂ ಭೀಮನನ್ನು ಕೊಂಡಾಡಿದರು. ದೈತ್ಯರು ಪ್ರಹ್ಲಾದನನ್ನೂ, ಮರುತ್ತುಗಳು ದೇವೇಂದ್ರನನ್ನೂ ಪೂಜಿಸುವಂತೆ, ಎಲ್ಲರೂ ಭೀಮನನ್ನು ಪೂಜಿಸಿದರು.

ಇದು ನೂರ ಎಂಟನೆಯ ಅಧ್ಯಾಯವು.



ಘಟೋತ್ಕಚನು ಅಲಂಬುಸನನ್ನು ಕೊಂದುದು.

ಓ ಮಹಾರಾಜಾ! ಇತ್ತಲಾಗಿ ದ್ರೋಣನು ಆಕ್ರೋಶದಿಂದ ಮೇಲೆ ಮೇಲೆ ಬಾಣವರ್ಷಗಳನ್ನು ಸುರಿಸಿ, ಪಾಂಡವಸೈನ್ಯಗಳನ್ನು ಹೆದರಿಸುತ್ತಿದ್ದನು. ಪಾಂಡವರ ಕಡೆಯ ಅನೇಕ ರಥಗಳನ್ನು ಧ್ವಂಸಮಾಡಿದನು. ಇದನ್ನು ನೋಡಿ ಸಹಿಸಲಾರದೆ ಭೀಮಪುತ್ರನಾದ ಘಟೋತ್ಕಚನು ಆ ದ್ರೋಣನನ್ನಿದಿರಿಸುವುದಕ್ಕಾಗಿ ಹೊರಟುಬಂದನು. ಆ ಘಟೋತ್ಕಚನ ಆರ್ಭಟವನ್ನು ಕೇಳಬೇಕೆ? ಪಿಶಾಚಮುಖವುಳ್ಳ ಕುದುರೆಗಳನ್ನು ಹೂಡಿದ ಸುವರ್ಣರಥವನ್ನೇರಿ ಕುಳಿತಿರುವನು! ಆ ರಥದಲ್ಲಿ ಸರ್ವಾಯುಧಗಳನ್ನೂ

ತುಂಬಿರುವನು! ಸುವರ್ಣಕವಚವನ್ನೂ, ಸುವರ್ಣಭೂಷಣಗಳನ್ನೂ ಧರಿಸಿ, ಆಗಾಗ ಮೇಘದಂತೆ ಆರ್ಭಟಿಸುವನು! ಹೀಗೆ ಘಟೋತ್ಕಚನು ದ್ರೋಣ ನಿಗಿದಿರಾಗಿ ಬರುವುದನ್ನು ಕಂಡೊಡನೆ, ಆ ದ್ರೋಣಸೈನ್ಯದಲ್ಲಿ ಅಡಗಿಕೊಂಡಿದ್ದ ಅಲಂಬುಸನೆಂಬ ರಾಕ್ಷಸನು, ಅವನನ್ನು ಇದಿರಿಸುವುದಕ್ಕಾಗಿ ಬಂದನು. ಕರಡಿಯ ಚರ್ಮದಿಂದ ಹಾಸಿದ ರಥದಮೇಲೆ ಕುಳಿತು, ದೊಡ್ಡ ಧನುಸ್ಸನ್ನು ಕೈಯಲ್ಲಿ ಹಿಡಿದು, ಉನ್ನತವಾದ ಕಲ್ಪವೃಕ್ಷದಂತೆ ಕಾಣಿಸುತ್ತ, ಕೆಂಪಾದ ತುಟಿಗಳನ್ನು ನಡುಗಿಸುತ್ತ ಬಂದು, ಆ ಘಟೋತ್ಕಚನಮೇಲೆ ದೊಡ್ಡ ದೊಡ್ಡ ಶತಘ್ನಿಗಳನ್ನೂ, ಮುಸಲಗಳನ್ನೂ, ತೋಮರಗಳನ್ನೂ, ಮುಸುಂಢಿ ತ್ರಿಶೂಲ, ಪಟ್ಟಿಸ, ನೂರಲಗುಗಳುಳ್ಳ ಕರ್ಣಿಗಳು, ವಿವಿಧಪಿನಾಕಗಳು, ಚಕ್ರಗಳು, ಕ್ಷುರಪ್ರಗಳು, ಕ್ಷೇಪಣಿಗಳು, ಕಟಂಕಟಗಳು, ನಾರಾಚಗಳು, ಮುಂತಾದ ಆಯುಧಗಳನ್ನೆಲ್ಲ ಪ್ರಯೋಗಿಸುತ್ತಬಂದನು. ಹದ್ದು, ಕಾಗೆ ಮುಂತಾದ ಮಾಂಸಾಹಾರಿಪಕ್ಷಿಗಳು ಆಹಾರಾರ್ಥವಾಗಿ ಇವನ ಆಯುಧಗಳನ್ನೇ ಹಿಂಬಾಲಿಸುತ್ತಬಂದುವು. ಆಗ ಅಲಂಬುಸನು ಧನುಸ್ಸನ್ನು ಹಿಡಿದು ಭಯಂಕರವಾಗಿ ಕೂಗುತ್ತ ಬಾಣಗಳನ್ನು ಬಿಡುತ್ತಿದ್ದನು. ಕಾಲಯಮನಂತೆ ಬರುತ್ತಿದ್ದ ಅವನ ಭಯಂಕರರೂಪವನ್ನು ನೋಡಿ ಪಾಂಡವಸೈನ್ಯವು ಭಯದಿಂದ ಓಡಲಾರಂಭಿಸಿತು. ರಥಿಕರಲ್ಲಿ ಶ್ರೇಷ್ಠನಾದ ಸಾತ್ಯಕಿಯು ಈ ರಾಕ್ಷಸನನ್ನು ನೋಡಿದೊಡನೆಯೇ ದೊಡ್ಡ ಬಿಲ್ಲನ್ನೊದರುತ್ತ "ಎಲ ರಾಕ್ಷಸಾ! ನಿಲ್ಲು, ನಿಲ್ಲು" ಎಂದು ಅವನನ್ನು ಅಡ್ಡಗಟ್ಟಿ ತಡೆದು, ಅವನ ಮೇಲೆ ಅಸ್ತ್ರವರ್ಷಗಳನ್ನು ಕರೆದನು. ಅಲಂಬುಸನನ್ನು ಕಂಡು ಪಾಂಡವ ಸೈನ್ಯವು ಹೆದರಿ ಓಡುತ್ತಿರುವುದನ್ನು ನೋಡಿ, ಘಟೋತ್ಕಚನೂ ಕೂಡ ಥಟ್ಟನೆ ಮುಂದೆ ಬಂದು ಗದೆ, ಶಕ್ತಿ, ತೋಮರ, ಪಟ್ಟಿಸ, ಕತ್ತಿ ಮುಂತಾದ ವಿವಿಧಾಯುಧಗಳನ್ನು ಪ್ರಯೋಗಿಸಿ, ಅಲಂಬುಸನನ್ನು ತಡೆಯುತ್ತಿದ್ದನು. ಆ ರಾಕ್ಷಸರಿಬ್ಬರೂ ಒಬ್ಬನನ್ನು ನೋಡಿ ಒಬ್ಬನು ಮೇಲೆಮೇಲೆ ಸಿಂಹನಾದಗಳನ್ನು ಮಾಡುತ್ತಿದ್ದರು. ಹಿಂದೆ ರಾಮರಾವಣರ ಯುದ್ಧದಂತೆ ಅವರಿಬ್ಬರಿಗೂ ಘೋರಯುದ್ಧವಾಯಿತು. ಅವರಿಬ್ಬರೂ ಅನ್ಯೋನ್ಯವಾಗಿ ಶಕ್ತಿ, ಕತ್ತಿ, ಕೊಡಲಿ, ಪಿನಾಕ, ವಜ್ರ ಮೊದಲಾದ ಆಯುಧಗಳನ್ನು ವರ್ಷಿಸುತ್ತಿದ್ದರು. ಅವರು ಬಿಲ್ಲನ್ನೆಳೆಯುವಾಗ ಅದರಿಂದುಂಟಾದ ಧ್ವನಿಯು, ಯಂತ್ರ

ಧ್ವನಿಗಳಂತೆ ಭಯಂಕರವಾಗಿ ಕೇಳಿಸುತ್ತಿತ್ತು. ಈ ನಡುವೆ ಅಲಂಬುಸನು ಪ್ರಳಯಾಗ್ನಿಗೆ ಸಮಾನವಾದ ಒಂದು ಚಕ್ರಾಯುಧವನ್ನು ಘಟೋತ್ಕಚನ ಮೇಲೆ ಪ್ರಯೋಗಿಸಿದನು. ಘಟೋತ್ಕಚನು ಆ ಚಕ್ರವನ್ನು ತನ್ನ ಗದೆಯಿಂದ ಅಪ್ಪಳಿಸಿದನು. ಅದು ನೂರಾರು ಶಕಲಗಳಾಗಿ ಬಿದ್ದಿತು. ಆ ಚಕ್ರವು ಮುರಿದುಬಿದ್ದಾಗ ಅದರಿಂದುಂಟಾದ ಶಕಲಗಳು ಅಗ್ನಿಕಣಗಳಂತೆ ಚದರಿ, ಆ ಕೌರವಸೈನ್ಯವನ್ನು ಕಾಡುನೊಣಗಳು ಮುತ್ತಿದಂತೆ ವ್ಯಾಪಿಸಿತು. ಅದರಿಂದ ನಮ್ಮ ಸೈನ್ಯವು ಬಹಳವಾಗಿ ನೊಂದಿತು. ತನ್ನ ಚಕ್ರವು ಮುರಿದುದನ್ನು ನೋಡಿ ಅಲಂಬುಸನು, ವೇಗದಿಂದ ಒಂದು ಶೂಲವನ್ನೂ, ಕಿಡಿಗಳನ್ನೆರಚುವ ನೂರಾರು ಶಕ್ತಿಗಳನ್ನೂ ಪ್ರಯೋಗಿಸಿದನು. ಪ್ರಳಯಕಾಲದ ಉಲ್ಕೆಗಳಂತೆ ತನ್ನಿದಿರಾಗಿ ಬರುತ್ತಿರುವ ಆ ಶಸ್ತ್ರಗಳನ್ನು ಘಟೋತ್ಕಚನು ಅರ್ಧಚಂದ್ರಬಾಣಗಳಿಂದ ಕತ್ತರಿಸಿಕೆಡಹಿದನು. ಆಮೇಲೆ ಅಲಂಬುಸನು ಘಟೋತ್ಕಚನ ರಥದಮೇಲೆ ಎಡೆಬಿಡದೆ ಬಾಣವರ್ಷಗಳನ್ನು ಕರೆದನು. ಶಕ್ರ ಶಂಬರರ ಯುದ್ಧದಂತೆ ಇಬ್ಬರಿಗೂ ಪ್ರಬಲಯುದ್ಧವಾಯಿತು. ಅಲಂಬುಸನು ಕೋಪದಿಂದ ಮೇಲೆಮೇಲೆ ಘಟೋತ್ಕಚನನ್ನು ಪ್ರಹರಿಸುತ್ತಿದ್ದನು. ಘಟೋತ್ಕಚನು ಇಪ್ಪತ್ತುಬಾಣಗಳನ್ನು ಅಲಂಬುಸನ ಎದೆಗೆ ಗುರಿಯಿಟ್ಟು ಹೊಡೆದು ಸಿಂಹನಾದವನ್ನು ಮಾಡಿದನು. ಅಲಂಬುಸನು ಪ್ರತಿಗೆಪ್ರತಿಯಾಗಿ ಘಟೋತ್ಕಚನನ್ನು ಪ್ರಹರಿಸಿ, ಬಾರಿಬಾರಿಗೂ ಸಿಂಹನಾದವನ್ನು ಮಾಡುತ್ತಿದ್ದನು. ಇಬ್ಬರೂ ಒಬ್ಬರಿಗೊಬ್ಬರಿಗೆ ಹೆಚ್ಚುಕಡಿಮೆಯಿಲ್ಲದೆ ಹೊಡೆದಾಡಿದರು. ಒಬ್ಬರಮೇಲೊಬ್ಬರು ಮಾಯೆಗಳನ್ನು ಪ್ರಯೋಗಿಸಿದರು. ನೂರಾರು ಮಾಯೆಗಳಿಂದ ಒಬ್ಬರನ್ನೊಬ್ಬರು ಮೋಹಗೊಳಿಸುವುದಕ್ಕೆ ಯತ್ನಿಸಿದರು. ಘಟೋತ್ಕಚನು ಯಾವ ಮಾಯೆಯನ್ನು ಪ್ರಯೋಗಿಸಿದರೆ, ಅಲಂಬುಸನು ಅದನ್ನು ತನ್ನ ಮಾಯೆಯಿಂದ ಕ್ಷಣಮಾತ್ರದಲ್ಲಿ ನಿಗ್ರಹಿಸುವನು. ಅಲಂಬುಸನ ಕಾರ್ಯವನ್ನು ನೋಡಿ ಭೀಮಸೇನನೇ ಮೊದಲಾದ ಪಾಂಡವರಿಗೆ ದುಸ್ಸಹವಾದ ಕೋಪವುಂಟಾಯಿತು. ಅನೇಕರಥಿಕರು ಅಲಂಬುಸನನ್ನು ಸುತ್ತಿಮುತ್ತಿ ಹೊಡೆಯಲಾರಂಭಿಸಿದರು. ಆ ಅಲಂಬುಸನನ್ನು ನಡುವೆ ಸೇರಿಸಿಕೊಂಡು, ಕೊಳ್ಳಿಗಳಿಂದ ಕಾಡಾನೆಯನ್ನು ಹೇಗೋ ಹಾಗೆ, ಸುತ್ತಲೂ ಬಾಣಜ್ವಾಲೆಗಳಿಂದ ಅವನನ್ನು ಪೀಡಿಸತೊಡ

ಗಿದರು. ಆ ಅಲಂಬುಸನು ಅವರ ಅಸ್ತ್ರವೇಗವನ್ನೆಲ್ಲ ತನ್ನ ಅಸ್ತ್ರಮಾಯೆ ಯಿಂದ ನಿಗ್ರಹಿಸಿ, ಹೇಗೋ ಉಪಾಯದಿಂದ ತಪ್ಪಿಸಿಕೊಂಡು ಕಾಡಿಗಿಚ್ಚಿ ನಿಂದ ತಪ್ಪಿಬಂದ ಕಾಡಾನೆಯಂತೆ ತಿರುಗಿ ಮುಂದೆ ನಿಂತನು. ಭಯಂಕರ ವಾದ ತನ್ನ ಬಿಲ್ಲನ್ನೆಳೆದು ಇಪ್ಪತ್ತೈದು ಬಾಣಗಳಿಂದ ಭೀಮನನ್ನೂ, ಐದು ಬಾಣಗಳಿಂದ ಅವನ ಮಗನಾದ ಘಟೋತ್ಕಚನನ್ನೂ ಹೊಡೆದನು. ಹಾಗೆ ಯೇ ಧರ್ಮರಾಜನಿಗೆ ಮೂರು, ಸಹದೇವನಿಗೆ ಏಳು, ನಕುಲನಿಗೆ ಎಪ್ಪತ್ತು ಮೂರು, ಉಪಪಾಂಡವರಲ್ಲಿ ಒಬ್ಬೊಬ್ಬರಿಗೂ ಐದೈದು, ಹೀಗೆ ಬಾಣಗ ಳನ್ನು ಗುರಿಯಿಟ್ಟು ಹೊಡೆದು, ಭಯಂಕರಸಿಂಹನಾದವನ್ನು ಮಾಡಿದನು. ಅದಕ್ಕೆ ಪ್ರತಿಯಾಗಿ ಭೀಮ ಸಹದೇವ ಯುಧಿಷ್ಠಿರರು ಕ್ರಮವಾಗಿ ಆ ರಾಕ್ಷಸನನ್ನು ಒಂಭತ್ತು, ಐದು, ನೂರು ಬಾಣಗಳಿಂದ ಬಲವಾಗಿ ನೋಯಿ ಸಿದರು. ಉಪಪಾಂಡವರಲ್ಲಿ ಒಬ್ಬೊಬ್ಬರೂ ನೂರುನೂರು ಬಾಣಗಳನ್ನು ಬಿಟ್ಟರು. ನಕುಲನು ಅರುವತ್ತುನಾಲ್ಕು ಬಾಣಗಳನ್ನು ಪ್ರಯೋಗಿಸಿ ದನು. ಘಟೋತ್ಕಚನು ಮೊದಲು ಐವತ್ತು ಬಾಣಗಳನ್ನೂ, ತಿರುಗಿ ಎಪ್ಪತ್ತು ಬಾಣಗಳನ್ನೂ ಬಿಟ್ಟು, ಭೂಮಿಯು ನಡುಗುವಂತೆ ಸಿಂಹನಾದ ಮಾಡಿದನು. ಹೀಗೆ ಎಲ್ಲರೂ ಏಕಕಾಲದಲ್ಲಿ ತನ್ನಮೇಲೆ ಬಿಟ್ಟ ಬಾಣಗ ಳಿಂದ ಆ ಅಲಂಬುಸನಿಗೆ ಬಹಳ ನೋವಾಯಿತು. ಅದನ್ನೂ ಸಹಿಸಿಕೊಂಡು ಅವನು ಪ್ರತಿಯೊಬ್ಬರಮೇಲೆಯೂ ಐದೈದು ಬಾಣಗಳನ್ನು ಹೊಡೆದನು. ಎಲ್ಲಕ್ಕಿಂತಲೂ ಅಧಿಕವಾಗಿ ಘಟೋತ್ಕಚನು ಆ ಅಲಂಬುಸನನ್ನು ಏಳಾ ವರ್ತಿ ಮೇಲೆಮೇಲೆ ಬಾಣಗಳಿಂದ ಹೊಡೆದನು. ಅಲಂಬುಸನೂ ಪ್ರತಿ ಯಾಗಿ ಅನೇಕ ಬಾಣಗಳನ್ನು ಬಿಟ್ಟನು. ಅವು ಕೋಪಗೊಂಡ ಸರ್ಪಗ ಳಂತೆ ಬಂದು ಅನೇಕ ಪಾಂಡವಯೋಧರನ್ನು ಕೊಂದುಕೆಡಹಿತು. ಅದನ್ನು ಸಹಿಸಲಾರದೆ ಪಾಂಡವರೂ, ಘಟೋತ್ಕಚನೂ, ಆ ಅಲಂಬುಸನಮೇಲೆ ಅತಿತೀವ್ರಬಾಣಗಳನ್ನು ಬಿಟ್ಟರು. ಹೀಗೆ ಸುತ್ತಲೂ ಮೇಲೆಬಿದ್ದ ಬಾಣಗ ಳಿಂದ ಬಹಳವಾಗಿ ನೊಂದ ಘಟೋತ್ಕಚನಿಗೆ ಹಿಂದುಮುಂದು ತೋರದಂ ತಾಯಿತು. ಆದರೂ ಮನಸ್ಸನ್ನು ಸ್ತಿಮಿತಕ್ಕೆ ತಂದುಕೊಂಡು ತಾನೂ ಬಾಣಗಳನ್ನು ಬಿಡುತ್ತಿದ್ದನು. ಕಾಡುಗಿಚ್ಚಿನಿಂದ ಬೆಂದ ಬೆಟ್ಟದಂತೆಯೂ, ಕಾಡಿಗೆಯ ರಾಶಿಯಂತೆಯೂ ಕಪ್ಪಾದ ಆಕಾರವುಳ್ಳ ಆ ಅಲಂಬುಸನನ್ನು

ಕೊಲ್ಲುವುದಕ್ಕಾಗಿ ಘಟೋತ್ಕಚನೂ ಅನೇಕ ಶಸ್ತ್ರಾಸ್ತ್ರಗಳನ್ನು ಬಿಡುತ್ತಿದ್ದನು. ಆ ರಾಕ್ಷಸರಿಬ್ಬರೂ ಒಬ್ಬರನ್ನೊಬ್ಬರು ಕೊಲ್ಲುವ ಆತುರದಿಂದ ಬಿಟ್ಟ ಬಾಣಗಳು ಅಗ್ನಿಜ್ವಾಲೆಗಳಂತೆಯೂ, ಜೇನುಹುಳಗಳಂತೆಯೂ ಆಕಾಶವನ್ನೆಲ್ಲ ವ್ಯಾಪಿಸಿತು. ಮೇಘದಂತೆ ಬಾಣಗಳು ಅಂತರಿಕ್ಷವನ್ನು ಮರೆಸಿಕೊಂಡು, ಬೇರೊಂದೂ ತಿಳಿಯದಂತೆ ಅಂಧಕಾರವು ಕವಿಯಿತು. ಇಷ್ಟರಲ್ಲಿಯೇ ಘಟೋತ್ಕಚನು ಒಂದು ಭಲ್ಲವನ್ನು ಧನುಸ್ಸಿನಲ್ಲಿ ಸೇರಿಸಿ, ಕಿವಿಯವರೆಗೆ ಎಳೆದು, ಆ ಅಲಂಬುಸನ ಸಾರಥಿಯ ತಲೆಯನ್ನು ಕತ್ತರಿಸಿಬಿಟ್ಟನು. ಇನ್ನು ಕೆಲವು ಬಾಣಗಳಿಂದ ಆ ಅಲಂಬುಸನ ರಥದ ಅಚ್ಚು, ನೊಗ, ಮುಂತಾದ ಅವಯವಗಳನ್ನೆಲ್ಲ ತುಂಡುಮಾಡಿದನು. ರಥವು ಮುರಿದೊಡನೆ ಕಿರ್ಮೀರಕುಮಾರನಾದ ಆ ಅಲಂಬುಸನು, ರಥದಿಂದ ಕೆಳಕ್ಕೆ ಹಾರಿ ಮಾಯಾಮಯಗಳಾದ ಅಸ್ತ್ರಗಳನ್ನು ಪ್ರಯೋಗಿಸತೊಡಗಿದನು. ಘಟೋತ್ಕಚನೂ ತನ್ನ ರಥದಿಂದ ಕೆಳಕ್ಕೆ ಹಾರಿ, ಪ್ರತಿಯಾಗಿ ಮಾಯಾಸ್ತ್ರಗಳನ್ನು ಬಿಟ್ಟು ಆ ಶತ್ರುವಿನ ಅಸ್ತ್ರಗಳನ್ನೆಲ್ಲ ಅಡಗಿಸಿದನು. ಕೊನೆಗೆ ಅಲಂಬುಸನು ಘಟೋತ್ಕಚನ ಮುಂದೆ ನಿಲ್ಲಲಾರದೆ, ರಣರಂಗದಿಂದ ಅದೃಶ್ಯನಾಗಿ ಕಣ್ಣಿಗೆ ಕಾಣಿಸದೆ ಘಟೋತ್ಕಚನನ್ನು ಬಾಣಗಳಿಂದ ಹೊಡೆಯಲಾರಂಭಿಸಿದನು. ಆಮೇಲೆ ಘಟೋತ್ಕಚನು ಅವನು ಅದೃಶ್ಯನಾಗಿರುವಾಗಲೇ ಅಲ್ಲಲ್ಲಿ ಹುಡುಕಿ ವೇಗವುಳ್ಳ ಗದೆಯನ್ನು ಅವನಮೇಲೆ ಬೀಸಿದನು. ಆ ಪ್ರಹಾರವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಅಲಂಬುಸನು ಗರುಡನಂತೆ ಥಟ್ಟನೆ ಆಕಾಶಕ್ಕೆ ಹಾರಿದನು. ಅದನ್ನು ನೋಡಿ ಘಟೋತ್ಕಚನೂ ಖಡ್ಗಪಾಣಿಯಾಗಿ ಆಕಾಶಕ್ಕೆ ಹಾರಿದನು. ಇದನ್ನು ಕಂಡು ಅಲಂಬುಸನು, ಮೇಘವು ಮಳೆಯನ್ನು ಸುರಿಸುವಂತೆ ಬಾಣಗಳನ್ನು ಕರೆಯುತ್ತ, ಸಿಂಹವು ಸಿಂಹವನ್ನು ಇದಿರಿಸುವಂತೆ ಅವನನ್ನಿದಿರಿಸಿದನು. ಇದನ್ನು ನೋಡಿ ಘಟೋತ್ಕಚನು ಬಲಗೈಯಲ್ಲಿ ಕತ್ತಿಯನ್ನು ಹಿಡಿದು, ಎಡಗೈಯಿಂದ ಹಿಡಿದ ಗುರಾಣಿಯನ್ನು ತನ್ನ ಎದೆಗೆ ಮರೆಯಾಗಿಟ್ಟುಕೊಂಡು ಅಲಂಬುಸನಿಗೆ ಇದಿರಾದನು. ಅಂತರಿಕ್ಷದಲ್ಲಿಯೇ ಇಬ್ಬರಿಗೂ ಯುದ್ಧವು ಪ್ರಾರಂಭವಾಯಿತು. ಇಬ್ಬರೂ ಕೈಯಲ್ಲಿದ್ದ ಆಯುಧಗಳಿಂದ ಒಬ್ಬರ ತೊಡೆಯನ್ನು ಮತ್ತೊಬ್ಬರು ಬಲವಾಗಿ ತಾಡಿಸಿದರು. ಎರಡು ಪರ್ವತಗಳು ಒಂದಕ್ಕೊಂದು ತಾಗಿದಂತೆ ಆ ಪ್ರಹಾರದಿಂದ ದೊಡ್ಡ

ಧ್ವನಿಯಾಯಿತು. ಇಬ್ಬರೂ ವೇಗದಿಂದ ದೂರಕ್ಕೆ ಸರಿದು, ಅಲ್ಲಿಂದ ತಿರುಗಿ ಓಡಿಬಂದು ಹೊಡೆಯುವರು! ವಿಚಿತ್ರರೀತಿಯ ಕತ್ತಿಯ ವರಿಸೆಗಳನ್ನೆಲ್ಲ ತೋರಿಸುತ್ತ, ಒಬ್ಬರನ್ನೊಬ್ಬರು ತಾಡಿಸುವರು! ಅವರು ಬೀಸಿದ ಕತ್ತಿಗಳು ಮೈಗೆ ತಗುಲಿದೊಡನೆ, ಇಂದ್ರನಿಂದ ಪ್ರಯೋಗಿಸಲ್ಪಟ್ಟ ವಜ್ರಾಯುಧವು ಪರ್ವತಕ್ಕೆ ತಗುಲಿ ವಿಫಲವಾದಂತೆ, ಅವರ ಕತ್ತಿಗಳೇ ಮುರಿದುಬೀಳುತ್ತಿದ್ದುವು. ಒಂದೇ ಮಾಂಸಖಂಡಕ್ಕೆ ಆಸೆಪಟ್ಟು ಬರುತ್ತಿರುವ ಎರಡು ಗಿಡುಗಗಳು ಹೋರಾಡುವಂತೆ, ಆ ಇಬ್ಬರು ರಾಕ್ಷಸರೂ ಹಟದಿಂದ ಹೋರಾಡುವುದನ್ನು ಸಮಸ್ತಭೂತಗಳೂ ನೋಡಿ ಆಶ್ಚರ್ಯಗೊಂಡುವು. ಇಬ್ಬರಿಗೂ ಭಯಂಕರಯುದ್ಧವು ನಡೆಯಿತು. ಕೊಬ್ಬಿದ ಹುಲಿಗಳಂತೆ ಇಬ್ಬರೂ ಕೆಂಪೇರಿದ ಕಣ್ಣುಗಳಿಂದ ನೋಡುವರು! ಸಂಧ್ಯಾರಾಗದಿಂದ ಕೆಂಪಾದ ಮೇಘಗಳಂತೆ ಇಬ್ಬರ ದೇಹಗಳೂ ರಕ್ತಮಯವಾದುವು. ಇಬ್ಬರೂ ಖಡ್ಗಪಾಣಿಗಳಾಗಿ, ಆಕಾಶದಲ್ಲಿ ಗಿಡುಗಗಳಂತೆ ಮಂಡಲಗತಿಯಿಂದ ಸಂಚರಿಸುವರು. ಇಷ್ಟರಲ್ಲಿ ಕಿರ್ಮೀರಪುತ್ರನಾದ ಅಲಂಬುಸನು, ತನ್ನ ಕೈಯಲ್ಲಿದ್ದ ಖಡ್ಗವನ್ನು ಸುತ್ತಿಸುತ್ತಿ ಆಡಿಸುತ್ತ, ಪಾಂಡುವಿನ ರಕ್ತಸಂಬಂಧವುಳ್ಳ ಘಟೋತ್ಕಚನ ತಲೆಯನ್ನು ಹಾರಿಸಿಬಿಡಬೇಕೆಂದು ವೇಗದಿಂದ ಬೀಸಿದನು. ಅದೇಸಮಯದಲ್ಲಿ ಘಟೋತ್ಕಚನು ಅಲಂಬುಸ ತಲೆಯನ್ನು ಹಾರಿಸುವುದಕ್ಕಾಗಿ ತನ್ನ ಕತ್ತಿಯನ್ನು ಬೀಸಿದನು. ಈ ಎರಡು ಕತ್ತಿಗಳೂ ವೇಗದಿಂದ ಬಂದು ಒಂದನ್ನೊಂದು ತಾಗಿ ಕಿಡಿಗಳನ್ನು ಹೊರಡಿಸುತ್ತ ಕೆಳಗೆ ಬಿದ್ದುವು. ಆಮೇಲೆ ಆ ರಾಕ್ಷಸರಿಬ್ಬರೂ ಬಾಹುಯುದ್ಧಕ್ಕೆ ತೊಡಗಿದರು. ಒಬ್ಬರನ್ನೊಬ್ಬರು ತಲೆಗಳಿಂದಲೂ, ಹೆಗಲುಗಳಿಂದಲೂ ಅಪ್ಪಳಿಸುತ್ತ, ಒಮ್ಮೊಮ್ಮೆ ಇಬ್ಬರೂ ಬಲವಾಗಿ ನೊಂದು ಹಿಂದೆ ಸರಿಯುವರು! ತಿರುಗಿ ಒಬ್ಬರನ್ನೊಬ್ಬರು ಕೈಕಲೆತು ಯುದ್ಧಮಾಡುವರು! ಈ ನಡುವೆ ಘಟೋತ್ಕಚನು ತಕ್ಕ ಸಂಚನ್ನು ತಿಳಿದು, ಆ ಅಲಂಬುಸನನ್ನು ಮೊತ್ತಕ್ಕೆ ಹಿಡಿದು ಮೇಲೆತ್ತಿ, ತುಂಬಿದ ಮಡಕೆಯನ್ನು ಕಲ್ಲುಬಂಡೆಯಮೇಲೆ ಕುಕ್ಕುವಂತೆ, ಅವನ ದೇಹವನ್ನು ನೆಲದ ಮೇಲೆ ಬಡಿದು ಚೆನ್ನಾಗಿ ತಿಕ್ಕಿಬಿಟ್ಟನು. ಬಲದಿಂದಲೂ, ಪರಾಕ್ರಮದಿಂದಲೂ, ಹಸ್ತಲಾಘವದಿಂದಲೂಕೂಡಿದ ಘಟೋತ್ಕಚನು, ಎಲ್ಲಾ ಸೈನ್ಯಗಳೂ ನೋಡುತ್ತಿದ್ದಹಾಗೆಯೇ ಅತಿಕೋಪದಿಂದ ಆ ಅಲಂಬುಸನ ದೇಹವನ್ನು

ನೆಲಕ್ಕೆ ಕುಕ್ಕಿ ತಿಕ್ಕಿ ಬಿಟ್ಟಾಗ, ಅವನ ಮೂಳೆಗಳೆಲ್ಲ ಮುರಿದು, ಸರ್ವಾವಯವ ಗಳೂ ರಕ್ತಮಯವಾದುವು. ಸಾಲಕಟಂಕಟನ ಮಗನಾದ ಆ ಅಲಂಬುಸನು, ಹೀಗೆ ಘಟೋತ್ಕಚನ ಕೈಯಿಂದ ಅರೆಯಲ್ಪಟ್ಟು, ಮಾಂಸದ ಮುದ್ದೆಯಂತಾ ದನು. ಇದನ್ನು ನೋಡಿ ಪಾಂಡವಸೈನ್ಯಗಳೆಲ್ಲ ಸಂತೋಷದಿಂದ ಸಿಂಹ ನಾದಮಾಡಿದುವು. ಆ ಅಲಂಬುಸನ ಮೈಯನ್ನು ಘಟೋತ್ಕಚನು ತಿಕ್ಕಿ ಬಿಸುಡುವಾಗ, ಅವನ ದೇಹವು ವಜ್ರಾಹತವಾದ ಪರ್ವತಶಿಖರದಂತೆ ಕೆಳಗೆ ಬಿದ್ದಿತು. ಆ ರಾಕ್ಷಸನ ದೇಹವು ಬಿದ್ದ ವೇಗದಲ್ಲಿ ನಿನ್ನ ಕಡೆಯ ಎಷ್ಟೋ ಸೈನ್ಯಗಳು ಅದರಕೆಳಗೆ ಸಿಕ್ಕಿ ಸತ್ತುವು. ಹತ್ತುಮಂದಿ ರಥಿಕರೂ, ಹತ್ತು ಆನೆಗಳೂ ಅದಕ್ಕೆ ಆಹುತಿಯಾದುವು. ಹೀಗೆ ಜಯಶೀಲನಾದ ಘಟೋತ್ಕ ಚನು ಸಂತೋಷದಿಂದ ತಿರುಗಿ ತನ್ನ ರಥವನ್ನೇರಿ ಕುಳಿತನು. ಅಲಂಬುಸನ ವಧವನ್ನು ನೋಡಿ ದೇವತೆಗಳೆಲ್ಲರೂ ಸಂತೋಷದಿಂದ ಸಿಂಹನಾದಮಾಡಿ ದರು. ಬಟ್ಟೆಗಳನ್ನು ಬೀಸಿದರು! ನಿನ್ನ ಸೈನ್ಯಗಳೆಲ್ಲ ಭಯಂಕರವಾಗಿ ಹಾಹಾಕಾರಮಾಡಿದುವು. ರಕ್ತವರ್ಣವುಳ್ಳ ಆ ರಾಕ್ಷಸನ ದೇಹವು, ಆಕಾ ಶದಿಂದ ಕೆಳಕ್ಕೆ ಬಿದ್ದ ಅಂಗಾರಕಗ್ರಹದಂತೆ ಬಿದ್ದುದನ್ನು ಜನರೆಲ್ಲರೂ ನೋಡಿ ವಿಸ್ಮಿತರಾದರು. ಬಲಾಸುರನನ್ನು ಕೊಂದ ಇಂದ್ರನಂತೆ ಘಟೋ ತ್ಕಚನು ಮಹಾಬಲಾಢ್ಯನಾದ ಆ ರಾಕ್ಷಸನನ್ನು ತಾನು ಕೊಂದ ಸಂತೋ ಷದಿಂದ ದೊಡ್ಡ ಸಿಂಹನಾದವನ್ನು ಮಾಡಿದನು. ಘಟೋತ್ಕಚನ ಈ ದುಷ್ಕರಕಾರ್ಯವನ್ನು ನೋಡಿ ಅವನ ಪಿತೃಗಳೂ, ಬಂಧುಗಳೂ ಅವನನ್ನು ಬಹಳವಾಗಿ ಪೂಜಿಸಿದರು. ಚೆನ್ನಾಗಿ ಮಾಗಿದ (ಅಲಂಬುಸವೆಂಬ) ಹಣ್ಣನ್ನು ಹೇಗೋ ಹಾಗೆ, ಅಲಂಬುಸನನ್ನು ಹೀಗೆ ಸುಲಭವಾಗಿ ತಾನು ಕೆಡಹಿದುದ ರಿಂದ ಘಟೋತ್ಕಚನು ಮನಸ್ಸಿನಲ್ಲಿ ಅತ್ಯಂತ ತೃಪ್ತನಾಗಿದ್ದನು. ಅಲಂಬುಸನ ವಧವನ್ನು ನೋಡಿ ಪಾಂಡವಸೈನ್ಯದಲ್ಲಿ ಜಯವಾದ್ಯಗಳು ಮೊಳಗಿದುವು. ಆ ಧ್ವನಿಯು ಭೂಮ್ಯಾಕಾಶಗಳನ್ನೆಲ್ಲ ವ್ಯಾಪಿಸಿತು. ಆಮೇಲೆ ಘಟೋತ್ಕ ಚನು ತನ್ನ ದೊಡ್ಡ ತಂದೆಯಾದ ಧರ್ಮಪುತ್ರನ ಬಳಿಗೆ ಬಂದು ಕೈಮುಗಿದು ನಮಸ್ಕರಿಸಿ, ತಾನು ನಡೆಸಿಬಂದ ಕಾರ್ಯವನ್ನು ನಿವೇದಿಸಿದನು. ಆಗ ಧರ್ಮರಾಜನು ಸಂತೋಷದಿಂದ ಅರಳಿದ ಕಣ್ಣುಗಳುಳ್ಳವನಾಗಿ ಅವನನ್ನ ಪ್ಪಿಕೊಂಡು, ಅವನ ತಲೆಯನ್ನಾಘ್ರಾಣಿಸಿ, " ಕುಮಾರಾ! ಬಹಳ ಸಂತೋ

ಷವಾಯಿತು" ಎಂದನು. ಮಹಾರಾಜಾ! ಆ ಅಲಂಬುಸನ ವಧದಿಂದ ಆಗ ಪಾಂಡವಸೈನ್ಯಕ್ಕುಂಟಾದ ಸಂತೋಷಕ್ಕೆ ಪಾರವೇ ಇರಲಿಲ್ಲ!

ಇದು ನೂರ ಒಂಭತ್ತನೆಯ ಅಧ್ಯಾಯವು.



ರಣಾಂಗಣದಲ್ಲಿ ಕೃಷ್ಣನ ಪಾಂಚಜನ್ಯಧ್ವನಿಯೊಂದುಮಾತ್ರ ಕೇಳಿಸುತ್ತ, ಗಾಂಡೀವಧ್ವನಿಯು ಕಿವಿಗೆ ಬೀಳದಿರಲು, ಅರ್ಜುನನಿಗೆ ವಿಪತ್ತನ್ನು ಶಂಕಿಸಿ, ಯುಧಿಷ್ಠಿರನು ಸಾತ್ಯಕಿಯನ್ನು ಅರ್ಜುನನ ಬಳಿಗೆ ಹೋಗೆಂದು ನಿರ್ಬಂಧಿಸಿದುದು.

ಆಗ ಧೃತರಾಷ್ಟ್ರನು ಸಂಜಯನನ್ನು ಕುರಿತು "ಸಂಜಯಾ! ಸಾತ್ಯಕಿಯು ದ್ರೋಣನೊಡನೆ ಯುದ್ಧಮಾಡಿದ ರೀತಿಯನ್ನೆಲ್ಲ ನಿನ್ನಿಂದ ಇನ್ನೂ ವಿವರವಾಗಿ ಕೇಳಬೇಕೆಂಬ ಕುತೂಹಲವು ನನಗೆ ಹೆಚ್ಚಾಗಿರುವುದು. ಅದನ್ನು ತಿಳಿಸು" ಎಂದನು. ಅದಕ್ಕಾ ಸಂಜಯನು "ಮಹಾರಾಜಾ! ಕೇಳು! ಅತ್ತಲಾಗಿ ಪಾಂಡವರೊಡನೆ ದ್ರೋಣನಿಗೆ ಪ್ರಬಲಯುದ್ಧವು ನಡೆಯುತ್ತಿದ್ದಿತು. ಅದರಲ್ಲಿ ಸಾತ್ಯಕಿಯು ಮುಂದಾಳಾಗಿದ್ದನು. ಸಾತ್ಯಕಿಯಿಂದ ಕೌರವಸೈನ್ಯವು ಕೊಲೆಗೀಡಾಗುತ್ತಿರುವುದನ್ನು ನೋಡಿ, ದ್ರೋಣನು ಕೋಪದಿಂದ ತಾನೇ ಸಾತ್ಯಕಿಯನ್ನು ಇದಿರಿಸಿ ತಡೆದನು. ಒಡನೆ ಸಾತ್ಯಕಿಯು ಇಪ್ಪತ್ತೈದು ಕ್ಷುದ್ರಕಗಳೆಂಬ ಬಾಣಗಳಿಂದ ದ್ರೋಣನನ್ನು ಹೊಡೆದನು. ದ್ರೋಣನೂ ಐದು ತೀವ್ರಬಾಣಗಳನ್ನು ಪ್ರಯೋಗಿಸಿದನು. ದ್ರೋಣನ ಬಾಣಗಳು ಸಾತ್ಯಕಿಯ ಕವಚವನ್ನು ಭೇದಿಸಿಕೊಂಡು ಹೋಗಿ, ಹುತ್ತದಲ್ಲಿ ಹುಗುವ ಹಾವಿನಂತೆ ನೆಲದಲ್ಲಿ ನಾಟಿದುವು. ಇದನ್ನು ಸಹಿಸಲಾರದೆ ಸಾತ್ಯಕಿಯು ಅಂಕುಶದಿಂದ ತಿವಿಯಲ್ಪಟ್ಟ ಆನೆಯಂತೆ ಉದ್ರಿಕ್ತನಾಗಿ, ದ್ರೋಣನಮೇಲೆ ಐವತ್ತು ತೀಕ್ಷ್ಣಬಾಣಗಳನ್ನು ಬಿಟ್ಟನು. ಅದಕ್ಕೆ ಪ್ರತಿಯಾಗಿ ದ್ರೋಣನೂ ಲೆಕ್ಕವಿಲ್ಲದಷ್ಟು ಬಾಣಗಳನ್ನು ಪ್ರಯೋಗಿಸಿದನು. ಸಾತ್ಯಕಿಯು ಅದಕ್ಕಿಂತಲೂ ಅಧಿಕಬಾಣಗಳನ್ನು ಪ್ರಯೋಗಿಸಿದನು. ಹೀಗೆ ಒಬ್ಬರಿಗೆ ಮೇಲೊಬ್ಬರು ಬಾಣಗಳನ್ನು ಹೆಚ್ಚಿಸುತ್ತ ಹೊಡೆದಾಡುತ್ತಿದ್ದರು.

ದ್ರೋಣನ ಪ್ರಹಾರದಿಂದ ನೊಂದ ಸಾತ್ಯಕಿಗೆ ಮುಂದೇನುಮಾಡಬೇಕೆಂದು ತೋರದಂತಾಯಿತು. ಅವನ ಮುಖವು ಕಳೆಗುಂದಿತು. ದ್ರೋಣನ ಬಾಣ ಪ್ರಹಾರದಿಂದ ಸಾತ್ಯಕಿಯು ಮಂಕುಹಿಡಿದಂತೆ ನಿಂತುದನ್ನು ನೋಡಿ, ನಿನ್ನ ಮಕ್ಕಳೆಲ್ಲರೂ ಸಂತೋಷದಿಂದ ಸಿಂಹನಾದಮಾಡಿದರು. ಸಾತ್ಯಕಿಯ ಅವಸ್ಥೆಯನ್ನೂ. ಕೌರವಸೈನ್ಯದ ಕೋಲಾಹಲವನ್ನೂ ನೋಡಿ ಯುಧಿಷ್ಠಿರನು ಮನಸ್ಸಿನಲ್ಲಿ ಖಿನ್ನನಾಗಿ, ತನ್ನ ಸಮಸ್ತಸೈನ್ಯಗಳೂ ಕೇಳುವಂತೆ ಹೀಗೆಂದನು. "ಎಲೈ ವೀರರೇ! ಸಾತ್ಯಕಿಯು ಯುದ್ಧಮಾಡುವಕಡೆಗೆ ಬೇಗನೆ ಹೋಗಿರಿ. ರಾಹುವಿನ ಬಾಯಿಗೆ ಸಿಕ್ಕಿದ ಸೂರ್ಯನಂತೆ ಈಗ ಸಾತ್ಯಕಿಯು ಆಚಾರ್ಯನ ಬಾಣಗಳಿಂದ ಕಬಳಿಸಲ್ಪಡುತ್ತಿರುವನು. ತ್ವರೆಮಾಡಿರಿ" ಎಂದು ಹೇಳಿ, ಸೇನಾಪತಿಯಾದ ಧೃಷ್ಟದ್ಯುಮ್ನನನ್ನು ಕರೆದು "ಪಾಂಚಾಲಕುಮಾರಾ! ಇನ್ನೂ ನೀನು ಸುಮ್ಮನಿರುವೆಯೇಕೆ? ಬೇಗನೆ ಹೋಗಿ ಆ ದ್ರೋಣನನ್ನು ನಿವಾರಿಸು. ನಮ್ಮ ಸಾತ್ಯಕಿಯು ಆ ಬ್ರಾಹ್ಮಣನ ಕೈಯಿಂದ ಸಾಯದಂತೆ ಮಾಡು. ನಮಗೆ ಆ ದ್ರೋಣನಿಂದುಂಟಾಗಿರುವ ಮಹಾಭಯವು ಇನ್ನೂ ನಿನಗೆ ತಿಳಿಯಲಿಲ್ಲವೆ? ಅದೋ! ನೋಡು! ಮಹಾಧನುರ್ಧಾರಿಯಾದ ಆ ದ್ರೋಣನು, ಬಾಲಕರು ಹಕ್ಕಿಯನ್ನು ಹಗ್ಗದಲ್ಲಿ ಕಟ್ಟಿ ಆಡಿಸುವಂತೆ, ಲೀಲಾಮಾತ್ರದಿಂದ ಆ ಸಾತ್ಯಕಿಯನ್ನು ಹಿಡಿದು ಹಿಂಸಿಸುತ್ತಿರುವನು. ಅವನು ಸಾತ್ಯಕಿಯೊಡನೆ ಆಟವಾಡುತ್ತಿರುವುದನ್ನು ನೋಡು. ನೀನು ಭೀಮಾದಿಗಳೆಲ್ಲರನ್ನೂ ಕರೆದುಕೊಂಡು ಆ ಸಾತ್ಯಕಿಯಿರುವಕಡೆಗೆ ಬೇಗನೆ ಹೊರಡು. ನಾನೂ ನನ್ನ ಎಲ್ಲಾ ಸೈನ್ಯಗಳೊಡನೆ ನಿನ್ನನ್ನು ಹಿಂಬಾಲಿಸಿ ಬರುವೆನು. ಯಮನ ಕೋರೆದಾಡೆಗಳಿಗೆ ಸಿಕ್ಕಿದಂತಿರುವ ಸಾತ್ಯಕಿಯನ್ನು ಬಿಡಿಸು" ಎಂದನು. ಮಹಾರಾಜಾ! ಯುಧಿಷ್ಠಿರನು ಹೀಗೆಂದು ಎಲ್ಲಾ ಸೈನಿಕರಿಗೆ ಆಜ್ಞಾಪಿಸಿ, ಎಲ್ಲರಿಗೆ ಮೊದಲು ತಾನೇ ತನ್ನ ಸೈನ್ಯವನ್ನು ಸೇರಿಸಿಕೊಂಡು, ಸಾತ್ಯಕಿಯ ರಕ್ಷಣೆಗಾಗಿ ದ್ರೋಣನಿದ್ದಕಡೆಗೆ ಬಂದನು. ಪಾಂಡವರು, ಸೃಂಜಯರು, ಎಲ್ಲರೂ ಗುಂಪಾಗಿ ಸೇರಿ ದ್ರೋಣನೊಬ್ಬನನ್ನು ಇದಿರಿಸುವುದಕ್ಕಾಗಿ ಹೊರಟರು. ದೊಡ್ಡ ಕೋಲಾಹಲದೊಡನೆ ಎಲ್ಲರೂ ದ್ರೋಣನನ್ನು ಮುತ್ತಿಕೊಂಡರು. ಸುತ್ತಲೂ ನಿಂತು ಆ ಆಚಾರ್ಯನಮೇಲೆ ಬಾಣವರ್ಷಗಳನ್ನು ಕರೆದರು. ಹದ್ದಿನ ಮತ್ತು ನವಿ

ಲಿನ ಗರಿಗಳುಳ್ಳ ತೀಕ್ಷ್ಣಬಾಣಗಳು ನಾನಾಕಡೆಗಳಿಂದ ತನ್ನಮೇಲೆ ಬಂದು ಬೀಳುತ್ತಿದ್ದರೂ, ದ್ರೋಣನು ಸ್ವಲ್ಪವಾದರೂ ಲಕ್ಷ್ಯವಿಲ್ಲದೆ ನಗುತ್ತಲೇ ನಿಂತಿದ್ದನು. ಮನೆಗೆ ಬಂದ ಅತಿಥಿಗಳನ್ನು ಅರ್ಘ್ಯಪಾದ್ಯಾಸನಗಳಿಂದ ಆದರಿಸಿ ಬರಮಾಡಿಕೊಳ್ಳುವಂತೆ, ಆ ಬಾಣಗಳನ್ನೆಲ್ಲ ನಗುಮುಖದಿಂದಲೇ ಪ್ರತಿಗ್ರಹಿಸಿದನು. ಆ ಬಾಣಗಳನ್ನೆಲ್ಲ ನಿಗ್ರಹಿಸುವುದಕ್ಕಾಗಿ ಪ್ರತಿಬಾಣಗಳನ್ನು ಬಿಟ್ಟನು. ಪಾಂಡವವೀರರ ಬಾಣಗಳು ಆತಿಥ್ಯಕ್ಕಾಗಿ ಹೋಗಿ ಬಂದ ಅತಿಥಿಗಳಂತೆ ದ್ರೋಣನ ಬಾಣಗಳಿಂದ ಸ್ಪರ್ಶಿಸಲ್ಪಟ್ಟೊಡನೆ ಶಾಂತವಾದುವು. ಮಧ್ಯಾಹ್ನಕಾಲದ ಸೂರ್ಯನನ್ನು ಹೇಗೋ ಹಾಗೆ ಆಗ ದ್ರೋಣನನ್ನು ಇದಿರಾಗಿ ನಿಂತು ನೋಡುವುದಕ್ಕೂ ಯಾರಿಗೂ ಶಕ್ಯವಾಗಲಿಲ್ಲ. ದ್ರೋಣನು ತನಗಿದಿರಾದ ಶಸ್ತ್ರಧಾರಿಗಳನ್ನೆಲ್ಲ ತನ್ನ ಬಾಣಗಳಿಂದ ದಹಿಸುತ್ತಿದ್ದನು. ಕೆಸರಿನಲ್ಲಿ ಸಿಕ್ಕಿಬಿದ್ದ ಆನೆಗಳಂತೆ ಪಾಂಡವಸೃಂಜಯ ಸೈನಿಕರಿಗೆ ಅಲ್ಲಿಂದ ತಪ್ಪಿಸಿಕೊಂಡುಹೋಗುವುದಕ್ಕೂ ಸಾಧ್ಯವಿಲ್ಲದಂತಾಯಿತು. ತಮ್ಮನ್ನು ರಕ್ಷಿಸುವವರಾರೂ ಇಲ್ಲವೆಂದು ಎಲ್ಲರೂ ತತ್ತಳಿಸುತ್ತಿದ್ದರು. ಲೋಕವನ್ನು ದಹಿಸುತ್ತ ಬರುವ ಸೂರ್ಯಕಿರಣಗಳಂತೆ, ದ್ರೋಣನ ಬಾಣಗಳು ಪಾಂಡವಸೈನ್ಯವನ್ನೆಲ್ಲ ಆವರಿಸಿ ದಹಿಸುತ್ತಿದ್ದುವು. ಪಾಂಚಾಲವೀರರಲ್ಲಿ ಮಹಾರಥರೆನಿಸಿಕೊಂಡ ಮತ್ತು ಧೃಷ್ಟದ್ಯುಮ್ನನಿಗೆ ಪರಮಾಪ್ತರಾದ ಇಪ್ಪತ್ತೈದುಮಂದಿ ವೀರರು ದ್ರೋಣನಿಂದ ಹತರಾದರು. ಪಾಂಡವರ ಮತ್ತು ಪಾಂಚಾಲರ ಸೈನ್ಯಗಳಲ್ಲಿ ದ್ರೋಣನು ಮುಖ್ಯಮುಖ್ಯರಾದವರನ್ನೇ ಕೊಲ್ಲುತ್ತಬಂದನು. ಕೇಕಯರಲ್ಲಿ ನೂರುಮಂದಿಯನ್ನು ಕೊಂದು, ಅನೇಕರನ್ನು ಓಡಿಸಿದನು. ಮುಂದೆ ಬಂದವರನ್ನೆಲ್ಲ ತಲೆಯೆತ್ತದಂತೆ ಮಾಡಿ, ಬಾಯನ್ನು ತೆರೆದುಕೊಂಡು ನಿಂತಿರುವ ಯಮನಂತೆ ಕಾಣಿಸುತ್ತಿದ್ದನು. ಪಾಂಚಾಲರು, ಸೃಂಜಯರು, ಮತ್ಸ್ಯರು, ಕೇಕಯರು, ಇವರು ನೂರು ಸಾವಿರಸಂಖ್ಯೆಯಿಂದ ಪರಾಜಿತರಾಗಿ ಓಡಿಹೋದರು. ದ್ರೋಣನ ಬಾಣಗಳ ನಡುವೆ ಸಿಕ್ಕಿಬಿದ್ದ ಶತ್ರುಸೈನ್ಯಗಳು ಕಾಡುಗಿಚ್ಚಿನ ನಡುವೆ ಸಿಕ್ಕಿಬಿದ್ದ ಕಾಡುಮೃಗಗಳಂತೆ ಪ್ರಾಣಭಯದಿಂದ ಕೂಗುತ್ತಿದ್ದುವು. ಆಕಾಶದಲ್ಲಿ ನೋಡುತ್ತಿದ್ದ ಗಂಧರ್ವರು, ದೇವತೆಗಳು, ಪಿತೃಗಳು, ಇವರೆಲ್ಲರೂ ಆಶ್ಚರ್ಯದಿಂದ "ಇದೋ! ಪಾಂಚಾಲರು ಓಡಿದರು! ಪಾಂಡವರು ಪಲಾಯನಮಾಡಿದರು"

ಎಂದು ಕೂಗಿಡುತ್ತಿದ್ದರು. ಹೀಗೆ ದ್ರೋಣನು ಪಾಂಡವ ಸೋಮಕಸೈನ್ಯಗಳನ್ನು ಕೊಲ್ಲುತ್ತಬರುವಾಗ ಇದಿರಿಗೆ ಬಂದು ನಿಲ್ಲಲು ಯಾರಿಗೂ ಧೈರ್ಯವಿರಲಿಲ್ಲ. ಬಂದವರಲ್ಲಿಯೂ ಅನೇಕರು ಯುದ್ಧಕ್ಕೆ ಕೈಯೆತ್ತಲಿಲ್ಲ! ಹೀಗೆ ದ್ರೋಣನಿಗೂ, ಯುಧಿಷ್ಠಿರಸೈನ್ಯಕ್ಕೂ ಭಯಂಕರಯುದ್ಧವು ನಡೆಯುತ್ತಿದ್ದ ಸಮಯದಲ್ಲಿ, ನಡುವೆ ಶ್ರೀಕೃಷ್ಣನಿಂದ ನುಡಿಸಲ್ಪಟ್ಟ ಪಾಂಚಜನ್ಯವೆಂಬ ಮಹಾಶಂಖಧ್ವನಿಯು ಅತಿಪ್ರಬಲವಾಗಿ, ಧರ್ಮರಾಜನ ಕಿವಿಗೆ ಕೇಳಿಸಿತು. ಸೈಂಧವನನ್ನು ರಕ್ಷಿಸುವುದಕ್ಕಾಗಿ ಕೈಕಟ್ಟಿದ ವೀರರ ಕೋಲಾಹಲವೂ ಅರ್ಜುನನ ರಥದ ಬಳಿಯಲ್ಲಿಯೇ ಕೇಳಿಸುತ್ತಿದ್ದಿತು. ಅರ್ಜುನನ ಗಾಂಡೀವಧ್ವನಿಯುಮಾತ್ರ ಕಿವಿಗೆ ಬೀಳುತ್ತಿರಲಿಲ್ಲ. ಇದನ್ನು ನೋಡಿ ಧರ್ಮರಾಜನಿಗೆ ಮಹತ್ತಾದ ಚಿಂತೆ ಹುಟ್ಟಿತು. ಆಗ ಅವನು ಮನಸ್ಸಿನಲ್ಲಿ "ಆಹಾ! ಇದೇನೋ ಅನರ್ಥಕ್ಕೆ ಸೂಚಕವಾಗಿದೆ! ಅದೋ! ಪಾಂಚಜನ್ಯಧ್ವನಿಯು ಕೇಳಿಸುತ್ತಿರುವುದು. ಕೌರವರು ಬಾರಿಬಾರಿಗೂ ಸಂತೋಷದಿಂದ ಕೂಗಿಡುತ್ತಿರುವರು. ಅರ್ಜುನನಿಗೆ ಏನೋ ಕೇಡುಂಟಾಗಿರಬೇಕು! ಅದರಲ್ಲಿ ಸಂದೇಹವಿಲ್ಲ. ಇಲ್ಲಿಯೂ ನಮ್ಮಕಡೆಯ ಮಹಾರಥರೆಲ್ಲರೂ ಸಾಯುವ ಸ್ಥಿತಿಯು ಬಂದಿದೆ. ಮಾಡುವುದೇನು?" ಎಂದು ತನ್ನಲ್ಲಿ ತಾನು ಚಿಂತಾಕುಲನಾಗಿ, ಹಿಂದುಮುಂದು ತೋರದೆ, ಕಣ್ಣೀರನ್ನು ಸುರಿಸುತ್ತ ಗದ್ಗದಸ್ವರದಿಂದ ಸಾತ್ಯಕಿಯನ್ನು ಕರೆದು ಹೀಗೆಂದನು. "ಓ ಶಿನಿಕುಮಾರಾ! ಆಪತ್ಕಾಲದಲ್ಲಿ ಸ್ನೇಹಿತರು ತಮ್ಮ ಸ್ನೇಹವನ್ನು ಹೇಗೆ ತೋರಿಸಬೇಕೆಂದು ಪುರಾತನಧರ್ಮವುಂಟೋ, ಅಂತಹ ಕಾರ್ಯವನ್ನು ನಡೆಸಲು ಈಗ ನಿನಗೆ ಕಾಲವು ಒದಗಿ ಬಂದಿದೆ. ನಮ್ಮಕಡೆಯ ಅನೇಕಯೋಧರಲ್ಲಿ ನನಗೆ ನಿನಗಿಂತಲೂ ಅಧಿಕಮಿತ್ರನಾದವನು ಬೇರೊಬ್ಬನಿರುವಂತೆ ಕಾಣುವುದಿಲ್ಲ. ಲೋಕದಲ್ಲಿ ಯಾವನು ತನ್ನಲ್ಲಿ ಯಾವಾಗಲೂ ಪ್ರೀತಿಯುಕ್ತವಾದ ಮನಸ್ಸುಳ್ಳವನಾಗಿ, ಯಾವಾಗಲೂ ತನ್ನನ್ನೇ ಅನುಸರಿಸಿ ನಡೆಯುವನೋ, ಅಂತವನನ್ನೇ ಆಪತ್ಕಾಲದಲ್ಲಿ ಸಹಾಯಕ್ಕಾಗಿ ಕೋರಬೇಕು. ಇದು ನನ್ನ ನಿಜವಾದ ಅಭಿಪ್ರಾಯವು. ಶ್ರೀಕೃಷ್ಣನು ಪಾಂಡವರಿಗೆ ಹೇಗೆ ಮುಖ್ಯಗತಿಯಾಗಿರುವನೋ, ಪರಾಕ್ರಮದಲ್ಲಿ ಆ ಕೃಷ್ಣನಿಗೆ ಸಮಾನನಾದ ನೀನೂ ಪಾಂಡವರ ವಿಷಯದಲ್ಲಿ ಹಾಗೆಯೇ! ನಮಗೆ ನೀನು ಇಂತಹ ಪರಮಮಿತ್ರನಾದುದ

ರಿಂದ, ನಿನ್ನಮೇಲೆ ನಾನೊಂದು ದೊಡ್ಡ ಭಾರವನ್ನು ಹೊರಿಸಬೇಕಾಗಿದೆ. ಅದನ್ನು ನೀನು ವಹಿಸಬೇಕು. ನೀನು ಯಾವಾಗಲೂ ನನ್ನ ಅಭಿಪ್ರಾಯವನ್ನು ನಿರಾಕರಿಸತಕ್ಕವನಲ್ಲ. ಆದುದರಿಂದ, ನಿನಗೆ ಸಹೋದರನೂ, ಮಿತ್ರನೂ, ಗುರುವೂ ಆದ ಆ ಅರ್ಜುನನ ಸಹಾಯಕ್ಕಾಗಿ ನೀನು ಈಗಲೇ ಹೊರಡಬೇಕು. ಈ ವಿಪತ್ತಿನಲ್ಲಿ ನೀನು ಅವನನ್ನು ಕೈಬಿಡಬಾರದು. ಸತ್ಯವ್ರತನೆಂದೂ, ಶೂರನೆಂದೂ, ಮಿತ್ರರಿಗೆ ಅಭಯಪ್ರದನೆಂದೂ ನೀನು ಲೋಕದಲ್ಲಿ ಪ್ರಖ್ಯಾತಿಗೊಂಡಿರುವೆ. ಮಾತಿನಲ್ಲಿಯೂ, ಕಾರ್ಯಗಳಲ್ಲಿಯೂ ಸತ್ಯಸಂಧನೆಂದು ಕೀರ್ತಿಸಲ್ಪಡುವೆ. ಯುದ್ಧದಲ್ಲಿ ತನ್ನ ಮಿತ್ರರಿಗಾಗಿ ದೇಹತ್ಯಾಗನನ್ನು ಮಾಡಲು ಸಿದ್ಧನಾದವನೂ, ಸಮಸ್ತಭೂಮಿಯನ್ನೂ ಬ್ರಾಹ್ಮಣರಿಗೆ ದಾನಮಾಡಿದವನೂ, ಇಬ್ಬರೂ ಸಮಾನರೆಂದು ಹೇಳಲ್ಪಡುವರು. ಎಷ್ಟೋಮಂದಿ ರಾಜರು ಈ ಭೂಮಿಯನ್ನು ಜಯಿಸಿ, ಬ್ರಾಹ್ಮಣರಿಗೆ ದಾನಮಾಡಿ, ಸ್ವರ್ಗಸ್ಥರಾದುದನ್ನು ನಾವು ಕೇಳಿರುವೆವು. ಅದೊಂದು ವಿಶೇಷವಲ್ಲ. ಒಬ್ಬರು ಮೊದಲು ದಾನಮಾಡಿದ ಭೂಮಿಯನ್ನೇ ಮತ್ತೊಬ್ಬರು ತನ್ನದನ್ನಾಗಿ ಮಾಡಿಕೊಂಡು, ಅದನ್ನೇ ತಿರುಗಿ ದಾನಮಾಡುವರು. ಆದರೆ, ಯುದ್ಧದಲ್ಲಿ ಮಿತ್ರರಿಗಾಗಿ ತಮ್ಮ ಪ್ರಾಣವನ್ನೊಪ್ಪಿಸುವವರು ಸಿಕ್ಕುವುದೇ ಕಷ್ಟವು. ಅದಕ್ಕಾಗಿ ಈಗ ನಿನ್ನನ್ನು ನಾನು ಕೈಮುಗಿದು ಬೇಡಿಕೊಳ್ಳುವೆನು. ಓ ಧರ್ಮಾತ್ಮಾ! ಈಗ ನೀನು ಮಾಡತಕ್ಕ ಸಹಾಯವು ಸಮಸ್ತಭೂದಾನಕ್ಕೆ ಸಮಾನವಾದುದು. ಅದಕ್ಕಿಂತಲೂ ಇದರಲ್ಲಿ ಫಲವು ಅಧಿಕವೇ! ಲೋಕದಲ್ಲಿ ಮಿತ್ರರಿಗೆ ಯಾವಾಗಲೂ ಅಭಯವನ್ನು ಕೊಡತಕ್ಕವನೆಂದರೆ, ಆ ಕೃಷ್ಣನೊಬ್ಬನೇ! ಈಗ ನೀನು ಎರಡನೆಯವನು! ಯುದ್ಧದಲ್ಲಿ ಕೀರ್ತಿಯನ್ನು ಬಯಸಿ ಪರಾಕ್ರಮವನ್ನು ತೋರಿಸತಕ್ಕ ವೀರನಿಗೆ ಸಹಾಯಮಾಡಬೇಕಾದರೆ, ಅವನಿಗೆ ಸಮಾನನಾದ ಶೂರನೇ ಮುಂದೆ ಬರಬೇಕೇಹೊರತು, ಬೇರೆ ಪ್ರಾಕೃತಜನದಿಂದ ಅದು ಸಾಧ್ಯವಲ್ಲ. ಈಗಿನ ಮಹತ್ತಾದ ವಿಪತ್ತಿನಲ್ಲಿ ಅರ್ಜುನನನ್ನು ರಕ್ಷಿಸುವುದಕ್ಕೆ ನೀನುಹೊರತು ಬೇರೊಬ್ಬನು ಶಕ್ತನಲ್ಲ. ನಿನ್ನ ಕಾರ್ಯಗಳನ್ನುಕುರಿತು ನೂರಾರುಸಂದರ್ಭಗಳಲ್ಲಿ ಅರ್ಜುನನೇ ನಿನ್ನನ್ನು ಬಾರಿಬಾರಿಗೂ ಪ್ರಶಂಸಿಸುತ್ತ, "ಅಣ್ಣಾ! ಸಾತ್ಯಕಿಯು ಬಹಳ ಹಸ್ತವೇಗವುಳ್ಳವನು. ವಿಚಿತ್ರವಾಗಿ ಯುದ್ಧಮಾಡತಕ್ಕ

ವನು. ಮಹಾಪ್ರಾಜ್ಞನು. ಎಲ್ಲಾ ಅಸ್ತ್ರಗಳನ್ನೂ ಬಲ್ಲವನು. ಶೂರನು ಯುದ್ಧಕಾಲದಲ್ಲಿ ಎಂದಿಗೂ ಎದೆಗೆಟ್ಟು ನಿಲ್ಲತಕ್ಕವನಲ್ಲ. ಉಬ್ಬಿದ ಹೆಗಲು! ವಿಶಾಲವಾದ ಎದೆ! ನೀಡಿದ ತೋಳು! ಅಗಲವಾಗಿ ಉಬ್ಬಿದ ದವಡೆಗಳು! ಇವುಗಳಿಂದ ಅತ್ಯಂತಧೀರಾಕೃತಿಯುಳ್ಳವನು! ಮಹಾರಥನು! ಮಹಾಬಲಾಢ್ಯನು! ಮಹಾವೀರ್ಯನು! ಮಹಾತ್ಮನು! ನನಗೆ ಅವನು ಮಿತ್ರನೂ, ಶಿಷ್ಯನೂ ಆಗಿರುವನು. ಆತನಿಗೆ ನಾನು ಪರಮಪ್ರಿಯನು. ನನಗೂ ಅವನು ಪ್ರಿಯತಮನು. ಆ ಯುಯುಧಾನನು ನನ್ನ ಸಹಾಯಕ್ಕಿದ್ದರೆ, ಕೌರವರನ್ನು ತಪ್ಪದೆ ಜಯಿಸುವೆನು. ಅಣ್ಣಾ! ಈಗ ನಮ್ಮ ಸಹಾಯಕ್ಕಾಗಿ ಶ್ರೀಕೃಷ್ಣನು, ಬಲರಾಮನು, ಅನಿರುದ್ಧನು, ಮಹಾರಥನಾದ ಪ್ರದ್ಯುಮ್ನನು, ಗದನು, ಸಾರಣನು, ಎಲ್ಲಾ ವೃಷ್ಣಿಗಳೊಡಗೂಡಿದ ಸಾಂಬನು, ಇವರೆಲ್ಲರೂ, ಕೈಕಟ್ಟಿ ಸಿದ್ಧರಾಗಿ ನಿಂತಿದ್ದರೂ, ನಾನು ನನ್ನ ಸಹಾಯಕ್ಕೆ ಆ ಸಾತ್ಯಕಿಯನ್ನೇ ಕೋರುವೆನು. ಅವನಿಗೆ ಸಮಾನನಾದ ಮಿತ್ರನು ನನಗೆ ಬೇರೊಬ್ಬನಿಲ್ಲ" ಎಂದು ದ್ವೈತವನದಲ್ಲಿದ್ದಾಗ ಧನಂಜಯನು ನನ್ನೊಡನೆ ಹೇಳಿರುವನು. ನಿನ್ನ ಪರೋಕ್ಷದಲ್ಲಿಯೂ ಸಜ್ಜನರಮುಂದೆ ಅವನು ಹೀಗೆ ನಿನ್ನ ಗುಣಗಳನ್ನು ಕೊಂಡಾಡುತ್ತಿರುವನು. ಆದುದರಿಂದ ಅವನ ಅಭಿಪ್ರಾಯವನ್ನು ಈಗ ನೀನು ಹುಸಿಮಾಡಬಾರದು. ಅರ್ಜುನನ, ನನ್ನ, ಮತ್ತು ಭೀಮನ ಕೋರಿಕೆಗಳನ್ನು ಈಗ ನೀನು ನಿರಾಕರಿಸಬಾರದು. ಓ ಸಾತ್ಯಕೀ! ಅದುಮಾತ್ರವಲ್ಲ. ನಾನು ತೀರ್ಥಯಾತ್ರೆಯ ಕಾಲದಲ್ಲಿ ದ್ವಾರಕೆಗೆ ಹೋಗಿದ್ದಾಗ, ಅಲ್ಲಿ ನಿನಗೆ ಅರ್ಜುನನಲ್ಲಿರುವ ಭಕ್ತಿಯನ್ನು ನಾನೇ ಕಣ್ಣಾರೆ ಕಂಡಿರುವೆನು. ಅಂತಹ ಸೌಹಾರ್ದವನ್ನು ನಾನು ಬೇರೆಲ್ಲಿಯೂ ನೋಡಿರಲಿಲ್ಲ. ಕಷ್ಟದಲ್ಲಿ ಸಿಕ್ಕಿಬಿದ್ದ ನಮ್ಮನ್ನು ನೀನು ಯಾವಾಗಲೂ ಹಿಂಬಾಲಿಸಿ ಸಹಾಯಮಾಡುತ್ತಿರುವೆ! ಅದರಂತೆಯೇ ಈಗಲೂ ಆ ಅರ್ಜುನನ ವಿಷಯದಲ್ಲಿ ನಿನ್ನ ಭಕ್ತಿಗೂ, ಸ್ನೇಹಕ್ಕೂ, ಗುರುಭಾವಕ್ಕೂ ಉಚಿತವಾದ ಸಹಾಯವನ್ನು ಮಾಡಬೇಕು. ನಿನ್ನ ಕುಲೋನ್ನತಿಗೂ, ಸತ್ಯಕ್ಕೂ ತಕ್ಕ ಕಾರ್ಯವನ್ನು ನೀನು ನಡೆಸಬೇಕು. ಅದು ಯಾವುದಿಲ್ಲದಿದ್ದರೂ ಕೊನೆಗೆ ಅರ್ಜುನನಲ್ಲಿ ಕರುಣಾಬುದ್ಧಿಯಿಂದಲಾದರೂ ಈಗಿನ ಕಾಲಕ್ಕೂ, ನಿನ್ನ ಶೌರ್ಯಕ್ಕೂ ತಕ್ಕ ಕಾರ್ಯವನ್ನು ನಡೆಸು. ಓ ಯಾದವಶ್ರೇಷ್ಠಾ! ಈಗ ದ್ರೋಣನು

ದುರ್ಯೋಧನನಿಗೆ ಮಂತ್ರಕವಚವನ್ನು ತೊಡಿಸಿ ಅರ್ಜುನನೊಡನೆ ಯುದ್ಧಕ್ಕಾಗಿ ಕಳುಹಿಸಿರುವನು. ಅದರ ಬಲದಿಂದ ದುರ್ಯೋಧನನು ಆತುರಗೊಂಡು ಹೋಗಿರುವನು. ಅದಕ್ಕೆಮೊದಲೇ ಕೌರವಪಕ್ಷದ ಅನೇಕಮಹಾರಥರು ಅರ್ಜುನನನ್ನಿದಿರಿಸುವುದಕ್ಕೆ ಸಿದ್ಧರಾಗಿದ್ದರು. ಈಗಲಾದರೋ ಅತ್ತಲಿಂದ ಕೌರವಸೈನಿಕರ ಸಂತೋಷಕೋಲಾಹಲವು ಕಿವಿಗೆ ಬೀಳುತ್ತಿರುವುದು. ಆದುದರಿಂದ ನೀನು ಈಕ್ಷಣವೇ ಅಲ್ಲಿಗೆ ಹೋಗಬೇಕು. ಇಲ್ಲಿ ನಾವು ಭೀಮನೊಡಗೂಡಿ ದ್ರೋಣನೊಡನೆ ಯುದ್ಧಮಾಡುತ್ತ, ನೀನು ಅಲ್ಲಿಗೆ ಹೋಗುವುದನ್ನು ಅವನು ತಡೆಯದಂತೆ ನಾವು ನೋಡಿಕೊಳ್ಳುವೆವು. ಓ ಸಾತ್ಯಕೀ! ಅದೋ ನೋಡು! ನಮ್ಮ ಸೈನ್ಯಗಳು ಚದರಿ ಓಡುತ್ತಿರುವುವು! ಯುದ್ಧದಲ್ಲಿ ಕೌರವರ ಸಂತೋಷಧ್ವನಿಯು ಕಿವಿಗೆ ಬೀಳುತ್ತಿರುವುದು. ಪ್ರಳಯಕಾಲದಲ್ಲಿ ಮಹಾಮಾರುತದಿಂದ ಕಲಗಿಸಲ್ಪಟ್ಟ ಸಮುದ್ರದಂತೆ, ಕೌರವಸೈನ್ಯವೆಲ್ಲಾ ಅರ್ಜುನನಿಂದ ಚದರಿಸಲ್ಪಟ್ಟು, ಅಲ್ಲಲ್ಲಿ ಓಡುತ್ತಿರುವುದನ್ನು ನೋಡು! ಅಲ್ಲಲ್ಲಿ ರಥಗಳೂ, ಪದಾತಿಗಳೂ, ಕುದುರೆಗಳೂ ನಾನಾಕಡೆಗೆ ವೇಗದಿಂದೋಡುವುವು! ಆ ರಣರಂಗದಿಂದ ದೊಡ್ಡ ಸೇನಾಧೂಳಿಯು ಮೇಲಕ್ಕೇಳುತ್ತಿರುವುದು! ನಖರ, ಪ್ರಾಸ ಮೊದಲಾದ ಆಯುಧಗಳನ್ನು ಹಿಡಿದ ಸಿಂಧು ಸೌವೀರಸೈನಿಕರು ಅರ್ಜುನನನ್ನು ಸುತ್ತಿಮುತ್ತಿ ಆವರಿಸಿಕೊಂಡಿರುವರು! ಆ ಸೈನ್ಯಗಳನ್ನು ಚದರಿಸಿ ಜಯದ್ರಥನನ್ನು ಜಯಿಸುವುದು ಅರ್ಜುನನಿಗೆ ಹೇಗೂ ಸಾಧ್ಯವಿಲ್ಲವೆಂದು ತೋರುತ್ತಿದೆ. ಇವರೆಲ್ಲರೂ ಸೈಂಧವನಿಗಾಗಿ ತಮ್ಮ ಪ್ರಾಣವನ್ನು ಬಿಡುವುದಕ್ಕೂ ಸಿದ್ಧರಾಗಿ ಬಂದಿರುವರು. ಅದೋ! ಆ ಧಾರ್ತರಾಷ್ಟ್ರರ ಸೈನ್ಯವು ಬಾಣಗಳಿಂದಲೂ, ಶಕ್ತ್ಯಾಯುಧಗಳಿಂದಲೂ, ಧ್ವಜಗಳಿಂದಲೂ, ಆನೆಕುದುರೆಗಳಿಂದಲೂ ಎಷ್ಟು ದಟ್ಟವಾಗಿ ತುಂಬಿರುವುದೋ ನೋಡು! ಅದೋ! ಆ ಕಡೆಯಿಂದ ಕೇಳಿಬರುತ್ತಿರುವ ಶಂಖದುಂದುಭಿಧ್ವನಿಗಳನ್ನೂ, ಸಿಂಹನಾದಗಳನ್ನೂ, ರಥನೇಮಿಧ್ವನಿಗಳನ್ನೂ, ಸಾವಿರಾರು ಕಡೆಯಿಂದ ಕೂಗುತ್ತಿರುವ ಆನೆ ಕುದುರೆ ಕಾಲಾಳುಗಳ ಆರ್ಭಟಗಳನ್ನೂ ನೀನು ಗಮನಿಸಲಿಲ್ಲವೆ? ಗಜಯೋಧರು ಭೂಮಿಯನ್ನು ನಡುಗಿಸುವಂತೆ ಅಲ್ಲಿಂದಿಲ್ಲಿಗೆ ಓಡುತ್ತಿರುವರು ನೋಡು. ಅರ್ಜುನನಿಗೆ ಮುಂದುಗಡೆಯಲ್ಲಿ

ಸೈಂಧವಸೈನ್ಯವೂ, ಹಿಂದುಗಡೆಯಲ್ಲಿ ದ್ರೋಣನ ಸೈನ್ಯವೂ ಆವರಿಸಿಕೊಂಡಿರುವುದು. ಆ ಸೈನ್ಯಗಳು ಸಂಖ್ಯೆಯಲ್ಲಿ ಅಪಾರವಾಗಿರುವುದರಿಂದ, ದೇವೇಂದ್ರಸನ್ನಾದರೂ ಪೀಡಿಸಬಲ್ಲುವು! ಕೊನೆಮೊದಲಿಲ್ಲದ ಅಂತಹ ಸೈನ್ಯದನಡುವೆ ಸಿಕ್ಕಿಕೊಂಡಿರುವ ಅರ್ಜುನನು ತನ್ನ ಪ್ರಾಣವನ್ನೇ ಒಪ್ಪಿಸಬೇಕಾಗಿ ಬರುವುದು. ಸಾತ್ಯಕೀ! ಅವನು ಆ ಯುದ್ಧದಲ್ಲಿ ಹತನಾದರೆ ನಮ್ಮಂತವರು ಬದುಕುವುದು ಹೇಗೆ? ಹೇಗೂ ಅರ್ಜುನನು ಮಹತ್ತಾದ ವಿಪತ್ತಿನಲ್ಲಿ ಸಿಕ್ಕಿರುವನು. ನೀನು ಬದುಕಿರುವಾಗಲೇ ಅವನಿಗೆ ಈ ಅವಸ್ಥೆಯಾಯಿತು. ನನ್ನ ತಮ್ಮನಾದ ಅರ್ಜುನನ ರೂಪವನ್ನು ನೆನೆಸಿಕೊಂಡಷ್ಟೂ ನನಗೆ ದುಃಖವು ಬರುತ್ತಿರುವುದು. ಅವನು ಶ್ಯಾಮಲವಾದ ಮೈಯುಳ್ಳವನು! ಯುವಕನು! ಸುರುಳುಗಟ್ಟಿದ ಕೇಶಗಳುಳ್ಳವನು! ಮೇಲೆ ಮೇಲೆ ನೋಡಬೇಕೆಂಬ ಆಸೆಯನ್ನು ಹುಟ್ಟಿಸತಕ್ಕ ಸುಂದರಾಕಾರವುಳ್ಳವನು! ಅತಿವೇಗವಾದ ಅಸ್ತ್ರಶಕ್ತಿಯುಳ್ಳವನು! ವಿಚಿತ್ರಯುದ್ಧಮಾಡತಕ್ಕವನು! ಅಂತವನು ಸೂರ್ಯೋದಯವಾಗುವಮೊದಲೇ ಹೊರಟು ಆ ಕೌರವಸೈನ್ಯದಲ್ಲಿ ಪ್ರವೇಶಿಸಿಬಿಟ್ಟನು. ಈಗಾಗಲೇ ಹಗಲು ಕಳೆಯುತ್ತ ಬಂದಿತು. ಓ ಯಾದವತಿಲಕಾ! ಈಗಲೇ ಅವನು ಬದುಕಿರುವನೋ ಇಲ್ಲವೋ ಎಂಬ ಸಂದೇಹವು ನನಗೆ ತೋರುವುದು. ಅರ್ಜುನನು ಏಕಾಕಿಯಾಗಿ ಆ ಸೈನ್ಯದ ನಡುವೆ ಪ್ರವೇಶಿಸಿರುವನು. ದೇವತೆಗಳಿಗೂ ತಡೆದುಕೊಳ್ಳಲಸಾಧ್ಯವಾದ ಆ ಸೈನ್ಯದನಡುವೆ ಸಿಕ್ಕಿಬಿದ್ದ ಅರ್ಜುನನು, ಹೇಗೆತಾನೇ ಅಪಾಯದಿಂದ ತಪ್ಪಿಬರುವನು? ಈಗ ನನಗೆ ಯುದ್ಧದಲ್ಲಿ ಬುದ್ಧಿಯೇ ಪ್ರವರ್ತಿಸುವುದಿಲ್ಲ. ಇತ್ತಲಾಗಿ ದ್ರೋಣನೋ ಸಾಮಾನ್ಯನಲ್ಲ! ಯುದ್ಧದಲ್ಲಿ ಮಹಾವೇಗವುಳ್ಳವನು. ನನ್ನ ಸೈನ್ಯಗಳನ್ನು ನಾನಾಕಡೆಗಳಿಂದ ಧ್ವಂಸಮಾಡುತ್ತಿರುವನು. ಸಾತ್ಯಕೀ! ಆ ಬ್ರಾಹ್ಮಣನ ಪರಾಕ್ರಮವನ್ನು ನೀನೂ ಪ್ರತ್ಯಕ್ಷವಾಗಿ ನೋಡುತ್ತಿರುವೆಯಲ್ಲವೆ? ಇಂತಹ ಅನೇಕಕಾರ್ಯಗಳು ಒಂದಾಗಿ ಘಟಿಸಿದಾಗ, ಯಾವುದನ್ನು ಹೇಗೆ ಮಾಡಬೇಕೆಂದು ನಿರ್ಣಯಿಸುವುದರಲ್ಲಿ ನೀನು ಸಮರ್ಥನು. ಆದುದರಿಂದ ಈಗ ಬೇಗನೆ ಯಾವ ಕಾರ್ಯವನ್ನು ಅವಶ್ಯವಾಗಿ ನಡೆಸಬೇಕೋ ಅದನ್ನು ನೀನು ಈಗಲೇ ನಡೆಸು. ನನಗೆ ಈಗ ಎಲ್ಲಾ ಕಾರ್ಯಗಳಿಗಿಂತಲೂ ಇದೇ ಮುಖ್ಯವಾಗಿ ತೋರಿದೆ. ಅರ್ಜು

ನನ ರಕ್ಷಣೆಯೇ ಈಗ ಅವಶ್ಯಕರ್ತವ್ಯವು. ಆ ಯುದ್ಧದಲ್ಲಿ ಶ್ರೀಕೃಷ್ಣನ ವಿಷಯವಾದ ಚಿಂತೆಯು ನನಗೆ ಸ್ವಲ್ಪಮಾತ್ರವೂ ಇಲ್ಲ. ಅವನು ಲೋಕಪ್ರಭು! ತಾನೇ ಜಗದ್ರಕ್ಷಕನು! ತ್ರೈಲೋಕ್ಯವೂ ಒಂದಾಗಿ ಸೇರಿ ತನಗಿದಿರಾದರೂ ಅದನ್ನು ಅವನು ಜಯಿಸಬಲ್ಲವನು. ಇದು ಸತ್ಯವು. ಹೀಗಿರುವಾಗ, ಕೇವಲ ದುರ್ಬಲವಾದ ಈ ಕೌರವಸೈನ್ಯವು ಅವನಿಗೆ ಎಷ್ಟುಮಾತ್ರವು? ಅರ್ಜುನನ ಸ್ಥಿತಿಯು ಹಾಗಲ್ಲ. ಅನೇಕ ಕೌರವರನಡುವೆ ಸಿಕ್ಕಿಬಿದ್ದಿರುವ ಅವನು ತನ್ನ ಪ್ರಾಣವನ್ನೇ ಕಳೆದುಕೊಳ್ಳುವ ಸಂಭವವುಂಟು. ಆ ಚಿಂತೆಯೇ ನನ್ನನ್ನು ಮೋಹಗೊಳಿಸುತ್ತಿದೆ. ಆದುದರಿಂದ ಸಾತ್ಯಕೀ! ನೀನು ಈಗಲೇ ಅವನಿರತಕ್ಕ ಸ್ಥಳಕ್ಕೆ ಹೋಗು. ನಿನಗೆ ಅಷ್ಟು ಸ್ನೇಹಿತನಾದ ಅರ್ಜುನನಿಗೆ ಈ ಕಾಲದಲ್ಲಿ ನಿನ್ನಂತವನು ಏನನ್ನು ಮಾಡಬಹುದೋ ಅದನ್ನು ಮಾಡಬೇಕು. ನನ್ನಂತವನ ಮಾತನ್ನು ಈ ಸಮಯದಲ್ಲಿ ಲಕ್ಷ್ಯಿಸದೆ ಇರಬಾರದು. ವೃಷ್ಣಿವೀರರಲ್ಲಿ ಆ ಪ್ರದ್ಯುಮ್ನನೊಬ್ಬನು, ನೀನೊಬ್ಬನು, ಇಬ್ಬರೇ ಅತಿರಥರೆನಿಸಿರುವಿರಿ. ನೀನು ಅಸ್ತ್ರದಲ್ಲಿ ನಾರಾಯಣನಿಗೆ ಸಮಾನನು. ಬಲದಲ್ಲಿ ಬಲರಾಮನಿಗೆ ಸಮಾನನು. ವೀರತ್ವದಲ್ಲಿ ಆ ಧನಂಜಯನಿಗೆ ಸಾಟಿಯಾದವನು. "ಆ ಭೀಷ್ಮದ್ರೋಣರಿಬ್ಬರನ್ನು ಬಿಟ್ಟರೆ, ಸರ್ವಯುದ್ಧವಿಶಾರದನೂ, ಪುರುಷಶ್ರೇಷ್ಠನೂ ಆದವನು ನೀನೇ" ಎಂದು ಲೋಕದಲ್ಲಿ ಸತ್ಪುರುಷರು ಹೇಳುವರು. "ದೇವಾಸುರ ಗಂಧರ್ವ ಕಿನ್ನರ ಮಹೋರಗರೊಡಗೂಡಿದ ಸಮಸ್ತಜಗತ್ತನ್ನೂ ಇದಿರಿಸಿ ಯುದ್ಧಮಾಡಬಲ್ಲವನೂ, ಏಕಾಕಿಯಾಗಿ ಅನೇಕ ಶತ್ರುಗಳನ್ನು ಜಯಿಸಬಲ್ಲವನೂ ನೀನೇ" ಎಂದು ಲೋಕದಲ್ಲಿ ಜನರು ನಿನ್ನ ಗುಣಗಳನ್ನು ಎಲ್ಲಾ ಗೋಷ್ಠಿಗಳಲ್ಲಿಯೂ, ಪ್ರತ್ಯೇಕವಾಗಿಯೂ ಕೊಂಡಾಡುತ್ತಿರುವರು. ಸಾತ್ಯಕಿಗೆ ಅಸಾಧ್ಯವಾದುದೇ ಇಲ್ಲವೆಂದೂ ಜನರು ಹೇಳುವರು. ಆದುದರಿಂದ ಈಗ ನಾನು ಕೇಳಿಕೊಳ್ಳುವಂತೆ ನಡೆಸು. ಈ ಕಾರ್ಯದಿಂದ ನೀನು ಲೋಕಕ್ಕೂ, ನನಗೂ, ಅರ್ಜುನನಿಗೂ ಎಷ್ಟೋ ಉಪಕರಿಸಿದಂತಾಗುವುದು. ಬೇರೆವಿಧದಿಂದ ನೀನು ಅಂತಹ ಗೌರವವನ್ನು ಪಡೆಯಲಾರೆ. ಓ ವೃಷ್ಣಿತಿಲಕಾ! ಈಗ ನೀನು ನಿನಗೆ ಅತ್ಯಂತಪ್ರಿಯವಾದ ಪ್ರಾಣಗಳನ್ನಾದರೂ ಅಲಕ್ಷ್ಯಮಾಡಿ, ಯುದ್ಧದಲ್ಲಿ ನಿರ್ಭಯನಾಗಿ ಸಂಚರಿಸಬೇಕು. ದಶಾರ್ಹಕುಲದವರು ಯುದ್ಧಕ್ಕೆ

ಹೋದಮೇಲೆ ತಮ್ಮ ಜೀವಿತವನ್ನೂ ಲಕ್ಷ್ಯಮಾಡುವುದಿಲ್ಲ. ಅವರು ಯುದ್ಧಕ್ಕೆ ಹೋದಮೇಲೆ ತಮ್ಮ ಶಕ್ತಿಯಿದ್ದಷ್ಟು ಯುದ್ಧಮಾಡದೆ ಇರುವುದಿಲ್ಲ. ಯುದ್ಧದಲ್ಲಿ ವೈಗಳ್ಳನಾಗಿರುವುದು, ಒಂದುಕಡೆಯಲ್ಲಿ ಸ್ಥಿರವಾಗಿ ನಿಲ್ಲದಿರುವುದು, ಭಯಪಟ್ಟು ಓಡಿಹೋಗುವುದು ಇವೆಲ್ಲವೂ ಭೀರುಗಳಾದ ಅಸತ್ಪುಗಳ ಸ್ವಭಾವವೇ ಹೊರತು, ದಶಾರ್ಹಕುಲದಲ್ಲಿ ಹುಟ್ಟಿದ ನಿನ್ನಂತವರಿಗೆ ಯೋಗ್ಯವಲ್ಲ. ಓ ಶಿನಿಕುಮಾರಾ! ಅರ್ಜುನನು ನಿನಗೆ ಗುರು! ನಿನಗೂ, ಅರ್ಜುನನಿಗೂ ಆ ಶ್ರೀವಾಸುದೇವನು ಗುರುವೆನಿಸಿರುವನು. ಈ ಎರಡು ಕಾರಣಗಳನ್ನು ಯೋಚಿಸಿಯೇ ನಾನು ನಿನ್ನನ್ನು ಹೀಗೆ ಕೇಳಿಕೊಳ್ಳಬೇಕಾಯಿತು. ನನ್ನ ಮಾತನ್ನು ನಿರಾಕರಿಸಬೇಡ. ನಿನ್ನ ಗುರುವಾದ ಅರ್ಜುನನಿಗೂ ನಾನು ಗುರುವೆಂಬುದನ್ನು ಭಾವಿಸು. ಕೃಷ್ಣನ, ನನ್ನ, ಮತ್ತು ಅರ್ಜುನನ ಮತವನ್ನು ಹಿಡಿದೇ ಇದನ್ನು ನಾನು ಕೇಳಿಕೊಳ್ಳುವೆನು ನೀನು ಅರ್ಜುನನಿರುವ ಸ್ಥಳಕ್ಕೆ ಹೊರಡು. ಕೌರವಸೈನ್ಯವನ್ನು ಪ್ರವೇಶಿಸಿ, ಅಲ್ಲಿನ ಮಹಾರಥರೊಡನೆ ಕ್ಷತ್ರಿಯನೀತಿಗನುಸಾರವಾಗಿ ಯುದ್ಧಮಾಡಿ, ಯುದ್ಧದಲ್ಲಿ ನಿನ್ನ ಕೃತ್ಯವನ್ನು ನಡೆಸು! ನಿನ್ನ ಪರಾಕ್ರಮವನ್ನು ತೋರಿಸು" ಎಂದನು.

ಇದು ನೂರಹತ್ತನೆಯ ಅಧ್ಯಾಯವು.



ಯುಧಿಷ್ಠಿರನ ಮಾತಿಗೆ ಸಾತ್ಯಕಿಯು ತಾನು ಈ ಸಮಯದಲ್ಲಿ ಇಲ್ಲಿಂದ ಬಿಟ್ಟುಹೋಗುವುದು ಉಚಿತವಲ್ಲವೆಂದು ಹೇಳಿದುದು. ಯುಧಿಷ್ಠಿರನು ತಿರುಗಿ ಸಾತ್ಯಕಿಯನ್ನು ನಿರ್ಬಂಧಿಸಿದುದು.

ಮಹಾರಾಜಾ! ಹೀಗೆ ಪ್ರೀತಿಯುಕ್ತವಾಗಿಯೂ, ಹೃದಯಂಗಮವಾಗಿಯೂ, ಕಾಲೋಚಿತವಾಗಿಯೂ, ಸೂಕ್ಷ್ಮಬುದ್ಧಿಯಿಂದ ನಿರ್ಣಯಿಸಲ್ಪಟ್ಟುದಾಗಿಯೂ ಇರುವ ಧರ್ಮರಾಜನ ವಾಕ್ಯವನ್ನೆಲ್ಲ ಕೇಳಿದಮೇಲೆ ಸಾತ್ಯಕಿಯು ಅವನ ಮಾತಿಗೆ ಪ್ರತ್ಯುತ್ತರವಾಗಿ ಹೀಗೆಂದನು. "ಧರ್ಮರಾಜಾ!

ಈಗ ನೀನು ಹೇಳಿದ ಮಾತುಗಳೆಲ್ಲ ನ್ಯಾಯಯುಕ್ತವಾಗಿ ಸತ್ಯವಾಗಿ ನಿನಗೆ ಯಶಸ್ಕರವಾಗಿಯೂ ಇರುವುವು. ಇಂತಹ ಆಪತ್ಕಾಲದಲ್ಲಿ ನೀನು ನನ್ನಂಥವನಿಗೆ ಈ ಆಜ್ಞೆಮಾಡಬೇಕಾದುದೂ ಸಹಜವೇ! ಅರ್ಜುನನಿಗೆ ಹೇಗೋ ಹಾಗೆ ನನಗೂ ನೀನು ಆಜ್ಞಾಪಿಸಲು ಅಧಿಕಾರವುಳ್ಳವನು! ನೀನು ಹೇಳಿದಂತೆ ಈಗ ಅರ್ಜುನನ ವಿಷಯದಲ್ಲಿ ನಡೆಸಬೇಕಾದ ಸಹಾಯಕ್ಕೆ ನಾನು ನನ್ನ ಪ್ರಾಣವನ್ನೂ ಲಕ್ಷ್ಯಮಾಡದೆ ಹೋಗತಕ್ಕವನೇ! ಅಪರಮೇಲೆ ನೀನೂ ಆಜ್ಞಾಪಿಸುವಾಗ ಹೇಗೆತಾನೇ ಅದನ್ನು ಮಾಡದಿರಲಿ? ಓ ರಾಜಾಧಿರಾಜಾ! ನೀನು ಹೇಳಿದಮೇಲೆ ದೇವಾಸುರಮನುಷ್ಯರೊಡಗೂಡಿದ ತ್ರೈಲೋಕ್ಯವನ್ನಾದರೂ, ನಾನು ಯುದ್ಧದಲ್ಲಿ ಇದಿರಿಸಿ ನಿಲ್ಲಲು ಹಿಂಜರಿಯತಕ್ಕವನಲ್ಲ. ಇನ್ನು ಕೇವಲದುರ್ಬಲರಾದ ಆ ಕೌರವರನ್ನು : ಇದಿರಿಸುವುದಕ್ಕೆ ಹಿಂಜರಿಯುವೆನೆ? ನಾನು ಆ ದುರ್ಯೋಧನನ ಸೈನ್ಯವನ್ನು ನಾಲ್ಕು ಕಡೆಗಳಿಂದ ಇದಿರಿಸಿ ಯುದ್ಧಮಾಡುವೆನು. ನಾನು ಆ ಯುದ್ಧದಲ್ಲಿ ಜಯಿಸಿಯೇ ಬರುವೆನು. ನನ್ನ ಮಾತು ಸತ್ಯವೆಂದು ತಿಳಿ. ಮಹಾರಾಜಾ! ಯುದ್ಧಸಮರ್ಥನಾದ ಆ ಧನಂಜಯನ ಬಳಿಗೆ ನಾನು ಹೋಗಿ, ಜಯದ್ರಥನನ್ನು ಅರ್ಜುನನ ಕೊಲೆಗೆ ಈಡುಮಾಡಿ, ಕೂಡಲೆ ನಿನ್ನ ಬಳಿಗೆ ಹಿಂತಿರುಗಿಬರುವೆನು. ಯುದ್ಧದಲ್ಲಿ ನಾನು ಅಸಮರ್ಥನಲ್ಲ. ಆದರೆ, ನಾನು ಹೋಗುವ ಮೊದಲು ನಿನಗೆ ಒಂದು ಮಾತನ್ನು ವಿಜ್ಞಾಪಿಸಬೇಕಾಗಿದೆ. ಹಿಂದೆ ಆ ಶ್ರೀಕೃಷ್ಣನೂ, ಅರ್ಜುನನೂ, ನನ್ನೊಡನೆ ಹೇಳಿ ಹೋದ ವಾಕ್ಯವನ್ನು ಈಗ ನಿನ್ನ ಸ್ಮರಣೆಗೆ ತರಬೇಕಾದುದು ನನ್ನ ಅವಶ್ಯ ಕರ್ತವ್ಯವು. ನೀನೂ ಅದನ್ನು ಸ್ಪಷ್ಟವಾಗಿ ಕೇಳಿಯೇ ಇರುವೆ. ಎಲ್ಲಾ ಸೈನ್ಯಗಳ ನಡುವೆ, ಶ್ರೀಕೃಷ್ಣನೂ ಕೇಳುತ್ತಿರುವಹಾಗೆಯೇ ಅರ್ಜುನನು ನನಗೆ ಬಾರಿಬಾರಿಗೂ ಒತ್ತಿ ಹೇಳಿಹೋದುದನ್ನು ನೀನು ಮರೆತುಬಿಟ್ಟೆಯಾ? ತಾನು ಜಯದ್ರಥನನ್ನು ಕೊಂದು ಬರುವವರೆಗೆ ರಾಜನಾದ ನಿನ್ನನ್ನು ಬಹಳ ಎಚ್ಚರದಿಂದ ರಕ್ಷಿಸುತ್ತಿರಬೇಕೆಂದು ಅರ್ಜುನನು ನನಗೆ ಹೇಳಿಹೋಗಿರುವನು. ಅಲ್ಲದೆ, ಅವನು ಆಗ ನನ್ನನ್ನು ಕುರಿತು " ಸಾತ್ಯಕೀ! ಈಗ ನಾನು ನಿನ್ನಲ್ಲಿಯೂ, ಪ್ರದ್ಯುಮ್ನನಲ್ಲಿಯೂ, ನನ್ನ ಅಣ್ಣನನ್ನು ರಕ್ಷಿಸಿಕೊಳ್ಳುವ ಭಾರವನ್ನು ಹೊರಿಸಿ, ನಿಶ್ಚಿಂತನಾಗಿ ಜಯದ್ರಥನ ವಧಕ್ಕಾಗಿ

ಹೊರಡುವೆನು. ಕೌರವರಲ್ಲಿ ದ್ರೋಣನು ಎಂತಹ ಪರಾಕ್ರಮಶಾಲಿಯೆಂಬುದನ್ನೂ, ಆ ದ್ರೋಣನು ನನ್ನ ಅಣ್ಣನನ್ನು ಸೆರೆಹಿಡಿಯುವುದಾಗಿ ಮಾಡಿರುವ ಪ್ರತಿಜ್ಞೆಯನ್ನೂ ನೀನು ಚೆನ್ನಾಗಿ ಬಲ್ಲೆ. ಆ ಕಾರ್ಯಕ್ಕೆ ದ್ರೋಣನು ಸಮರ್ಥನೂ ಅಹುದು! ಆದುದರಿಂದ ಅವನನ್ನು ರಕ್ಷಿಸಬಲ್ಲವನು ನೀನೆಂದು ನಂಬಿ, ನಿನ್ನ ಕೈಗೆ ಒಪ್ಪಿಸಿ, ನಾನು ಸೈಂಧವವಧಕ್ಕಾಗಿ ಹೊರಡುವೆನು. ಧರ್ಮರಾಜನನ್ನು ಇಲ್ಲಿ ನೀವು ನಿರಪಾಯವಾಗಿ ರಕ್ಷಿಸಿಕೊಂಡರೆ, ಈ ಯುದ್ಧದಲ್ಲಿ ನನಗೆ ಜಯವು ಸಿದ್ಧವೇ! ಜಯದ್ರಥನನ್ನು ಕೊಂದು ನಾನು ಶೀಘ್ರದಲ್ಲಿಯೇ ಬರುವೆನು. ಅಷ್ಟರವರೆಗೆ ಧರ್ಮರಾಜನು ದ್ರೋಣನ ಕೈಗೆ ಸಿಕ್ಕಿಬೀಳದಹಾಗೆ ಮಾತ್ರ ನೀವು ನೋಡಿಕೊಳ್ಳಬೇಕು. ಹಾಗಿಲ್ಲದೆ, ನನ್ನಣ್ಣನು ದ್ರೋಣನ ಕೈಗೇನಾದರೂ ಸಿಕ್ಕಿಬಿದ್ದರೆ, ಅತ್ತಲಾಗಿ ನನ್ನಿಂದ ಸೈಂಧವವಧವು ನಡೆಯಲಾರದು. ನನಗೆ ಸಂಪೂರ್ಣವಾದ ಅನುತ್ಸಾಹವು ಹುಟ್ಟುವುದು. ನಮ್ಮ ರಾಜನೇನಾದರೂ ದ್ರೋಣನ ಕೈಗೆ ಸಿಕ್ಕಿಬಿದ್ದರೆ, ನಾವು ತಿರುಗಿ ಕಾಡಿಗೇ ಹೋಗಬೇಕಾದುವನು. ಒಂದುವೇಳೆ ನಾನು ಈ ಯುದ್ಧದಲ್ಲಿ ಜಯಿಸಿದರೂ ನನ್ನ ಜಯವು ನಿರರ್ಥಕವಾಗುವುದು. ಆದುದರಿಂದ ಓ ಸಾತ್ಯಕೀ! ನನ್ನ ಪ್ರಿಯಕ್ಕಾಗಿಯೂ, ನಮ್ಮೆಲ್ಲರ ಯಶಸ್ಸಿಗಾಗಿಯೂ, ಜಯಕ್ಕಾಗಿಯೂ, ನೀನು ಸರ್ವಪ್ರಯತ್ನದಿಂದ ರಾಜನನ್ನು ರಕ್ಷಿಸಿಕೊಳ್ಳಬೇಕು?" ಎಂದು ಹೇಳಿರುವನು. ಓ ಯುಧಿಷ್ಠಿರಮಹಾರಾಜಾ! ಅರ್ಜುನನು ದ್ರೋಣನಿಂದ ನಿನಗೆ ಉಂಟಾಗುವ ಆಪತ್ತನ್ನು ಶಂಕಿಸಿ, ನಿನ್ನನ್ನು ನನ್ನ ಕೈಗೆ ಒಪ್ಪಿಸಿ ಹೋಗಿರುವನು. ಹೀಗಿರುವಾಗ ನಾನು ನಿನ್ನನ್ನು ಹೇಗೆ ಬಿಟ್ಟುಹೋಗಲಿ! ಇದಲ್ಲದೆ, ಆ ಅರ್ಜುನನಿಗೆ ಸಮಾನವಾಗಿ ನಿಂತು ಯುದ್ಧಮಾಡತಕ್ಕ ವೀರನೊಬ್ಬನಾದರೂ ಲೋಕದಲ್ಲಿಲ್ಲ! ಆ ಪ್ರದ್ಯುಮ್ನನೊಬ್ಬನುಹೊರತು. ಯುದ್ಧದಲ್ಲಿ ಅವನಿಗೆ ಸಮಾನನು ಯಾವನೂ ಇಲ್ಲ. ನಾನೂ, ಆ ಪ್ರದ್ಯುಮ್ನನೂ ಇಬ್ಬರೇ ಆ ದ್ರೋಣನನ್ನು ಇದಿರಿಸಬಹುದೆಂಬ ನಂಬಿಕೆಯಿಂದ, ಅವನು ನಿನ್ನನ್ನು ನಮ್ಮ ರಕ್ಷಣೆಯಲ್ಲಿಟ್ಟು ಹೋಗಿರುವನು. ಧರ್ಮರಾಜಾ! ಅರ್ಜುನನಿಗೆ ನಾನು ಶಿಷ್ಯನೆಂದು ನೀನೇ ಹೇಳಿದೆಯಲ್ಲವೆ? ಹೀಗಿರುವಾಗ, ಆ ಆಚಾರ್ಯವಚನವನ್ನು ನಾನು ಹೇಗೆತಾನೇ ತಿರಸ್ಕರಿಸಲಿ? ಅವನಲ್ಲಿ ನನಗಿರಬೇಕಾದ

ಗೌರವವನ್ನು ಹೇಗೆ ನಿರಾಕರಿಸಲಿ? ಈಗ ನಾನು ಆ ನನ್ನ ಗುರುವಿನ ಮಾತಿಗೆ ತಪ್ಪಿ ನಡೆಯಲಾರೆನು. ನಿನ್ನನ್ನು ಇಲ್ಲಿ ನಾನು ಬಿಟ್ಟುಹೋಗಲಾರೆನು. ದ್ರೋಣಾಚಾರ್ಯನಾದರೋ ಸಾಮಾನ್ಯನಲ್ಲ. ಅತ್ಯಂತ ಹಸ್ತವೇಗವುಳ್ಳವನು. ಅಭೇದ್ಯಕವಚವನ್ನು ಧರಿಸಿದವನು. ಯುದ್ಧಕ್ಕೆ ಬಂದಾಗ ಸಣ್ಣಮಕ್ಕಳು ಹಕ್ಕಿಗಳೊಡನೆ ಆಟವಾಡುವಂತೆ ಲೀಲಾಮಾತ್ರದಿಂದ ಯುದ್ಧವನ್ನು ಮುಗಿಸುವನು. ಆದುದರಿಂದ ಸರ್ವಥಾ ನಿನ್ನನ್ನು ಇಲ್ಲಿ ಬಿಟ್ಟುಹೋಗುವುದು ನನಗೆ ಉಚಿತವೆಂದು ತೋರಲಿಲ್ಲ. ಒಂದುವೇಳೆ ಕೃಷ್ಣನ ಮಗನಾದ ಪ್ರದ್ಯುಮ್ನನು ಧನುರ್ಧಾರಿಯಾಗಿ ನಿಂತು ನಿನ್ನನ್ನು ದ್ರೋಣನಿಂದ ರಕ್ಷಿಸಿಕೊಳ್ಳುವುದಾಗಿ ಭರವಸೆಯನ್ನು ಕೊಟ್ಟರೆ, ಆಗ ನಾನು ನಿಮ್ಮನ್ನು ಅವನ ವಶದಲ್ಲಿಟ್ಟು ಹೋಗಬಹುದು. ಅವನು ಅರ್ಜುನನಂತೆಯೇ ನಿನ್ನನ್ನು ಅಪಾಯಕ್ಕೀಡಾಗದಂತೆ ರಕ್ಷಿಸಿಕೊಳ್ಳಬಲ್ಲನು. ಆದುದರಿಂದ ಮಹಾರಾಜಾ! ಇಲ್ಲಿ ನಿನ್ನ ರಕ್ಷಣೆಗೆ ತಕ್ಕ ಉಪಾಯಾಂತರವನ್ನು ನೀನು ಯೋಚಿಸು. ನಾನು ಹೋಗಿಬರುವವರೆಗೆ ದ್ರೋಣನಿಂದ ಅಪಾಯವಿಲ್ಲದಂತೆ ನಿನ್ನನ್ನು ರಕ್ಷಿಸಬಲ್ಲವನುಬೇರೆ ಯಾವನೆಂಬುದನ್ನು ನಿರ್ಣಯಿಸು. ಈಗ ನೀನು ಆ ಅರ್ಜುನನಿಗಾಗಿ ಭಯಪಡಬೇಕಾದ ಕಾರಣವೇ ನನಗೆ ತೋರಲಿಲ್ಲ. ಅವನು ಮಹಾಪರಾಕ್ರಮಿ. ಅವನು ತಾನು ವಹಿಸಿದ ಭಾರವನ್ನು ಸಾಧಿಸುವುದರಲ್ಲಿ ಎಂದಿಗೂ ಬೇಸರಪಡತಕ್ಕವನಲ್ಲ. ಸೌವೀರಕರು, ಸೈಂಧವರು, ಪೌರವರು, ಉತ್ತರದಿಕ್ಕಿನ ರಾಜರು, ದಾಕ್ಷಿಣಾತ್ಯರು, ಕರ್ಣನೇ ಮೊದಲಾದ ಇನ್ನೂ ಮಹಾರಥರು ಯಾರುಂಟೋ, ಅವರೆಲ್ಲರೂ ಅರ್ಜುನನ ಕಲಾಮಾತ್ರಕ್ಕೂ ಸಾಟಿಯಲ್ಲ. ಅಷ್ಟೇಕೆ? ದೇವತೆಗಳು, ಅಸುರರು, ರಾಕ್ಷಸರು, ಕಿನ್ನರರು, ಮಹೋರಗರು, ಮನುಷ್ಯರು ಮೊದಲಾಗಿ ಸ್ಥಾವರಜಂಗಮಗಳೊಡಗೂಡಿದ ತ್ರೈಲೋಕ್ಯವೂ ಒಂದಾಗಿ ಸೇರಿಬಂದರೂ, ಯುದ್ಧದಲ್ಲಿ ಪಾರ್ಥನಿಗೆ ಸರಿಹೋಗಲಾರದು. ಈ ಅಂಶವನ್ನು ನೀನು ಚೆನ್ನಾಗಿ ಮನಸ್ಸಿಗೆ ತಂದುಕೊಂಡು, ಆ ಅರ್ಜುನನ ವಿಷಯವಾದ ಭಯವನ್ನು ಬಿಟ್ಟುಬಿಡು. ಇವೆಲ್ಲವೂ ಹಾಗಿರಲಿ! ಸತ್ಯಪರಾಕ್ರಮವುಳ್ಳ ಆ ಕೃಷ್ಣಾರ್ಜುನರಿಬ್ಬರೂ ಸೇರಿದ ಕಡೆಯಲ್ಲಿ ಅವರ ಕಾರ್ಯಕ್ಕೆ ಭಂಗವೆಂಬುದು ಹೇಗೂ ಇರಲಾರದು. ರಾಜಾ! ನಿನ್ನ ಸಹೋದರನಾದ ಆ ಧನಂಜಯನಿಗೆ ಈಗ ಇರ

ತಕ್ಕ ದೈವಬಲವನ್ನೂ, ಅವನ ಅಸ್ತ್ರನೈಪುಣ್ಯವನ್ನೂ, ಅವನ ಯೋಗಶಕ್ತಿ ಯನ್ನೂ, ಅವನ ಅಮಾನುಷ ಪ್ರಭಾವವನ್ನೂ, ಬುದ್ಧಿಯನ್ನೂ, ಅವನ ಕೋಪಶೌರ್ಯಾದಿಗಳನ್ನೂ, ಕೃತಜ್ಞತೆ, ದಯೆ ಮೊದಲಾದ ಅವನ ಗುಣ ಗಳನ್ನೂ ನೀನು ಚೆನ್ನಾಗಿ ಯೋಚಿಸಿನೋಡು. ಇತ್ತಲಾಗಿ ನಿನ್ನ ಸಹಾ ಯಕ್ಕಾಗಿ ಇರಿಸಲ್ಪಟ್ಟಿರುವ ನಾನು ಹೊರಟುಹೋದಮೇಲೆ, ನಿನ್ನ ಪರಿಣಾ ಮವೇನಾಗಬಹುದೆಂಬುದನ್ನೂ ಯೋಚಿಸು. ಆ ದ್ರೋಣನೋ ವಿಚಿತ್ರ ವಾದ ಅಸ್ತ್ರಪ್ರಯೋಗಮಾಡತಕ್ಕವನು. ನಿನ್ನನ್ನು ಹೇಗಾದರೂ ಹಿಡಿಯ ಬೇಕೆಂದು ಆತುರಗೊಂಡಿರುವನು. ಇದೇ ವಿಷಯವಾಗಿ ತಾನು ದುರ್ಯೋ ಧನನಿಗೆ ಮಾಡಿಕೊಟ್ಟಿರುವ ಪ್ರತಿಜ್ಞೆಯನ್ನು ಸಾಧಿಸಬೇಕೆಂಬುದು ಅವನ ದೃಢಸಂಕಲ್ಪವು. ಹೀಗಿರುವಾಗ ಅಸಹಾಯನಾಗಿ ನೀನು ಅವನನ್ನಿದಿರಿಸಿ ದರೆ, ಮುಂದೇನಾಗಬಹುದೆಂಬುದನ್ನು ಯೋಚಿಸು. ಮಹಾರಾಜಾ! ಈಗ ನಾನು ಅಲ್ಲಿಗೆ ಹೊರಟುಹೋದರೆ ಇಲ್ಲಿ ನಿನ್ನನ್ನು ರಕ್ಷಿಸಿಕೊಳ್ಳತಕ್ಕವ ರಾರು? ಯಾರನ್ನು ನಂಬಿ ನಾನು ನಿನ್ನನ್ನು ಬಿಟ್ಟುಹೋಗಲಿ? ಅದನ್ನಾ ದರೂ ನನಗೆ ತಿಳಿಸು. ಈ ಸ್ಥಿತಿಯಲ್ಲಿ ನಿನ್ನನ್ನು ನಾನು ಇಲ್ಲಿ ಬಿಟ್ಟು ಬೇರೆ ಲ್ಲಿಗೂ ಹೋಗಲಾರೆನು. ಸತ್ಯವಾಗಿ ಹೇಳುವೆನು. ಈಗ ನಿನ್ನನ್ನು ರಕ್ಷಿಸಿ ಕೊಳ್ಳಬಲ್ಲವನು ಯಾರೆಂದು ನನಗೆ ತೋರಲಿಲ್ಲ. ಆದುದರಿಂದ ಮಹಾ ರಾಜಾ! ನೀನೇ ಸ್ವಬುದ್ಧಿಯಿಂದ ಚೆನ್ನಾಗಿ ಯೋಚಿಸಿ, ಮುಂದಿನ ಶ್ರೇಯ ಸ್ಸಿಗೆ ಮಾರ್ಗವೇನೆಂಬುದನ್ನು ನಿಶ್ಚಯಿಸಿಕೊಂಡು, ಆಮೇಲೆ ನನಗೆ ಆಜ್ಞಾ ಪಿಸು" ಎಂದನು. ಅದಕ್ಕಾ ಯುಧಿಷ್ಠಿರನು "ಓ ಮಹಾಬಾಹೂ! ನೀನು ಹೇಳಿದುದೆಲ್ಲವೂ ವಾಸ್ತವವೇ! ಹಾಗಿದ್ದರೂ ಅರ್ಜುನನ ವಿಷಯವಾದ ಭಯವು ನನ್ನ ಮನಸ್ಸನ್ನು ಬಿಟ್ಟುಹೋಗುವಂತಿಲ್ಲ. ಆದುದರಿಂದ ನನ್ನ ಮಾತಿನಂತೆ ನೀನು ಹೊರಡು. ನನ್ನ ರಕ್ಷಣೆಗಾಗಿ ನಾನೇ ತಕ್ಕ ಪ್ರಯತ್ನ ವನ್ನು ಮಾಡಿಕೊಳ್ಳುವೆನು. ಇಲ್ಲಿ ನನ್ನ ಆತ್ಮರಕ್ಷಣೆ, ಅತ್ತಲಾಗಿ ಅರ್ಜು ನನ ರಕ್ಷಣೆ, ಇವುಗಳೆರಡರ ಗುರುಲಾಘವಗಳನ್ನು ನಾನೂ ಸ್ವಬುದ್ಧಿಯಿಂದ ಚೆನ್ನಾಗಿ ಯೋಚಿಸಿನೋಡಿದೆನು. ನೀನು ಅಲ್ಲಿಗೆ ಹೋಗುವುದೇ ಯು ಕ್ತವೆಂದು ನನಗೆ ತೋರುವುದು. ನೀನು ಅರ್ಜುನನ ಬಳಿಗೆ ಹೊರಡು. ಇಲ್ಲಿ ಭೀಮನು ನನ್ನನ್ನು ನೋಡಿಕೊಳ್ಳುವನು. ಸಹೋದರರೊಡಗೂಡಿದ

ಧೃಷ್ಟದ್ಯುಮ್ನನೂ, ನಮ್ಮ ಕಡೆಯ ಇನ್ನೂ ಅನೇಕಮಹಾರಥರೂ, ನನ್ನ ಮಕ್ಕಳಾದ ಉಪಪಾಂಡವರೂ ನನ್ನನ್ನು ರಕ್ಷಿಸಿಕೊಳ್ಳುವರು. ಐದು ಮಂದಿ ಕೇಕಯಸಹೋದರರು, ರಾಕ್ಷಸನಾದ ಘಟೋತ್ಕಚನು, ವಿರಾಟನು, ದ್ರುಪದನು, ಶಿಖಂಡಿ, ಧೃಷ್ಟಕೇತು, ನನ್ನ ಮಾವನಾದ ಕುಂತಿಭೋಜನು, ನಕುಲಸಹದೇವರು, ಪಾಂಚಾಲರು, ಸೃಂಜಯರು, ಇವರೆಲ್ಲರೂ ನನ್ನ ರಕ್ಷಣೆಯಲ್ಲಿ ಎಷ್ಟೋ ಜಾಗರೂಕರಾಗಿರುವರು. ಆದರಿಂದ ದ್ರೋಣನಾಗಲಿ, ಸೇನಾಸಮೇತನಾದ ಕೃತವರ್ಮನಾಗಲಿ, ಯುದ್ಧದಲ್ಲಿ ನನ್ನನ್ನು ಭಂಗಿಸಲಾರರು. ವೇಲೆಯು ಸಮುದ್ರವನ್ನು ಹೇಗೋ ಹಾಗೆ ಧೃಷ್ಟದ್ಯುಮ್ನನು ತನ್ನ ಪರಾಕ್ರಮದಿಂದ ದ್ರೋಣನನ್ನು ತಡೆಯಬಲ್ಲನು. ಆ ಧೃಷ್ಟದ್ಯುಮ್ನನಿದ್ದಕಡೆಯಲ್ಲಿ ದ್ರೋಣನ ಶಕ್ತಿಯೇನೂ ಸಾಗಲಾರದು. ಸಾತ್ಯಕೀ! ಆ ಧೃಷ್ಟದ್ಯುಮ್ನನು ಯಾರೆಂದು ತಿಳಿದಿರುವೆ? ಆವನು ದ್ರೋಣನ ವಧಕ್ಕಾಗಿಯೇ ಧನುರ್ಬಾಣಕವಚಗಳೊಡನೆಯೂ, ಉತ್ತಮ ಭೂಷಣಗಳೊಡನೆಯೂ ಅಗ್ನಿಯಿಂದ ಹುಟ್ಟಿಬಂದವನು. ಅವನು ಪಾಂಡವಪಾಂಚಾಲಸೈನ್ಯಗಳೊಡನೆ ಸೇರಿ ದ್ರೋಣನನ್ನು ನಿಶ್ಚಯವಾಗಿ ತಡೆಯಬಲ್ಲನು. ಆದುದರಿಂದ ಓ ಶಿನಿಕುಮಾರಾ! ನನ್ನ ಮಾತಿಗೆ ನೀನು ಕೋಪಿಸಬೇಡ. ನೀನು ಈಗಲೇ ಅರ್ಜುನನ ಬಳಿಗೆ ಹೊರಡು" ಎಂದನು.

ಇದು ನೂರ ಹನ್ನೊಂದನೆಯ ಅಧ್ಯಾಯವು.



{ ಸಾತ್ಯಕಿಯು ಯುಧಿಷ್ಠಿರನ ರಕ್ಷಣೆಗಾಗಿ ಭೀಮನನ್ನು ನಿಯೋಗಿಸಿ, ಅರ್ಜುನನಿದ್ದ ಕಡೆಗೆ ಹೊರಟುದು. }

ಮಹಾರಾಜಾ! ಯುಧಿಷ್ಠಿರನ ಆ ಮಾತುಗಳನ್ನು ಕೇಳಿದಮೇಲೆ ಸಾತ್ಯಕಿಯ ಮನಸ್ಸು ಡೋಲಾಯಮಾನವಾಯಿತು. ತಾನು ಇಲ್ಲಿ ಯುಧಿಷ್ಠಿರನನ್ನು ಬಿಟ್ಟುಹೋದರೆ ಅರ್ಜುನನು ತನ್ನನ್ನು ಕುರಿತು ಏನುಹೇಳುವನೋ ಎಂಬ ಭಯವೊಂದು, ಲೋಕಾಪವಾದವೊಂದು, ತಾನು ಹೋಗದಿದ್ದರೆ, ಅತ್ತಲಾಗಿ ದುರ್ಯೋಧನಾದಿಗಳಿಗೆ ಹೆದರಿ, ಜನಗಳು ತನ್ನನ್ನು ಹೇಡಿಯೆಂದು

ನಿಂದಿಸಬಹುದೆಂಬ ಲಜ್ಜೆಯೊಂದು! ಹೀಗೆ ನಾನಾವಿಧವಾಗಿ ಚಿಂತಿಸುತ್ತ, ಧರ್ಮರಾಜನ ಮುಂದೆ ಸ್ಪಷ್ಟವಾಗಿ ಮಾತಾಡುವುದಕ್ಕೂ ಹೆದರಿ, ದುಃಖದಿಂದ ಗದ್ಗದಕಂಠವುಳ್ಳವನಾಗಿ ಸುಮ್ಮನೆ ಗುಣಗುತ್ತಿದ್ದನು. ಈಗ ಮಾಡುವುದೇನೆಂದು ತನ್ನಲ್ಲಿಯೇ ಚಿಂತಿಸಿ ಕೊನೆಗೆ ಧರ್ಮರಾಜನನ್ನು ಕುರಿತು "ಓ ರಾಜಶ್ರೇಷ್ಠಾ! ನಿನಗೆ ಇಲ್ಲಿ ತಕ್ಕ ರಕ್ಷಣೆಯುಂಟೆಂಬ ಭರವಸೆಯಿದ್ದರೆ ನೀನು ಹೇಳಿದಂತೆಯೇ ಆಗಲಿ! ನಾನು ಅರ್ಜುನನ ಬಳಿಗೆ ಹೋಗುವೆನು. ನಿನಗೆ ಮಂಗಳವಾಗಲಿ! ನನಗೆ ಅರ್ಜುನನಿಗಿಂತಲೂ ಬೇರೆ ಪ್ರಿಯವಾದ ವಸ್ತುವು ಮೂರುಲೋಕದಲ್ಲಿಯೂ ಇಲ್ಲ. ನಿನಗಿಂತಲೂ ಅವನು ನನಗೆ ಹೆಚ್ಚು ಪ್ರಿಯತಮನು. ನಾನು ಸತ್ಯವಾಗಿ ಹೇಳುವೆನು. ಇದರಮೇಲೆ ನೀನೂ ಆಜ್ಞೆಮಾಡುವುದರಿಂದ, ಅರ್ಜುನನ ಬಳಿಗೆ ಹೋಗುವೆನು. ನಿನಗಾಗಿ ನಾನು ಮಾಡಬಾರದ ಕಾರ್ಯವು ಒಂದೂ ಇಲ್ಲ. ನನ್ನ ಗುರುವಾದ ಅರ್ಜುನನ ಮಾತು ಹೇಗೋ ಹಾಗೆ, ನಿನ್ನ ಮಾತೂ ಅವಶ್ಯಕರ್ತವ್ಯವೇ. ಕೃಷ್ಣಪಾಂಡವರಿಬ್ಬರೂ ನಿನ್ನ ಪ್ರಿಯದಲ್ಲಿ ನಿರತರಾದವರು. ಅವರ ಪ್ರಿಯಕಾರ್ಯದಲ್ಲಿ ನಾನು ಸಿದ್ಧವಾಗಿರುವೆನೆಂದು ತಿಳಿ. ನಿನ್ನ ಆಜ್ಞೆಯನ್ನು ಶಿರಸಾವಹಿಸಿ, ಇದೋ! ಈಗಲೇ ಅರ್ಜುನನಿಗಾಗಿ ಹೊರಡುವೆನು. ಕೋಪಗೊಂಡ ಮೀನು ಸಮುದ್ರವನ್ನು ಕಲಕುವಂತೆ ನಾನು ದುರ್ಭೇದ್ಯವಾದ ಈ ದ್ರೋಣಸೈನ್ಯವನ್ನು ಭೇದಿಸಿಕೊಂಡು, ಅರ್ಜುನನಿರುವ ಸ್ಥಳಕ್ಕೆ ಹೋಗುವೆನು. ಪ್ರಭೂ! ಅದು ಮಾತ್ರವಲ್ಲ. ನಾನು ಇಲ್ಲಿಂದ ನೆಟ್ಟಗೆ ಹೊರಟು, ಆ ಜಯದ್ರಥನು ಅರ್ಜುನನ ಭಯದಿಂದ ಯಾವ ಕೌರವಸೈನ್ಯದ ನಡುವೆ ಅವಿತುಕೊಂಡಿರುವನೋ, ಅಶ್ವತ್ಥಾಮ, ಕರ್ಣ, ಕೃಪಾದಿ ಮಹಾರಥರಿಂದ ರಕ್ಷಿಸಲ್ಪಡುತ್ತಿರುವ ಆದೇಸ್ಥಳಕ್ಕೆ ಹೋಗುವೆನು. ಇಲ್ಲಿಂದ ಆ ಸ್ಥಳವು ಮೂರುಯೋಜನಗಳ ದೂರವಿರಬಹುದೆಂದು ತೋರುವುದು. ಮೂರುಯೋಜನಗಳಿಗಿಂತಲೂ ಹೊರಗಿದ್ದರೂ ನಾನು ಅರ್ಜುನನಿಂದ ಸೈಂಧವವಧವು ನಡೆಯುವ ಮೊದಲೇ ಅವನನ್ನು ಸೇರುವೆನು. ಗುರುವಿನ ಆಜ್ಞೆಯಿಲ್ಲದೆ ಯುದ್ಧಮಾಡುವುದಾಗಲಿ, ಅವನ ಆಜ್ಞೆಯಾದಮೇಲೆಯೂ ಯುದ್ಧಮಾಡದಿರುವುದಾಗಲಿ, ನನ್ನಂಥವನಿಗೆ ಯೋಗ್ಯವಾದ ಕೃತ್ಯವಲ್ಲ. ಬಾಲನಾದ ಅಭಿಮನ್ಯುವನ್ನು ಕೊಲ್ಲಿಸಿದ ಆ ನೀಚಸೈಂಧವನು

ಎಷ್ಟೋ ದೂರದಲ್ಲಿದ್ದರೂ ಘೋಷಿಸುತ್ತಿರುವ ಮಹಾಸಾಗರದಂತೆ ವಿಶಾಲವಾಗಿ ಶಕ್ತಿ, ಗದೆ, ಕತ್ತಿ, ಗುರಾಣಿ, ಪ್ರಾಸ, ತೋಮರ, ಹಲ, ಮುಸಲ, ಮುಷ್ಟಿ ಮೊದಲಾದ ಆಯುಧಗಳಿಂದಲೂ, ಶಸ್ತ್ರಾಸ್ತ್ರಗಳಿಂದಲೂ, ಪೂರ್ಣವಾದ ಈ ಮುಂದಿನ ಶತ್ರುಸೈನ್ಯವನ್ನೆಲ್ಲ ಭೇದಿಸಿಕೊಂಡು, ಈಗಲೇ ನಾನು ಹೋಗುವೆನು. ಮಹಾರಾಜಾ! ಅದೋ! ಈ ಮುಂದೆ ಕಾಣುತ್ತಿರುವ ಸಾವಿರಾರು ಗಜಸೈನ್ಯಗಳನ್ನು ನೋಡುವೆಯಲ್ಲವೆ? ಇವೆಲ್ಲವೂ ಅಂಜನಕಗಳೆಂದು ಹೆಸರುಗೊಂಡುವು. ಯುದ್ಧನಿಪುಣರೂ, ಶಸ್ತ್ರಧಾರಿಗಳೂ ಆದ ಅನೇಕ ಮ್ಲೇಚ್ಛವೀರರು ಅವುಗಳನ್ನೇರಿ ಯುದ್ಧಮಾಡುವರು. ಆ ಆನೆಗಳು ಪರ್ವತಗಳಂತೆಯೂ, ಮಳೆಯನ್ನು ಕರೆಯುವ ಮೇಘಗಳಂತೆಯೂ ಕಾಣುವುವು ನೋಡು. ಈ ಆನೆಗಳು ಯುದ್ಧಕ್ಕಾಗಿ ಪ್ರೇರಿಸಲ್ಪಟ್ಟಮೇಲೆ, ಎಂದಿಗೂ ಹಿಂತಿರುಗಿ ಓಡುವುವಲ್ಲ. ಅವುಗಳನ್ನು ಕೊಂದಹೊರತು ನಮಗೆ ಮುಂದೆಹೋಗಲು ಸಾಧ್ಯವಿಲ್ಲ. ಕೊಲೆಯಿಂದಲ್ಲದೆ ಅವುಗಳಿಗೆ ಪರಾಜಯವಿಲ್ಲ. ಅದೋ! ಮುಂದೆ ಸಾವಿರಾರುಮಂದಿ ರಥಿಕರನ್ನು ನೋಡುವೆಯಲ್ಲವೆ? ಅವರೆಲ್ಲರೂ ರುಕ್ಮರಥರೆಂದು ಪ್ರಸಿದ್ಧರಾದ ರಾಜಪುತ್ರರು. ಎಲ್ಲರೂ ಮಹಾರಥರು. ಅಸ್ತ್ರವಿದ್ಯೆಯಲ್ಲಿ ನಿಪುಣರು. ರಥಯುದ್ಧದಲ್ಲಿಯೂ, ಗಜಯುದ್ಧದಲ್ಲಿಯೂ ವಿಶಾರದರು. ಧನುರ್ವಿದ್ಯೆಯಲ್ಲಿ ಪಾರಂಗತರು. ಮುಷ್ಟಿಯುದ್ಧದಲ್ಲಿಯೂ ಸಮರ್ಥರು. ಅದರಂತೆಯೇ ಗದಾಯುದ್ಧ, ಬಾಹುಯುದ್ಧ, ಖಡ್ಗಯುದ್ಧ, ಕತ್ತಿಗುರಾಣಿಗಳ ವರಿಸೆ, ಇವುಗಳನ್ನೆಲ್ಲ ಚೆನ್ನಾಗಿ ಬಲ್ಲವರು. ಶೂರರು! ಶಸ್ತ್ರವಿದ್ಯಾನಿಪುಣರು! ಅವರು ಅನ್ಯೋನ್ಯಸ್ಪರ್ಧೆಯಿಂದ ಯುದ್ಧೋತ್ಸಾಹವುಳ್ಳವರಾಗಿ, ಶತ್ರುಗಳನ್ನು ಜಯಿಸುವ ಆತುರದಲ್ಲಿರುವರು. ಅವರೆಲ್ಲರೂ ಕರ್ಣನಿಂದ ನಿಯಮಿಸಲ್ಪಟ್ಟು, ದುಶ್ಶಾಸನನ ಆಜ್ಞಾಧೀನರಾಗಿರತಕ್ಕವರು. ಅವರ ಪರಾಕ್ರಮವನ್ನು ಶ್ರೀಕೃಷ್ಣನೂಕೂಡ ಆಗಾಗ ಪ್ರಶಂಸೆಮಾಡುವನು. ಅವರೆಲ್ಲರೂ ಕರ್ಣನ ವಶದಲ್ಲಿದ್ದುಕೊಂಡು, ಯಾವಾಗಲೂ, ಅವನಿಗೆ ಪ್ರಿಯವನ್ನುಂಟುಮಾಡುವುದರಲ್ಲಿಯೇ ನಿರತರಾಗಿರುವರು. ಆ ಕರ್ಣನ ಮಾತಿಗಾಗಿ ಅವರು ಅರ್ಜುನನಿಂದ ಹಿಂತಿರುಗಿದರೇಹೊರತು ಅವರು ಆ ಯುದ್ಧದಲ್ಲಿ ಸೋತವರೂ ಅಲ್ಲ! ಬಳಲಿದವರೂ ಅಲ್ಲ! ಅವರೆಲ್ಲರೂ ದೃಢವಾದ ಕವಚವನ್ನೂ, ಬಿಲ್ಲನ್ನೂ ಧರಿಸಿರುವರು. ದುರ್ಯೋ

ಧನನು ಅವರನ್ನು ಇಲ್ಲಿ ನನ್ನನ್ನಿದಿರಿಸುವುದಕ್ಕಾಗಿಯೇ ನಿಲ್ಲಿಸಿರುವನು. ಆದರೇನು? ಇರಲಿ! ನಿನ್ನ ಪ್ರಿಯಕ್ಕಾಗಿ ನಾನು ಅವರನ್ನೆಲ್ಲ ಈ ಯುದ್ಧದಲ್ಲಿ ಧ್ವಂಸಮಾಡಿ, ಆ ಅರ್ಜುನನಿರುವ ಸ್ಥಳಕ್ಕೆ ಸೇರುವೆನು. ಅದೋ! ಇಲ್ಲಿ ಏಳುನೂರು ಸಂಖ್ಯೆಯುಳ್ಳ ಬೇರೆ ಗಜಸೈನ್ಯಗಳನ್ನು ನೋಡುತ್ತಿರುವೆಯಲ್ಲವೆ? ಅವೆಲ್ಲವೂ ದೃಢವಾದ ಕವಚಗಳಿಂದ ಹೊದಿಸಲ್ಪಟ್ಟಿರುವುವು. ಕಿರಾತಸೈನಿಕರು ಅದನ್ನೇರಿ ಯುದ್ಧಮಾಡುವರು. ಮಹಾರಾಜಾ! ಹಿಂದೆ ಒಂದಾನೊಂದು ಯುದ್ಧದಲ್ಲಿ ಅರ್ಜುನನಿಂದ ಸೆರೆಹಿಡಿಯಲ್ಪಟ್ಟ ಕಿರಾತ ರಾಜನು ತನ್ನ ಪ್ರಾಣವನ್ನುಳಿಸಿಕೊಳ್ಳುವುದಕ್ಕಾಗಿ ಅರ್ಜುನನಿಗೆ ಈ ಕಿರಾತ ಸೈನಿಕರನ್ನು ಸರ್ವಾಲಂಕಾರಗಳೊಡನೆ ಕಪ್ಪವಾಗಿ ಒಪ್ಪಿಸಿದನು. ಇವರೆಲ್ಲರೂ ಹಿಂದೆ ನಿನ್ನ ಸೇವಕರಾಗಿ, ನೀನು ಹೇಳಿದ ಕಾರ್ಯವನ್ನು ನಡೆಸುತ್ತಿದ್ದರು. ಈಗ ನಿನ್ನನ್ನೇ ಇದಿರಿಸಿ ಯುದ್ಧಕ್ಕಾಗಿ ನಿಂತಿರುವರು. ಕಾಲದ ವೈಪರೀತ್ಯವನ್ನು ನೋಡಿದೆಯಾ? ಆನೆಗಳಮೇಲೆ ಕುಳಿತಿರುವ ಈ ಕಿರಾತರು ಸಾಮಾನ್ಯರಲ್ಲ. ಯುದ್ಧದಲ್ಲಿ ಹೆಮ್ಮೆಗೊಂಡವರು. ಗಜಶಿಕ್ಷೆಯನ್ನು ಚೆನ್ನಾಗಿ ಬಲ್ಲವರು. ಇವರೆಲ್ಲ ಅಗ್ನಿಯಿಂದ ಹುಟ್ಟಿದವರು! ಇಂಥವರನ್ನು ಹಿಂದೆ ಅರ್ಜುನನು ಬಹು ಸುಲಭವಾಗಿ ಜಯಿಸಿಬಿಟ್ಟನು. ಈಗ ದುರ್ಯೋಧನನ ಆಜ್ಞೆಯಿಂದ ನಮ್ಮನ್ನು ಇದಿರಿಸುವುದಕ್ಕಾಗಿ ನಿಂತಿರುವರು. ಆದರೇನು? ಇವರನ್ನೂ ನನ್ನ ಬಾಹುಬಲದಿಂದ ಕೊಂದು ನಾನು ಅರ್ಜುನನನ್ನು ಸೇರುವೆನು. ಅದೋ! ಅಂಜನವೆಂಬ ವರುಣದಿಕ್ಕಿನ ದಿಗ್ಗಜದ ವಂಶದಲ್ಲಿ ಹುಟ್ಟಿದ ಕೆಲವು ಮಹಾಗಜಗಳು ಇದಿರಾಗಿ ನಿಂತಿರುವುವು ನೋಡು. ಅವೆಲ್ಲ ಬಹಳ ಕಠಿನಸ್ವಭಾವವುಳ್ಳವುಗಳಾಗಿ, ಮದಜಲವನ್ನು ಸುರಿಸುತ್ತಿರುವುವು. ಹಾಗಿದ್ದರೂ, ಯೋಧರಿಗೆ ವಿಧೇಯವಾಗಿ ನಡೆಯುವುವು. ಸುವರ್ಣಕವಚಗಳಿಂದ ಅಲಂಕರಿಸಲ್ಪಟ್ಟ ಆ ಆನೆಗಳನ್ನು ನೋಡು. ಇವು ಹಿಡಿದ ಗುರಿಯನ್ನು ತಪ್ಪತಕ್ಕವುಗಳಲ್ಲ. ಎಲ್ಲವೂ ಐರಾವತಕ್ಕೆ ಸಾಟಿಯಾದುವು. ಆ ಆನೆಗಳಮೇಲೆ ಕುಳಿತು ಯುದ್ಧಮಾಡತಕ್ಕವರು ಪರ್ವತವಾಸಿಗಳಾದ ದಸ್ಯುಗಳು. ಅವರೂ ಮಹಾಶೂರರು. ಕಠಿನಸ್ವಭಾವವುಳ್ಳವರು! ಉಕ್ಕಿನ ಕವಚಗಳನ್ನು ಧರಿಸಿರುವರು. ಮಹಾರಾಜಾ! ಇದರಂತೆಯೇ ಗೋವುಗಳು, ಕಪಿಗಳು, ಮನುಷ್ಯರು, ಇವರಿಂದ ಹುಟ್ಟಿದ ಬೇರೆಬೇರೆ ಜಾತಿಯವರು

ಎಷ್ಟೋಮಂದಿ ಇಲ್ಲಿರುವರು. ಇವರೆಲ್ಲರೂ ಕೇವಲ ಪಾಪಕಾರ್ಯನಿರತರಾದ ಅಸತ್ಪುರುಷರು. ಹಿಮಾಲಯದ ದುರ್ಗದಲ್ಲಿ ವಾಸಮಾಡತಕ್ಕ ಮ್ಲೇಚ್ಛಜಾತಿಯವರು. ಈ ಸೈನ್ಯವೆಲ್ಲಾ ಧೂಮ್ರವರ್ಣವುಳ್ಳುದಾಗಿ ಕಾಣುತ್ತಿರುವುದು ನೋಡು. ದುರ್ಯೋಧನನು ಈ ರಾಜಮಂಡಲವನ್ನೆಲ್ಲ ಪೂರ್ಣವಾಗಿ ತನ್ನ ವಶಮಾಡಿಕೊಂಡಿರುವನು. ಅಲ್ಲದೆ ಕೃಪನು, ಸೋಮದತ್ತಪುತ್ರನಾದ ಭೂರಿಶ್ರವಸ್ಸು, ದ್ರೋಣನು, ಜಯದ್ರಥನು, ಕರ್ಣನು, ಇವರನ್ನೆಲ್ಲ ತನಗೆ ಬೆಂಬಲವಾಗಿಟ್ಟುಕೊಂಡು, ಆ ಹೆಮ್ಮೆಯಿಂದಲೇ ತಾನು ಕೃತಾರ್ಥನಾದೆನೆಂದು ತಿಳಿದು, ಪಾಂಡವರನ್ನು ಅವಮಾನಿಸುತ್ತಿರುವನು. ಇರಲಿ! ಈಗ ಅವರೆಲ್ಲರೂ ಒಟ್ಟಾಗಿ ನನ್ನ ಬಾಣಗಳಿಗೆ ಗುರಿಯಾಗುವ ಕಾಲವೊದಗಿತು. ಮಹಾರಾಜಾ! ಇವರೆಲ್ಲರೂ ಮನೋವೇಗವುಳ್ಳವರೆಂಬುದು ನಿಜವೇ! ಹಾಗಿದ್ದರೂ ನನ್ನ ಮುಂದೆ ಬದುಕಲಾರರು! ಇತರರ ಪರಾಕ್ರಮವನ್ನೇ ನಂಬಿ ಬದುಕುತ್ತಿರುವ ಆ ನೀಚದುರ್ಯೋಧನನಿಂದ ಪ್ರೋತ್ಸಾಹಿತರಾಗಿ ಬಂದ ಇವರೆಲ್ಲರೂ, ಈಗ ನನ್ನ ಬಾಣಗಳಿಂದ ನಾಶಹೊಂದುವುದು ನಿಶ್ಚಯವು. ಅದೋ! ಮುಂದೆ ಸುವರ್ಣಧ್ವಜವುಳ್ಳ ರಥವನ್ನೇರಿ ಕುಳಿತ ರಥಿಕರನ್ನು ನೋಡುವೆಯಲ್ಲವೆ? ಅವರು ಕಾಂಭೋಜದೇಶದವರು. ಮವಾರಣರೆಂದು ಹೆಸರುಗೊಂಡವರು. ನೀನೂ ಅವರ ವಿಷಯವನ್ನು ಕೇಳಿರಬಹುದು. ಅವರೆಲ್ಲರೂ ಶೂರರು! ಧನುರ್ವೇದದಲ್ಲಿ ಸುಶಿಕ್ಷಿತರು! ಅವರು ಒಬ್ಬರನ್ನೊಬ್ಬರು ಬಿಟ್ಟುಕೊಡದೆ ಒಗ್ಗಟ್ಟಿನಿಂದಿರುವರು. ದುರ್ಯೋಧನನು ನಮ್ಮನ್ನು ತಡೆಯುವುದಕ್ಕಾಗಿ ಆ ಅಕ್ಷೌಹಿಣೀ ಸೈನ್ಯಗಳನ್ನು ನಿಲ್ಲಿಸಿರುವನು. ಅವರೆಲ್ಲರಿಗೂ ನನ್ನಮೇಲೆಯೇ ಪೂರ್ಣವಾದ ದೃಷ್ಟಿ! ಅವರು ನನ್ನನ್ನೇ ಇದಿರಿಸಿ ಬಂದಿರುವರು. ಆದರೇನು? ಬೆಂಕಿಯು ಹುಲ್ಲುಕಡ್ಡಿಗಳನ್ನು ಹೇಗೋಹಾಗೆ, ಕ್ಷಣಮಾತ್ರದಲ್ಲಿ ನಾನು ಅವರನ್ನು ನನ್ನ ಬಾಣಜ್ವಾಲೆಯಿಂದ ಸುಟ್ಟುಬಿಡುವೆನು. ಮಹಾರಾಜಾ! ಇನ್ನು ನೀನು ನನ್ನ ರಥಕ್ಕೆ ಬಿಲ್ಲು, ಬತ್ತಳಿಕೆ, ಮೊದಲಾದ ಎಲ್ಲಾ ಸಾಮಗ್ರಿಗಳನ್ನೂ ತುಂಬಿ, ರಥವನ್ನು ಸಿದ್ಧಪಡಿಸುವಂತೆ ನಿಯಮಿಸು. ಎಲ್ಲವೂ ಸಿದ್ಧವಾಗಲಿ. ಈ ಯುದ್ಧಕ್ಕಾಗಿ ನಾವು ವಿವಿಧಾಯುಧಗಳನ್ನೆಲ್ಲ ಸೇರಿಸಿಟ್ಟುಕೊಳ್ಳಬೇಕು. ಈಗಿನ ಯುದ್ಧಕ್ಕಾಗಿ ಪೂರ್ವಾಚಾರ್ಯರಿಂದ ನಿರ್ಣಯಿಸಲ್ಪಟ್ಟುದಕ್ಕೆ ಐದು

ಪಾಲು ಹೆಚ್ಚು ಗುಣವುಳ್ಳ ರಥವು ಸಿದ್ಧವಾಗಬೇಕು. ಈಗ ನಾನು ಸರ್ಪಗಳಂತೆ ತೀಕ್ಷ್ಣಸ್ವಭಾವವುಳ್ಳ ಕಾಂಭೋಜರೊಡನೆ ಕೈಕಲೆತು ನಿಲ್ಲಬೇಕಾಗುವುದು. ಅವರು ನಾನಾಶಸ್ತ್ರಗಳನ್ನು ಸಂಗ್ರಹಿಸಿಟ್ಟವರು. ವಿವಿಧಾಯುಧಗಳಿಂದ ಯುದ್ಧಮಾಡತಕ್ಕವರು. ಅಲ್ಲದೆ ನಾನು ಕಿರಾತರನ್ನು ಇದಿರಿಸಬೇಕಾಗುವುದು. ಅವರೆಲ್ಲರೂ ವಿಷದಂತೆ ಕ್ರೂರರು. ಶಸ್ತ್ರಧಾರಿಗಳು. ದುರ್ಯೋಧನನಿಂದ ಚೆನ್ನಾಗಿ ಆದರಿಸಲ್ಪಟ್ಟು, ಅವನ ಹಿತದಲ್ಲಿ ನಿರತರಾದವರು. ಇವರಂತೆಯೇ ಶಕರೊಡನೆಯೂ ನಾನು ಯುದ್ಧಮಾಡಬೇಕು. ಅವರು ಇಂದ್ರನಂತೆ ಪರಾಕ್ರಮಿಗಳು. ಉರಿಯುವ ಬೆಂಕಿಯಂತೆ ಇದಿರಿಸಲಸಾಧ್ಯರು. ಇದೇರೀತಿಯಲ್ಲಿ ಯಮನಿಗೆ ಸಮಾನರಾದ ನಾನಾಬಗೆಯ ಯೋಧರೊಡನೆ ನಾನು ಇದಿರಿಸಿನಿಲ್ಲಬೇಕು. ಮಹಾರಾಜಾ! ಇಲ್ಲಿಂದ ಮೂರುಯೋಜನಗಳಿಗೂ ಆಚೆ ಇದ್ದರೂ ನಾನು ಆ ಅರ್ಜುನನನ್ನು ಶೀಘ್ರದಲ್ಲಿಯೇ ಕಲೆತುಕೊಳ್ಳುವೆನು. ಇಂದಿನ ಸೂರ್ಯೋದಯದಲ್ಲಿಯೇ ಇಲ್ಲಿಂದಹೊರಟ ಅರ್ಜುನನು, ಎಷ್ಟುದೂರಕ್ಕೆ ಹೋಗಿದ್ದರೂ ಈ ಅಪರಾಹ್ನದೊಳಗಾಗಿ ಅವನನ್ನು ನಾನು ಸೇರುವೆನು. ಅದರಲ್ಲಿ ಸಂದೇಹವಿಲ್ಲ. ಮುಖ್ಯವಾಗಿ ನೀನು ಶುಭಲಕ್ಷಣಗಳುಳ್ಳ ಉತ್ತಮಾಶ್ವಗಳನ್ನಾರಿಸಿ, ಅವುಗಳನ್ನು ನೆಲದಮೇಲೆ ಹೊರಳಿಸಿ, ನೀರನ್ನು ಕುಡಿಸಿ, ನನ್ನ ರಥಕ್ಕೆ ಕಟ್ಟುವಂತೆ ಸಾರಥಿಗೆ ನಿಯಮಿಸು" ಎಂದನು.

ಧೃತರಾಷ್ಟ್ರಮಹಾರಾಜಾ! ಅದರಂತೆ ಧರ್ಮರಾಜನು ಸಾತ್ಯಕಿಯ ರಥದಲ್ಲಿ ಬಿಲ್ಲುಗಳು, ಬತ್ತಳಿಕೆಗಳು, ವಿವಿಧಶಸ್ತ್ರಗಳು ಮುಂತಾಗಿ ಸಮಸ್ತ ಯುದ್ಧಸಾಮಗ್ರಿಗಳನ್ನೂ ಸಿದ್ಧಮಾಡಿಸಿದನು. ಆಮೇಲೆ ಅವನಕಡೆಯ ಜನರು ನಾಲ್ಕು ಉತ್ತಮಾಶ್ವಗಳನ್ನು ಆರಿಸಿ ತಂದು, ಅವುಗಳಿಗೆ ಒಳ್ಳೇ ಮದವನ್ನು ಹೆಚ್ಚಿಸತಕ್ಕ ಪಾನಗಳನ್ನು ಕುಡಿಸಿದರು. ಅವುಗಳನ್ನು ನೆಲದ ಮೇಲೆ ಹೊರಳಿಸಿದರು. ನೀರಿಗೆ ಬಿಟ್ಟು ತೊಳೆದರು. ಅವುಗಳಿಗೆ ಆಹಾರಗಳನ್ನು ಕೊಟ್ಟು, ತಕ್ಕ ಅಲಂಕಾರಗಳನ್ನು ಮಾಡಿ, ಅವುಗಳ ಮೈಯಲ್ಲಿ ನಾಟಿದ್ದ ಬಾಣದಲಗುಗಳನ್ನೂ, ಗಾಯಗಳನ್ನೂ ನೀಗಿಸಿ, ರಥಕ್ಕೆ ತಂದು ಜೋಡಿಸಿದರು. ವಿಧೇಯವಾಗಿ ನಡೆಯತಕ್ಕವುಗಳೂ ಅತ್ಯಂತವೇಗವುಳ್ಳವು

ಗಳೂ, ಉತ್ಸಾಹದಿಂದ ಕೂಡಿದವುಗಳೂ ಆದ ಅಂತಹ ನಾಲ್ಕುಕುದುರೆಗಳನ್ನು ರಥಕ್ಕೆ ಹೂಡಿದಮೇಲೆ ಸ್ವರ್ಣಕೇಸರಗಳಿಂದ ಕೂಡಿದ ಸಿಂಹದ ಗುರುತುಳ್ಳ ದೊಡ್ಡ ಧ್ವಜವನ್ನು ಆ ರಥದಮೇಲೆ ಏರಿಸಿದರು. ಮುತ್ತು, ಹವಳ, ರತ್ನ, ಮುಂತಾದ ಮಣಿಗಳಿಂದ ಚಿತ್ರಿತವಾಗಿಯೂ, ಕುರುವಿಂದಮಣಿಗಳಿಂದ ಕೆತ್ತಲ್ಪಟ್ಟ ಕೇದಗೆಹೂಗಳ ಆಕಾರವುಳ್ಳದಾಗಿಯೂ ಇರುವ ಆಸನವನ್ನು ರಥದಮೇಲೆ ಹರಡಿದರು. ಬಿಳೀಮೇಘಗಳಂತಿರುವ ಪತಾಕೆಗಳನ್ನೂ, ಸುವರ್ಣದಂಡವುಳ್ಳ ಶ್ವೇತಚ್ಛತ್ರವನ್ನೂ ತಂದು ಕಟ್ಟಿ ರಥವನ್ನಲಂಕರಿಸಿದರು. ಮೇಲೆ ಸುವರ್ಣಕಲಶಗಳನ್ನಿಟ್ಟರು. ನಾನಾಬಗೆಯ ಶಸ್ತ್ರಗಳನ್ನು ಸಂಗ್ರಹಿಸಿಟ್ಟರು. ಹೀಗೆ ರಥವು ಸಿದ್ಧವಾದಮೇಲೆ, ದಾರುಕನ ಕನಿಷ್ಠಸಹೋದರನೂ, ಮಾತಲಿಗೆ ಪ್ರಿಯಮಿತ್ರನೂ ಆದ ಸೂತನೊಬ್ಬನು, ಮಾತಲಿಯು ಇಂದ್ರನ ಬಳಿಗೆ ಬಂದಂತೆ ಬಂದು, ರಥವು ಸಿದ್ಧವಾಗಿರುವುದನ್ನು ಸಾತ್ಯಕಿಗೆ ತಿಳಿಸಿದನು. ಒಡನೆಯೇ ಸಾತ್ಯಕಿಯು ಸ್ನಾನಮಾಡಿ, ಶುದ್ಧನಾಗಿ, ಮಂಗಳಕಾರ್ಯಗಳನ್ನು ಮುಗಿಸಿಕೊಂಡು, ಸ್ನಾತಕಬ್ರಾಹ್ಮಣರಿಗೆ ಸುವರ್ಣವರಹಗಳನ್ನು ದಾನಮಾಡಿದನು. ಅವರಿಂದ ಜಯಾಶೀರ್ವಾದಗಳನ್ನು ಪಡೆದನು. ಆಮೇಲೆ ಮಧುಪರ್ಕದ ತೀರ್ಥವನ್ನು ಕುಡಿದನು. ಕೈರಾತಕವೆಂಬ ಮದ್ಯವನ್ನು ಸೇವಿಸಿದನು. ಆದರಿಂದ ಮತ್ತೇರಿ ತೊಳಲುವ ಕೆಂಪಾದ ಕಣ್ಣುಗಳುಳ್ಳವನಾಗಿ, ಯುದ್ಧೋತ್ಸಾಹದಿಂದ ವೀರಕಾಂಸ್ಯವೆಂಬ ಬಿರುದಿನ ಬಳೆಯನ್ನು ಧರಿಸಿದನು. ಇಮ್ಮಡಿಯಾದ ತೇಜಸ್ಸಿನಿಂದ ಉರಿಯುವ ಬೆಂಕಿಯಂತೆ ಬೆಳಗುತ್ತ, ಧನುರ್ಬಾಣಗಳನ್ನು ಕೈಗೆತ್ತಿಕೊಂಡನು. ಯುದ್ಧಕವಚವನ್ನು ಧರಿಸಿದನು. ದೇಹವನ್ನು ಯುದ್ಧಯೋಗ್ಯವಾದ ಭೂಷಣಗಳಿಂದ ಅಲಂಕರಿಸಿಕೊಂಡನು. ಬ್ರಾಹ್ಮಣರು ಸ್ವಸ್ತ್ಯಯನವನ್ನು ನಡೆಸಿದರು. ಅರಳು, ಗಂಧ, ಹೂ, ಕನ್ಯೆಯರು, ಮುಂತಾದ ಮಂಗಳದ್ರವ್ಯಗಳೆಲ್ಲಾ ಅವನ ಮುಂದೆ ಬಂದುವು. ಆಮೇಲೆ ಸಾತ್ಯಕಿಯು ಯುಧಿಷ್ಠಿರನ ಪಾದಗಳನ್ನು ಹಿಡಿದು ನಮಸ್ಕರಿಸಿ, ಕೈಮುಗಿದನು. ಧರ್ಮರಾಜನು ಅವನ ತಲೆಯನ್ನಾಘ್ರಾಣಿಸಿ, ಅವನಿಗೆ ಅನೇಕವಿಧವಾದ ಆಶೀರ್ವಾದಗಳನ್ನು ಮಾಡಿದನು. ಆಮೇಲೆ ಸಾತ್ಯಕಿಯು ಸಂತೋಷದಿಂದ ತನ್ನ ಮಹಾರಥವನ್ನೇರಿದನು. ದೇಹಪುಷ್ಟಿಯಿಂದಲೂ, ಮನೋಹರ್ಷದಿಂದಲೂ ಕೂಡಿದ ರಥಾಶ್ವಗಳು

ಇಂದ್ರನ ರಥಾಶ್ವಗಳು ಇಂದ್ರರಥವನ್ನು ಹೇಗೋ ಹಾಗೆ ರಥವನ್ನು ಎಳೆದು ಕೊಂಡುಹೊರಟುವು. ಇಷ್ಟರಲ್ಲಿಯೇ ಭೀಮಸೇನನು ಧರ್ಮರಾಜನಿಂದ ಆಜ್ಞಪ್ತನಾಗಿ ಅವನಿಗೆ ನಮಸ್ಕರಿಸಿ ಸಾತ್ಯಕಿಗೆ ಸಹಾಯಕ್ಕಾಗಿ ತಾನೂ ರಥ ವನ್ನೇರಿದನು. ಹೀಗೆ ಭೀಮಸಾತ್ಯಕಿಗಳಿಬ್ಬರೂ ಯುದ್ಧಸನ್ನದ್ಧರಾಗಿ ನಿನ್ನ ಮಗನ ಸೈನ್ಯದ ಕಡೆಗೆ ಹೊರಡುತ್ತಿರುವುದನ್ನು ನೋಡಿ, ಇತ್ತಲಾಗಿ ದ್ರೋ ಣಾದಿಗಳೆಲ್ಲರೂ ಅವರನ್ನು ತಡೆಯಲು ಸಿದ್ಧರಾದರು. ಇಷ್ಟರಲ್ಲಿ ಸಾತ್ಯ ಕಿಯು, ಭೀಮನೂ ಯುದ್ಧಸನ್ನದ್ಧನಾಗಿ ಬಂದು ತನ್ನೊಡನೆ ರಥದಲ್ಲಿ ಕುಳಿ ತುದನ್ನು ನೋಡಿ, “ಭೀಮಸೇನಾ! ಏನಿದು? ನೀನೇಕೆ ನನ್ನನ್ನು ಹಿಂಬಾಲಿ ಸುವೆ? ಧರ್ಮರಾಜನನ್ನು ರಕ್ಷಿಸಿಕೊಳ್ಳಬೇಕಾದುದು ನಿನಗೆ ಈಗ ಎಲ್ಲಕ್ಕಿಂ ತಲೂ ಮುಖ್ಯವಾದ ಕಾರ್ಯವು. ನಾನೊಬ್ಬನೇ ಈ ಸೈನ್ಯವನ್ನು ಭೇದಿಸಿ ಕೊಂಡು ಹೋಗಬಲ್ಲೆನು. ಈ ಕೌರವಸೈನ್ಯವು ಈಗಲೇ ಕಾಲದಿಂದ ಪಕ್ವವಾ ಗಿರುವುದು. ಅದನ್ನು ಜಯಿಸುವುದೇನೂ ನನಗೆ ಕಷ್ಟವಾಗಿ ತೋರುವುದಿಲ್ಲ! ಧರ್ಮರಾಜನನ್ನು ರಕ್ಷಿಸಿಕೊಳ್ಳಬೇಕಾದುದೇ ನಮಗೀಗಲೂ, ಮುಂದಕ್ಕೂ ಶ್ರೇಯಸ್ಕರವು. ಭೀಮಾ! ನನ್ನ ಪರಾಕ್ರಮವನ್ನು ನೀನು ತಿಳಿಯದವ ನಲ್ಲ. ನಿನ್ನ ಪರಾಕ್ರಮವನ್ನು ನಾನೂ ತಿಳಿಯದವನಲ್ಲ. ನೀನು ನಿಜ ವಾಗಿ ನನಗೆ ಪ್ರಿಯವನ್ನುಂಟುಮಾಡುವವನಾದರೆ, ರಥದಿಂದಿಳಿದು ಧರ್ಮರಾಜನಬಳಿಗೆ ಹಿಂತಿರುಗಿ ಹೋಗು” ಎಂದನು. ಆಗ ಭೀಮನು “ಓ ಯಾದವೇಂದ್ರಾ! ಹಾಗೆಯೇ ಆಗಲಿ! ಕಾರ್ಯಸಿದ್ಧಿಗಾಗಿ ನೀನು ಹೊರಡು! ನಾನು ಧರ್ಮರಾಜನನ್ನು ನಿರಪಾಯವಾಗಿ ನೋಡಿಕೊಳ್ಳು ವೆನು.” ಎನಲು, ಸಾತ್ಯಕಿಯು “ಭೀಮಾ! ನಡೆ! ನಡೆ! ಬೇಗನೆ ನಡೆ! ನನಗೆ ಜಯವು ನಿಶ್ಚಯವು. ಇದೋ! ಆಗಲೇ ಶುಭಶಕುನಗಳೂ ಕಾಣು ತ್ತಿರುವುವು. ನನ್ನಲ್ಲಿ ಅತ್ಯಂತಮೈತ್ರಿಯುಳ್ಳ ನೀನು ನನ್ನ ವಶನಾಗಿರು ವಾಗ, ನನ್ನ ಜಯಕ್ಕೆ ತಡೆಯೇನಿದೆ? ಇನ್ನು ನಾನು ಹೊರಡುವೆನು. ಪಾಪಿಯಾದ ಸೈಂಧವನು ಅರ್ಜುನನಿಂದ ಹತನಾದಕೂಡಲೇ, ನಾನು ಹಿಂತಿ ರುಗಿಬಂದು, ಸಂತೋಷದಿಂದ ಧರ್ಮರಾಜನನ್ನು ಆಲಿಂಗಿಸಿಕೊಳ್ಳುವೆನು. ದ್ರೋಣನು ಮಹಾರಥನು. ಅವನ ವಿಷಯದಲ್ಲಿ ನೀನು ಬಹಳ ಎಚ್ಚರದಿಂ ದಿರಬೇಕು.” ಎಂದು ಹೇಳಿ, ಸಾತ್ಯಕಿಯು ಭೀಮನನ್ನು ಕೆಳಕ್ಕಿಳಿಸಿ, ತಾನು

ಮಾತ್ರ ಮುಂದೆಹೊರಟು, ಹುಲಿಯು ಜಿಂಕೆಗಳನ್ನು ನೋಡುವಂತೆ ನಿನ್ನ ಸೈನ್ಯವನ್ನು ನೋಡಿದನು. ಸಾತ್ಯಕಿಯು ವೇಗದಿಂದ ಕುರುಸೈನ್ಯದಲ್ಲಿ ಪ್ರವೇಶಿಸುವುದನ್ನು ನೋಡಿದಾಗ, ನಿನ್ನ ಸೈನ್ಯವೆಲ್ಲ ಭಯದಿಂದ ನಡುಗಿ, ಹಿಂದುಮುಂದುತೋರದಂತಿದ್ದಿತು. ಸಾತ್ಯಕಿಯು ಅರ್ಜುನನನ್ನು ಸೇರುವ ಆತುರದಿಂದ ಮುಂದುವರಿಯುತ್ತಿದ್ದನು.

ಇದು ನೂರ ಹನ್ನೆರಡನೆಯ ಅಧ್ಯಾಯವು.

{ಕೃತವರ್ಮನು ಸಾತ್ಯಕಿಯನ್ನು ತಡೆದುದು. ಅವರಿಬ್ಬರ ಯುದ್ಧವು.}

ಓ ಧೃತರಾಷ್ಟ್ರಮಹಾರಾಜಾ! ಅತ್ತಲಾಗಿ ಸಾತ್ಯಕಿಯು ಹೊರಟಕೂಡಲೆ, ಇತ್ತಲಾಗಿ ಧರ್ಮರಾಜನು ತನ್ನ ಸೈನ್ಯದೊಡನೆ ದ್ರೋಣನ ರಥವನ್ನು ಇದಿರಿಸುವುದಕ್ಕಾಗಿ ಹೊರಟನು. ಇಷ್ಟರಲ್ಲಿ ಇತ್ತಲಾಗಿ ಪಾಂಚಾಲಪುತ್ರನಾದ ಧೃಷ್ಟದ್ಯುಮ್ನನೂ, ವಸುದಾನನೆಂಬ ರಾಜನೂ, ಪಾಂಡವಸೈನ್ಯದ ಯೋಧರನ್ನು ಕುರಿತು, "ಎಲೈ ವೀರರೇ! ಬನ್ನಿರಿ! ಹೊಡೆಯಿರಿ! ಬೇಗನೆ ಓಡಿರಿ! ಅದೋ! ಸಾತ್ಯಕಿಯು ಮುಂದುವರಿಯುತ್ತಿರುವನು! ಅವನನ್ನು ಕೌರವಸೈನ್ಯದ ಅನೇಕಮಹಾರಥರು ತಡೆಯುವುದಕ್ಕಾಗಿ ಯತ್ನಿಸುತ್ತಿರುವರು ಸಾತ್ಯಕಿಯು ಅವರನ್ನು ಚದರಿಸಿ, ನಿರಾಯಾಸವಾಗಿ ಮುಂದೆ ಸಾಗುವಂತೆ ನೀವೆಲ್ಲರೂ ಸಹಾಯಮಾಡಬೇಕು" ಎಂದನು. ಸೇನಾಪತಿಯಾದ ಧೃಷ್ಟದ್ಯುಮ್ನನ ಈ ಶಾಸನವನ್ನು ಕೇಳಿದೊಡನೆ ಪಾಂಡವಸೈನ್ಯಗಳೆಲ್ಲ ಮುಂದುವರಿದುವು. ಅವರಲ್ಲಿ ಒಬ್ಬೊಬ್ಬರೂ "ಹೊಡೆಯಿರಿ! ಬಡಿಯಿರಿ! ಹಿಡಿಯಿರಿ! ಕೊಲ್ಲಿರಿ! ಓಡಿರಿ! ಹಿಂತಿರುಗಿ ಬನ್ನಿರಿ!" ಎಂದು ಒಬ್ಬರನ್ನೊಬ್ಬರು ಹುರಿಗೊಳಿಸುತ್ತ ಮುಂದೆ ನುಗ್ಗಿದರು. ಅದನ್ನು ನೋಡಿ ಕೌರವಸೈನ್ಯಗಳೂಕೂಡ ಬಾಣಧ್ವನಿಗಳನ್ನೂ, ಶಂಖಧ್ವನಿಗಳನ್ನೂ, ಇತರ ರಣವಾದ್ಯಧ್ವನಿಗಳನ್ನೂ ಮಾಡುತ್ತ ಸಾತ್ಯಕಿಯ ರಥವನ್ನಿದಿರಿಸಿದರು. ಅನೇಕ ಸೈನ್ಯಗಳು ಗುಂಪುಗೂಡಿ ಸಾತ್ಯಕಿಯ ರಥವನ್ನು ತಡೆದುವು. ಸಾತ್ಯಕಿಯ ರಥದ ಮುಂದೆ ದೊಡ್ಡ ಗದ್ದಲವೆದ್ದಿತು. ಆದರೇನು? ಮಹಾಧೀರ

ನಾದ ಸಾತ್ಯಕಿಯು ಕ್ಷಣಮಾತ್ರದಲ್ಲಿ ಅದನ್ನು ನೂರಾರುತುಂಡುಗಳಾಗಿ ಚದರಿಸಿ, ಆ ಸೈನ್ಯಕ್ಕೆ ಮುಂದಾಳುಗಳಾಗಿ ಬಂದ ಮಹಾಧನುರ್ಧಾರಿಗಳಾದ ಏಳುಮಂದಿ ವೀರರುಗಳನ್ನು ಕೊಂದುಬಿಟ್ಟನು. ಇನ್ನೂ ಅನೇಕ ರಾಜರನ್ನು ಯಮಪುರಿಗೆ ಕಳುಹಿಸಿದನು. ಆಗ ಸಾತ್ಯಕಿಯು ಒಮ್ಮೆ ಒಂದೇ ಬಾಣದಿಂದ ನೂರುಮಂದಿಯನ್ನು ಕೊಲ್ಲುವನು! ಇನ್ನೊಮ್ಮೆ ಒಬ್ಬನನ್ನೇ ನೂರಾರುಬಾಣಗಳಿಂದ ಕೊಲ್ಲುವನು! ಗಜಯೋಧರನ್ನು ಅವರ ಆನೆಗಳೊಡನೆಯೂ, ಅಶ್ವಯೋಧರನ್ನು ಅವರ ಕುದುರೆಗಳೊಡನೆಯೂ, ರಥಿಕರನ್ನು ಅವರ ರಥರಥಾಶ್ವಸಾರಥಿಗಳೊಡನೆಯೂ, ಪಶುಗಳ ಮಂದೆಯನ್ನು ಹೇಗೋ ಹಾಗೆ ಕೊಂದುಕೆಡಹುವನು. ಹೀಗೆ ತನ್ನ ಬಾಣವರ್ಷಗಳಿಂದ ಅದ್ಭುತಕಾರ್ಯವನ್ನು ತೋರಿಸುತ್ತಿರುವ ಆ ಸಾತ್ಯಕಿಯನ್ನು ತಡೆಯಲು, ನಿನ್ನವರಲ್ಲಿ ಯಾರಿಗೂ ಧೈರ್ಯವಿರಲಿಲ್ಲ. ಎಲ್ಲರೂ ಹೆದರಿ, ಸಾತ್ಯಕಿಯ ಬಾಣಗಳಿಂದ ನೊಂದು, ಯುದ್ಧರಂಗವನ್ನು ಬಿಟ್ಟು ಓಡಿಹೋದರು. ಆಗ ಸಾತ್ಯಕಿಯೊಬ್ಬನೇ ತಮಗಿದಿರಾಗಿದ್ದರೂ ಅನೇಕ ಸಾತ್ಯಕಿಗಳು ತಮ್ಮನ್ನಿದಿರಿಸುತ್ತಿರುವಂತೆ ಅವರಿಗೆ ತೋರಿತು. ನಿನ್ನ ಸೈನ್ಯಸಿಂದಲ್ಲಿ ಆ ಸಾತ್ಯಕಿಯ ತೇಜಸ್ಸಿಕ್ಕೆ ದಿಗ್ಭ್ರಮೆಹಿಡಿದಂತಾಯಿತು. ಸಾತ್ಯಕಿಯ ಬಾಣಗಳಿಂದ ನಮ್ಮ ಕಡೆಯ ಅನೇಕರಥಗಳು ಪುಡಿಪುಡಿಯಾದುವು. ರಥದ ಗದ್ದುಗೆಗಳು, ಚಕ್ರಗಳು, ಅದಕ್ಕೆ ಕಟ್ಟಿದ ಧ್ವಜಗಳು, ಶ್ವೇತಚ್ಛತ್ರಗಳು, ರಥದ ಹಿಂದಿನ ಬಂಡಿಗಳು, ಪತಾಕೆಗಳು, ಸ್ವರ್ಣಮಯವಾದ ಶಿರಸ್ತ್ರಾಣಗಳು, ಇವೆಲ್ಲವೂ ನಾನಾಕಡೆಗೆ ಚದರಿಬಿದ್ದಿದ್ದುವು ಅಲ್ಲದೆ ಚಂದನಾನುಲೇಪಿತಗಳಾಗಿ, ತೋಳ್ಬಳೆಗಳಿಂದ ಕೂಡಿ, ಆನೆಯ ಸುಂಡಿಲುಗಳಂತೆಯೂ, ಸರ್ಪದೇಹಗಳಂತೆಯೂ, ದುಂಡಗೆ ನಿಂಡಿದ ಎಷ್ಟೋ ತೋಳುಗಳು, ತೊಡೆಗಳೂ, ಭೂಮಿಯನ್ನೆಲ್ಲ ಮರೆಸುವಂತೆ ಅಲ್ಲಲ್ಲಿ ತುಂಡುತುಂಡಾಗಿಬಿದ್ದಿದ್ದುವು. ಕುಂಡಲಾಲಂಕೃತಗಳಾಗಿ, ಚಂದ್ರನಿಗೆಣೆಯಾದ ತಲೆಗಳು, ಉರುಳಾಡುತ್ತಿದ್ದುವು. ಪರ್ವತಗಳಂತೆ ಅಲ್ಲಲ್ಲಿ ಬಾಣಪ್ರಹಾರಗಳಿಂದ ಮುರಿದ ಮೈಯುಳ್ಳ ಆನೆಗಳು ಬಿದ್ದಿದ್ದುವು. ಮುತ್ತಿನ ಜಾಲರಿಗಳಿಂದ ಅಲಂಕೃತವಾದ ಚಿನ್ನದ ಕಡಿವಾಣಗಳಿಂದಲೂ, ವಿಚಿತ್ರಗಳಾದ ಎದೆಕಟ್ಟುಗಳಿಂದಲೂ ಕೂಡಿದ ಎಷ್ಟೋ ಕುದುರೆಗಳು ಮೃತಪ್ರಾಯವಾಗಿ ಬಿದ್ದಿದ್ದುವು. ಮಹಾರಾಜಾ! ಹೀಗೆ ಸಾತ್ಯಕಿಯು ನಿನ್ನ ಸೈನ್ಯ

ಗಳನ್ನೆಲ್ಲ ಧ್ವಂಸಮಾಡಿಕೊಂಡು, ಅರ್ಜುನನು ಹೋದ ದಾರಿಯನ್ನೇ ಹಿಡಿದು ಮುಂದೆ ಹೋದನು. ಇಷ್ಟರಲ್ಲಿ ದ್ರೋಣನು ಅವನನ್ನು ಬಂದು ತಡೆದನು. ಸಾತ್ಯಕಿಯೂ ಅವನಿಗಿದಿರಾದನು. ದ್ರೋಣನು ಮರ್ಮಭೇದಕಗಳಾದ ಐದು ತೀಕ್ಷ್ಣಬಾಣಗಳನ್ನು ಸಾತ್ಯಕಿಯಮೇಲೆ ಪ್ರಯೋಗಿಸಿದನು. ಅದಕ್ಕೆ ಪ್ರತಿಯಾಗಿ ಸಾತ್ಯಕಿಯು ಚೆನ್ನಾಗಿ ಸಾಣೆಹಿಡಿದು ಗರಿಗಟ್ಟಿದ ಏಳುಬಾಣಗಳನ್ನು ಬಿಟ್ಟನು. ದ್ರೋಣನು ಬೇರೆ ಆರುಬಾಣಗಳನ್ನು ತೆಗೆದು ಸಾತ್ಯಕಿಯನ್ನೂ, ಅವನ ನಾಲ್ಕು ಕುದುರೆಗಳನ್ನೂ, ಅವನ ಸಾರಥಿಯನ್ನೂ ಬಲವಾಗಿ ನೋಯಿಸಿದನು. ಅದನ್ನು ಸಹಿಸಲಾರದೆ ಸಾತ್ಯಕಿಯು ದೊಡ್ಡ ಸಿಂಹನಾದವನ್ನು ಮಾಡಿ, ದ್ರೋಣನಮೇಲೆ ಮೊದಲು ಹತ್ತು, ಆಮೇಲೆ ಆರು, ಅದಕ್ಕೆಮೇಲೆ ಎಂಟು ಆಮೇಲೆ ತಿರುಗಿ ಹತ್ತು, ಹೀಗೆ ಬಾಣಗಳನ್ನು ಬಿಟ್ಟನು. ಅಲ್ಲದೆ ಬೇರೊಂದು ಬಾಣದಿಂದ ದ್ರೋಣನ ಸಾರಥಿಯನ್ನೂ, ನಾಲ್ಕು ಬಾಣಗಳಿಂದ ಅವನ ಕುದುರೆಗಳನ್ನೂ, ಒಂದುಬಾಣದಿಂದ ಅವನ ಧ್ವಜವನ್ನೂ ಪ್ರಹರಿಸಿದನು. ಇತ್ತಲಿಂದ ದ್ರೋಣನೂಕೂಡ, ಅನೇಕ ಬಾಣಗಳನ್ನು ಬಿಟ್ಟು ಸಾತ್ಯಕಿಯ ರಥರಥಾಶ್ವಸಾರಥಿಗಳನ್ನೂ, ಧ್ವಜಗಳನ್ನೂ ಮುಚ್ಚಿಬಿಟ್ಟನು. ಮಿಡಿತೆಗಳಂತೆ ಆ ಬಾಣಗಳು ಸಾತ್ಯಕಿಯ ರಥವನ್ನೆಲ್ಲ ಮುಚ್ಚಿಕೊಂಡುವು. ಸಾತ್ಯಕಿಯೂ ಅದರಂತೆಯೇ ದ್ರೋಣನ ರಥವನ್ನು ಬಾಣಗಳಿಂದ ಮುಚ್ಚಿದನು. ತಿರುಗಿ ದ್ರೋಣನು ಶ್ರೀಕೃಷ್ಣನಂತೆ ಮಹಾಪರಾಕ್ರಮಿಯಾದ ಸಾತ್ಯಕಿಯಮೇಲೆ ಅತ್ಯಾಕ್ರೋಶದಿಂದ ತೀಕ್ಷ್ಣಬಾಣಗಳನ್ನು ಪ್ರಯೋಗಿಸಿ, ಆ ಸಾತ್ಯಕಿಯನ್ನು ನೋಡಿ ಹೀಗೆಂದನು. "ಹೇ ಸಾತ್ಯಕೀ! ನಿನ್ನ ಆಚಾರ್ಯನಾದ ಅರ್ಜುನನು ನನ್ನೊಡನೆ ಯುದ್ಧಕ್ಕೆ ನಿಂತು, ಯುದ್ಧಮಾಡುತ್ತಿದ್ದಾಗಲೇ ಕುತ್ಸಿತಪುರುಷನಂತೆ ಇದ್ದಕ್ಕಿದ್ದಹಾಗೆ ಯುದ್ಧವನ್ನು ನಿಲ್ಲಿಸಿ,ನನ್ನ ಬಲಗಡೆಯಿಂದ ಸುತ್ತಿಕೊಂಡು ಹೊರಟುಹೋದನು. ಅವನಂತೆ ಈಗ ನೀನೂ ಯುದ್ಧವನ್ನು ಬಿಟ್ಟು ಹೋಗದಿದ್ದರೆಮಾತ್ರ, ನನ್ನಿಂದ ಬದುಕಿಹೋಗಲಾರೆ" ಎಂದನು. ಅದಕ್ಕಾ ಸಾತ್ಯಕಿಯು "ಓ ಬ್ರಾಹ್ಮಣೋತ್ತಮಾ! ಧರ್ಮರಾಜನ ಆಜ್ಞೆಯಿಂದ ಈಗ ನಾನು ಆ ಅರ್ಜುನನನ್ನು ಸಂಧಿಸುವುದಕ್ಕಾಗಿಯೇ ಹೋಗುತ್ತಿರುವೆನು. ಆದಕ್ಕೆ ಕಾಲವಿಳಂಬವಾಗಬಾರದು! ಆದರಿಂದ ನಾನೂ ಇಲ್ಲಿ ನಿನ್ನೊಡನೆ ಯುದ್ಧವನ್ನು ಬಿಟ್ಟು

ಆತುರದಿಂದಲೇ ಹೋಗಬೇಕಾಗಿದೆ. ನಿನಗೆ ಮಂಗಳವಾಗಲಿ! "ಗುರುವಿನಂತೆ ಶಿಷ್ಯ" ನೆಂಬ ಗಾದೆಯನ್ನು ನೀನು ಕೇಳಿಲ್ಲವೆ? ನನ್ನ ಗುರುವಾದ ಅರ್ಜುನನು ಹೇಗೋ ಹಾಗೆ, ನಾನೂ ಮುಂದೆ ಹೋಗುವೆನು" ಎಂದನು. ಇಷ್ಟುಮಾತ್ರವನ್ನು ಹೇಳಿ ಸಾತ್ಯಕಿಯು, ದ್ರೋಣನನ್ನು ಇದಿರಿಸದೆ ಆತುರದಿಂದ ಮುಂದೆಹೋಗುತ್ತ, ಸಾರಥಿಯನ್ನು ಕುರಿತು "ಸೂತಾ! ನಾನು ಹೇಳುವ ಮಾತನ್ನು ಸಾವಧಾನವಾಗಿ ಕೇಳು. ದ್ರೋಣನು ಹೇಗೂ ನನ್ನನ್ನು ತಡೆಯದೆ ಬಿಡಲಾರನು. ನನ್ನನ್ನು ಇಲ್ಲಿಯೇ ನಿಲ್ಲಿಸಿಕೊಳ್ಳುವುದಕ್ಕಾಗಿ ಅವನು ಸರ್ವವಿಧದಿಂದಲೂ ಪ್ರಯತ್ನಿಸುವನು. ಆದುದರಿಂದ ಬಹಳ ಜಾಗರೂಕನಾಗಿ ರಥವನ್ನು ಬಿಡು. ಅದೋ! ಮುಂದೆ ಅವಂತೀದೇಶದ ಯೋಧರ ಸೈನ್ಯವು ಕಾಣುವುದು ನೋಡು. ಅದಕ್ಕೆ ಪಕ್ಕದಲ್ಲಿರುವ ದೊಡ್ಡ ಸೈನ್ಯವು ದಾಕ್ಷಿಣಾತ್ಯರದು. ಅದರ ಹಿಂದಕ್ಕೆ ಕಾಣುವುದು ಬಾಹ್ಲೀಕದೇಶದ ದೊಡ್ಡ ಸೈನ್ಯವು. ಅದರ ಪಕ್ಕದಲ್ಲಿ ಕರ್ಣನ ದೊಡ್ಡ ಸೈನ್ಯವು ನಿಂತಿರುವುದು. ಈ ಸೈನ್ಯಗಳೆಲ್ಲವೂ ಒಂದಕ್ಕೊಂದು ಬೇರೆಬೇರೆಯಾಗಿದ್ದಂತೆ ತೋರಿದರೂ, ಒಂದಕ್ಕೊಂದು ಬೆಂಬಲವಾಗಿದ್ದು ಸಹಾಯಮಾಡುವುವು. ಯುದ್ಧರಂಗವನ್ನು ಬಿಟ್ಟು ಓಡಿಹೋಗತಕ್ಕವುಗಳಲ್ಲ. ಇದರಲ್ಲಿ ಮೆಲ್ಲಗೆ ಅವಕಾಶಮಾಡಿಕೊಂಡು ಕುದುರೆಗಳನ್ನು ಮುಂದೆ ಬಿಡು. ಬಹಳ ಮೆಲ್ಲಗಾಗಲಿ, ಅತಿ ವೇಗದಿಂದಾಗಲಿ ಹೋಗದೆ, ನಡುತರದ ವೇಗವನ್ನು ಹಿಡಿದು ನನ್ನನ್ನು ಅಲ್ಲಿಗೆ ಸೇರಿಸಬೇಕು. ವಿವಿಧಾಯುಧಗಳನ್ನು ಹಿಡಿದು ಸಿದ್ಧರಾಗಿ ನಿಂತಿರುವ ಆ ಬಾಹ್ಲೀಕರನ್ನೂ, ಕರ್ಣನೇ ಮೊದಲಾದ ಅನೇಕಮಹಾರಥರನ್ನೂ, ದಾಕ್ಷಿಣಾತ್ಯಯೋಧರನ್ನೂ ದಾಟಿಕೊಂಡು ನಾವು ಮುಂದೆ ಹೋಗಬೇಕು. ಅದೋ! ಅಲ್ಲಿ ಗಜರಥತುರಗಗಳಿಂದಲೂ, ನಾನಾದೇಶದಿಂದ ಬಂದ ಪದಾತಿದಳಗಳಿಂದಲೂ ತುಂಬಿದ ದೊಡ್ಡ ಸೈನ್ಯವಿರುವುದು ನೋಡು. ಆಕಡೆಯಿಂದ ನಾವು ವ್ಯೂಹವನ್ನು ಭೇದಿಸಿಕೊಂಡು ಹೋಗಬೇಕಾಗಿದೆ. ಅದೋ! ಅಲ್ಲಿ ಕೆಲವು ವೀರರು ಮಿತಿಮೀರಿದ ಸಂತೋಷದಿಂದ ಮೈಮರೆತು, ನಮ್ಮೊಡನೆ ಯುದ್ಧಮಾಡುವ ಆತುರವೇ ಇಲ್ಲದವರಂತೆ ಕಾಣುವರು. ಈಗ ನನಗೂ ಅಷ್ಟು ಮಂದಿ ಶತ್ರುಗಳೊಡನೆ ಯುದ್ಧಮಾಡಲು ಇಷ್ಟವಿಲ್ಲ. ಆದುದರಿಂದ ಬಹಳ ದುರ್ಬಲರೆಂದು ತೋರುವ ಒಂದೇ ಸೇನೆಯನ್ನುಮಾತ್ರ ಇದಿರಿಸಿ,

ಅದನ್ನು ಸುಲಭವಾಗಿ ಸದೆಬಡಿದು, ಬೇರೆ ಎಲ್ಲಾ ಧನುರ್ಧಾರಿಗಳೂ ನೋಡುತ್ತಿರುವಹಾಗೆಯೇ ಮುಂದೆ ಸಾಗುವೆನು. ಅದೋ! ಅಲ್ಲಿ ಅತ್ಯುಗ್ರವೂ, ಮಹತ್ತೂ ಆದ ಕರ್ಣನ ಸೇನಾಮಧ್ಯದಿಂದ ರಥವನ್ನು ಬಿಡು. ಅಲ್ಲಿ ಅತಿ ಕೋಪಾವಿಷ್ಟರಾಗಿ ನಿಂತಿರುವ ಮಹಾರಥರೆನಿಸಿದ ದಾಕ್ಷಿಣಾತ್ಯವೀರರನ್ನು ಜಯಿಸಿಕೊಂಡು, ಆಮೇಲೆ ನಾವು ಅರ್ಜುನನನ್ನು ಸೇರಬೇಕಾಗಿದೆ" ಎಂದನು. ಧೃತರಾಷ್ಟ್ರಮಹಾರಾಜಾ! ಸಾತ್ಯಕಿ ಹೇಳಿದಂತೆಯೇ ಅವನ ಸಾರಥಿಯು ದ್ರೋಣನನ್ನು ಬಿಟ್ಟು, ರಥವನ್ನು ಮುಂದೆ ಸಾಗಿಸಿದನು. ದ್ರೋಣನೂ ಆ ರಥವನ್ನು ತಡೆಯುವುದಕ್ಕಾಗಿ ಹಿಂದಿನಿಂದ ಬಾಣಗಳನ್ನು ಬಿಡುತ್ತ ಅದನ್ನು ಹಿಂಬಾಲಿಸಿ ಹೋದನು. ಸಾತ್ಯಕಿಯಾದರೋ ಪ್ರಬಲವಾದ ದಾಕ್ಷಿಣಾತ್ಯಸೈನ್ಯವನ್ನೂ, ಕರ್ಣನ ದೊಡ್ಡಸೈನ್ಯವನ್ನೂ, ತನ್ನ ತೀಕ್ಷ್ಣಬಾಣಗಳಿಂದ ಭೇದಿಸಿ, ದಾರಿಯನ್ನು ಮಾಡಿಕೊಂಡು, ಮೇರೆಯಿಲ್ಲದೆ ನಿಂತಿರುವ ಆ ಕೌರವಸೈನ್ಯದ ನಡುವೆ ಪ್ರವೇಶಿಸಿದನು. ಆ ಸೈನ್ಯಗಳನ್ನು ತನ್ನ ಬಾಣಪ್ರಹಾರದಿಂದ ನಾನಾಕಡೆಗಳಿಗೆ ಚದರಿಸುತ್ತಿದ್ದನು. ಹೀಗೆ ಸಾತ್ಯಕಿಯು ನಿರಾಯಾಸವಾಗಿ ಮುಂದೆ ಸಾಗುತ್ತಿರುವುದನ್ನೂ, ತನ್ನ ಕಡೆಯ ಸೈನ್ಯಗಳು ಓಡಿಹೋಗುತ್ತಿರುವುದನ್ನೂ ನೋಡಿ, ನಮ್ಮ ಕಡೆಯ ಕೃತವರ್ಮನಿಗೆ ದುಸ್ಸಹವಾದ ಕೋಪವುಂಟಾಯಿತು. ಅವನು ಥಟ್ಟನೆ ಮುಂದೆಬಂದು ಸಾತ್ಯಕಿಯ ರಥವನ್ನು ತಡೆದನು. ಅವನ ಸೈನ್ಯಗಳೆಲ್ಲ ಸಾತ್ಯಕಿಯ ರಥವನ್ನು ಮುತ್ತಿ ನಿಂತುವು. ಒಡನೆಯೇ ಸಾತ್ಯಕಿಯು ಕೃತವರ್ಮನನ್ನು ಆರು ಬಾಣಗಳಿಂದ ಹೊಡೆದು, ಬೇರೆ ನಾಲ್ಕುಬಾಣಗಳಿಂದ ಅವನ ನಾಲ್ಕು ರಥಾಶ್ವಗಳನ್ನೂ ಪ್ರಹರಿಸಿದನು. ತಿರುಗಿ ಹದಿನಾರುಬಾಣಗಳನ್ನು ಕೃತವರ್ಮನ ಎದೆಗೆ ಗುರಿಯಿಟ್ಟು ಹೊಡೆದನು. ಇದನ್ನು ಸಹಿಸಲಾರದೆ ಕೃತವರ್ಮನು ಸೂರ್ಯಾಗ್ನಿಗಳಿಗೆಸಮಾನ ತೇಜಸ್ಸುಳ್ಳ ವತ್ಸದಂತವೆಂಬ ಆಯುಧವನ್ನು ಬಿಲ್ಲಿಗೆ ಸಂಧಿಸಿ, ಕಿವಿಯವರೆಗೆ ಎಳೆದು ಸಾತ್ಯಕಿಯ ಎದೆಗೆ ಗುರಿಯಿಟ್ಟು ಹೊಡೆದನು. ಆ ಬಾಣವು ಸಾತ್ಯಕಿಯ ಕವಚವನ್ನು ಭೇದಿಸಿಕೊಂಡು, ಅವನ ದೇಹದಲ್ಲಿ ನಾಟಿ, ಆ ರಕ್ತದಿಂದ ತೊಯ್ದು, ನೆಲದಲ್ಲಿಯೂ ಹುದುಗಿತು. ಆಮೇಲೆ ಕೃತವರ್ಮನು ಅನೇಕ ಬಾಣಗಳಿಂದ ಸಾತ್ಯಕಿಯ ಕೈಯಲ್ಲಿದ್ದ ಧನುರ್ಬಾಣಗಳನ್ನು ಕತ್ತ

ರಿಸಿ ಕೆಡಹಿದನು. ಹತ್ತು ತೀಕ್ಷ್ಣಬಾಣಗಳನ್ನು ಸಾತ್ಯಕಿಯ ಎದೆಗೆ ಹೊಡೆದನು. ತನ್ನ ಧನುಸ್ಸು ಮುರಿದೊಡನೆ ಸಾತ್ಯಕಿಯು ಒಂದು ಶಕ್ತ್ಯಾಯುಧವನ್ನು ಕೈಗೆತ್ತಿಕೊಂಡು, ಕೃತವರ್ಮನ ಬಲದೋಳಿಗೆ ಗುರಿಯಿಟ್ಟು ಅದನ್ನು ಬೀಸಿದುದಲ್ಲದೆ, ಈ ನಡುವೆ ಹೊಸಬಿಲ್ಲನ್ನು ಕೈಗೆತ್ತಿಕೊಂಡು, ನೂರುಸಾವಿರಲೆಕ್ಕದಿಂದ ಬಾಣಗಳನ್ನು ಬಿಡುತ್ತ, ಕೃತವರ್ಮನನ್ನು ಅವನ ರಥದೊಡನೆ ಬಾಣವರ್ಷದಲ್ಲಿ ಮರೆಸಿಬಿಟ್ಟನು. ಒಂದು ಭಲ್ಲಾಯುಧದಿಂದ ಕೃತವರ್ಮನ ಸಾರಥಿಯ ತಲೆಯನ್ನು ಕತ್ತರಿಸಿದನು. ಸಾರಥಿಯು ಹತನಾಗಿ ಬಿದ್ದೊಡನೆ, ಕುದುರೆಗಳು ಅಂಕೆಯಿಲ್ಲದೆ ರಣರಂಗವನ್ನು ಬಿಟ್ಟು, ಯಥೇಚ್ಛವಾಗಿ ಓಡಲಾರಂಭಿಸಿದುವು. ಆದರೆ, ಮಹಾಧೀರನಾದ ಆ ಭೋಜರಾಜನು (ಕೃತವರ್ಮನು) ತಾನೇ ಕುದುರೆಗಳ ಹಗ್ಗವನ್ನು ಹಿಡಿದು, ಪ್ರಯತ್ನದಿಂದ ರಣರಂಗಕ್ಕೆ ಹಿಂತಿರುಗಿ ಬಂದು, ತಿರುಗಿ ಯುದ್ಧಕ್ಕೆ ಸಿದ್ಧನಾಗಿ ಬಿಲ್ಲನ್ನು ಹಿಡಿದು ನಿಂತನು. ಈ ಸಾಮರ್ಥ್ಯವನ್ನು ನೋಡಿ ಸೈನ್ಯಗಳೆಲ್ಲವೂ ಅವನನ್ನು ಬಹಳವಾಗಿ ಕೊಂಡಾಡಿದುವು. ಹೀಗೆ ಕೃತವರ್ಮನು ಒಂದು ಮುಹೂರ್ತಕಾಲದೊಳಗಾಗಿ ಕುದುರೆಗಳನ್ನು ಸ್ವಾಧೀನಕ್ಕೆ ತಂದುಕೊಂಡು ನಿರ್ಭಯನಾಗಿ ಯುದ್ಧಕ್ಕೆ ನಿಂತನು. ಇದು ನಮ್ಮ ಶತ್ರುಗಳಿಗೆಲ್ಲ ಬಹಳ ಭಯವನ್ನುಂಟುಮಾಡಿತು. ಇಷ್ಟರಲ್ಲಿ ಸಾತ್ಯಕಿಯು ಅವನನ್ನು ಬಿಟ್ಟು ಮುಂದೆ ಹೊರಟುಹೋದನು. ಆಮೇಲೆ ಕೃತವರ್ಮನು ಭೀಮನನ್ನು ಇದಿರಿಸುವುದಕ್ಕಾಗಿ ಓಡಿದನು. ಇತ್ತಲಾಗಿ ಸಾತ್ಯಕಿಯು ಹೀಗೆ ಭೋಜಸೈನ್ಯಗಳನ್ನು ದಾಟಿ, ಕಾಂಭೋಜರ ದೊಡ್ಡ ಸೈನ್ಯಕ್ಕೆ ದಿರಾದನು. ಅಲ್ಲಿ ಅನೇಕಮಹಾರಥರು ಒಂದಾಗಿ ಬಂದು ಸಾತ್ಯಕಿಯನ್ನು ತಡೆದು, ಅವನನ್ನು ಹಿಂದಕ್ಕೆ ಓಡಿಸಲು ಪ್ರಯತ್ನಿಸಿದರು. ಆದರೇನು? ಸಾತ್ಯಕಿಯು ತಾನಿದ್ದ ಸ್ಥಳವನ್ನು ಬಿಟ್ಟು ಕದಲಲಿಲ್ಲ! ಇಷ್ಟರಲ್ಲಿ ದ್ರೋಣನು ತನ್ನ ಸೈನ್ಯನಿರ್ವಾಹಭಾರವನ್ನು ಕೃತವರ್ಮನಿಗೆ ಒಪ್ಪಿಸಿ, ಸಾತ್ಯಕಿಯನ್ನು ತಡೆಯಬೇಕೆಂದು ಓಡಿಬಂದನು. ಹೀಗೆ ಬರುತ್ತಿದ್ದ ದ್ರೋಣನನ್ನು ಪಾಂಡವಸೈನ್ಯದಲ್ಲಿದ್ದ ಪ್ರಮುಖರನೇಕರು ಬಹುಪ್ರಯತ್ನದಿಂದ ಬಂದು ತಡೆದರು. ಇತ್ತಲಾಗಿ ಭೀಮಸೇನನೇ ಮೊದಲಾದವರೂ, ಪಾಂಚಾಲರೂ, ಕೃತವರ್ಮನೊಡನೆ ಯುದ್ಧವನ್ನಾರಂಭಿಸಿದರು. ಕೃತವರ್ಮನ ಮುಂದೆ ಅವರ ಪರಾ

ಕ್ರಮವೇನೂ ಸಾಗಲಿಲ್ಲ. ಕೃತವರ್ಮನು ಅವರನ್ನೆಲ್ಲ ತನ್ನ ಬಾಣಗಳಿಂದ ತಡೆದು ನಿಲ್ಲಿಸಿಬಿಟ್ಟನು. ಮೊದಲೇ ಯುದ್ಧಶ್ರಮದಿಂದ ಬಳಲಿ ಉತ್ಸಾಹ ಹೀನರಾಗಿದ್ದ ಆವರೆಲ್ಲರೂ ಕೃತವರ್ಮನಿಂದ ನಿಗ್ರಹಿಸಲ್ಪಟ್ಟರು. ಆದರೂ ತಮ್ಮ ಕುಲೋನ್ನತಿಗೂ, ತಮ್ಮ ಕೀರ್ತಿಗೂ, ಕುಂದಕವು ಬರಲಾರ ದೆಂಬ ಧೀರಮನಸ್ಸಿನಿಂದ ಅಲ್ಲಿಯೇ ನಿಂತಿದ್ದರು. ಆ ಕಾಲದಲ್ಲಿ ಕೃತವರ್ಮ ನನ್ನು ಯುದ್ಧರಂಗದಲ್ಲಿ ಇದಿರಾಗಿ ನಿಂತು ನೋಡುವುದಕ್ಕೂ ಅವರಿಗೆ ಸಾಧ್ಯವಿಲ್ಲದಂತಿದ್ದಿತು.

ಇದು ನೂರ ಹದಿಮೂರನೆಯ ಅಧ್ಯಾಯವು.

---

(ಧೃತರಾಷ್ಟ್ರನು ಮಹತ್ತಾದ ತನ್ನ ಸೈನ್ಯದ ಪರಾಜಯಕ್ಕಾಗಿ ಶೋಕಿಸಿದುದು. ಸಂಜಯನು ಧೃತರಾಷ್ಟ್ರನ ಚಪಲ ಬುದ್ಧಿಗಾಗಿ ಅವನನ್ನು ನಿಂದಿಸಿದುದು.)

ಆಗ ಧೃತರಾಷ್ಟ್ರನು ಸಂಜಯನನ್ನು ಕುರಿತು "ಸಂಜಯಾ! ನಮ್ಮ ಸೈನ್ಯವಾದರೋ ವೀರ್ಯ ಶೌರ್ಯಾದಿ ಸಕಲ ಗುಣಗಳಿಂದಲೂ ಮೇಲೆನಿ ಸಿರುವುದು. ಶತ್ರುಸೇನೆಗಿಂತಲೂ ಎಷ್ಟೋ ಬಲವತ್ತರವಾದುದು. ಸಂಖ್ಯೆಯ ಲ್ಲಿಯೂ ಅಧಿಕವಾದುದು. ದಂಡನೀತಿಗೆ ತಕ್ಕಂತೆ ದೃಢವಾದ ವ್ಯೂಹವುರಚನೆ ಯುಳ್ಳದು. ಬಹುದೇಶಗಳಿಂದ ಬಂದು, ನಮ್ಮ ಅನುರಾಗಕ್ಕೆ ಪಾತ್ರ ರಾಗಿ ಯಾವಾಗಲೂ ನಮ್ಮಿಂದ ಆದರಿಸಲ್ಪಟ್ಟ ಯೋಧರಿಂದ ತುಂಬಿದುದು. ಉತ್ತಮಸ್ವಭಾವವುಳ್ಳುದು. ಆಕಾರದಲ್ಲಿಯೂ ಅದ್ಭುತವಾದುದು. ಆ ಸೈನ್ಯದ ಪರಾಕ್ರಮವನ್ನು ಹಿಂದೆ ಅನೇಕಾವರ್ತಿ ಪ್ರತ್ಯಕ್ಷವಾಗಿ ನೋಡಿ ತಿಳಿದಿರುವೆವು. ಆ ನಮ್ಮ ಸೈನ್ಯದಲ್ಲಿ ಯುದ್ಧಮಾಡತಕ್ಕವರು ಅತಿವೃದ್ಧರೂ ಅಲ್ಲ! ಬಾಲಕರೂ ಅಲ್ಲ! ಮಧ್ಯವಯಸ್ಕರು. ಅದರಲ್ಲಿ ಮೈಯೊಣಗಿ ಕೃಶರಾದವರಿಲ್ಲ. ಬಹಳವಾಗಿ ಬೊಜ್ಜುಬೆಳೆದು ಮೈಯುಬ್ಬಿದವರೂ ಇಲ್ಲ. ಎಲ್ಲರೂ ದೇಹಲಾಘವವುಳ್ಳವರು. ದುಂಡಗೆ ಅಗಲವಾದ ಮೈಕಟ್ಟುಳ್ಳ ವರು. ದೇಹದಲ್ಲಿ ಒಳ್ಳೇ ಸಾರವುಳ್ಳವರು. ರೋಗಸಂಬಂಧವಿಲ್ಲದವರು. ಎಲ್ಲಾ ಸನ್ನಾಹಗಳಿಂದಲೂ, ಬಹುವಿಧ ಶಸ್ತ್ರಸಾಮಗ್ರಿಗಳಿಂದಲೂ ಕೂಡಿ,

ವಿವಿದ ಶಸ್ತ್ರಸಂಗ್ರಹಣವಿದ್ಯೆಗಳಲ್ಲಿ ನೈಪುಣ್ಯವುಳ್ಳವರು,. ವಾಹನಗಳನ್ನೇ ರುವುದು, ಇಳಿಯುವುದು, ಮುಂದೆ ಸರಿಯುವುದು, ನಡುನಡುವೆ ಹಾರುವುದು, ಶತ್ರುಗಳನ್ನು ಪ್ರಹರಿಸುವುದು, ದಂಡೆತ್ತುವುದು, ಉಚಿತಸಮಯದಲ್ಲಿ ಯುದ್ಧರಂಗದಿಂದ ಹಿಂದೆ ಸರಿಯುವುದು, ಇಂತಹ ಕಾರ್ಯಗಳಲ್ಲಿ ಬಹಳ ಸಮರ್ಥರು. ಗಜತುರಗ ರಥಯುದ್ಧಗಳಲ್ಲಿ ಚೆನ್ನಾಗಿ ಪರೀಕ್ಷಿಸಲ್ಪಟ್ಟ ಸಾಮರ್ಥ್ಯವುಳ್ಳವರು. ಕತ್ತಿ ಗುರಾಣಿಗಳ ಯುದ್ಧದಲ್ಲಿಯೂ, ಬಾಹುಯುದ್ಧದಲ್ಲಿಯೂ ಒಳ್ಳೇ ನೈಪುಣ್ಯವುಳ್ಳವರು. ನಾವೂ ಆಯಾ ಸೈನಿಕರ ಸಾಮರ್ಥ್ಯವನ್ನೆಲ್ಲ ನಾನಾವಿಧದಿಂದ ಪರೀಕ್ಷಿಸಿ, ಅವರವರಿಗೆ ತಕ್ಕ ವೇತನಗಳನ್ನು ನಿರ್ಣಯಿಸಿ, ಆ ಸೈನ್ಯಗಳನ್ನು ಆದರಿಸುತ್ತಿರುವೆವು. ಕೇವಲ ಸಲ್ಲಾಪದಿಂದಾಗಲಿ, ಉಪಕಾರದ ಆಶೆಯಿಂದಾಗಲಿ, ಇತರ ಕಾರಣದಿಂದಾಗಲಿ ನಮ್ಮಿಂದ ನಿಯಮಿಸಲ್ಪಟ್ಟವರಲ್ಲ. ನಾವು ಯಾವಾಗಲೂ ಅವರಲ್ಲಿ ಯಾರನ್ನೂ ಆದರಿಸದೆ ಬಿಟ್ಟವರಲ್ಲ. ಅವರಿಗೆ ತಕ್ಕ ಭತ್ಯವನ್ನು ಕೊಡದಿದ್ದವರಲ್ಲ. ಅಲ್ಲದೆ ನಮ್ಮ ಸೈನ್ಯದಲ್ಲಿರತಕ್ಕವರೆಲ್ಲರೂ ಸತ್ಕುಲದಲ್ಲಿ ಹುಟ್ಟಿ, ಆರ್ಯಸ್ವಭಾವವುಳ್ಳವರು. ತುಷ್ಟಿಯಿಂದಲೂ, ಪುಷ್ಟಿಯಿಂದಲೂ ಕೂಡಿದವರು. ಗರ್ವದಿಂದ ಅವಿಧೇಯರಾದವರಾರೂ ಇಲ್ಲ, ನಮ್ಮಿಂದ ಆ ಸೈನಿಕರಿಗೆ ಯೋಗ್ಯವಾದ ಮರ್ಯಾದೆಗಳೂ, ಉಪಚಾರಗಳೂ ನಡೆಯುತ್ತಿರುವುವು. ನಮ್ಮ ಸೈನ್ಯವೆಲ್ಲ ಒಳ್ಳೇ ಯಶಸ್ಸಿನಿಂದಲೂ, ಉದಾರಮನಸ್ಸಿನಿಂದಲೂ ಕೂಡಿದುದು. ಒಳ್ಳೇ ಉತ್ತಮಗುಣವುಳ್ಳವರೂ, ಪುಣ್ಯಕರ್ಮಿಗಳೂ, ಲೋಕಪಾಲರಿಗೆ ಸಮಾನರೂ ಆದ ಉತ್ತಮ ಮಂತ್ರಿಗಳಿಂದ ನಮ್ಮ ಸೈನ್ಯವೆಲ್ಲ ರಕ್ಷಿಸಲ್ಪಡುವುದು. ನನ್ನಲ್ಲಿ ನಿಷ್ಕಲ್ಮಷವಾದ ಪ್ರೇಮದಿಂದ ನಮಗೆ ಹಿತವನ್ನೇ ಬಯಸುತ್ತಿರುವ ಅನೇಕರಾಜರ ರಕ್ಷಣೆಯಲ್ಲಿರತಕ್ಕುದು. ಆ ರಾಜರೆಲ್ಲರೂ ತಾವೇ ಇಷ್ಟಪಟ್ಟು, ತಮ್ಮ ಸೈನ್ಯದೊಡನೆಯೂ, ಅನುಚರರೊಡನೆಯೂ ನಮ್ಮಲ್ಲಿಗೆ ಬಂದಿರುವರು. ನಾನಾದಿಕ್ಕುಗಳಿಂದ ಬಂದ ನದಿಗಳು ಸಮುದ್ರವನ್ನು ಹೇಗೋ ಹಾಗೆ, ಆ ಸೈನ್ಯಗಳು ಅನೇಕ ದೇಶಗಳಿಂದ ನಮ್ಮಲ್ಲಿಗೆ ಬಂದಿರುವುವು. ರೆಕ್ಕೆಯಿಲ್ಲದ ಪಕ್ಷಿಗಳಿಗೆ ಸಮಾನವಾದ ರಥಗಳು, ಕುದುರೆಗಳು, ಮದದಾನೆಗಳು, ಇವೆಲ್ಲವೂ ನಮ್ಮಲ್ಲಿ ಅಪಾರವಾಗಿರುವುವು. ಇಂತಹ ದೊಡ್ಡ ಸೈನ್ಯವೇ ಪಾಂಡವಪಕ್ಷದವರಿಂದ

ಆಗಾಗ ಹತವಾಗುತ್ತಿದ್ದಮೇಲೆ, ಲೋಕದಲ್ಲಿ ಅದೃಷ್ಟಕ್ಕಿಂತಲೂ ಮೇಲೆ ಯಾವುದುಂಟು? ನಮ್ಮ ಸೈನ್ಯವಾದರೋ ಮಹಾಸಾಗರಕ್ಕೆ ಸಮಾನವಾ ದುದು. ಯುದ್ಧವೀರರೇ ಅದಕ್ಕೆ ಅಕ್ಷಯವಾದ ನೀರು! ವಾಹನಗಳೇ ಅಲೆಗಳು! ಯಂತ್ರಗಳು, ಕತ್ತಿ, ಗದೆ, ಶಕ್ತಿ, ಬಾಣ, ಪ್ರಾಸ, ಮೊದಲಾದ ಆಯುಧಗಳೇ ಮೀನುಗಳು! ಧ್ವಜಗಳು, ಯುದ್ಧವೀರರ ಆಭರಣಗಳು ಮೊದಲಾದುವೇ ಒಳಗಿನ ರತ್ನಗಳು! ಆನೆ ಕುದುರೆ ಮೊದಲಾದ ವಾಹನಗಳ ಓಡಾಟದಿಂದ ಹುಟ್ಟಿದ ವಾಯುವೇಗದಿಂದ ಕ್ಷುಬ್ಧವಾದ ಆ ಸಮುದ್ರಕ್ಕೆ ದ್ರೋಣನೇ ಅಗಾಧವಾದ ತಳಭಾಗವು! ಕೃತವರ್ಮನೇ ದೊಡ್ಡ ಮಡು! ಜಲಸಂಧನೇ ಅದರಲ್ಲಿರುವ ದೊಡ್ಡ ಮೊಸಳೆ! ಕರ್ಣನೇ ಅದರಲ್ಲಿ ಹುಟ್ಟಿದ ಚಂದ್ರನಿಗೆ ಸಮಾನನು. ಇಂತಹ ನಮ್ಮ ಸೇನಾಸಮುದ್ರವನ್ನು ಅರ್ಜು ನನೂ, ಸಾತ್ಯಕಿಯೂ ಒಂದೇ ರಥದಿಂದ ಭೇದಿಸಿಕೊಂಡುಹೋದರೆಂದ ಮೇಲೆ, ಇನ್ನು ಅದೃಷ್ಟಕ್ಕಿಂತ ಮೇಲೆ ಯಾವುದುಂಟು? ಸಂಜಯಾ! ಸಾತ್ಯ ಕಿಯೂ, ಸವ್ಯಸಾಚಿಯೂ ಇಬ್ಬರೂ ಸೇರಿದಮೇಲೆ, ನನ್ನ ಸೈನ್ಯದಲ್ಲಿ ಯಾವನೂ ಉಳಿಯುವಹಾಗೆ ತೋರಲಿಲ್ಲ. ಮಹಾವೇಗಶಾಲಿಗಳಾದ ಅರ್ಜುನಸಾತ್ಯಕಿಗಳಿಬ್ಬರೂ ನಿರಾಯಾಸವಾಗಿ ಮುಂದೆ ಸಾಗಿದುವನ್ನೂ, ನಮ್ಮ ಅಳಿಯನಾದ ಸಿಂಧುರಾಜನು ಅರ್ಜುನನ ಗಾಂಡೀವಕ್ಕೆ ಇದಿರಾಗಿರು ವುದನ್ನೂ ನೋಡಿದಮೇಲೆ, ನನ್ನ ಮಕ್ಕಳ ಮುಂದಿನ ಆಲೋಚನೆ ಯೇನು? ಕಾಲಪ್ರೇರಿತರಾದ ಅವರು ಮುಂದೇನುಮಾಡುವರೋ? ಈಗಿನ ಕಾಲವು ಅವರಿಗೆ ಅತಿದಾರುಣವಾದುದು. ಅವರಿಗೆ ಕಾಲವು ತೀರುತ್ತ ಬಂದಹಾಗಿದೆ. ಇನ್ನು ಅವರು ಏನನ್ನು ಮಾಡಬೇಕೆಂದಿರುವರು? ಅಪ್ಪಾ! ಸಂಜಯಾ! ಕೌರವರು ಮೃತ್ಯುವಿನ ಬಾಯಿಗೆ ಸಿಕ್ಕಿಬಿಟ್ಟರೆಂದೇ ನನಗೆ ತೋರುವುದು. ಈಚೀಚೆಗೆ ಯುದ್ಧದಲ್ಲಿ ಅವರ ಪರಾಕ್ರಮವೂ ಅಷ್ಟಾಗಿ ಕಾಣಿಸುವುದಿಲ್ಲ. ಮೊದಲು ಕೃಷ್ಣಾರ್ಜುನರಿಬ್ಬರೂ ಸ್ವಲ್ಪವೂ ಗಾಸಿಹೊಂ ದದೆ, ನಮ್ಮ ಸೈನ್ಯವನ್ನು ಭೇದಿಸಿಕೊಂಡು ಹೊರಟುಹೋದರು. ಅವರನ್ನು ತಡೆಯಬಲ್ಲವನು ನಮ್ಮಲ್ಲಿ ಯಾವನೂ ಇಲ್ಲದೆಹೋದನು. ಈ ಯುದ್ಧಕ್ಕಾಗಿ ನಾವು ಎಷ್ಟೋಮಂದಿ ಯೋಧರನ್ನು ಚೆನ್ನಾಗಿ ಪರೀಕ್ಷಿಸಿ, ಅವರವರಿಗೆ ತಕ್ಕ ವೇತನವನ್ನು ಕೊಟ್ಟು ಪೋಷಿಸುತ್ತಿರುವೆವು. ಪ್ರಿಯವಾಕ್ಯಗಳಿಂದ ಆದರಿ

ಸುತ್ತಿರುವೆವು. ಚೆನ್ನಾಗಿ ಪರೀಕ್ಷಿಸಿ ಮಹಾರಥರೆನಿಸಿದವರನ್ನೇ ಆರಿಸಿರುವೆವು. ನಮ್ಮ ಸೈನ್ಯದಲ್ಲಿ ಉಚಿತ ಸತ್ಕಾರಹೊಂದದವನೊಬ್ಬನೂ ಇಲ್ಲ! ಸೈನಿಕರಿಗೆ ಅವರವರ ಕಾರ್ಯವನ್ನು ನೋಡಿ, ಅದಕ್ಕೆ ತಕ್ಕಂತೆಯೇ ವೇತನಗಳು ನಿರ್ಣಯಿಸಲ್ಪಡುವುವು. ನಮ್ಮ ಸೈನ್ಯದಲ್ಲಿ ಅಲ್ಪದಾನದಿಂದಾಗಲಿ, ವೇತನವಿಲ್ಲದ ಬಿಟ್ಟಿಯ ಕೆಲಸದಿಂದಾಗಲಿ ಅತೃಪ್ತನಾದವನೊಬ್ಬನೂ ಇಲ್ಲ. ಎಲ್ಲರನ್ನೂ ತಮ್ಮ ಶಕ್ತಿಗನುಸಾರವಾಗಿ ನಮ್ಮ ಮಕ್ಕಳೂ, ಜ್ಞಾತಿಗಳೂ, ಬಂಧುಗಳೂ ದಾನಮಾನಾಸನಗಳಿಂದ ಆದರಿಸುತ್ತಿರುವರು. ಅಂತವರೆಲ್ಲರೂ ಈಗ ಯುದ್ಧದಲ್ಲಿ ಅರ್ಜುನನಿಗೂ, ಸಾತ್ಯಕಿಗೂ ಸೋತು ಓಡಿಹೋದರೆಂದ ಮೇಲೆ ಅದೃಷ್ಟಕ್ಕಿಂತಲೂ ಪ್ರಬಲವಾದುದು ಯಾವುದುಂಟು? ಯುದ್ಧದಲ್ಲಿ ರಕ್ಷಿಸಲ್ಪಡತಕ್ಕವರು, ಮತ್ತು ರಕ್ಷಿಸತಕ್ಕವರು, ಇವರಿಬ್ಬರಿಗೂ ಸಮಾನಗತಿಯೇಹೊರತು ಅದರಲ್ಲಿ ಹೆಚ್ಚುಕಡಿಮೆಯಿಲ್ಲ. ಆ ಸೈಂಧವನೇ ಅರ್ಜುನನಿಗೆ ಸಿಕ್ಕಿಬಿದ್ದಮೇಲೆ ಸೈಂಧವನ ರಕ್ಷಣೆಗಾಗಿಮಹಾಪ್ರಯತ್ನವನ್ನು ಮಾಡುತ್ತಿರುವ ನನ್ನ ಮಗನು ಏನನ್ನುತಾನೇ ಮಾಡುವನೋ? ಈಗಿನ ಸ್ಥಿತಿಯಲ್ಲಿ ಮೂಢನಾದ ನನ್ನ ಮಗನ ಕಾರ್ಯೋದ್ದೇಶವೇನಿರಬಹುದೋ? ಈಗ ಸಾತ್ಯಕಿಯೂ ನಮ್ಮ ಸೈನ್ಯವನ್ನು ಭೇದಿಸಿಕೊಂಡು, ಮುಂದೆಮುಂದೆ ಸಾಗಿ ಬಂದುದನ್ನು ತಿಳಿದಮೇಲೆ, ದುರ್ಯೋಧನನು ಮುಂದೆ ತನಗೆ ಕಾಲೋಚಿತಕಾರ್ಯವೇನೆಂದು ಯೋಚಿಸಿರುವನು? ರಥಿಕಶ್ರೇಷ್ಠರೂ, ಎಂತಹ ಶಸ್ತ್ರಗಳನ್ನೂ ಲಕ್ಷ್ಯಮಾಡದವರೂ ಆದ ಆ ಅರ್ಜುನಸಾತ್ಯಕಿಗಳಿಬ್ಬರೂ ನಮ್ಮ ಸೈನ್ಯವನ್ನು ಭೇದಿಸಿಕೊಂಡು ಬಂದುದನ್ನು ನೋಡಿದಮೇಲೆ, ನಮ್ಮವರಿಗೆ ಯುದ್ಧದಲ್ಲಿ ಹೇಗೆತಾನೇ ಧೈರ್ಯವುಂಟಾದೀತು? ಅರ್ಜುನನ ರಕ್ಷಣೆಗಾಗಿ ಕೈಕಟ್ಟಿ ನಿಂತಿರುವ ಕೃಷ್ಣನನ್ನೂ, ಸಾತ್ಯಕಿಯನ್ನೂ ನೋಡಿದಾಗಲೇ, ನನ್ನ ಮಕ್ಕಳೆಲ್ಲರೂ ಮಹತ್ತಾದ ಸಂಕಟಕ್ಕೊಳಗಾಗಿರಬೇಕು? ಅರ್ಜುನಸಾತ್ಯಕಿಗಳಿಬ್ಬರೂ ನಮ್ಮ ಸೈನ್ಯವನ್ನು ಬಡಿದೋಡಿಸಿದುದನ್ನು ನೋಡಿ, ನನ್ನ ಮಕ್ಕಳ ವ್ಯಸನವೆಷ್ಟೋ? ನಮ್ಮಕಡೆಯ ರಥಿಕರೆಲ್ಲರೂ ಶತ್ರುಜಯದಲ್ಲಿ ನಿರಾಶರಾಗಿ ಓಡಿಹೋದುದನ್ನು ನೋಡಿದಾಗ, ನನ್ನ ಮಕ್ಕಳು ಎಷ್ಟು ಕೊರಗುತ್ತಿರುವರೋ? ಅಯ್ಯೋ! ಅರ್ಜುನನೂ, ಸಾತ್ಯಕಿಯೂ ನಮ್ಮಕಡೆಯ ರಥಿಕರನ್ನೆಲ್ಲ

ಕೊಂದು, ನಮ್ಮ ರಥಗಳನ್ನೆಲ್ಲ ಕೇವಲ ಶೂನ್ಯವನ್ನಾಗಿ ಮಾಡಿದು ದನ್ನೂ, ನಮ್ಮಕಡೆಯ ಯೋಧರ ಸಾವನ್ನೂ ನೋಡಿ ನನ್ನ ಮಕ್ಕಳು ಎಷ್ಟು ದುಃಖಿಸುವರೋ? ನಮ್ಮಕಡೆಯ ಅನೇಕವೀರರು ತಮ್ಮ ಗಜ ತುರಗ ರಥಗಳನ್ನೆಲ್ಲ ಕಳೆದುಕೊಂಡು, ದಿಕ್ಕುಗೆಟ್ಟು ಓಡುವುದನ್ನು ನೋಡಿ ನನ್ನ ಮಕ್ಕಳು ಎಷ್ಟು ವ್ಯಸನಪಟ್ಟಿರುವರೋ? ಅರ್ಜುನನ ಬಾಣಗಳ ಕೊಲೆಗೆ ಹೆದರಿ ನಮ್ಮಕಡೆಯ ಮಹಾಗಜಗಳು ಓಡುವುದನ್ನೂ, ಸತ್ತುಬಿದ್ದುದನ್ನೂ, ಸತ್ತು ಬೀಳುತ್ತಿರುವುದನ್ನೂ ನೋಡಿ ನನ್ನ ಮಕ್ಕಳು ಎಷ್ಟು ಸಂಕಟಪಟ್ಟರೋ? ಅರ್ಜುನನು ಸಾತ್ಯಕಿಯೊಡನೆ ಸೇರಿ ನಮ್ಮ ಯೋಧರನ್ನು ವಿರಥರನ್ನಾಗಿಯೂ, ಅಶ್ವಹೀನರನ್ನಾಗಿಯೂ ಮಾಡಿದುದನ್ನು ನೋಡಿ ನನ್ನ ಮಕ್ಕಳು ಎಷ್ಟು ಕೊರಗುವರೋ? ನಮ್ಮ ಕುದುರೆಗಳು, ನಮ್ಮ ಪದಾತಿಗಳು, ಇವೆಲ್ಲವೂ ಅರ್ಜುನ ಸಾತ್ಯಕಿಗಳಿಂದ ಹತವಾಗಿ ಬೀಳುವುದನ್ನೂ, ಉಳಿದುವು ಭಯದಿಂದ ಚದರಿ ಪಲಾಯನಮಾಡುವುದನ್ನೂ ನೋಡಿ ನನ್ನ ಮಕ್ಕಳು ಎಷ್ಟು ವ್ಯಸನಪಡುವರೋ? ದ್ರೋಣನ ಅಂತಹ ಪ್ರಬಲವಾದ ಸೈನ್ಯವನ್ನೇ ಆ ವೀರರಿಬ್ಬರೂ ಕ್ಷಣಮಾತ್ರದಲ್ಲಿ ದಾಟಿಬಂದುದನ್ನು ನೋಡಿ, ನನ್ನ ಮಕ್ಕಳ ದುಃಖವು ಎಷ್ಟಿರಬಹುದೋ? ಸಂಜಯಾ! ಈಗ ನೀನು ಹೇಳಿದ ಕೃಷ್ಣಾರ್ಜುನರ ಮತ್ತು ಸಾತ್ಯಕಿಯ ಸಾಹಸಗಳನ್ನೂ, ಅವರು ನಮ್ಮ ಸೈನ್ಯದಲ್ಲಿ ಪ್ರವೇಶಿಸಿದುದನ್ನೂ ಕೇಳಿ ನನ್ನ ಮನಸ್ಸು ಮೋಹಾಕುಲವಾಗುತ್ತಿದೆ! ಸಾತ್ಯಕಿಯು ಕೃತವರ್ಮನ ಸೈನ್ಯವನ್ನು ದಾಟಿಬಂದುದನ್ನು ನೋಡಿದಮೇಲೆ, ಕೌರವರು ಮುಂದೆ ಮಾಡಿದುದೇನು? ಅತ್ತಲಾಗಿ ದ್ರೋಣನು ಪಾಂಡವರನ್ನು ತನ್ನ ಪರಾಕ್ರಮದಿಂದ ನಿವಾರಿಸುತ್ತಿದ್ದಾಗ ಅಲ್ಲಿ ನಡೆದ ಯುದ್ಧಕ್ರಮವೇನು? ದ್ರೋಣನಾದರೋ ಬಲಾಢ್ಯನು! ಎಲ್ಲಾ ಅಸ್ತ್ರಗಳನ್ನೂ ಬಲ್ಲವನು! ಅಂತಹ ಮಹಾಧನುರ್ಧಾರಿಯೊಡನೆ ಪಾಂಚಾಲರು ಹೇಗೆ ಯುದ್ಧವನ್ನು ಮಾಡಿದರು? ಆ ಪಾಂಚಾಲರೋ, ಧನಂಜಯನಿಗೆ ಜಯವನ್ನು ಕೋರಿ ದ್ರೋಣನಲ್ಲಿ ದೊಡ್ಡ ವೈರವನ್ನಿಟ್ಟಿರುವರು. ದ್ರೋಣನೂ ಅವರಲ್ಲಿ ದೃಢವೈರವುಳ್ಳವನು. ಅವರ ಯುದ್ಧವು ಹೇಗೆ ನಡೆಯಿತೆಂಬುದನ್ನೂ, ಇತ್ತಲಾಗಿ ಅರ್ಜುನನು ಸೈಂಧವ

ನನ್ನು ಕೊಲ್ಲುವವಿಷಯದಲ್ಲಿ ಮಾಡಿದ ಪ್ರಯತ್ನವನ್ನೂ ನನಗೆ ವಿವರವಾಗಿ ತಿಳಿಸಬೇಕು" ಎಂದನು.

ಆಗ ಸಂಜಯನು "ಧೃತರಾಷ್ಟ್ರಮಹಾರಾಜಾ! ನಿನಗೆ ಈ ಕಷ್ಟವೆಲ್ಲ ನಿನ್ನ ತಪ್ಪಿನಿಂದಲೇ ಉಂಟಾದುದು. ಸ್ವಯಂಕೃತಾಪರಾಧದಿಂದ ಈ ವ್ಯಸನಕ್ಕೀಡಾದ ನೀನು, ಪ್ರಾಕೃತಮನುಷ್ಯನಂತೆ ಈಗ ವ್ಯಸನಪಡುವುದರಿಂದ ಫಲವೇನು? ಹಿಂದೆ ನಿನಗೆ ಅತ್ಯಂತಹಿತಕಾಂಕ್ಷಿಗಳೂ, ಪ್ರಾಜ್ಞರೂ ಆದ ವಿದುರಾದಿಗಳು, "ಪಾಂಡವರಿಗೆ ದ್ರೋಹವನ್ನೆಣಿಸಬೇಡ"ವೆಂದು ಎಷ್ಟೋ ಬುದ್ಧಿವಾದಗಳನ್ನು ಹೇಳಿದರು. ಅದೊಂದನ್ನೂ ನೀನು ಕೇಳಲಿಲ್ಲ. ಹಿತೈಷಿಗಳಾದ ಸ್ನೇಹಿತರ ಮಾತನ್ನು ಯಾರು ಕೇಳುವುದಿಲ್ಲವೋ, ಅವರೆಲ್ಲರೂ ನಿನ್ನಂತೆಯೇ ಹೀಗೆ ವ್ಯಸನಕ್ಕೆ ಗುರಿಯಾಗುವರು. ಅದೂ ಹಾಗಿರಲಿ! ಹಿಂದೆ ಸಾಕ್ಷಾತ್ ವಾಸುದೇವನೇ ನಿನ್ನಲ್ಲಿಗೆ ಬಂದು ಸಂಧಿಗಾಗಿ ಪ್ರಾರ್ಥಿಸಿದನು. ಆ ಕೃಷ್ಣನ ಕೋರಿಕೆಯೂ ನಿನ್ನಲ್ಲಿ ವಿಫಲವಾಯಿತು. ನಿನ್ನ ಅವಿವೇಕಸ್ವಭಾವವನ್ನೂ, ನಿನಗೆ ನಿನ್ನ ಮಕ್ಕಳಲ್ಲಿರುವ ಪಕ್ಷಪಾತವನ್ನೂ, ಧರ್ಮದಲ್ಲಿ ನಿನಗಿರತಕ್ಕ ಸಂಶಯಬುದ್ಧಿಯನ್ನೂ, ಪಾಂಡವರಲ್ಲಿ ನಿನಗಿರತಕ್ಕ ಮಾತ್ಸರ್ಯವನ್ನೂ, ನಿನ್ನ ವಕ್ರಬುದ್ಧಿಯನ್ನೂ ಆ ಕೃಷ್ಣನು ಚೆನ್ನಾಗಿ ತಿಳಿದುಕೊಂಡನು. ಮಹಾರಾಜಾ! ಆ ಶ್ರೀಕೃಷ್ಣನೇನು ಸಾಮಾನ್ಯನೆ? ಸಮಸ್ತಲೋಕದ ತತ್ವವನ್ನೂ ಚೆನ್ನಾಗಿ ಬಲ್ಲವನು! ಸರ್ವಲೋಕೇಶ್ವರನು! ನೀನು ಅವನ ಮುಂದೆ ಕೆಲಸಕ್ಕೆ ಬಾರದ ಆರ್ತಪ್ರಲಾಪಗಳನ್ನು ತೋರಿಸಿದೆ! ಆದರೇನು? ನಿನ್ನ ಮನಸ್ಸಿನ ದುರಭಿಪ್ರಾಯವನ್ನು ಅವನು ಚೆನ್ನಾಗಿ ತಿಳಿದುಕೊಂಡನು. ಅದರಮೇಲೆ ಈಗ ಕೌರವರಲ್ಲಿ ಮಹತ್ತಾದ ಈ ಯುದ್ಧವು ನಡೆಯಲು ಅವಕಾಶವಾಯಿತು. ನಿನ್ನ ಅಪರಾಧದಿಂದಲೇ ಇಷ್ಟೊಂದು ಪ್ರಜಾಕ್ಷಯವು ನಡೆಯುವಂತಾಯಿತು. ರಾಜಾ! ದುರ್ಯೋಧನನಲ್ಲಿ ಈಗ ನೀನು ದೋಷವನ್ನು ಆರೋಪಿಸುವುದೇ ಯುಕ್ತವಲ್ಲ. ಆರಂಭದಲ್ಲಿಯಾಗಲಿ, ನಡುವೆಯಾಗಲಿ, ಕೊನೆಯಲ್ಲಿಯಾಗಲಿ ನಿನ್ನಲ್ಲಿ ಸ್ವಲ್ಪವಾದರೂ ವಿವೇಕಬುದ್ಧಿಯೇ ಕಾಣಿಸಲಿಲ್ಲ. ಈ ಪರಾಜಯವೆಲ್ಲಕ್ಕೂ ನೀನೇ ಮೂಲವು. ಇನ್ನು ದುಃಖಿಸಿ ಫಲವೇನು? ಲೋಕಗತಿ

ಯನ್ನು ತಿಳಿದು, ಮನಸ್ಸನ್ನು ದೃಢಮಾಡಿಕೊಂಡಿರು! ಮುಂದಿನ ಯುದ್ಧವು ಹೇಗೆ ನಡೆಯಿತೆಂಬುದನ್ನು ಕೇಳು! ಹಿಂದೆ ದೇವಾಸುರರಿಗೆ ಹೇಗೋ ಹಾಗೆ ಭಯಂಕರ ಯುದ್ಧವು ಆರಂಭವಾಯಿತು. ಸಾತ್ಯಕಿಯು ನಿನ್ನ ಸೈನ್ಯವನ್ನು ಪ್ರವೇಶಿಸಿದಾಗ, ಅತ್ತಲಾಗಿ ಭೀಮಾದಿಗಳೂ ನಿನ್ನ ಸೈನ್ಯವನ್ನು ಆವರಿಸಿಕೊಂಡರು. ಮಹಾರಥನಾದ ಕೃತವರ್ಮನೊಬ್ಬನೇ ಆ ಪಾಂಡವರನ್ನೂ, ಅವರ ಅನುಚರರನ್ನೂ ತಡೆದು ನಿಲ್ಲಿಸುತ್ತಿದ್ದನು. ವೇಲೆಯು ಸಮುದ್ರವೇಗವನ್ನು ಹೇಗೋಹಾಗೆ ಕೃತವರ್ಮನು ಆ ದೊಡ್ಡ ಸೈನ್ಯವನ್ನು ಮುಂದೆಬಾರದಂತೆ ತಡೆದನು. ಕೃತವರ್ಮನ ಆ ಪರಾಕ್ರಮವು ನಮಗೆಲ್ಲ ಅತ್ಯಾಶ್ಚರ್ಯಕರವಾಯಿತು. ಪಾಂಡವರಿಗೆ ಮುಂದೆ ಕಾಲಿಡುವುದಕ್ಕೇ ಸಾಧ್ಯವಾಗಲಿಲ್ಲ. ಆಗ ಭೀಮನು ಬಹುಪ್ರಯತ್ನದಿಂದ ಮುಂದುಬಿದ್ದು, ಕೃತವರ್ಮನನ್ನು ಮೂರು ಬಾಣಗಳಿಂದ ತಡೆದು, ಪಾಂಡವರಿಗೆಲ್ಲ ಸಂತೋಷವುಂಟಾಗುವಂತೆ ಶಂಖಧ್ವನಿಯನ್ನು ಮಾಡಿದನು. ಇದೇಕಾಲದಲ್ಲಿ ಸಹದೇವನು ಇಪ್ಪತ್ತು, ಧರ್ಮರಾಜನು ಐದು, ನಕುಲನು ನೂರು, ಉಪಪಾಂಡವರು ಎಪ್ಪತ್ತುಮೂರು, ಘಟೋತ್ಕಚನು ಏಳು, ಧೃಷ್ಟದ್ಯುಮ್ನನು ಮೂರು, ಹೀಗೆ ಬೇರೆಬೇರೆಯಾಗಿ ಕೃತವರ್ಮನಮೇಲೆ ಬಾಣಗಳನ್ನು ಪ್ರಯೋಗಿಸಿದರು. ವಿರಾಟನು, ದ್ರುಪದನು, ಧೃಷ್ಟದ್ಯುಮ್ನನು, ಶಿಖಂಡಿ, ಇವರೆಲ್ಲರೂ ಐದೈದು ಬಾಣಗಳನ್ನು ಕೃತವರ್ಮನಮೇಲೆ ಪ್ರಯೋಗಿಸಿದರು. ತನಗೆ ಇದಿರಾದ ಒಬ್ಬೊಬ್ಬರಮೇಲೆಯೂ ಕೃತವರ್ಮನು ಐದೈದು ಬಾಣಗಳನ್ನು ಬಿಟ್ಟು, ಭೀಮನಮೇಲೆ ಏಳು ಬಾಣಗಳನ್ನು ಪ್ರಯೋಗಿಸಿದುದಲ್ಲದೆ, ಅವನ ಧನುಸ್ಸನ್ನೂ, ಧ್ವಜವನ್ನೂ ಕತ್ತರಿಸಿ ರಥದಿಂದ ಕೆಡಹಿ, ಅವನ ಎದೆಗೆ ಎಪ್ಪತ್ತು ಬಾಣಗಳನ್ನು ಹೊಡೆದನು. ಭೂಕಂಪಕಾಲದಲ್ಲಿ ಪರ್ವತವು ಹೇಗೋಹಾಗೆ ಇದರಿಂದ ಭೀಮನ ದೇಹವು ನಡುಗಿಹೋಯಿತು. ಭೀಮನಿಗುಂಟಾದ ಈ ವಿಪತ್ತನ್ನು ನೋಡಿ ಧರ್ಮರಾಜನೇ ಮೊದಲಾದವರೆಲ್ಲ, ಹಲವುಕಡೆಗಳಿಂದ ಆ ಕೃತವರ್ಮನನ್ನು ಸುತ್ತಿಮುತ್ತಿಕೊಂಡು, ಭೀಮನ ರಕ್ಷಣೆಗಾಗಿ ಅವನನ್ನು ತಡೆಯುತ್ತ, ಬಾಣಗಳನ್ನು ಹೊಡೆದರು. ಇಷ್ಟರಲ್ಲಿ ಭೀಮನು ಮೆಲ್ಲಗೆ ಚೇತರಿಸಿಕೊಂಡು, ಸುವರ್ಣದಂಡವುಳ್ಳ ಉಕ್ಕಿನ ಶಕ್ತಿಯೊಂದನ್ನು ಕೈಗೆತ್ತಿ ಆ ಕೃತವರ್ಮನ ರಥದಮೇಲೆ ಬೀಸಿದನು.

ಭೀಮನು ವೇಗದಿಂದ ಬೀಸಿದ ಆ ಶಕ್ತಿಯು, ಪರೆಯುರ್ಚಿದ ಹಾವಿನಂತೆ ತೀವ್ರವೇಗದಿಂದ ಹೊರಟು, ಅಗ್ನಿಜ್ವಾಲೆಗಳನ್ನೆರಚುತ್ತ, ಆ ಕೃತವರ್ಮನ ರಥದ ಸುತ್ತಲೂ ಭಯಂಕರವಾದ ಬೆಂಕಿಯನ್ನು ಕೆದರುತ್ತಿದ್ದಿತು. ಕಾಲಾಗ್ನಿಯಂತೆ ಬರುತ್ತಿದ್ದ ಆ ಶಕ್ತಿಯನ್ನು ಕೃತವರ್ಮನು ಎರಡೇ ಬಾಣಗಳಿಂದ ಎರಡು ತುಂಡುಮಾಡಿ ಕೆಡಹಿದನು. ಆ ಶಕ್ತಿಯು ಮುರಿದುಬೀಳುವಾಗ, ಆಕಾಶದ ಕೊಳ್ಳಿಯಂತೆ ದಿಕ್ಕುಗಳನ್ನೆಲ್ಲ ಬೆಳಗುತ್ತ ಕೆಳಗೆ ಬಿದ್ದಿತು. ಇದನ್ನು ನೋಡಿ ಭೀಮನು ಮತ್ತಷ್ಟು ಕೋಪಾವಿಷ್ಟನಾದನು. ಬೇರೊಂದು ಬಿಲ್ಲನ್ನು ಕೈಗೆತ್ತಿಕೊಂಡು, ಐದು ಬಾಣಗಳನ್ನು ಕೃತವರ್ಮನ ಎದೆಗೆ ಬಲವಾಗಿ ಹೊಡೆದನು. ಈ ಬಾಣಪ್ರಹಾರದಿಂದ ಕೃತವರ್ಮನ ದೇಹವೆಲ್ಲ ಭಿನ್ನವಾಗಿ, ರಕ್ತವು ಸುರಿಯಲಾರಂಭಿಸಿತು. ಮಹಾರಾಜಾ! ಇದೆಲ್ಲವೂ ನಿನ್ನ ದುರ್ಮಂತ್ರದ ಫಲವೇ! ಇಷ್ಟಾದರೂ ಕೃತವರ್ಮನು ಎದೆಗುಂದದೆ, ನಗುಮುಖದಿಂದಲೇ ಮೂರು ಬಾಣಗಳಿಂದ ಭೀಮನನ್ನು ಬಲವಾಗಿ ಹೊಡೆದನು. ತನಗಿದಿರಾದ ಮಹಾರಥರನ್ನೆಲ್ಲ ಮೂರುಮೂರು ಬಾಣಗಳಿಂದ ಬಲವಾಗಿ ನೋಯಿಸಿದನು. ಅವರೂ ಏಳೇಳು ಬಾಣಗಳಿಂದ ಅವನನ್ನು ಹೊಡೆದರು. ಆಮೇಲೆ ಕೃತವರ್ಮನು ಒಂದು ಕ್ಷುರಪ್ರದಿಂದ ಶಿಖಂಡಿಯ ಬಿಲ್ಲನ್ನು ಕತ್ತರಿಸಿದನು. ಒಡನೆಯೇ ಶಿಖಂಡಿಯು ಕತ್ತಿಯನ್ನೂ, ಗುರಾಣಿಯನ್ನೂ ಕೈಗೆತ್ತಿಕೊಂಡು, ಕೃತವರ್ಮನ ರಥದಮೇಲೆ ಕತ್ತಿಯನ್ನು ಬೀಸಿದನು ಆ ಕತ್ತಿಯು ಕೃತವರ್ಮನ ಧನುರ್ಬಾಣಗಳೆರಡನ್ನೂ ಕತ್ತರಿಸಿಕೊಂಡು, ಆಕಾಶದಿಂದ ಬಿದ್ದ ಜ್ಯೋತಿಯಂತೆ ನೆಲಕ್ಕೆ ಬಿದ್ದಿತು. ಇದೇ ಸಮಯದಲ್ಲಿ ಪಾಂಡವರ ಕಡೆಯ ಮಹಾರಥರನೇಕರು ಕೃತವರ್ಮನನ್ನು ಅನೇಕ ಬಾಣಗಳಿಂದ ಹೊಡೆದರು. ಕೃತವರ್ಮನು ಬೇರೊಂದು ಧನುಸ್ಸನ್ನು ಕೈಗೆತ್ತಿಕೊಂಡು, ಪಾಂಡವರಲ್ಲಿ ಒಬ್ಬೊಬ್ಬರಮೇಲೆಯೂ ಮೂರುಮೂರು ಬಾಣಗಳನ್ನು ಬಿಟ್ಟನು. ಶಿಖಂಡಿಯನ್ನು ಎಂಟು ಬಾಣಗಳಿಂದ ಹೊಡೆದನು. ಇಷ್ಟರಲ್ಲಿ ಶಿಖಂಡಿಯು ಬೇರೊಂದು ಬಿಲ್ಲನ್ನು ಎತ್ತಿಕೊಂಡು, ಕೂರ್ಮನಖಗಳೆಂಬ ಬಾಣಗಳಿಂದ ಕೃತವರ್ಮನನ್ನು ಹೊಡೆದನು. ಇದನ್ನು ನೋಡಿ ಕೃತವರ್ಮನ ಮಗನು ಅತ್ಯಾಕ್ರೋಶಗೊಂಡು ಮಹಾತ್ಮನಾದ ಭೀಷ್ಮನಿಗೆ ಮೃತ್ಯುಕಾರಣವೆನಿಸಿದ ಆ ಶಿಖಂಡಿಯನ್ನಿದಿರಿಸಿ, ಅವನಮೇಲೆ

ತನ್ನ ಅದ್ಭುತಶಕ್ತಿಯನ್ನು ತೋರಿಸಲಾರಂಭಿಸಿದನು. ಹುಲಿಯು ಆನೆಯ ಮೇಲೆ ಬೀಳುವಂತೆ, ಅವನು ಶಿಖಂಡಿಯನ್ನು ಇದಿರಿಸಿಬಂದಾಗ, ಅವರಿಬ್ಬರಿಗೂ ಯುದ್ಧಾರಂಭವಾಯಿತು. ಎರಡು ಮಹಾಗಜಗಳಂತೆಯೂ, ಉರಿಯುವ ಬೆಂಕಿಗಳಂತೆಯೂ ಇದಿರಿದಿರಾಗಿ ನಿಂತು ಬಿಲ್ಲುಗಳನ್ನೊದರುತ್ತ, ತಮ್ಮ ಅಸಾಧಾರಣ ಹಸ್ತವೇಗದಿಂದ ಬಾಣಗಳನ್ನು ಪ್ರಯೋಗಿಸುತ್ತಿದ್ದರು. ಇಬ್ಬರು ಸೂರ್ಯರು ಇದಿರಿದಿರಾಗಿ ತಮ್ಮ ತೀವ್ರಕಿರಣಗಳನ್ನೆರಚುವಂತೆ ಒಬ್ಬರನ್ನೊಬ್ಬರು ಬಾಣಗಳಿಂದ ತಾಪಗೊಳಿಸುತ್ತಿದ್ದರು. ಕೃತವರ್ಮನು ಶಿಖಂಡಿಗೆ ಗುರಿಯಿಟ್ಟು ಮೊದಲು ಎಪ್ಪತ್ತುಮೂರು ಬಾಣಗಳನ್ನು ಹೊಡೆದನು. ತಿರುಗಿ ಏಳು ಬಾಣಗಳನ್ನು ಹೊಡೆದನು. ಈ ಬಾಣಗಳಿಂದ ಶಿಖಂಡಿಯು ಬಹಳವಾಗಿ ನೊಂದು ಪ್ರಜ್ಞೆತಪ್ಪಿದಂತಾಗಿ, ರಥದ ಗದ್ದುಗೆಯಲ್ಲಿಯೇ ಒರಗಿ ಕುಳಿತನು. ಅವನ ಧನುರ್ಬಾಣಗಳು ಕೈಯಿಂದ ಜಾರಿಹೋದುವು. ಇದನ್ನು ನೋಡಿ ನಿನ್ನಕಡೆಯ ಸೈನ್ಯಗಳಿಗೆಲ್ಲ ಅತ್ಯಂತಸಂತೋಷವುಂಟಾಯಿತು. ನಿನ್ನವರೆಲ್ಲರೂ ಬಟ್ಟೆಗಳನ್ನು ಬೀಸುತ್ತ, ಕೃತವರ್ಮನನ್ನು ಕೊಂಡಾಡುತ್ತಿದ್ದರು. ಶಿಖಂಡಿಯು ಮೂರ್ಛಿತನಾದುದನ್ನು ತಿಳಿದು, ಅವನ ಸಾರಥಿಯು ಥಟ್ಟನೆ ರಥವನ್ನು ತಿರುಗಿಸಿಕೊಂಡು ಹೊರಟುಹೋದನು. ಶಿಖಂಡಿಗೆ ಈ ಅಪಾಯವುಂಟಾದುದನ್ನು ನೋಡಿ ಪಾಂಡವರಕಡೆಯಲ್ಲಿ ಅನೇಕರಥಿಕರು ಕೃತವರ್ಮನನ್ನು ಸುತ್ತಿಮುತ್ತಿ ಹೊಡೆಯಲಾರಂಭಿಸಿದರು. ಆಗಲೂ ಕೃತವರ್ಮನು ನಮಗೆಲ್ಲ ಆಶ್ಚರ್ಯವುಂಟಾಗುವಹಾಗೆ, ತಾನೊಬ್ಬನೇ ಅಸಹಾಯನಾಗಿ, ಆ ಪಾಂಡವರನ್ನೆಲ್ಲ ತೀಕ್ಷ್ಣಬಾಣಗಳಿಂದ ತಡೆಯುತ್ತಿದ್ದನು. ಮೊದಲು ಪಾಂಡವರನ್ನು ಜಯಿಸಿ, ಆಮೇಲೆ ಕ್ರಮವಾಗಿ ಚೇದಿ ಪಾಂಚಾಲ ಸೃಂಜಯರನ್ನೆಲ್ಲ ಓಡಿಸಿದನು. ಮಹಾವೀರ್ಯವುಳ್ಳ ಕೇಕಯರನ್ನೂ ಹೊಡೆದಟ್ಟಿದನು. ಕೃತವರ್ಮನ ಕೊಲೆಯನ್ನು ತಡೆಯಲಾರದೆ ಪಾಂಡವಸೈನ್ಯಗಳು ಅಲ್ಲಿಂದಿಲ್ಲಿಗೆ ಓಡಾಡುತ್ತ, ತಲೆತಪ್ಪಿಸಿಕೊಳ್ಳುವ ಪ್ರಯತ್ನದಲ್ಲಿದ್ದುವೇಹೊರತು, ಯುದ್ಧಕ್ಕೆ ನಿಲ್ಲಲು ಯಾರಿಗೂ ಧೈರ್ಯವಿರಲಿಲ್ಲ. ಹೀಗೆ ಕೃತವರ್ಮನು ಭೀಮನೇ ಮೊದಲಾದ ಪಾಂಡವರನ್ನೆಲ್ಲ ಜಯಿಸಿದ ಮೇಲೆ, ಹೊಗೆಯಾರಿದ ಬೆಂಕಿಯಂತೆ ಶಾಂತನಾದನು. ಕೃತವರ್ಮನ

ಬಾಣವರ್ಷಕ್ಕೆ ಇದಿರಾಗಿ ನಿಲ್ಲಲಾರದೆ ಅನೇಕಮಹಾರಥರು ಯುದ್ಧರಂಗದಿಂದ ಹಿಂತಿರುಗಿದರು.

ಇದು ನೂರ ಹದಿನಾಲ್ಕನೆಯ ಅಧ್ಯಾಯವು.



## ಸಾತ್ಯಕಿಯು ಜಲಸಂಧನನ್ನು ಕೊಂದುದು.

ಮಹಾರಾಜಾ! ಸಾವಧಾನವಾಗಿ ಕೇಳು! ಕೃತವರ್ಮನ ಕೋಲಿಗೆ ತಡೆಯಲಾರದೆ ಪಾಂಡವಸೈನ್ಯಗಳೆಲ್ಲ ಓಡಿಹೋದುವು. ಅವರಲ್ಲಿ ಅನೇಕರು ಲಜ್ಜೆಯಿಂದ ತಲೆತಗ್ಗಿಸಿ ಸುಮ್ಮನಿದ್ದರು. ನಿನ್ನ ಸೈನ್ಯಗಳೆಲ್ಲ ಅತ್ಯಂತ ಸಂತೋಷದಿಂದ ಉಬ್ಬಿದುವು. ಸಮುದ್ರದಲ್ಲಿ ಮುಳುಗಿಹೋಗತಕ್ಕವರಿಗೆ ದ್ವೀಪವು ಹೇಗೋ ಹಾಗೆ, ಪಾಂಡವರಿಗೆಲ್ಲ ಮುಖ್ಯಾಶ್ರಯವೆನಿಸಿಕೊಂಡ ಸಾತ್ಯಕಿಗೆ, ಈ ಪಾಂಡವಸೈನ್ಯಗಳ ಭಯಂಕರವಾದ ದೀನಧ್ವನಿಯು ಕಿವಿಗೆ ಬಿದ್ದಿತು. ಒಡನೆಯೇ ಸಾತ್ಯಕಿಯು ಅತ್ಯಾಕ್ರೋಶದಿಂದ ತನ್ನ ಸಾರಥಿಯನ್ನು ನೋಡಿ “ಸೂತಾ! ರಥವನ್ನು ಬೇಗನೆ ಆ ಕೃತವರ್ಮನಿರುವ ಕಡೆಗೆ ಬಿಡು. ಅವನು ಪಾಂಡವಸೈನ್ಯವನ್ನು ಚದರಿಸಿಬಿಟ್ಟನು. ನಮ್ಮ ಸೈನ್ಯಗಳು ಅವನಿಂದ ಬಹಳವಾಗಿ ನೊಂದಿವೆ. ಈಗ ನಾನು ಮೊದಲು ಅವನನ್ನು ಜಯಿಸಿ, ಆಮೇಲೆ ಅರ್ಜುನನಬಳಿಗೆ ಹೋಗುವೆನು. ರಥವನ್ನು ಆ ಕಡೆಗೆ ತಿರುಗಿಸು” ಎಂದನು. ಈ ಮಾತನ್ನು ಕೇಳಿದೊಡನೆ ಸಾರಥಿಯು, ಎವೆಹಾರುವಷ್ಟರಲ್ಲಿ ಕೃತವರ್ಮನಿಗಿದಿರಾಗಿ ರಥವನ್ನು ತಂದು ನಿಲ್ಲಿಸಿದನು. ಅದನ್ನು ಕಂಡೊಡನೆ ಕೃತವರ್ಮನು ಸಾತ್ಯಕಿಯಮೇಲೆ ತೀಕ್ಷ್ಣಬಾಣಗಳನ್ನು ಬಿಟ್ಟನು. ಸಾತ್ಯಕಿಯು ಕೋಪಗೊಂಡು ಹರಿತವಾದ ಒಂದು ಭಲ್ಲವನ್ನು ಕೃತವರ್ಮನಮೇಲೆ ಪ್ರಯೋಗಿಸಿ, ನಾಲ್ಕು ಬಾಣಗಳಿಂದ ಕೃತವರ್ಮನ ನಾಲ್ಕು ರಥಾಶ್ವಗಳನ್ನೂ ಕೊಂದುಬಿಟ್ಟನು. ಬೇರೊಂದು ಭಲ್ಲದಿಂದ ಕೃತವರ್ಮನ ಕೈಯಲ್ಲಿದ್ದ ಬಿಲ್ಲನ್ನು ತುಂಡುಮಾಡಿದನು. ಇನ್ನು ಕೆಲವು ಬಾಣಗಳಿಂದ ಆ ಕೃತವರ್ಮನ ಬೆಂಗಾವಲಿನವನನ್ನೂ, ಸಾರಥಿಯನ್ನೂ ಕೊಂದನು. ಹೀಗೆ ಸಾತ್ಯಕಿಯು ಕೃತವರ್ಮನನ್ನು ವಿರಥನನ್ನಾಗಿ ಮಾಡಿದಮೇಲೆ, ತೀವ್ರಬಾಣಗಳಿಂದ ಅವನ ಸೈನ್ಯಗಳನ್ನು ಕೊಲ್ಲುತ್ತ

ಬಂದನು. ಈ ಕೋಲೆಯನ್ನು ತಡೆಯಲಾರದೆ ನಿನ್ನ ಸೈನ್ಯಗಳೆಲ್ಲ ಅಲ್ಲಲ್ಲಿ ತಲೆತಪ್ಪಿಸಿಕೊಂಡು ಓಡುವುದಕ್ಕೆ ಯತ್ನಿಸಿತು. ಧೃತರಾಷ್ಟ್ರಮಹಾರಾಜಾ! ಆಮೇಲೆ ಸಾತ್ಯಕಿಯು ದ್ರೋಣನ ಸೈನ್ಯವೆಂಬ ಮಹಾಸಮುದ್ರವನ್ನು ದಾಟಿಕೊಂಡುಹೋಗಿ, ಎಂತೆಂತಹ ಅದ್ಭುತಕಾರ್ಯಗಳನ್ನು ಮಾಡಿದನೋ ಅದನ್ನೂ ಕೇಳು. ಕೃತವರ್ಮನನ್ನು ಯುದ್ಧದಲ್ಲಿ ಜಯಿಸಿದಮೇಲೆ, ತನ್ನ ಸಾರಥಿಗೆ ಮುಂದೆ ಮೆಲ್ಲಗೆ ರಥವನ್ನು ಬಿಡುವಂತೆ ಹೇಳಿದನು. ಮುಂಭಾಗದಲ್ಲಿ ನಿನ್ನ ಕಡೆಯ ಚತುರಂಗಸೈನ್ಯಗಳು ಅಸಂಖ್ಯಾತವಾಗಿರುವುದನ್ನು ನೋಡಿದನು. ಆಮೇಲೆ ತಿರುಗಿ ಸಾರಥಿಯನ್ನು ಕುರಿತು "ಸೂತಾ! ಅದೋ! ಆ ದ್ರೋಣನ ಸೈನ್ಯದ ಎಡಭಾಗದಲ್ಲಿ ಕಾಲಮೇಘಸಮೂಹದಂತೆ ಕಪ್ಪಾದ ದೊಡ್ಡ ಗಜಸೈನ್ಯವಿರುವುದು ನೋಡು. ಅದಕ್ಕೆ ರುಕ್ಮರಥನೆಂದು ಪ್ರಸಿದ್ಧಿಗೊಂಡ ದ್ರೋಣನೇ ನಿಯಾಮಕನಾಗಿರುವನು. ಯಾರಿಗೂ ತಡೆಯಲಸಾಧ್ಯರಾದ ಇನ್ನೂ ಅನೇಕಶೂರರು ದುರ್ಯೋಧನನಿಂದ ಆಜ್ಞಪ್ತರಾಗಿ ಪ್ರಾಣದಮೇಲೆಯೂ ಆಸೆಯಿಲ್ಲದೆ, ನನ್ನನ್ನಿದಿರಿಸುವುದಕ್ಕಾಗಿ ಅಲ್ಲಿ ಕಾದಿರುವರು ನೋಡು. ಅವರೆಲ್ಲರೂ ಮಹಾಧನುರ್ಧಾರಿಗಳಾದ ರಾಜಪುತ್ರರು. ಎಲ್ಲರೂ ಪ್ರಬಲಪರಾಕ್ರಮವನ್ನು ತೋರಿಸಿ ಯುದ್ಧಮಾಡತಕ್ಕವರು. ಇವರನ್ನು ಜಯಿಸದ ಹೊರತು ಜಯದ್ರಥನಬಳಿಗೆ ಹೋಗಲು ನಮಗೆ ಸಾಧ್ಯವಿಲ್ಲ. ನಾವು ಅರ್ಜುನನನ್ನು ಸೇರಲಾರೆವು. ಈ ನಮ್ಮ ಶತ್ರುಗಳು ಸಮಸ್ತ ಶಸ್ತ್ರಾಸ್ತ್ರವಿದ್ಯೆಗಳಲ್ಲಿ ನಿಪುಣರು. ಅವರೆಲ್ಲರೂ ಒಂದಾಗಿ ಸೇರಿಬಂದಿರುವರು. ಅದೋ! ನೋಡು! ತ್ರಿಗರ್ತದೇಶದ ರಥಿಕರೆಲ್ಲ ಸುವರ್ಣಧ್ವಜಗಳುಳ್ಳ ರಥವನ್ನೇರಿ, ನನಗಿದಿರಾಗಿ ಯುದ್ಧಮಾಡಬೇಕೆಂದೇ ಕಾದಿರುವರು. ಮೊದಲು ನಾನು ಆ ತ್ರಿಗರ್ತರೊಡನೆ ಯುದ್ಧಮಾಡುವೆನು. ಕುದುರೆಗಳನ್ನು ಬೇಗನೆ ಅಲ್ಲಿಗೆ ಬಿಡು" ಎಂದನು. ಸಾತ್ಯಕಿಯ ಆಜ್ಞೆಯಂತೆ ಸೂತನು ಸೂರ್ಯತೇಜಸ್ಸುಳ್ಳ ರಥವನ್ನು ಮುಂದೆಬಿಟ್ಟುಕೊಂಡುಹೋದನು. ಮೊಲ್ಲೆಯ ಹೂಗಳಂತೆಯೂ, ಚಂದ್ರನಂತೆಯೂ, ಬೆಳ್ಳಿಯಂತೆಯೂ ಸ್ವಚ್ಛವಾದ ಬಿಳಿಯಬಣ್ಣವುಳ್ಳ ನಾಲ್ಕು ರಥಾಶ್ವಗಳು ಗಂಭೀರಗತಿಯಿಂದ ರಥವನ್ನೆಳೆದುತಂದುವು. ಈ ರಥವನ್ನು ಕಂಡೊಡನೆ ತ್ರಿಗರ್ತಸೈನಿಕರು ತಮ್ಮ ಗಜಸೈನ್ಯಗಳಿಂದ ಆ ರಥವನ್ನು ಸುತ್ತಲೂ ಮುತ್ತಿ

ಕೊಂಡು, ತೀಕ್ಷ್ಣಬಾಣಗಳನ್ನು ಸುರಿಯತೊಡಗಿದರು. ಸಾತ್ಯಕಿಯೂಕೂಡ ಪರ್ವತದಮೇಲೆ ಮಳೆಯನ್ನು ಕರೆಯುವಂತೆ ಆ ಗಜಸೈನ್ಯದಮೇಲೆ ಎಡೆ ಬಿಡದೆ ಬಾಣವರ್ಷವನ್ನು ಕರೆದನು. ಸಿಡಿಲಿಗೆ ಸಮಾನವಾದ ಸಾತ್ಯಕಿಯ ಬಾಣಗಳಿಂದ ಹಲವು ಆನೆಗಳು ಸತ್ತುಬಿದ್ದುವು. ಹಲವು ಆನೆಗಳು ಆ ಕೋಲೆ ಯನ್ನು ತಡೆಯಲಾರದೆ ರಣಾಂಗಣವನ್ನು ಬಿಟ್ಟು ಓಡಿದುವು. ಕೆಲವಕ್ಕೆ ದಂತಗಳು ಮುರಿದುವು! ಗಂಡಸ್ಥಳವು ಭೇದಿಸಿ ರಕ್ತಸ್ರಾವದೊಡನೆ ಕೆಲವು ಬಿದ್ದುವು! ಇದರಂತೆಯೇ ಕಿವಿಗಳು, ಸುಂಡಿಲು, ಬಾಯಿ, ಇವುಗಳೆಲ್ಲ ಹರಿದು, ಭಯಂಕರದೃಶ್ಯದಿಂದ ಕೆಲವು ಬಿದ್ದಿದ್ದುವು! ಮಾವಟಿಗನೂ, ಮೇಲೆ ಕಟ್ಟಿದ ಧ್ವಜಗಳೂ ಇಲ್ಲದೆ ಕೆಲವು ಓಡುತಿದ್ದುವು! ಕವಚಗಳೂ, ಘಂಟೆ ಗಳೂ ಕತ್ತರಿಸಿಬಿದ್ದು, ಮೇಲಿನ ಯೋಧರೂ ಇಲ್ಲದೆ ಮೈಮೇಲಿನ ಕವಚ ಗಳೂ ಇಲ್ಲದೆ, ಕಾಡಾನೆಗಳಂತೆ ದಿಕ್ಕುದಿಕ್ಕಿಗೆ ಸ್ವೇಚ್ಛೆಯಿಂದ ಪಲಾಯನ ಮಾಡುತಿದ್ದುವು ಕೆಲವು! ಸಾತ್ಯಕಿಯ ಕೈಯಿಂದ ಪ್ರಯೋಗಿಸಲ್ಪಟ್ಟ ನಾ ರಾಚ, ವತ್ಸದಂತ, ಭಲ್ಲ, ಅಂಜುಲಿಕ, ಕ್ಷುರಪ್ರ, ಅರ್ಧಚಂದ್ರವೇ ಮೊದ ಲಾದ ನಾನಾತರದ ಬಾಣಗಳಿಂದ ಗಾಯಹೊಂದಿ, ಮೈಯಿಂದ ರಕ್ತವನ್ನೂ, ಮಲಮೂತ್ರಗಳನ್ನೂ ಸುರಿಸುತ್ತ, ದೀನಧ್ವನಿಯಿಂದ ಅರಚುತ್ತ ಎಷ್ಟೋ ಆನೆಗಳು ಸಿಕ್ಕಿದಕಡೆಗೆ ಪಲಾಯನಮಾಡುತ್ತಿದ್ದುವು. ಕೆಲವು ತಲೆತಿರುಗಿ ಸುತ್ತಿಸುತ್ತಿ ಬೀಳುವುವು. ಅಲ್ಲಲ್ಲ ಕೆಲವು ತಡವರಿಸಿ ಬೀಳುವುವು! ಕೆಲವು ಸುಕ್ಕಿಬೀಳುವುವು! ಹೀಗೆ ಆ ಗಜಸೈನ್ಯವೆಲ್ಲ ಸಾತ್ಯಕಿಯ ಬಾಣಗಳಿಂದ ಬಹಳವಾಗಿ ಕ್ಷೀಣವಾಗುತ್ತಿರುವುದನ್ನು ನೋಡಿ, ಮಹಾಬಲಾಢ್ಯನಾದ ಜಲಸಂಧನೆಂಬವನು, ತನ್ನ ಆನೆಯನ್ನು ವೇಗದಿಂದ ಮುಂದೆಬಿಟ್ಟು ರಜತಾಶ್ವನ (ಸಾತ್ಯಕಿಯ) ರಥದಕಡೆಗೆ ಬಂದನು. ಸುವರ್ಣಮಯ ಗಳಾದ ಕಿರೀಟ ಕವಚ ಕುಂಡಲ ಕೇಯೂರಾಂಗದಗಳಿಂದ ಅಲಂಕೃತ ನಾಗಿ, ರಕ್ತಚಂದನವನ್ನು ಮೈಗೆ ಲೇಪಿಸಿಕೊಂಡು ಒಂದು ಸುವರ್ಣ ಮಾಲಿಕೆಯನ್ನು ತಲೆಯಲ್ಲಿ ಧರಿಸಿದ್ದ ಅವನು ಕತ್ತಿಯನ್ನು ಹಿಡಿದು ಧನು ಸ್ಸನ್ನು ಟಂಕಾರಮಾಡುತ್ತಿರುವನು. ಕಂಠದಲ್ಲಿ ಅತ್ಯಂತಪ್ರಕಾಶಮಾನವಾದ ಸುವರ್ಣಹಾರವನ್ನು ಧರಿಸಿರುವನು. ಹೀಗೆ ಸುವರ್ಣಾಭರಣಗಳಿಂದ ಶೋಭಿತನಾದ ಆ ಮಗಧರಾಜನು, ಮಿಂಚಿನೊಡಗೂಡಿದ ಮೇಘದಂತೆ ಗಜಾ

ರೂಢನಾಗಿ ಬರುತ್ತಿರುವುದನ್ನು ನೋಡಿ, ಅವನ ಆನೆಯು ಮುಂದೆಬಾರ ದಂತೆ ಸಾತ್ಯಕಿಯು ಬಾಣಗಳಿಂದ ತಡೆದುಬಿಟ್ಟನು. ಇದನ್ನು ನೋಡಿ ಜಲ ಸಂಧನಿಗೆ ಮಹತ್ತಾದ ಆಕ್ರೋಶವುಂಟಾಯಿತು. ಸಾತ್ಯಕಿಯ ಎದೆಗೆ ಗುರಿ ಯಿಟ್ಟು ತೀವ್ರಬಾಣಗಳನ್ನು ಹೊಡೆದನು. ಒಂದು ಭಲ್ಲದಿಂದ ಸಾತ್ಯಕಿಯ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿಬಿಟ್ಟನು. ಚಾಪರಹಿತನಾದ ಆ ಸಾತ್ಯಕಿ ಯನ್ನು ನೋಡಿ ನಗುತ್ತ, ಅವನಮೇಲೆ ತಿರುಗಿ ಐದು ಬಾಣಗಳನ್ನು ಪ್ರಯೋಗಿಸಿದನು. ಇಷ್ಟಾದರೂ ಸಾತ್ಯಕಿಯು ಜಲಸಂಧನ ಬಾಣಗಳನ್ನು ಲಕ್ಷ್ಯಮಾಡದೆ ನಿಶ್ಚಲನಾಗಿದ್ದನು. ಇದು ನೋಡುವವರಿಗೆ ಆಶ್ಚರ್ಯಕರ ವಾಯಿತು. ಒಡನೆಯೇ ಸಾತ್ಯಕಿಯು ಬೇರೊಂದು ಬಿಲ್ಲನ್ನು ಕೈಗೆತ್ತಿ ಕೊಂಡು "ಎಲಾ! ನಿಲ್ಲು, ನಿಲ್ಲು!" ಎಂದು ಹೇಳುತ್ತ, ಜಲಸಂಧನ ಎದೆಗೆ ಗುರಿಯಿಟ್ಟು ಅರುವತ್ತು ಬಾಣಗಳನ್ನು ಹೊಡೆದನು. ತೀವ್ರವಾದ ಒಂದು ಕ್ಷುರಪ್ರದಿಂದ ಜಲಸಂಧನ ಕೈಯಲ್ಲಿದ್ದ ದೊಡ್ಡ ಧನುಸ್ಸನ್ನು ಮುಷ್ಟಿಭಾಗ ದಲ್ಲಿ ಕತ್ತರಿಸಿ, ಬೇರೆ ಮೂರು ಬಾಣಗಳಿಂದ ಅವನನ್ನೂ ಬಹಳವಾಗಿ ನೋ ಯಿಸಿದನು. ಜಲಸಂಧನು ಮುರಿದ ಧನುಸ್ಸನ್ನು ಕೆಳಕ್ಕೆ ಬಿಸುಟು, ಒಂದು ತೋಮರವನ್ನೆತ್ತಿ ಸಾತ್ಯಕಿಯಮೇಲೆ ಬೀಸಿದನು. ಅದು ಬುಸುಗುಟ್ಟುವ ಹಾವಿನಂತೆ ಹೊರಟು, ಸಾತ್ಯಕಿಯ ಎಡದ ಭುಜವನ್ನು ಭೇದಿಸಿಕೊಂಡು, ಹೋಗಿ ನೆಲಕ್ಕೆ ಬಿದ್ದಿತು. ಇದನ್ನು ಸಹಿಸಲಾರದೆ ಸಾತ್ಯಕಿಯು ಅತ್ಯಾ ಕ್ರೋಶದಿಂದ ಜಲಸಂಧನಮೇಲೆ ಏಕಕಾಲದಲ್ಲಿ ಮೂವತ್ತು ಬಾಣಗಳನ್ನು ಬಿಟ್ಟನು. ಆಮೇಲೆ ಜಲಸಂಧನು ಎತ್ತಿನ ಚರ್ಮದಿಂದ ಮಾಡಲ್ಪಟ್ಟ ಶತ ಚಂದ್ರಕಗಳುಳ್ಳ ಒಂದು ಗುರಾಣಿಯನ್ನೂ, ಕತ್ತಿಯನ್ನೂ ಕೈಗೆತ್ತಿಕೊಂಡು ಆ ಕತ್ತಿಯನ್ನು ಸಾತ್ಯಕಿಯಮೇಲೆ ಬೀಸಿದನು. ಅದು ಅಲಾತಚಕ್ರದಂತೆ ಆಕಾಶದಲ್ಲಿ ಗಿರಗಿರನೆ ಸುತ್ತಿಕೊಂಡು ಬಂದು ಸಾತ್ಯಕಿಯ ಧನುಸ್ಸಿಗೆ ತಾಗಿತು. ಅದರಿಂದ ಸಾತ್ಯಕಿಯ ಧನುಸ್ಸು ಮುರಿಯಿತು. ಸಾತ್ಯಕಿಯು ಬೇರೊಂದು ಧನುಸ್ಸನ್ನು ಕೈಗೆತ್ತಿಕೊಂಡು, ಜಲಸಂಧನನ್ನು ನೋಡಿ ಹೆಮ್ಮೆ ಯಿಂದ ನಗುತ್ತ, ವಜ್ರಸಮಾನವಾದ ಒಂದು ಬಾಣವನ್ನು ಮಹಾವೇಗದಿಂದ ಅವನಮೇಲೆ ಹೊಡೆದನು. ಎರಡು ಕ್ಷುರಗಳಿಂದ ಆ ಜಲಸಂಧನ ತೋಳು ಗಳೆರಡನ್ನೂ ಕತ್ತರಿಸಿಬಿಟ್ಟನು. ಸುವರ್ಣಾಲಂಕೃತಗಳಾದ ಆ ತೋಳು

ಗಳು ಐದುಹೆಡೆಯ ಹಾವುಗಳಂತೆ ಕೆಳಗೆ ಬಿದ್ದುವು. ಇಷ್ಟರಲ್ಲಿಯೇ ಸಾತ್ಯಕಿಯು ಮೂರನೆಯ ಬಾಣವನ್ನು ಪ್ರಯೋಗಿಸಲು, ಅದು ಎಸಳಾದ ಹಲ್ಲುಗಳಿಂದಲೂ, ಉಬ್ಬಿದ ದವಡೆಗಳಿಂದಲೂ ಕೂಡಿ, ಕಿರೀಟಕುಂಡಲಾಲಂಕೃತವಾದ ಅವನ ತಲೆಯನ್ನು ಕತ್ತರಿಸಿಕೆಡಹಿತು. ತಲೆ, ತೋಳು, ಮುಂಡಗಳೆಲ್ಲ ಛಿನ್ನಭಿನ್ನವಾಗಿ, ಆ ಜಲಸಂಧನ ದೇಹವು ಕೆಳಗೆ ಬೀಳುವಾಗ, ಅವನ ರಕ್ತದಿಂದ ಆನೆಯ ಮೈಗೆಲ್ಲ ಅಭಿಷೇಕಮಾಡಿದಂತಾಯಿತು. ಹೀಗೆ ಸಾತ್ಯಕಿಯು ತನ್ನ ಬಾಣದಿಂದ ಜಲಸಂಧನನ್ನು ಕೊಂದುಕೆಡಹಿದಮೇಲೆ, ಆ ಆನೆಯಮೇಲಿದ್ದ ಅಂಬಾರಿಯನ್ನೂ ಮುರಿದುಕೆಡಹಿದನು. ಆಗ ಆ ಆನೆಯು ಆ ಅಂಬಾರಿಯಲ್ಲಿ ಅವಶಿಷ್ಟವಾದ ಆಸನ ಮುಂತಾದ ಕೆಲವು ಸಾಮಗ್ರಿಗಳು ಬೆನ್ನಮೇಲೆ ತೂಗಾಡುತ್ತಿರುವಹಾಗೆಯೇ, ರಕ್ತದಿಗ್ಧಶರೀರವಾಗಿ, ಆ ಸೈನ್ಯದನಡುವೆ ಓಡಲಾರಂಭಿಸಿತು. ಅದು ಭಯಂಕರಧ್ವನಿಯಿಂದ ಅರಚುತ್ತ ಓಡುವಾಗ, ನಮ್ಮ ಸೈನ್ಯದಲ್ಲಿ ಅನೇಕ ಪ್ರಾಣಿಗಳು ಆ ಆನೆಯ ಕಾಲಿನ ತುಳಿತಕ್ಕೆ ಸಿಕ್ಕಿ ಸತ್ತುವು. ಜಲಸಂಧನು ಹತನಾದುದನ್ನು ನೋಡಿ ಕೌರವಸೈನ್ಯದಲ್ಲಿ ದೊಡ್ಡ ಹಾಹಾಕಾರವುಂಟಾಯಿತು. ಮುಂದೆ ಯುದ್ಧದಾಶೆಯನ್ನು ಬಿಟ್ಟು ಕೌರವಸೈನ್ಯಗಳು ಅಲ್ಲಲ್ಲಿ ಓಡಲಾರಂಭಿಸಿದುವು. ಇದನ್ನು ನೋಡಿ ದ್ರೋಣನು ಥಟ್ಟನೆ ಬಂದು ಸಾತ್ಯಕಿಯನ್ನು ಇದಿರಿಸಿ ನಿಂತನು. ದ್ರೋಣನ ಕಡೆಯ ಸೈನ್ಯಗಳೆಲ್ಲ ಸಾತ್ಯಕಿಯನ್ನು ಮುತ್ತಿಕೊಂಡುವು. ದ್ರೋಣಸಾತ್ಯಕಿಗಳಿಬ್ಬರಿಗೂ ದೇವಾಸುರಯುದ್ಧದಂತೆ ಪ್ರಬಲವಾದ ಯುದ್ಧವು ಆರಂಭಿಸಿತು.

ಇದು ನೂರ ಹದಿನೈದನೆಯ ಅಧ್ಯಾಯವು.



## ದುರ್ಯೋಧನ ಕೃತವರ್ಮರಿಬ್ಬರೂ ಸಾತ್ಯಕಿಯಿಂದ ಪರಾಜಿತರಾಗಿ ಓಡಿದುದು.

ಧೃತರಾಷ್ಟ್ರಮಹಾರಾಜಾ! ಸಾತ್ಯಕಿಯ ಪರಾಕ್ರಮವನ್ನು ನೋಡಿ ಸಹಿಸಲಾರದೆ, ನಿನ್ನ ಕಡೆಯ ಅನೇಕ ಮಹಾರಥರು ಬಾಣಗಳನ್ನು ವರ್ಷಿಸುತ್ತ, ಬಹಳ ಆತುರದಿಂದ ಅವನನ್ನು ಇದಿರಿಸಿಬಂದರು. ದ್ರೋಣನು

ಸಾತ್ಯಕಿಯನ್ನು ಎಪ್ಪತ್ತೇಳು ತೀವ್ರಬಾಣಗಳಿಂದ ಹೊಡೆದನು. ಅದೇಕಾಲ ದಲ್ಲಿ ನಿನ್ನ ಮಕ್ಕಳಾದ ದುರ್ಮರ್ಷಣನು, ದುಸ್ಸಹನು, ವಿಕರ್ಣನು, ಈ ಮೂವರೂ ಕ್ರಮವಾಗಿ, ಹನ್ನೆರಡು, ಹತ್ತು, ಮೂವತ್ತು ಬಾಣಗಳನ್ನು ಸಾತ್ಯಕಿಯಮೇಲೆ ಪ್ರಯೋಗಿಸಿದರು. ವಿಕರ್ಣನ ಬಾಣಗಳು ಸಾತ್ಯಕಿಯ ಎದೆಯ ಎಡಗಡೆಗೆ ತಾಗಿದುವು. ಒಂದೇಕಾಲದಲ್ಲಿ ಸಾತ್ಯಕಿಯಮೇಲೆ ದುರ್ಮುಖನು ಹತ್ತು ಬಾಣಗಳನ್ನೂ, ದುಶ್ಯಾಸನನು ಎಂಟು ಬಾಣಗಳನ್ನೂ, ಚಿತ್ರಸೇನನು ಎರಡು ಬಾಣಗಳನ್ನೂ ಪ್ರಯೋಗಿಸಿದರು. ದುರ್ಯೋಧ ನನೂ ಅಪರಿಮಿತವಾಗಿ ಬಾಣವರ್ಷಗಳನ್ನು ಕರೆಯುತ್ತಿದ್ದನು. ಇನ್ನೂ ಅನೇಕಮಹಾರಥರು ಸುತ್ತಲೂ ನಿಂತು ವಿವಿಧಬಾಣಗಳನ್ನು ಪ್ರಯೋ ಗಿಸುತ್ತಿದ್ದರು. ಹೀಗೆ ನಿನ್ನವರು ಸುತ್ತಿಮುತ್ತಿ ಎಡೆಬಿಡದೆ ಬಾಣದ ಮಳೆಯನ್ನು ಕರೆಯುತ್ತಿದ್ದರೂ, ಸಾತ್ಯಕಿಯು ನಿಶ್ಚಲನಾಗಿ ನಿಂತು ಅವರ ಬಾಣಗಳನ್ನೆಲ್ಲ ತನ್ನ ಹಸ್ತವೇಗದಿಂದ ಕತ್ತರಿಸುತ್ತಬಂದನು. ಅಸ್ತ್ರ ವಿದ್ಯಾಪಾರಂಗತನಾದ ಆ ಸಾತ್ಯಕಿಯು ದ್ರೋಣನಿಗೆ ಮೂರು, ದುಸ್ಸಹ ನಿಗೆ ಒಂಭತ್ತು, ವಿಕರ್ಣನಿಗೆ ಇಪ್ಪತ್ತೈದು, ಚಿತ್ರಸೇನನಿಗೆ ಏಳು, ದುರ್ಮ ರ್ಷಣನಿಗೆ ಹನ್ನೆರಡು, ವಿವಿಂಶತಿಗೆ ಎಂಟು, ಸತ್ಯವ್ರತನಿಗೆ ಒಂಭತ್ತು, ವಿಜ ಯನಿಗೆ ಹತ್ತು, ಹೀಗೆ ಒಬ್ಬೊಬ್ಬರಿಗೂ ಗುರಿಯಿಟ್ಟು ಬಾಣಗಳನ್ನು ಪ್ರಯೋ ಗಿಸಿ, ಒಬ್ಬೊಬ್ಬರನ್ನೂ ಬಹಳವಾಗಿ ನೋಯಿಸಿದನು. ನಿನ್ನ ಮಗನಾದ ದುರ್ಯೋಧನನಮೇಲೆ ಅತಿತೀಕ್ಷ್ಣಗಳಾದ ಮೂರು ಬಾಣಗಳನ್ನು ಬಿಟ್ಟನು. ಅದುಮಾತ್ರವಲ್ಲ! ಲೋಕಪ್ರಭುವೂ, ಮಹಾರಥನೂ, ರಾಜನೂ ಎನಿಸಿ ಕೊಂಡ ನಿನ್ನ ಮಗನನ್ನು ಆಗಲೇ ಕೊನೆಮುಟ್ಟಿಸಬೇಕೆಂದು ಸಂಕಲ್ಪಿಸಿ, ಬಿಲ್ಲನ್ನೊದರುತ್ತ, ಅವನನ್ನಿದಿರಿಸಿ ನಿಂತು, ಹಲವು ಬಾಣಗಳನ್ನು ಅವನ ಮೇಲೆ ವೇಗದಿಂದ ಪ್ರಯೋಗಿಸಿದನು. ನಿನ್ನ ಮಗನಿಗೂ, ಸಾತ್ಯಕಿಗೂ ಪ್ರಬಲಯುದ್ಧವಾಯಿತು. ಇಬ್ಬರೂ ತಮ್ಮ ಬಾಣವರ್ಷಗಳಿಂದ ಒಬ್ಬ ನ್ನೊಬ್ಬರು ಮರೆಸಿದರು. ನಿನ್ನ ಮಗನ ಬಾಣಗಳು ಸಾತ್ಯಕಿಯ ಮೈಯಲ್ಲಿ ನಾಟಿ, ಅವನ ದೇಹದಿಂದ ರಕ್ತವು ಸುರಿಯುತ್ತಿದ್ದಿತು. ಅದರಂತೆಯೇ ಸಾತ್ಯ ಕಿಯ ಬಾಣಗಳಿಂದ ನಿನ್ನ ಮಗನ ಮೈಯಲ್ಲಿಯೂ ರಕ್ತಸ್ರಾವವುಂಟಾಗಿ ಅದರಿಂದ ಅವನು ಸುವರ್ಣಾಲಂಕೃತವಾದ ಯೂಪಸ್ತಂಭದಂತೆ ಕಾಣುತ್ತಿ

ದ್ದನು. ಇಷ್ಟರಲ್ಲಿ ಸಾತ್ಯಕಿಯು ನಿನ್ನ ಮಗನ ಕೈಯಲ್ಲಿದ್ದ ಧನುಸ್ಸನ್ನು ಕತ್ತರಿಸಿ, ಅವನಮೇಲೆ ಹಲವು ಬಾಣಗಳನ್ನು ಕರೆದನು. ಸಾತ್ಯಕಿಯ ಈ ಪರಾಕ್ರಮಕಾರ್ಯಕ್ಕೆ ಸಹಿಸಲಾರದೆ, ನಿನ್ನ ಮಗನು ಬೇರೊಂದು ಧನುಸ್ಸನ್ನು ಕೈಗೆತ್ತಿಕೊಂಡು, ಸಾತ್ಯಕಿಯಮೇಲೆ ನೂರಾರು ಬಾಣಗಳನ್ನು ಬಿಟ್ಟನು. ಸಾತ್ಯಕಿಯೂ ಪ್ರತಿಬಾಣಗಳನ್ನು ಬಿಟ್ಟು ನಿನ್ನ ಮಗನನ್ನು ಬಹಳವಾಗಿ ನೋಯಿಸಿದನು. ದುರ್ಯೋಧನನಿಗೆ ಈ ಸ್ಥಿತಿಯುಂಟಾದುದನ್ನು ನೋಡಿ, ನಿನ್ನ ಬೇರೆ ಮಕ್ಕಳೆಲ್ಲರೂ ಗುಂಪುಕೂಡಿಬಂದು, ಸಾತ್ಯಕಿಯನ್ನು ಎಡೆಬಿಡದೆ ಬಾಣಗಳಿಂದ ಹೊಡೆಯುತ್ತಿದ್ದರು. ಆಗಲೂ ಸಾತ್ಯಕಿಯು ಹೆದರದೆ, ಒಬ್ಬೊಬ್ಬರನ್ನೂ ಐದೈದು ಬಾಣಗಳಿಂದ ಹೊಡೆದನು. ತಿರುಗಿ ಒಬ್ಬೊಬ್ಬರಮೇಲೆ ಏಳೇಳು ಬಾಣಗಳನ್ನು ಬಿಟ್ಟನು. ಆಮೇಲೆ ದುರ್ಯೋಧನನನ್ನು ನೋಡಿ ನಗುತ್ತ, ಅವನಮೇಲೆ ಎಂಟು ಬಾಣಗಳನ್ನು ಬಿಟ್ಟು, ತಿರುಗಿ ಅವನ ಕೈಯಲ್ಲಿದ್ದ ದೊಡ್ಡ ಧನುಸ್ಸನ್ನು ಕತ್ತರಿಸಿಬಿಟ್ಟನು. ನಿನ್ನ ಮಗನ ರಥದಮೇಲೆ ಏರಿಸಿದ್ದ ಸರ್ಪಧ್ವಜವನ್ನು ತುಂಡುಮಾಡಿ ಕೆಡಹಿದನು. ನಾಲ್ಕು ಬಾಣಗಳಿಂದ ದುರ್ಯೋಧನನ ನಾಲ್ಕು ರಥಾಶ್ವಗಳನ್ನೂ ಕೊಂದುಬಿಟ್ಟನು. ಒಂದು ಕ್ಷುರಪ್ರದಿಂದ ಅವನ ಸಾರಥಿಯನ್ನು ಕೆಡಹಿದನು. ವಿರಥನಾದ ನಿನ್ನ ಮಗನಮೇಲೆ ನಡುನಡುವೆ ಅನೇಕ ಬಾಣಗಳನ್ನೂ ವರ್ಷಿಸುತ್ತಿದ್ದನು. ಈ ಪ್ರಹಾರಗಳನ್ನು ತಡೆಯಲಾರದೆ ನಿನ್ನ ಮಗನು, ಯುದ್ಧರಂಗವನ್ನು ಬಿಟ್ಟು ವಿಮುಖನಾಗಿ, ಸಮೀಪದಲ್ಲಿದ್ದ ಚಿತ್ರಸೇನನ ರಥವನ್ನೇರಿ ಓಡಿಹೋದನು. ಆಕಾಶದಲ್ಲಿ ರಾಹುಗ್ರಸ್ತನಾದ ಚಂದ್ರನಂತೆ ಸಾತ್ಯಕಿಯ ಬಾಣಗಳಲ್ಲಿ ಮರೆಸಿಹೋಗಿದ್ದ ಕೌರವರಾಜನ ಸ್ಥಿತಿಯನ್ನು ನೋಡಿ ಎಲ್ಲೆಲ್ಲಿಯೂ ಹಾಹಾಕಾರವು ಹುಟ್ಟಿತು. ಈ ಧ್ವನಿಯನ್ನು ಕೇಳಿ ಕೃತವರ್ಮನು ವೇಗದಿಂದ ತನ್ನ ರಥವನ್ನು ಬಿಟ್ಟುಕೊಂಡು, ಸಾತ್ಯಕಿಯಿದ್ದ ಸ್ಥಳಕ್ಕೆ ಬಂದನು. ಅಲ್ಲಿ ತಮ್ಮ ರಾಜನಿಗುಂಟಾದ ಈ ಅಪಾಯವನ್ನು ನೋಡಿ, ಆತುರದಿಂದ ತನ್ನ ಸಾರಥಿಯನ್ನು “ನಡೆ! ಬೇಗನೆ ನಡೆ!” ಎಂದು ಕಠಿನವಾಕ್ಯದಿಂದ ನಿರ್ಬಂಧಿಸುತ್ತ, ಸಾತ್ಯಕಿಗಿದಿರಾಗಿ ನಿಂತನು. ಬಾಯನ್ನು ತೆರೆದುಕೊಂಡುಬರುವ ಮೃತ್ಯುವಿನಂತೆ ಕೃತವರ್ಮನು ಕೋಪಾವೇಶದಿಂದ ಬರುವುದನ್ನು ನೋಡಿ, ಸಾತ್ಯಕಿಯೂಕೂಡ ತನ್ನ ಸಾರಥಿ

ಯನ್ನು ಕುರಿತು "ಸೂತಾ! ಅದೋ! ಕೃತವರ್ಮನು ನನ್ನನ್ನಿದಿರಿಸುವು ದಕ್ಕಾಗಿ ಆತುರದಿಂದ ಬರುತ್ತಿರುವನು. ನೀನೂ ನಮ್ಮ ರಥವನ್ನು ಬೇಗನೆ ಮುಂದೆ ಬಿಡು! ಒಂದೇನಿಮಿಷಮಾತ್ರದಲ್ಲಿ ಆವನನ್ನು ತೀರಿಸಿಬಿಡುವೆನು" ಎಂದನು. ಆದರಂತೆಯೇ ಸಾತ್ಯಕಿಯ ರಥವು ಮುಂದುವರಿದು, ಧನುರ್ಧಾ ರಿಗಳಿಗೆಲ್ಲ ಆದರ್ಶಪ್ರಾಯನಾದ ಕೃತವರ್ಮನಿಗಿದಿರಾಗಿ ನಿಂತಿತು. ಸೂರ್ಯ ನಿಗೂ, ಉರಿಯುವ ಬೆಂಕಿಗೂ ಸಮಾನರಾದ ಅವರಿಬ್ಬರೂ ಕೊಬ್ಬಿದ ಹುಲಿಗಳಂತೆ ಯುದ್ಧಕ್ಕೆ ನಿಂತರು. ಕೃತವರ್ಮನು ಸಾತ್ಯಕಿಯಮೇಲೆ ಇಪ್ಪತ್ತಾರು ಬಾಣಗಳನ್ನು ಹೊಡೆದನು. ಐದು ಬಾಣಗಳಿಂದ ಅವನ ಸಾರಥಿ ಯನ್ನೂ, ನಾಲ್ಕು ಬಾಣಗಳಿಂದ ಸಾತ್ಯಕಿಯ ನಾಲ್ಕು ರಥಾಶ್ವಗಳನ್ನೂ ಹೊಡೆದನು. ಸುವರ್ಣಮಯವಾದ ಧ್ವಜದಿಂದಲೂ, ಸುವರ್ಣಾಭರಣಗ ಳಿಂದಲೂ, ಸ್ವರ್ಣಕವಚದಿಂದಲೂ ಕೂಡಿದ ಆ ಕೃತವರ್ಮನು ಚಿನ್ನದ ಕಟ್ಟುಳ್ಳ ತನ್ನ ಮಹಾಧನುಸ್ಸನ್ನು ಟಂಕಾರಮಾಡುತ್ತ ಸಾತ್ಯಕಿಯಮೇಲೆ ಪರಂಪರೆಯಾಗಿ ಬಾಣಗಳನ್ನು ಬಿಡುತ್ತಿದ್ದನು. ಸಾತ್ಯಕಿಯು ಕೃತವರ್ಮನ ಮೇಲೆ ಎಂಭತ್ತು ಬಾಣಗಳನ್ನು ಏಕಕಾಲದಲ್ಲಿ ಪ್ರಯೋಗಿಸಿದನು. ಆ ಬಾಣ ಪ್ರಹಾರದಿಂದ ಭೂಕಂಪದಲ್ಲಿ ಪರ್ವತವು ನಡುಗುವಂತೆ ಕೃತವರ್ಮನ ದೇಹವು ನಡುಗಿಹೋಯಿತು. ಇದೇಸಮಯದಲ್ಲಿ ಸಾತ್ಯಕಿಯು ಅರುವತ್ತು ಮೂರು ಬಾಣಗಳಿಂದ ಕೃತವರ್ಮನ ರಥಾಶ್ವಗಳನ್ನೂ, ಏಳು ಬಾಣಗಳಿಂದ ಅವನ ಸಾರಥಿಯನ್ನೂ ಕೊಂದುಕೆಡಹಿದನು. ಹೀಗೆ ಕುದುರೆಗಳೂ, ಸಾರ ಥಿಯೂ ಸತ್ತಮೇಲೆಯೂ, ರಥದಲ್ಲಿ ಕುಳಿತಿದ್ದ ಆ ಕೃತವರ್ಮನಮೇಲೆ ಸಾತ್ಯ ಕಿಯು ಅತಿತೀವ್ರವಾದ ಒಂದು ಬಾಣವನ್ನು ಪ್ರಯೋಗಿಸಿದನು. ಆ ಬಾಣವು ಬೆಂಕಿಯ ಕಿಡಿಗಳನ್ನು ಕೆದರುತ್ತ, ಕೋಪಗೊಂಡ ಸರ್ಪದಂತೆಯೂ, ಯಮದಂಡದಂತೆಯೂ ಬಂದು, ಕೃತವರ್ಮನ ಸ್ವರ್ಣಕವಚವನ್ನು ಭೇದಿಸಿ ಕೊಂಡು, ಅವನ ಮೈಯಲ್ಲಿ ನಾಟಿ, ರಕ್ತದಿಂದ ತೊಯ್ದು ಭೂಮಿಯಲ್ಲಿ ಹುದುಗಿತು. ಕೃತವರ್ಮನ ದೇಹವೆಲ್ಲ ರಕ್ತಮಯವಾಯಿತು. ಸಾತ್ಯಕಿಯ ಈ ಪ್ರಹಾರದಿಂದ (ಸಿಂಹದಂಷ್ಟ್ರನೆಂಬ ನಾಮಾಂತರವುಳ್ಳ) ಆ ಕೃತವ ರ್ಮನು ಬಹಳವಾಗಿ ನೊಂದು, ರಥದಲ್ಲಿ ನಿಲ್ಲಲಾರದೆ ಮಂಡಿಯನ್ನೂರಿ ರಥದ ಗದ್ದುಗೆಯಲ್ಲಿಯೇ ಒರಗಿ ಮಲಗಿದನು. ಪರಾಕ್ರಮದಲ್ಲಿ ಸಹಸ್ರ

ಬಾಹುಗಳುಳ್ಳ ಕಾರ್ತವೀರ್ಯನಿಗೆ ಸಮಾನನೂ, ಸಮುದ್ರದಂತೆ ಅಕ್ಷೋಭ್ಯನೂ ಆದ ಆ ಕೃತವರ್ಮನನ್ನು ಜಯಿಸಿದಮೇಲೆ, ಸಾತ್ಯಕಿಯು ಅಲ್ಲಿಂದ ಮುಂದುವರಿದನು. ಧೃತರಾಷ್ಟ್ರಮಹಾರಾಜಾ! ಸಾತ್ಯಕಿಯ ಬಲವನ್ನು ನೋಡಿದೆಯಾ? ಅವನ ಬಾಣವು ಯಾರಲ್ಲಿಯೂ ವಿಫಲವಾಗತಕ್ಕುದಲ್ಲ. ಎಷ್ಟೋ ಕ್ಷತ್ರಿಯರು ಬಂದು ತಡೆದರೂ ಲಕ್ಷ್ಯಮಾಡದೆ, ಸಾತ್ಯಕಿಯು ಅವರನ್ನೆಲ್ಲ ಜಯಿಸಿ, ಅರ್ಜುನನನ್ನು ನೋಡುವ ಆತುರದಿಂದ ಮುಂದೆ ಹೊರಟನು. ಆಗಿನ ಯುದ್ಧದಲ್ಲಿ ಸಾತ್ಯಕಿಯ ಬಾಣಗಳಿಂದ ನಿನ್ನ ಕಡೆಯ ಎಷ್ಟೋ ಸೈನ್ಯಗಳು ಹತವಾದುವು. ಕತ್ತಿ, ಶಕ್ತಿ, ಬಿಲ್ಲು, ಆನೆಗಳು, ಕುದುರೆಗಳು, ರಥಗಳು, ಇವೆಲ್ಲ ರಣರಂಗದಲ್ಲಿ ಛಿನ್ನಭಿನ್ನವಾಗಿ ಹರಡಿಬಿದ್ದಿದ್ದುವು. ರಕ್ತಪ್ರವಾಹಗಳು ಅಲ್ಲಲ್ಲಿ ನದಿಗಳಂತೆ ಹರಿಯುತ್ತಿದ್ದುವು. ಇವುಗಳಿಂದ ದುರ್ಗಮವಾದ ರಣರಂಗವನ್ನು ದಾಟಿಕೊಂಡು, ನಿನ್ನ ಸೈನ್ಯಗಳೆಲ್ಲ ಆಶ್ಚರ್ಯದಿಂದ ಬೆರಗಾಗಿ ನೋಡುತ್ತಿರುವಾಗಲೇ, ಅವುಗಳ ನಡುವೆ ಸಾತ್ಯಕಿಯು ನಿರ್ಲಕ್ಷ್ಯವಾಗಿ ಮುಂದೆ ಹೊರಟು, ದೈತ್ಯಸೇವೆಯನ್ನು ಜಯಿಸಿಕೊಂಡುಬರುವ ಇಂದ್ರನಂತೆ ಒಪ್ಪುತ್ತಿದ್ದನು. ಇಷ್ಟರಲ್ಲಿಯೇ ಕೃತವರ್ಮನು ಮೂರ್ಛೆತಿಳಿದು ಮೆಲ್ಲಗೆ ಚೇತರಿಸಿಕೊಂಡು, ಬೇರೊಂದು ಮಹಾಧನುಸ್ಸನ್ನು ಹಿಡಿದು, ಪಾಂಡವರನ್ನು ತಿರುಗಿ ಇದಿರಿಸುವುದಕ್ಕಾಗಿ ಸಿದ್ಧನಾದನು.

ಇದು ನೂರಹದಿನಾರನೆಯ ಅಧ್ಯಾಯವು.



## ಸಾತ್ಯಕಿಯ ಪರಾಕ್ರಮವು.

ಧೃತರಾಷ್ಟ್ರಮಹಾರಾಜಾ! ಹೀಗೆ ಸಾತ್ಯಕಿಯು ಕೌರವಸೈನ್ಯಗಳನ್ನೆಲ್ಲ ಚದರಿಸುತ್ತ ಮುಂದೆಮುಂದೆ ಹೋಗುತ್ತಿರಲು, ದ್ರೋಣನು ಅದನ್ನು ನೋಡಿ ಸಹಿಸಲಾರದೆ, ಅವನಮೇಲೆ ಬಾಣಗಳನ್ನು ವರ್ಷಿಸುತ್ತ ಬಂದನು. ಇಂದ್ರನಿಗೂ, ಬಲಿಗೂ ನಡೆದ ಮಹಾಯುದ್ಧದಂತೆ ತೀವ್ರಯುದ್ಧವಾಯಿತು. ಈನಡುವೆ ದ್ರೋಣನು ಸಾತ್ಯಕಿಯ ಹಣೆಗೆ ಗುರಿಯಿಟ್ಟು ಮೂರು ಬಾಣಗಳನ್ನು ಹೊಡೆದನು. ಅವು ಮೂರೂ ಸಾತ್ಯಕಿಯ ಹಣೆಯಲ್ಲಿ ನಾಟಿದಾಗ,

ಅವನು ಮೂರುಶಿಖರಗಳುಳ್ಳ ಪರ್ವತದಂತೆ ಕಾಣಿಸುತ್ತಿದ್ದನು. ಇದೇ ಸಮಯದಲ್ಲಿ ದ್ರೋಣನು ಮೇಲೆಮೇಲೆ ಇನ್ನೂ ಅನೇಕಬಾಣಗಳನ್ನು ಸಾತ್ಯಕಿಯಮೇಲೆ ಪ್ರಯೋಗಿಸಿದನು. ದ್ರೋಣನು ಬಿಟ್ಟ ಒಂದೊಂದು ಬಾಣವನ್ನೂ ಸಾತ್ಯಕಿಯು ಎರಡೆರಡು ಬಾಣಗಳಿಂದ ಕತ್ತರಿಸುತ್ತ ಬಂದನು. ಸಾತ್ಯಕಿಯ ಹಸ್ತಲಾಘವವನ್ನು ನೋಡಿ ದ್ರೋಣನು ಆಶ್ಚರ್ಯದಿಂದ ಹಸನ್ಮುಖನಾಗಿ, ತಿರುಗಿ ಮೂವತ್ತುಬಾಣಗಳನ್ನು ಹೊಡೆದನು. ತಿರುಗಿ ಐವತ್ತುಬಾಣಗಳನ್ನು ಅವನಮೇಲೆ ಬಿಟ್ಟನು. ಹುತ್ತದಿಂದ ಹೊರಟುಬರುವ ಹಾವುಗಳಂತೆ ದ್ರೋಣನ ಧನುಸ್ಸಿನಿಂದ ಎಡಬಿಡದೆ ಬಾಣಗಳು ಹೊರಡುತ್ತಿದ್ದುವು. ಆಗ ದ್ರೋಣನು ಸಾತ್ಯಕಿಗಿಂತಲೂ ಮೇಲಾದ ತನ್ನ ಹಸ್ತಲಾಘವವನ್ನು ಜನಗಳಿಗೆ ತೋರಿಸುತಿದ್ದನು. ಇವರಿಬ್ಬರ ಹಸ್ತಲಾಘವದಲ್ಲಿ "ಯಾರು ಹೆಚ್ಚು? ಯಾರುಕಡಿಮೆ" ಎಂಬ ವ್ಯತ್ಯಾಸವೇ ಯಾರಿಗೂ ತಿಳಿಯದಂತಾಯಿತು. ಆಮೇಲೆ ಸಾತ್ಯಕಿಯು ಒಂಭತ್ತುಬಾಣಗಳಿಂದ ದ್ರೋಣನನ್ನು ಹೊಡೆದು, ಅವನ ಧ್ವಜವನ್ನು ಕತ್ತರಿಸಿದನು. ನೂರು ಬಾಣಗಳಿಂದ ಅವನ ಸಾರಥಿಯನ್ನು ಹೊಡೆದನು. ದ್ರೋಣನು ಅದನ್ನು ಸಹಿಸಲಾರದೆ, ಎಪ್ಪತ್ತುಬಾಣಗಳಿಂದ ಸಾತ್ಯಕಿಯ ಸಾರಥಿಯನ್ನೂ, ಮೂರು ಮೂರು ಬಾಣಗಳಿಂದ ಅವನ ಕುದುರೆಗಳನ್ನೂ, ಒಂದು ಬಾಣದಿಂದ ಸಾತ್ಯಕಿಯ ರಥದಮೇಲಿನ ಧ್ವಜವನ್ನೂ, ಬೇರೊಂದು ಭಲ್ಲದಿಂದ ಅವನ ಕೈಯಲ್ಲಿದ್ದ ಧನುಸ್ಸನ್ನೂ ಕತ್ತರಿಸಿಬಿಟ್ಟನು. ಒಡನೆಯೇ ಸಾತ್ಯಕಿಯು ಅತಿಕೋಪದಿಂದ ಒಂದು ದೊಡ್ಡ ಗದೆಯನ್ನೆತ್ತಿ ದ್ರೋಣನಮೇಲೆ ಬೀಸಿದನು. ಚಿನ್ನದ ಪಟ್ಟಿಗಳುಳ್ಳ ಆಯೋಮಯವಾದ ಗದೆಯು ನಡುದಾರಿಯಲ್ಲಿ ಬರುತ್ತಿರುವಾಗಲೇ, ದ್ರೋಣನು ಅದನ್ನು ತನ್ನ ಬಾಣಗಳಿಂದ ತಡೆದುಬಿಟ್ಟನು. ಇಷ್ಟರಲ್ಲಿಯೇ ಸಾತ್ಯಕಿಯು ಬೇರೊಂದು ಬಿಲ್ಲನ್ನು ಕೈಗೆತ್ತಿಕೊಂಡು, ದ್ರೋಣನನ್ನು ಬಾಣಗಳಿಂದ ಮುಚ್ಚಿ, ಜಯಸೂಚಕವಾದ ಸಿಂಹನಾದವನ್ನು ಮಾಡಿದನು. ಈ ಸಿಂಹನಾದವನ್ನು ಸಹಿಸಲಾರದೆ ದ್ರೋಣನು ಒಂದು ಶಕ್ತಿಯನ್ನು ಸಾತ್ಯಕಿಯಮೇಲೆ ಬೀಸಿದನು. ಆ ಶಕ್ತಿಯು ಸಾತ್ಯಕಿಗೆ ತಗುಲದೆ, ಅವನ ರಥವನ್ನು ಪುಡಿಪುಡಿಮಾಡಿ ಭಯಂಕರಧ್ವನಿಯೊಡನೆ ಕೆಳಕ್ಕೆ ಬಿದ್ದಿತು. ಆಮೇಲೆ ಸಾತ್ಯಕಿಯು ದ್ರೋಣನ ಬಲದೋಳಿಗೆ ಪ್ರಬಲವಾದ ಗಾಯಗ

ಳುಂಟಾಗುವಂತೆ ಬಾಣಗಳನ್ನು ಪ್ರಯೋಗಿಸಿದನು. ಅದನ್ನು ಲಕ್ಷ್ಯಮಾ ಡದೆ ದ್ರೋಣನು, ಒಂದು ಅರ್ಧಚಂದ್ರಬಾಣದಿಂದ ಸಾತ್ಯಕಿಯ ಕೈಯಲ್ಲಿದ್ದ ದೊಡ್ಡ ಧನುಸ್ಸನ್ನು ಕತ್ತರಿಸಿ, ರಥಶಕ್ತಿಯೆಂಬ ಮೊನೆಯಾದ ಆಯುಧ ದಿಂದ ಸಾತ್ಯಕಿಯ ಸಾರಥಿಯನ್ನು ಹೊಡೆದುಕೆಡಹಿದನು. ಆದರಿಂದ ಸಾರ ಥಿಗೆ ಮೂರ್ಛೆಬಂದಂತಾಗಿ, ಅವನು ರಥದ ಗದ್ದುಗೆಯಮೇಲೆ ಮುಹೂರ್ತಕಾ ಲದವರೆಗೆ ಹಾಗೆಯೇ ಒರಗಿಬಿಟ್ಟನು. ಆಗ ಸಾತ್ಯಕಿಯು ಕುದುರೆಯ ಹಗ್ಗಗಳನ್ನು ತಾನೇ ಹಿಡಿದು ನಡೆಸುತ್ತ ದ್ರೋಣನೊಡನೆ ಯುದ್ಧವನ್ನು ಮಾಡತೊಡಗಿದನು. ಇದರಲ್ಲಿ ಅವನು ಅತಿಮಾನುಷವಾದ ತನ್ನ ಪರಾಕ್ರ ಮಕಾರ್ಯವನ್ನು ತೋರಿಸಿದನು. ನೂರಾರು ಬಾಣಗಳಿಂದ ದ್ರೋಣ ನನ್ನು ಎಡಬಿಡದೆ ಹೊಡೆಯುತ್ತಿದ್ದನು. ಇಷ್ಟರಲ್ಲಿ ದ್ರೋಣನು ಐದುತೀವ್ರ ಬಾಣಗಳನ್ನು ಸಾತ್ಯಕಿಯಮೇಲೆ ಪ್ರಯೋಗಿಸಿದನು. ಆ ಬಾಣಗಳು ಸಾತ್ಯಕಿಯ ಕವಚವನ್ನು ಹರಿದು, ಅವನ ದೇಹದಲ್ಲಿ ನಾಟಿದುವು. ಸಾತ್ಯ ಕಿಗೆ ಇದರಿಂದ ದುಸ್ಸಹವಾದ ಕೋಪವುಂಟಾಯಿತು. ಮೇಲೆಮೇಲೆ ದ್ರೋಣ ನನ್ನು ಬಾಣಗಳಿಂದ ಪೀಡಿಸಲಾರಂಭಿಸಿದನು. ಒಂದುಬಾಣದಿಂದ ಅವನ ಸಾರಥಿಯನ್ನು ಕೊಂದುಕೆಡಹಿ, ರಥಾಶ್ವಗಳು ಅಂಕೆಯಿಲ್ಲದೆ ಓಡುವಂತೆ ಮಾಡಿದನು. ಆ ರಥವು ಆಕಾಶದಲ್ಲಿ ಸೂರ್ಯನಂತೆ ಸಾವಿರಾರು ಮಂಡ ಲಗತಿಗಳಿಂದ ಸುತ್ತುತ್ತ ಓಡುತಿದ್ದುವು. ಇದನ್ನು ನೋಡಿ ನಮ್ಮ ಸೈನ್ಯದ ರಾಜಪುತ್ರರು ತಮ್ಮಕಡೆಯ ಯೋಧರನ್ನು ಕುರಿತು “ಓಡಿರಿ! ಬೇಗನೆ ಓಡಿರಿ! ದ್ರೋಣನ ಕುದುರೆಗಳನ್ನು ಹಿಡಿದು ನಿಲ್ಲಿಸಿರಿ! ಅವು ಅಂಕೆಯಿಲ್ಲದೆ ಓಡುವುವು” ಎಂದು ಕೂಗಿಕೊಂಡರು. ಕೊನೆಗೆ ಎಲ್ಲರೂ ಆ ಸಾತ್ಯಕಿಯ ನ್ನು ಬಿಟ್ಟು, ದ್ರೋಣನ ರಥವನ್ನು ಹಿಂಬಾಲಿಸಿ ಓಡಲಾರಂಭಿಸಿದರು. ಇ ದನ್ನು ನೋಡಿ, ನಿನ್ನ ಸೈನ್ಯವೆಲ್ಲ ಭಯಪಟ್ಟು ಅಲ್ಲಲ್ಲಿ ಚದರಿಹೋಯಿತು. ಇಷ್ಟರಲ್ಲಿ ದ್ರೋಣನ ರಥಾಶ್ವಗಳು ಮೊದಲು ದ್ರೋಣನು ನಿಂತಿದ್ದ ವ್ಯೂಹದ್ವಾರಕ್ಕೇ ರಥವನ್ನೆಳೆದುತಂದು ನಿಲ್ಲಿಸಿದುವು. ಇಷ್ಟರಲ್ಲಿ ಇತ್ತಲಾಗಿ ಪಾಂಡವಪಾಂಚಾಲಸೈನ್ಯಗಳಿಂದ ತನ್ನ ವ್ಯೂಹವು ಭೇದಿಸಲ್ಪಡುತ್ತಿರುವು ದನ್ನು ನೋಡಿ, ದ್ರೋಣನು, ಸಾತ್ಯಕಿಯನ್ನಿದಿರಿಸುವ ಪ್ರಯತ್ನವನ್ನು ಬಿಟ್ಟು, ಆ ವ್ಯೂಹರಕ್ಷಣೆಯಲ್ಲಿಯೇ ಆತುರಗೊಂಡಿದ್ದನು. ಅಲ್ಲಿ ದ್ರೋಣನು ಆಗಲೇ

ಉದಿಸಿಬಂದ ಕಾಲಸೂರ್ಯನಂತೆ ಶತ್ರುಭಯಂಕರನಾಗಿದ್ದನು. ಕೋಪವೆಂಬ ಇಂಧನದಿಂದ ಉದ್ದೀಪಿತವಾದ ದ್ರೋಣನೆಂಬ ಅಗ್ನಿಯು ತಾನು ಪಾಂಚಾಲಸೈನ್ಯಗಳನ್ನೆಲ್ಲ ಒಂದೇಸಲಕ್ಕೆ ದಹಿಸಿಬಿಡುವುದೋ ಎಂಬಂತೆ ತೋರಿತು.

ಇದು ನೂರ ಹದಿನೇಳನೆಯ ಅಧ್ಯಾಯವು.



## ಸಾತ್ಯಕಿಯು ಸುದರ್ಶನನೆಂಬ ರಾಜನನ್ನು ಕೊಂದುದು.

ಧೃತರಾಷ್ಟ್ರಮಹಾರಾಜಾ! ಹೀಗೆ ಸಾತ್ಯಕಿಯು ದ್ರೋಣನನ್ನೂ, ಕೃತವರ್ಮನೇ ಮೊದಲಾದ ಇತರ ಮಹಾರಥರನ್ನೂ ಜಯಿಸಿ, ಸಂತೋಷದಿಂದ ತನ್ನ ಸೂತನನ್ನು ಕುರಿತು, "ಸೂತಾ! ಈಯುದ್ಧದಲ್ಲಿ ನಾವುಮಾಡತಕ್ಕ ಕಾರ್ಯವೇ ಕಾಣಲಿಲ್ಲ. ನಾವು ಕೇವಲ ನಿಮಿತ್ತಮಾತ್ರಕ್ಕೆ ಇಲ್ಲಿರುವೆವೇ ಹೊರತು, ಕೃಷ್ಣಾರ್ಜುನರಿಂದಲೇ ಶತ್ರುಪಕ್ಷದ ರಥಗಳೆಲ್ಲ ಮೊದಲೇ ದಗ್ಧವಾಗಿವೆ. ಮಹಾತ್ಮನಾದ ಅರ್ಜುನನಿಂದ ಮೊದಲು ಹತರಾದವರನ್ನೇ ಈಗ ನಾವು ಹೊಡೆಯುತ್ತಿರುವೆವೇಹೊರತು ಬೇರೆಯಲ್ಲ" ಹೀಗೆಂದು ಹೇಳುತ್ತ ಸಾತ್ಯಕಿಯು ಅರ್ಜುನನನ್ನು ಸೇರುವುದಕ್ಕಾಗಿ ತನ್ನ ದಾರಿಯನ್ನು ಹಿಡಿದು, ತನಗೆ ಇದಿರಾಗಿದ್ದ ಸೈನ್ಯಗಳನ್ನು ಬಾಣಗಳಿಂದ ಚದರಿಸುತ್ತ, ಮಾಂಸಕ್ಕಾಗಿ ಎರಗುವ ಗಿಡಗನಂತೆ ವೇಗದಿಂದ ಮುಂದೆ ಸಾಗುತ್ತಿದ್ದನು. ಸಾತ್ಯಕಿಯನ್ನು ತಡೆದು ನಿಲ್ಲಿಸಲು ನಮ್ಮವರಲ್ಲಿ ಯಾರಿಗೂ ಸಾಧ್ಯವಾಗಲಿಲ್ಲ. ಅಸಹ್ಯಪರಾಕ್ರಮನೂ, ಅದ್ಭುತವೀರ್ಯಶಾಲಿಯೂ ಆದ ಆ ಸಾತ್ಯಕಿಯು ಆಕಾಶದಲ್ಲಿ ಸೂರ್ಯನಂತೆ ತೇಜಸ್ಸಿನಿಂದ ಜ್ವಲಿಸುತ್ತ, ಮುಂದೆ ಸಾಗುತ್ತಿದ್ದನು. ಇಂದ್ರನಿಗೆ ಸಮಾನವಾದ ಮಹಿಮೆಯುಳ್ಳ ಆ ಸಾತ್ಯಕಿಯು, ಸುವರ್ಣಕವಚವನ್ನೂ, ಮಹಾಧನುಸ್ಸನ್ನೂ ಧರಿಸಿ, ತನ್ನ ವಿಚಿತ್ರಯುದ್ಧಚಾತುರ್ಯವನ್ನು ತೋರಿಸುತ್ತ, ಮುಂದೆಮುಂದೆ ಸಾಗಿಬರುವುದನ್ನು ಕಂಡು, ಸುದರ್ಶನನೆಂಬ ಪ್ರಬಲರಾಕ್ಷಸನೊಬ್ಬನು ಅಡ್ಡಯಿಸಿಬಂದನು. ಅವರಿಬ್ಬರಿಗೂ ಭಯಂಕರಯುದ್ಧವಾಯಿತು. ಹಿಂದೆ ವೃತ್ರನಿಗೂ, ಇಂದ್ರನಿಗೂ ನಡೆದ ಯುದ್ಧದಂತೆ ಅವರಿಗೆ ನಡೆಯುತ್ತಿದ್ದ ಪ್ರಬಲಯುದ್ಧವನ್ನು ನೋಡಿ,

ಇತ್ತಲಾಗಿ ನಿನ್ನವರೂ, ಅತ್ತಲಾಗಿ ಸೋಮಕರೂ, "ಭಲೆ! ಭಲೆ!" ಎಂದು ಕೊಂಡಾಡುತ್ತಿದ್ದರು. ಸುದರ್ಶನನು ನೂರಾರು ತೀಕ್ಷ್ಣಬಾಣಗಳಿಂದ ಸಾತ್ಯಕಿಯನ್ನು ಹೊಡೆದನು. ಆ ಬಾಣಗಳು ಬರುವ ಮೊದಲೇ ಸಾತ್ಯಕಿಯು ಅವುಗಳನ್ನೆಲ್ಲ ಕತ್ತರಿಸಿಕೆಡಹಿದನು. ಅದರಂತೆಯೇ ಸಾತ್ಯಕಿಯು ಬಿಟ್ಟ ಬಾಣಗಳನ್ನೆಲ್ಲ ಸುದರ್ಶನನು ತುಂಡುತುಂಡಾಗಿ ಕತ್ತರಿಸಿ, ಅವನ್ನೆಲ್ಲ ವಿಫಲವಮಾಡಿದನು. ತಮ್ಮ ಬಾಣಗಳೆಲ್ಲ ವಿಫಲವಾದುದನ್ನು ನೋಡಿ ಇಬ್ಬರಿಗೂ ದುಸ್ಸಹವಾದ ಕೋಪವುಂಟಾಯಿತು. ಇಷ್ಟರಲ್ಲಿ ಸುದರ್ಶನನು ಗ್ರೀಷ್ಮಕಾಲದಲ್ಲಿ ಲೋಕವನ್ನು ದಹಿಸುವ ಸೂರ್ಯನಂತೆ, ಮೂರು ತೀವ್ರಬಾಣಗಳನ್ನು ಬಿಡಲು, ಅದು ಸಾತ್ಯಕಿಯ ಕವಚವನ್ನು ಭೇದಿಸಿಕೊಂಡು ಅವನ ಶರೀರದಲ್ಲಿಯೂ ನಾಟಿತು. ಅಲ್ಲದೆ ಆ ಸುದರ್ಶನನು ಬೇರೆ ನಾಲ್ಕು ಬಾಣಗಳಿಂದ ಸಾತ್ಯಕಿಯ ನಾಲ್ಕು ರಥಾಶ್ವಗಳನ್ನು ಕೊಂದುಕೆಡಹಿದನು. ಇದನ್ನು ಸಹಿಸಲಾರದೆ ಸಾತ್ಯಕಿಯು ಬಹಳ ಕೋಪಗೊಂಡು, ಆ ಸುದರ್ಶನನ ರಥಾಶ್ವಗಳನ್ನು ತನ್ನ ಬಾಣಗಳಿಂದ ಕೆಡಹಿ ಸಿಂಹನಾದವಮಾಡಿದನು. ಒಂದು ಭಲ್ಲಾಯುಧದಿಂದ ಆ ರಾಜನ ಸಾರಥಿಯ ತಲೆಯನ್ನು ಕತ್ತರಿಸಿದನು. ಆಮೇಲೆ ಕಾಲಾಗ್ನಿಗೆ ಸಮಾನವಾದ ಒಂದು ಕ್ಷುರವನ್ನು (ಸಣ್ಣ ಕತ್ತಿಯನ್ನು) ಪ್ರಯೋಗಿಸಿ, ಅದರಿಂದ ಕುಂಡಲಾಲಂಕೃತವಾಗಿ ಪೂರ್ಣಚಂದ್ರನಂತೆ ಶೋಭಿಸುತ್ತಿದ್ದ ಆ ಸುದರ್ಶನನ ತಲೆಯನ್ನು ಕತ್ತರಿಸಿಬಿಟ್ಟನು. ಹಿಂದೆ ಇಂದ್ರನು ಬಲಾಸುರನನ್ನು ಕೊಂದಂತೆ ಸಾತ್ಯಕಿಯು ಆ ರಾಜನನ್ನು ಕೊಂದು, ಸಂಪೂರ್ಣವಾದ ಜಯೋತ್ಸಾಹದಿಂದ ನಮ್ಮ ಸೈನ್ಯಗಳನ್ನೆಲ್ಲ ಒತ್ತರಿಸಿ, ನಿರಾತಂಕವಾಗಿ ದಾರಿಯನ್ನು ಮಾಡಿಕೊಳ್ಳುತ್ತ ಮುಂದೆಮುಂದೆ ಸಾಗಿದನು. ಸಾತ್ಯಕಿಯು ಹೀಗೆ ತನ್ನ ಪರಾಕ್ರಮದಿಂದ ಸಮಸ್ತ ಸೈನ್ಯಗಳನ್ನೂ ಆಶ್ಚರ್ಯಗೊಳಿಸುತ್ತ ಬರುವಾಗ, ಎಲ್ಲರೂ ಅವನನ್ನು ಬಹಳವಾಗಿ ಗೌರವಿಸಿ ಪೂಜಿಸುತ್ತಿದ್ದರು. ಸಾತ್ಯಕಿಯು ತನಗಿದಿರಾದ ಸೈನ್ಯವನ್ನೆಲ್ಲ ಆಗಾಗ ತನ್ನ ಬಾಣಜ್ವಾಲೆಗಳಿಂದ ದಹಿಸುತ್ತ ಮುಂದೆಹೊರಟನು.

ಇದು ನೂರ ಹದಿನೆಂಟನೆಯ ಅಧ್ಯಾಯವು.



## ಸಾತ್ಯಕಿಯ ಪರಾಕ್ರಮವರ್ಣನವು.

ಮಹಾರಾಜಾ! ಹೀಗೆ ಸಾತ್ಯಕಿಯು ಕೃತವರ್ಮನನ್ನೂ, ದ್ರೋಣನನ್ನೂ, ದುರ್ಯೋಧನನನ್ನೂ ಯುದ್ಧದಲ್ಲಿ ಜಯಿಸಿ, ಜಲಸಂಧ ಶೂರಸೇನರೆಂಬ ರಾಜರನ್ನು ಕೊಂದನು. ಹಾಗೆಯೇ ಕ್ರಮವಾಗಿ ಮ್ಲೇಚ್ಛರು, ಕಾಶೀರಾಜಪುತ್ರನು, ನಿಷಾದರು, ತಂಕಣರು, ಕಳಿಂಗರು, ಮಾಗಧರು, ಕೇಕಯರು, ಶೂರಸೇನರು, ಪರ್ವತವಾಸಿಗಳು, ಕಾಂಭೋಜರು, ಯವನರು, ವಸಾತಿಗಳು, ಶಿಬಿಗಳು, ಕೋಸಲರು, ಯಾತುಧಾನರು, ತಿತ್ತಿರರು, ಇವರೇ ಮೊದಲಾಗಿ ಇನ್ನೂ ನಾನಾದೇಶದ ಯೋಧರನ್ನೆಲ್ಲ ಜಯಿಸಿಕೊಂಡು ಮುಂದೆಮುಂದೆ ಸಾಗುತ್ತಿದ್ದನು. ಅವನ ಯುದ್ಧದಲ್ಲಿ ದೊಡ್ಡ ರಕ್ತನದಿಯು ಹರಿಯಿತು. ತಲೆಕೂದಲುಗಳೆಂಬ ಪಾಚಿಗಳಿಂದಲೂ, ಶಕ್ತಿಗಳೆಂಬ ಮೊಸಳೆಗಳಿಂದಲೂ, ಶ್ವೇತಚ್ಛತ್ರಗಳೆಂಬ ಹಂಸಗಳಿಂದಲೂ ಕೂಡಿದ ಆ ರಕ್ತನದಿಯು, ಭೀರುಗಳಿಗೆ ಭಯಂಕರವಾಗಿ, ಶೂರರಿಗೆ ಉತ್ಸಾಹಜನಕವಾಗಿದ್ದಿತು. ಹೀಗೆ ಸಾತ್ಯಕಿಯು ದುಸ್ತರವಾದ ರಕ್ತನದಿಯನ್ನು ಹೊರಡಿಸಿದಮೇಲೆ, ತನ್ನ ಸಾರಥಿಯನ್ನು ಕುರಿತು ಸಂತೋಷದೊಡನೆ "ಓ ಸೂತಾ! ರಥಗಜತುರಗಳಿಂದಲೂ, ಬಾಣಗಳೆಂಬ ಅಲೆಗಳಿಂದಲೂ, ಕತ್ತಿ, ಗದೆ, ಮುಂತಾದ ಆಯುಧಗಳೆಂಬ ಮೀನು ಮೊಸಳೆಗಳಿಂದಲೂ, ರಣವಾದ್ಯಘೋಷದಿಂದಲೂಕೂಡಿದ ದ್ರೋಣಸೈನ್ಯವೆಂಬ ಈ ಮಹಾಸಮುದ್ರವನ್ನು ಪ್ರಯತ್ನದಿಂದ ದಾಟಿಬಂದೆವು. ಮನುಷ್ಯಭಕ್ಷಕರಾದ ರಾಕ್ಷಸರಂತೆ ಕ್ರೂರಯೋಧರಿಂದ ತುಂಬಿದ ಜಲಸಂಧನ ಸೈನ್ಯವನ್ನೂ ನಾವು ಜಯಿಸಿಕೊಂಡು ಬಂದುದಾಯಿತು. ಇನ್ನುಮುಂದೆ ನಾವು ಜಯಿಸಬೇಕಾದ ಸೈನ್ಯವು ಕೇವಲದುರ್ಬಲವಾದುದು. ಮಹಾಸಮುದ್ರವನ್ನು ದಾಟಿಬಂದವರಿಗೆ ಸ್ವಲ್ಪಜಲವುಳ್ಳ ಕ್ಷುದ್ರನದಿಗಳು ಹೇಗೋಹಾಗೆ ಈ ಅವಶಿಷ್ಟಸೈನ್ಯವನ್ನು ದಾಟಿಹೋಗುವುದೇನೂ ನನಗೆ ಕಷ್ಟವಾಗಿ ತೋರುವುದಿಲ್ಲ. ಕುದುರೆಗಳನ್ನು ಬೇಗನೆ ಬಿಡು! ಇನ್ನು ಅರ್ಜುನನು ನಮಗೆ ಸಿಕ್ಕಿದಂತೆಯೇ! ದುರ್ಜಯರಾದ ದ್ರೋಣ ಕೃತವರ್ಮರನ್ನು ಜಯಿಸಿಬಂದ ನಾವು ಆ ಧನಂಜಯನನ್ನು ಸೇರಿದಹಾಗೆಯೇ ತಿಳಿ! ಸೂತಾ! ನನಗೆ ಇಂತಹ ಯಾವ ಸೈನ್ಯಗಳನ್ನು ಕಂಡರೂ ಮನಸ್ಸಿನಲ್ಲಿ ಭಯವೆಂಬುದೇ ಹುಟ್ಟುವು

ದಿಲ್ಲ. ಕಾಡಿನಲ್ಲಿ ಉರಿಯುವ ಬೆಂಕಿಗೆ, ಒಣಗಿದ ಹುಲ್ಲುಮೆದೆಯು ಸಿಕ್ಕಿದರೆ ಹೇಗೋ ಹಾಗೆ, ಈ ಸೈನ್ಯವು ನನಗೆ ಲಕ್ಷ್ಯವೇ ಇಲ್ಲದಂತಿದೆ. ಅದೋ! ಅಲ್ಲಿ ನೆಲದಮೇಲೆ ಸತ್ತುಬಿದ್ದಿರುವ ಕೌರವನ ಚತುರಂಗಸೈನ್ಯಗಳು ಕಾಣುವುವು ನೋಡು. ಇವೆಲ್ಲಾ ಅರ್ಜುನನಿಂದ ಹತವಾದ ಸೈನ್ಯಗಳೆಂದೇ ತೋರುವುವು. ಅಲ್ಲಲ್ಲಿ ಬಿದ್ದ ಆನೆ ಕುದುರೆ ಕಾಲಾಳುಗಳ ಮೃತದೇಹಗಳಿಂದ ನಾವು ಹೋಗುವ ದಾರಿಯು ಹಳ್ಳತಿಟ್ಟಾಗಿ ದುರ್ಗಮವಾಗಿರುವುದು. ಕೆಲವು ಸೈನ್ಯಗಳು ಅಲ್ಲಲ್ಲಿ ಭಯಪಟ್ಟು ಓಡುತ್ತಿರುವುದನ್ನು ನೋಡು! ರಥಗಳೂ, ಆನೆಗಳೂ, ಕುದುರೆಗಳೂ, ಆ ಅರ್ಜುನನ ಬಾಣಕ್ಕೆ ಹೆದರಿ ಪಲಾಯನಮಾಡುವಂತಿದೆ. ಅದೋ! ಆಕಾಶದಲ್ಲಿ ಪಟ್ಟೆಯ ಬಣ್ಣದಿಂದ ಕಾಣುವ ಸೇನಾಧೂಳಿಯು ಮೇಲಕ್ಕೆ ಏಳುತ್ತಿರುವುದನ್ನು ನೋಡು! ಇದರಿಂದ ಶ್ರೀಕೃಷ್ಣಸಾರಥಿಯೆನಿಸಿದ ಆ ಅರ್ಜುನನು ಸಮೀಪದಲ್ಲಿಯೇ ಇರುವನೆಂದು ತೋರುವುದು. ಮೇಘಧ್ವನಿಯಂತೆ ಅರ್ಜುನನ ಗಾಂಡೀವಧ್ವನಿಯೂ ಕಿವಿಗೆ ಬೀಳುತ್ತಿರುವುದು. ಅರ್ಜುನನು ಸೈಂಧವನ ಸಮೀಪಕ್ಕೆ ಸೇರಿರಬೇಕು. ಸೈನ್ಯಗಳ ಪ್ರಬಲಘೋಷವು ಕೇಳಿಸುತ್ತಿದೆ. ನನಗೆ ಒಳ್ಳೇ ಶಕುನಗಳೂ ಕಾಣುತ್ತಿವೆ. ಸೂರ್ಯನು ಅಸ್ತಮಿಸುವುದರೊಳಗಾಗಿಯೇ ಅರ್ಜುನನು ತನ್ನ ಪ್ರತಿಜ್ಞೆಯಂತೆ ಸೈಂಧವನನ್ನು ತೀರಿಸಿಬಿಡುವನು. ಮೆಲ್ಲಗೆ ಕುದುರೆಗಳನ್ನು ಉತ್ಸಾಹಗೊಳಿಸಿ, ಶತ್ರುಸೈನ್ಯವಿರುವ ಆ ಸ್ಥಳಕ್ಕೆ ರಥವನ್ನು ಬಿಡು. ದುರ್ಯೋಧನನೇ ಮೊದಲಾದವರು ಯುದ್ಧಕವಚಗಳನ್ನೂ, ಕೈಚೀಲಗಳನ್ನೂ ಧರಿಸಿ, ಯುದ್ಧಸನ್ನದ್ಧರಾಗಿ ನಿಂತಿರುವರು. ಯುದ್ಧದ ಹೆಮ್ಮೆಯಿಂದ ಆಯುಧಧಾರಿಗಳಾದ ಕಾಂಭೋಜರು, ಯವನರು, ಶಕರು, ಕಿರಾತರು, ದರದರು, ಬರ್ಬರರು, ತಾಮ್ರಲಿಪ್ತಕರು, ಇವರೇ ಮೊದಲಾದ ಇನ್ನೂ ಅನೇಕ ಮ್ಲೇಚ್ಛವೀರರು ಯುದ್ಧಕ್ಕಾಗಿ ನನ್ನನ್ನೇ ಇದಿರುನೋಡುತ್ತಿರುವರು. ಆದರೇನು? ಚತುರಂಗಸೈನ್ಯಗಳೊಡನೆ ಅವರನ್ನೆಲ್ಲ ನಾನು ಯುದ್ಧದಲ್ಲಿ ಕೊಂದು, ಶೀಘ್ರದಲ್ಲಿಯೇ ಈ ಸೇನಾದುರ್ಗವನ್ನು ದಾಟಿದೆನೆಂದು ತಿಳಿ" ಎಂದನು. ಅದಕ್ಕಾ ಸಾರಥಿಯು ಸಾತ್ಯಕಿಯನ್ನು ನೋಡಿ "ಪ್ರಭೂ! ನಿನ್ನ ಬಲವಿರುವಾಗ ನನಗೆತಾನೇ ಭಯವೇನಿದೆ? ಆ ಪರಶುರಾಮನೇ ಕೋಪದಿಂದ ಯುದ್ಧ

ಕ್ಕಾಗಿ ನಿನ್ನ ಮುಂದೆ ನಿಂತರೂ ನನಗೆ ಭಯವಿಲ್ಲ. ರಥಿಕಶ್ರೇಷ್ಠನಾದ ಆ ದ್ರೋಣನು, ಕೃಪಾಚಾರ್ಯನು, ಶಲ್ಯನು, ಇವರಲ್ಲಿ ಯಾರೇ ಯುದ್ಧಕ್ಕೆ ಬಂದರೂ ನಿನ್ನನ್ನಾಶ್ರಯಿಸಿದ ನನಗೆ ಲವಮಾತ್ರವೂ ಅಂಜಿಕೆಯಿಲ್ಲ. ಇದುವರೆಗೆ ನೀನು ಕ್ರೂರಕರ್ಮಿಗಳಾದ ಎಷ್ಟೋ ಮಂದಿ ಕಾಂಭೋಜವೀರರನ್ನು ಜಯಿಸಿದೆ! ಯವನರು, ಶಕರ, ಕಿರಾತರು, ಮೊದಲಾದ ಇನ್ನೂ ಅನೇಕ ಮ್ಲೇಚ್ಛವೀರರನ್ನು ಜಯಿಸಿದೆ! ಆ ಯುದ್ಧದಲ್ಲಿಯೇ ನಾನು ಹೆದರಿದವನಲ್ಲ. ಇಂತಹ ಯುದ್ಧಗಳಲ್ಲಿ ನಾನು ಹಿಂದೆ ಯಾವಾಗಲೂ ಭಯವನ್ನೇ ತಿಳಿದವನಲ್ಲ. ಇನ್ನು ಗೋಷ್ಪದದಂತೆ ಅಲ್ಪವಾದ ಈ ಸೈನ್ಯಕ್ಕಾಗಿ ಹೆದರುವೆನೆ? ಆಯುಷ್ಮನ್! ರಥವನ್ನು ಯಾವ ದಾರಿಯಿಂದ ಬಿಡಲಿ? ಈಗ ನೀನು ಮೊದಲು ಯಾರನ್ನು ಮೃತ್ಯುವಿನಬಾಯಿಗೆ ಕಳುಹಿಸಬೇಕೆಂದಿರುವೆ? ಈಗ ಯಾರಿಗೆ ಸಾವು ಸಿದ್ಧವಾಗಿರುವುದು? ರಣಾಂಗಣದಲ್ಲಿ ಕಾಲಯಮನಂತಿರುವ ನಿನ್ನನ್ನಿದಿರಿಸಿ ಭಯದಿಂದ ಪಲಾಯನಮಾಡತಕ್ಕವರಾರು? ಈಗ ಯಮನ ದೃಷ್ಟಿಯು ಯಾರಮೇಲೆ ಬಿದ್ದಿರುವುದು ಹೇಳು? ಅಲ್ಲಿಗೇ ರಥವನ್ನು ಬಿಡುವೆನು" ಎಂದನು. ಆಗ ಸಾತ್ಯಕಿಯು "ಸೂತಾ! ಮುಂಡರೆಂದು ಕರೆಯಲ್ಪಡುವ ಈ ಕಾಂಭೋಜರನ್ನು ಮೊದಲು ನಾನು ಕೊಂದು, ನನ್ನ ಪ್ರತಿಜ್ಞೆಯನ್ನು ಪೂರೈಸುವೆನು. ಆಮೇಲೆ ಇತರರನ್ನೆಲ್ಲ ಬಡಿದೋಡಿಸಿ ಅರ್ಜುನನನ್ನು ಸೇರುವೆನು. ಈ ಮುಂಡಸೈನ್ಯವು ಹತವಾದಮೇಲೆ, ಬೇರೆ ಸೈನ್ಯಗಳೊಡನೆ ನಾನು ಯುದ್ಧಮಾಡುವಾಗ, ದುರ್ಯೋಧನನೇ ಮೊದಲಾದ ಕೌರವರೆಲ್ಲರೂ ನನ್ನ ವೀರ್ಯಾತಿಶಯವನ್ನು ಪ್ರತ್ಯಕ್ಷವಾಗಿ ನೋಡಲಿ! ಈಗ ನನ್ನಿಂದ ಹತವಾಗುವ ಕೌರವಸೈನ್ಯದ ವಿಲಾಪವನ್ನು ಕೇಳಿ, ದುರ್ಯೋಧನನು ಪಶ್ಚಾತ್ತಾಪಪಡಲಿ! ಈಗ ನಾನು ಮಹಾತ್ಮನೂ, ನನಗೆ ಗುರುವೂ ಆದ ಅರ್ಜುನನು ತೋರಿಸಿಕೊಟ್ಟ ದಾರಿಯನ್ನೇ ತೋರಿಸುವೆನು. ಈಗ ನನ್ನ ಬಾಣಗಳಿಂದ ಕೌರವಸೈನ್ಯವು ಸಾವಿರಾರು ಸಂಖ್ಯೆಯಲ್ಲಿ ಹತವಾಗುವುದನ್ನು ಕಂಡು ದುರ್ಯೋಧನನು ದುಃಖಿಸದಿರಲಾರನು! ಈಗ ನನ್ನ ಹಸ್ತವೇಗದಿಂದ ಎಡೆಬಿಡದೆ ಹೊರಡುವ ಬಾಣಪರಂಪರೆಗಳನ್ನೂ, ಅಲಾತಚಕ್ರದಂತೆ ನನ್ನ ಕೈಯಲ್ಲಿ ಆಡುತ್ತಿರುವ ಧನುಸ್ಸನ್ನೂ ಕೌರವರೆಲ್ಲರೂ ನೋಡಲಿ!

ನನ್ನ ಬಾಣಗಳಿಂದ ಗಾಯಹೊಂದಿ ರಕ್ತಸ್ರಾವದೊಡನೆ ಕೆಳಗೆ ಬಿದ್ದು ಸಾಯುವ ತನ್ನ ಸೈನಿಕರ ದುರವಸ್ಥೆಯನ್ನು ಕಂಡು ದುರ್ಯೋಧನನು ಬಹಳವಾಗಿ ಸಂಕಟದಿಂದ ಕುದಿಯಲಿ! ಈಗಿನ ಯುದ್ಧದಲ್ಲಿ ನಾನು ಕೌರವಸೈನ್ಯದಲ್ಲಿ ಪ್ರಮುಖರಾದವರನ್ನೇ ಹುಡುಕಿ ಹುಡುಕಿ ಕೊಲ್ಲುವು ದನ್ನು ಕಂಡು ದುರ್ಯೋಧನನು, "ಈ ಲೋಕದಲ್ಲಿ ಇಬ್ಬರು ಅರ್ಜುನರು ತನಗೆ ವೈರಿಗಳಾಗಿ ಹುಟ್ಟಿದ"ರೆಂದು ಭಾವಿಸಲಿ! ಈ ಯುದ್ಧದಲ್ಲಿ ತನ್ನ ಕಡೆಯ ಅನೇಕ ರಾಜರ ಸಾವನ್ನು ನೋಡಿ ದುರ್ಯೋಧನನು ಪಶ್ಚಾತ್ತಾಪಪಡಲಿ. ಸೂತಾ! ಈಗ ಅನೇಕ ಶತ್ರುರಾಜರನ್ನು ಕೊಂದು, ಪಾಂಡವರಲ್ಲಿ ನನಗಿರ ತಕ್ಕ ಸ್ನೇಹವನ್ನೂ, ಭಕ್ತಿಯನ್ನೂ ತೋರಿಸುವೆನು. ಈಗ ಕೌರವರಿಗೆ ನನ್ನ ಬಲವೂ, ನನ್ನ ವೀರ್ಯವೂ, ಪಾಂಡವರಲ್ಲಿ ನನಗಿರತಕ್ಕ ಕೃತ ಜ್ಞತೆಯೂ ಚೆನ್ನಾಗಿ ತಿಳಿಯುವುದು" ಎಂದನು. ಈ ಉತ್ಸಾಹವಾಕ್ಯಗ ಳನ್ನು ಕೇಳಿದೊಡನೆ ಸಾರಥಿಯು ಕುದುರೆಗಳನ್ನು ತಟ್ಟಿ ಮುಂದೆಬಿಟ್ಟನು. ಆ ಕುದುರೆಗಳು ಆಕಾಶವನ್ನೇ ಕುಡಿದುಬಿಡುವಂತೆ ವೇಗದಿಂದೋಡಿ ಯವನಸೈನ್ಯಗಳ ಮುಂದೆ ಬಂದು ನಿಂತುವು. ಸಾತ್ಯಕಿಯನ್ನು ಕಂಡೊಡನೆ ಯವನರು ಗುಂಪಾಗಿ ಬಾಣವರ್ಷಗಳನ್ನು ಕರೆಯತೊಡಗಿದರು. ಆ ಬಾಣ ಗಳು ತನ್ನ ಸಮೀಪಕ್ಕೆ ಬರುವಷ್ಟರಲ್ಲಿಯೇ ಸಾತ್ಯಕಿಯು ತನ್ನ ಬಾಣ ಗಳಿಂದ ಅವುಗಳನ್ನು ಕತ್ತರಿಸಿಕೆಡಹಿದುದಲ್ಲದೆ, ಮೇಲೆಮೇಲೆ ತೀಕ್ಷ್ಣ ಬಾಣಗಳನ್ನು ಪ್ರಯೋಗಿಸಿ, ಅನೇಕ ಯವನರ ತೋಳುಗಳನ್ನೂ, ತಲೆಗ ಳನ್ನೂ ಕತ್ತರಿಸಿಕೆಡಹಿದನು. ಕೆಂಪುಕಬ್ಬಿಣದಿಂದಲೂ, ಕಂಚಿನಿಂದಲೂ ಮಾಡಿದ ಅವರ ಕವಚಗಳನ್ನೆಲ್ಲ ಭೇದಿಸಿದನು. ಸಾತ್ಯಕಿಯ ಬಾಣಗಳು ಅನೇಕ ಯವನಸೈನಿಕರ ದೇಹಗಳನ್ನು ಭೇದಿಸಿ ಕೆಳಗೆ ಬಿದ್ದುವು. ಅನೇಕ ಮ್ಲೇಚ್ಛಯವನ ಸೈನಿಕರು ಗತಪ್ರಾಣರಾಗಿ ಕೆಳಗೆ ಬಿದ್ದರು. ಸಾತ್ಯ ಕಿಯು ವಿಚ್ಛಿತ್ತಿಯಿಲ್ಲದೆ ಮೇಲೆಮೇಲೆ ಬಿಲ್ಲಿನಲ್ಲಿ ಬಾಣಗಳನ್ನು ಸಂಧಿಸಿ, ಕಿವಿಯವರೆಗೆ ನಾಣನ್ನೆಳೆದು ಪ್ರಯೋಗಿಸುತಿದ್ದಾಗ, ಆ ಬಾಣಗಳ ಪೆಟ್ಟಿ ನಿಂದ ಐದು, ಆರು, ಏಳು, ಎಂಟು, ಹೀಗೆ ತಂಡತಂಡವಾಗಿ ತಲೆಗಳು ಬೀಳು ತ್ತಿದ್ದುವು. ಅದರಂತೆಯೇ ಕಾಂಭೋಜ, ಶಕ, ಶಬರ, ಕಿರಾತ, ಬರ್ಬರ ಸೈನ್ಯಗಳೆಲ್ಲ ನೂರುಸಾವಿರ ಸಂಖ್ಯೆಯಿಂದ ಹತವಾಗಿ ಬಿದ್ದುವು. ಸಾತ್ಯಕಿಯ

ಬಾಣಪ್ರಹಾರದಿಂದ ನಿನ್ನ ಸೈನ್ಯವು ಬಹಳವಾಗಿ ಕ್ಷೀಣಿಸಿತು. ಹೆಣಗಳಿಂದಲೂ, ರಕ್ತಮಾಂಸಗಳ ಕೆಸರಿನಿಂದಲೂ ಭೂಮಿಯೆಲ್ಲವೂ ದುರ್ಗಮವಾಯಿತು. ದಸ್ಯುಜಾತಿಯ ಯೋಧರ ತಲೆಗಳು ಆ ರಣಭೂಮಿಯಲ್ಲೆಲ್ಲ ಉರುಳಾಡುತ್ತಿದ್ದುವು. ಕತ್ತರಿಸಿದ ತಲೆಕೂದಲುಗಳಿಂದಲೂ, ಉದ್ದವಾಗಿ ಬೆಳೆದ ಗಡ್ಡಗಳಿಂದಲೂ, ಶಿರಸ್ತ್ರಾಣಗಳಿಂದಲೂ ಕೂಡಿದ ಆ ತಲೆಗಳು, ಗರಿಗಳನ್ನೆಲ್ಲ ಕಿತ್ತುಹಾಕಿದ ಪಕ್ಷಿಗಳ ದೇಹದಂತೆ ಕಾಣುತ್ತಿದ್ದುವು. ರಕ್ತವು ಸೋರಿ ಅಂಗಾಂಗಗಳೆಲ್ಲ ಅದರಿಂದ ತೊಯ್ದು, ಮುಂಡಗಳು ನಾನಾಕಡೆಗಳಲ್ಲಿ ಬಿದ್ದು, ರಣಭೂಮಿಯು ಕೆಂಪುಮೋಡಗಳಿಂದಾವೃತವಾದ ಆಕಾಶದಂತೆ ಕಾಣಿಸಿತು. ಸಾತ್ಯಕಿಯು ಸಿಡಿಲಿಗೆ ಸಮಾನವಾದ ತನ್ನ ಬಾಣಗಳಿಂದ ಕತ್ತರಿಸಿದ ದೇಹಾವಯವಗಳು ಆ ಯುದ್ಧಭೂಮಿಯನ್ನೆಲ್ಲ ಆವರಿಸಿದ್ದುವು. ಸಾತ್ಯಕಿಯು ಯವನರ ಶಸ್ತ್ರಾಸ್ತ್ರಗಳನ್ನೂ, ದೇಹಾವಯವಗಳನ್ನೂ ಪುಡಿಪುಡಿಯಾಗಿ ಮಾಡಿ ನೆಲಕ್ಕೆಲ್ಲ ಅದನ್ನು ಹರಡಿರುವಂತೆ ಕಾಣಿಸಿತು. ಕಾಂಭೋಜರ ಮತ್ತು ಯವನರ ತೋಳುಗಳು ಸಾತ್ಯಕಿಯ ಬಾಣಗಳಿಂದ ತುಂಡಾಗಿ ಬಿದ್ದು, ಆ ನೆಲವೆಲ್ಲವೂ ಐದುಹೆಡೆಯ ಸರ್ಪಗಳಿಂದ ಆವೃತವಾದಂತೆ ಕಾಣುತ್ತಿದ್ದಿತು. ಅನೇಕರು ಸತ್ತುಬಿದ್ದರು. ಅರ್ಧಪ್ರಾಣದಿಂದ ಕೆಲವರೂ, ಮೂರ್ಛಿತರಾಗಿ ಕೆಲವರೂ ಬಿದ್ದಿದ್ದರು. ಅನೇಕ ಕೌರವಸೈನ್ಯಗಳು ನಷ್ಟವಾಗಿ, ಸ್ವಲ್ಪಮಾತ್ರವೇ ಉಳಿದಿದ್ದಿತು. ಅಶ್ವಾರೋಹಿಗಳು ಕೆಲವರು ಸಾತ್ಯಕಿಯ ಬಾಣಪ್ರಹಾರದಿಂದ ನೊಂದು ಭಯಪಟ್ಟು, ತಮ್ಮ ವಾಹನಗಳನ್ನು ಚಾಟಿಗಳಿಂದಲೂ, ಹಿಮ್ಮಡಿಗಳಿಂದಲೂ ಹೊಡೆಯುತ್ತ ನಾನಾಕಡೆಗಳಿಗೆ ಓಡುತ್ತಿದ್ದರು. ಹೀಗೆ ಸಾತ್ಯಕಿಯು ಶಕ, ಯವನ, ಕಾಂಭೋಜಸೈನ್ಯಗಳನ್ನೆಲ್ಲ ಹೊಡೆದೋಡಿಸಿ, ಜಯೋತ್ಸಾಹದಿಂದ ತನ್ನ ಸಾರಥಿಯನ್ನು ಮುಂದೆಮುಂದೆ ಹೋಗುವಂತೆ ಪ್ರೇರಿಸುತ್ತಿದ್ದನು. ಅಮಾನುಷವಾದ ಆ ಸಾತ್ಯಕಿಯ ವೀರಕಾರ್ಯಗಳನ್ನು ನೋಡಿ ಆಕಾಶದಲ್ಲಿ ಸಿದ್ಧರು, ಗಂಧರ್ವರು, ಚಾರಣರು, ಎಲ್ಲರೂ ಬಹಳವಾಗಿ ಕೊಂಡಾಡಿದರು. ನಿನ್ನವರುಕೂಡ ಸಾತ್ಯಕಿಯ ಪರಾಕ್ರಮಕ್ಕೆ ವಿಸ್ಮಿತರಾಗಿ, ಅವನನ್ನು ಮನಸ್ಸಿನಲ್ಲಿ ಪ್ರಶಂಸಿಸುತ್ತಿದ್ದರು.

ಇದು ನೂರ ಹತ್ತೊಂಭತ್ತನೆಯ ಅಧ್ಯಾಯವು.



## ಸಾತ್ಯಕಿಯ ಯುದ್ಧವರ್ಣನವು.

ಧೃತರಾಷ್ಟ್ರಮಹಾರಾಜಾ! ಹೀಗೆ ಸಾತ್ಯಕಿಯು ಯವನರನ್ನೂ, ಕಾಂಭೋಜರನ್ನೂ ಜಯಿಸಿಕೊಂಡು, ನಿನ್ನ ಸೈನ್ಯದನಡುವೆ ನಿರಾತಂಕವಾಗಿ ಮುಂದೆ ಸಾಗಿಬರುತ್ತಿದ್ದನು. ಬಾಣಗಳೆಂಬ ಕೋರೆಹಲ್ಲುಗಳಿಂದಲೂ, ವಿಚಿತ್ರವರ್ಣದ ಕವಚವೆಂಬ ಚರ್ಮದ ಪಟ್ಟೆಗಳಿಂದಲೂಕೂಡಿದ ಸಾತ್ಯಕಿಯೆಂಬ ಹೆಬ್ಬುಲಿಯು, ನಿನ್ನ ಸೈನ್ಯವೆಂಬ ಜಿಂಕೆಯ ಹಿಂಡನ್ನು ಹೆದರಿಸಿ ನಾನಾಕಡೆಗೆ ಓಡುವಂತೆ ಮಾಡಿತು. ಸುವರ್ಣಮಯವಾದ ಕಿರೀಟಕುಂಡಲ ಕವಚಗಳನ್ನು ಧರಿಸಿ, ಚಿನ್ನದ ಕಟ್ಟುಗಳಿಂದಲೂ, ಚಿನ್ನದ ಚುಕ್ಕಿಗಳಿಂದಲೂ ಅಲಂಕೃತವಾದ ಬಿಲ್ಲನ್ನು ಕೈಯಲ್ಲಿ ಹಿಡಿದು, ಸುವರ್ಣಧ್ವಜವನ್ನೇರಿಸಿದ ರಥದಲ್ಲಿ ಕುಳಿತಿದ್ದ ಸಾತ್ಯಕಿಯು, ಮೇರುಪರ್ವತದ ಶಿಖರದಂತೆ ಶೋಭಿಸುತ್ತಿದ್ದನು. ಧನುಸ್ಸೆಂಬ ಮಂಡಲಾಕೃತಿಯಿಂದಲೂ, ತನ್ನ ಪರಾಕ್ರಮವೆಂಬ ಕಿರಣಗಳಿಂದಲೂ ಆ ಸಾತ್ಯಕಿಯು ಶರತ್ಕಾಲದಲ್ಲಿ ಉದಿಸಿಬಂದ ಸೂರ್ಯನಂತೆ ತೋರಿದನು. ಎತ್ತಿನಂತೆ ಉಬ್ಬಿದ ಹೆಗಲಿನಿಂದಲೂ, ಎತ್ತಿನಂತೆ ವಿಸ್ತಾರವಾದ ಕಣ್ಣುಗಳಿಂದಲೂ ಕೂಡಿದ ಆತನು, ನಿನ್ನ ಸೈನ್ಯಗಳ ಮಧ್ಯದಲ್ಲಿ ಗೋವುಗಳ ಮಂದೆಯಲ್ಲಿ ನಿಂತ ಮಹಾವೃಷಭದಂತೆ ತೋರುತ್ತಿದ್ದನು. ಆನೆಗಳ ಹಿಂಡಿನ ನಡುವೆ ನಿಂತ ಸಲಗನಂತೆ ಕಾಣಿಸುತ್ತಿದ್ದ ಆ ಸಾತ್ಯಕಿಯನ್ನು ನಿನ್ನವರೆಲ್ಲರೂ ಸೇರಿ ಕೊಲ್ಲಬೇಕೆಂಬ ಆತುರದಿಂದ ಇದಿರಿಸಿಬಂದರು. ಕಾಡಾನೆಗಳನ್ನು ಹಿಡಿಯುವುದಕ್ಕಾಗಿ ಸುತ್ತಲೂ ಮುತ್ತಿಕೊಂಡ ಬೇಡರಂತೆ, ಎಲ್ಲರೂ ಅವನನ್ನು ಸುತ್ತಿಮುತ್ತಿ ಹೊಡೆಯಲಾರಂಭಿಸಿದರು. ದ್ರೋಣ, ಭೋಜ, ಜಲಸಂಧ, ಕಾಂಭೋಜಪತಿ, ಮೊದಲಾದವರ ಸೇನಾಸಮುದ್ರವನ್ನೆಲ್ಲ ದಾಟಿ, ಕೃತವರ್ಮನೆಂಬ ಮೊಸಳೆಯ ಬಾಯಿಂದ ತಪ್ಪಿಸಿಕೊಂಡುಬಂದ ಆ ಸಾತ್ಯಕಿಯನ್ನು, ಹೇಗಾದರೂ ಕೊಲ್ಲಬೇಕೆಂದು ನಿನ್ನಕಡೆಯ ಮಹಾರಥರೆಲ್ಲ ಆತುರಗೊಂಡು ಬಂದರು. ನಿನ್ನ ಮಗನಾದ ದುರ್ಯೋಧನನನ್ನು ಮುಂದಿಟ್ಟುಕೊಂಡು, ಚಿತ್ರಸೇನ, ದುಶ್ಯಾಸನ, ವಿವಿಂಶತಿ, ಶಕುನಿ, ದುಸ್ಸಹ, ದುರ್ಧರ್ಷಣ, ಕ್ರಥ, ಮೊದಲಾಗಿ ಇನ್ನೂ ಅನೇಕ ಶೂರರು ಶಸ್ತ್ರಧಾರಿಗಳಾಗಿ ಸಾತ್ಯಕಿಯನ್ನು ಬೆನ್ನಟ್ಟಿಬಂದರು. ಈ ಸಮಯದಲ್ಲಿ ಪರ್ವಕಾಲದಲ್ಲಿ ಬಿರುಗಾಳಿಯಿಂದೆದ್ದ

ಸಮುದ್ರಘೋಷದಂತೆ ನಿನ್ನ ಸೈನ್ಯದಲ್ಲಿ ದೊಡ್ಡ ಶಬ್ದವುಂಟಾಯಿತು. ಅದನ್ನು ಕೇಳಿ ಸಾತ್ಯಕಿಯು ತನ್ನ ಸಾರಥಿಯನ್ನು ಕುರಿತು "ಸೂತಾ! ಮೆಲ್ಲಗೆ ಎಚ್ಚರದಿಂದ ರಥವನ್ನು ಬಿಡು. ಕೌರವರ ದೊಡ್ಡ ಸೈನ್ಯವು ನನ್ನ ನ್ನಿದಿರಿಸುವುದಕ್ಕಾಗಿ ಚತುರಂಗದೊಡನೆ ಬರುವಂತಿದೆ. ಅಲ್ಲಿನ ರಥಘೋಷವು ಭೂವ್ಯೋಮಾಕಾಶ ದಿಕ್ಕುವಿದಿಕ್ಕುಗಳನ್ನೆಲ್ಲ ಮೊಳಗಿಸುತ್ತ ಭೂಮಿಯನ್ನು ನಡುಗಿಸುವಂತೆಯೂ, ಸಮುದ್ರವನ್ನು ಕ್ಷೋಭಗೊಳಿಸುವಂತೆಯೂ ಕೇಳಿ ಬರುವುದು ನೋಡು. ಪೂರ್ಣಿಮೆಯ ದಿನದಲ್ಲಿ ಉಕ್ಕಿಬರುತ್ತಿರುವ ಸಮುದ್ರವನ್ನು, ಅದರ ವೇಲೆಯು ತಡೆದುನಿಲ್ಲಿಸುವಂತೆ ಈ ಸೇನಾಸಮುದ್ರದ ವೇಗವನ್ನು ನಾನು ಕ್ಷಣಮಾತ್ರದಲ್ಲಿ ತಡೆಯುವೆನು ನೋಡು. ದೈತ್ಯಯುದ್ಧದಲ್ಲಿ ಇಂದ್ರನಂತೆ ಈಗ ನಾನು ತೋರಿಸುವ ಪರಾಕ್ರಮವನ್ನಾದರೂ ನೋಡು. ಅಗ್ನಿಸಮಾನಗಳಾದ ನನ್ನ ಬಾಣಗಳಿಂದ ಈ ಚತುರಂಗಸೈನ್ಯಗಳೂ ದಗ್ಧವಾದಂತೆಯೇ ತಿಳಿ" ಎಂದನು. ಹೀಗೆ ಸಾತ್ಯಕಿಯು ಸೂತನೊಡನೆ ಮಾತಾಡುತ್ತಿರುವಾಗಲೇ ಕೌರವಸೈನಿಕರು ಯುದ್ಧಕ್ಕಾಗಿ ಮುಂದೆಬಂದು "ಹೊಡೆ! ಓಡು! ನಿಲ್ಲು! ಅದೋ ನೋಡು! ಶತ್ರುವನ್ನು ಹಿಡಿ!" ಎಂದು ಕೂಗಾಡುತ್ತಿದ್ದರು. ಹೀಗೆ ಆರ್ಭಟಿಸುತ್ತಿರುವ ಆ ಸೈನ್ಯಗಳನ್ನು ನೋಡಿ ಸಾತ್ಯಕಿಯು ತೀಕ್ಷ್ಣಬಾಣಗಳನ್ನು ಬಿಟ್ಟು, ಮುಹೂರ್ತಮಾತ್ರದಲ್ಲಿ ಮುನ್ನೂರು ಕುದುರೆಗಳನ್ನೂ, ನಾನೂರು ಆನೆಗಳನ್ನೂ ಕೊಂದುಕೆಡಹಿದನು. ಆಗ ಸಾತ್ಯಕಿಯು ತನ್ನ ಹಸ್ತವೇಗದಿಂದಲೂ, ವಿಚಿತ್ರಯುದ್ಧಚಾತುರ್ಯದಿಂದಲೂ ಇದಿರಾದ ಸೈನ್ಯಗಳನ್ನೆಲ್ಲ ನಿವಾರಿಸುತ್ತಬಂದನು. ಆಗಿನ ಯುದ್ಧವು ದೇವಾಸುರ ಯುದ್ಧದಂತೆ ಅತಿಪ್ರಬಲವಾಯಿತು. ಕೌರವಯೋಧರು ಸುತ್ತಿಮುತ್ತಿ ನಿಂತು ತನ್ನನ್ನು ಬಾಣಗಳಿಂದ ಮುಚ್ಚುತ್ತಿದ್ದರೂ ಲಕ್ಷ್ಯವಿಲ್ಲದೆ, ಸಾತ್ಯಕಿಯು ಅವರನ್ನೆಲ್ಲ ಕೊಲ್ಲುತ್ತಬಂದನು. ಆಗಿನ ಸಾತ್ಯಕಿಯ ಯುದ್ಧಕ್ರಮವು ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿತು. ಸಾತ್ಯಕಿಯ ಒಂದು ಬಾಣವಾದರೂ ವಿಫಲವಾಮದನ್ನು ನಾವು ನೋಡಲಿಲ್ಲ. ನಿನ್ನ ಸೈನ್ಯವೆಂಬ ಮಹಾಸಮುದ್ರದ ವೇಗವು ಸಾತ್ಯಕಿಯೆಂಬ ತೀರಕ್ಕೆ ಬಂದೊಡನೆ ಪ್ರತಿಹತವಾಗುತ್ತಿದ್ದಿತು. ಚಳಿಯ ಬಾಧೆಗೆ ಸಿಕ್ಕಿದ ದನಗಳ ಮಂದೆಯಂತೆ, ಸಾತ್ಯಕಿಯ ಬಾಣಗಳ ಪೆಟ್ಟಿನಿಂದ ನಿನ್ನ ಸೈನ್ಯವು ಮೈನಡುಗಿ ಅಲ್ಲಲ್ಲಿ ಚದರಿಹೋಗುತ್ತಿದ್ದಿತು.

ನಿನ್ನ ಚತುರಂಗಸೈನ್ಯದಲ್ಲಿ ಸಾತ್ಯಕಿಯ ಬಾಣದಿಂದ ,ನೋಯದ ಪ್ರಾಣಿಯೊಂದನ್ನಾದರೂ ನಾವು ಕಾಣಲಿಲ್ಲ. ಹಿಂದೆ ಅರ್ಜುನನಿಂದಲೂ ಇಂತಹ ಸೇನಾಕ್ಷಯವು ನಡೆದಹಾಗೆ ನಮಗೆ ತಿಳಿಯಲಿಲ್ಲ. ಆ ಯುದ್ಧದಲ್ಲಿ ಸಾತ್ಯಕಿಯು ಅರ್ಜುನನಿಗಿಂತಲೂ ಮೇಲಾಗಿ ತನ್ನ ಹಸ್ತಲಾಘವವನ್ನೂ, ನಿರ್ಭೀತಿಯನ್ನೂ, ಯುದ್ಧಚಮತ್ಕಾರವನ್ನೂ ತೋರಿಸುತ್ತಿದ್ದನು. ಇದನ್ನು ನೋಡಿ ಸಹಿಸಲಾರದೆ ನಿನ್ನ ಮಗನಾದ ದುರ್ಯೋಧನನು ಥಟ್ಟನೆ ಮುಂದೆ ಬಂದು, ಮೂರು ಬಾಣಗಳಿಂದ ಸಾತ್ಯಕಿಯ ಸಾರಥಿಯನ್ನೂ, ನಾಲ್ಕು ಬಾಣಗಳಿಂದ ಅವನ ನಾಲ್ಕು ರಥಾಶ್ವಗಳನ್ನೂ ಕೊಂದುಕೆಡಹಿದನು. ಇದೇಸಮಯದಲ್ಲಿ ದುಶ್ಯಾಸನನು ಹದಿನಾರು, ಚಿತ್ರಸೇನನು ಐದು, ದುಸ್ಸಹನು ಹದಿನೈದು, ಹೀಗೆ ಸಾತ್ಯಕಿಯಮೇಲೆ ಬಾಣಗಳನ್ನು ಪ್ರಯೋಗಿಸಿದರು. ಆಗಲೂ ಸಾತ್ಯಕಿಯು ನಗುಮುಖದಿಂದಲೇ ಅವರ ಬಾಣಗಳನ್ನು ನಿವಾರಿಸುತ್ತ, ಒಬ್ಬೊಬ್ಬರನ್ನೂ ಮೂರುಮೂರು ಬಾಣಗಳಿಂದ ಬಹಳವಾಗಿ ನೋಯಿಸಿ, ಗಿಡುಗನಂತೆ ವೇಗದಿಂದ ಸುತ್ತಿಬರುತ್ತಿದ್ದನು. ಶಕುನಿಯ ಬಿಲ್ಲನ್ನೂ, ಕೈಚೀಲವನ್ನೂ ಕತ್ತರಿಸಿದನು. ದುರ್ಯೋಧನನ ಎದೆಗೆ ಗುರಿಯಿಟ್ಟು ಮೂರು ಬಾಣಗಳನ್ನು ಹೊಡೆದನು. ಚಿತ್ರಸೇನನನ್ನು ನೂರು ಬಾಣಗಳಿಂದಲೂ, ದುಶ್ಯಾಸನನನ್ನು ಇಪ್ಪತ್ತು ಬಾಣಗಳಿಂದಲೂ, ದುಸ್ಸಹನನ್ನು ಹತ್ತುಬಾಣಗಳಿಂದಲೂ ಹೊಡೆದನು. ಇಷ್ಟರಲ್ಲಿಯೇ ನಿನ್ನ ಮೈದುನನಾದ ಶಕುನಿಯು, ಬೇರೊಂದು ಬಿಲ್ಲನ್ನು ಕೈಗೆತ್ತಿಕೊಂಡು, ಸಾತ್ಯಕಿಯಮೇಲೆ ಮೊದಲು ಎಂಟು ಬಾಣಗಳನ್ನೂ, ಆಮೇಲೆ ಐದು ಬಾಣಗಳನ್ನೂ ಪ್ರಯೋಗಿಸಿದನು. ಇದೇಸಮಯದಲ್ಲಿ ದುಶ್ಯಾಸನನು ಹತ್ತು, ದುಸ್ಸಹನು ಮೂರು, ದುರ್ಮುಖನು ಹನ್ನೆರಡು, ದುರ್ಯೋಧನನು ಎಪ್ಪತ್ತುಮೂರು, ಹೀಗೆ ಸಾತ್ಯಕಿಯಮೇಲೆ ಬಾಣಗಳನ್ನು ಹೊಡೆದರು. ದುರ್ಯೋಧನನು ಮೂರು ತೀಕ್ಷ್ಣಬಾಣಗಳಿಂದ ಸಾತ್ಯಕಿಯ ಸಾರಥಿಯನ್ನು ಬಹಳವಾಗಿ ನೋಯಿಸಿದನು. ಹೀಗೆ ಗುಂಪುಕೂಡಿ ಬಂದು, ತನ್ನನ್ನು ಸುತ್ತಿಮುತ್ತಿ ಹೊಡೆಯುತ್ತಿರುವ ನಿನ್ನಕಡೆಯ ರಥಿಕರನ್ನೆಲ್ಲ ಸಾತ್ಯಕಿಯು ಐದೈದು ಬಾಣಗಳಿಂದ ಹೊಡೆದು, ಒಂದು ಭಲ್ಲದಿಂದ ನಿನ್ನ ಮಗನ ಸಾರಥಿಯನ್ನು ಕೊಂದು ರಥದಿಂದ ಕೆಡಹಿದನು.

ಸಾರಥಿಯು ಬಿದ್ದೊಡನೆ ಕುದುರೆಗಳು ನಿನ್ನ ಮಗನ ರಥವನ್ನು ಎಳೆದು ಕೊಂಡು ವೇಗದಿಂದ ರಣರಂಗವನ್ನು ಬಿಟ್ಟು ಓಡಿಹೋದುವು. ಹೀಗೆ ತಮಗೆ ಪ್ರಭುವಾದ ದುರ್ಯೋಧನನ ರಥವು ವಿಮುಖವಾದುದನ್ನು ನೋಡಿ, ನಿನ್ನಕಡೆಯ ಸೈನಿಕರೆಲ್ಲ ಯುದ್ಧರಂಗದಿಂದ ಓಡಲಾರಂಭಿಸಿದರು. ಇದೇ ಅವಕಾಶವನ್ನು ತಿಳಿದು ಸಾತ್ಯಕಿಯು ಆ ಸೈನ್ಯಗಳಮೇಲೆ ಪರಂಪರೆಯಾಗಿ ಬಾಣಗಳನ್ನು ಬಿಡುತ್ತ ಬೆನ್ನಟ್ಟಿದನು. ಹೀಗೆ ನಿನ್ನ ಸೈನ್ಯಗಳನ್ನೆಲ್ಲ ಓಡಿಸಿಕೊಂಡು ಸಾತ್ಯಕಿಯು, ಅರ್ಜುನನ ರಥವಿರುವಕಡೆಗೆ ಹೊರಟನು. ಹೀಗೆ ಸಾತ್ಯಕಿಯು ನಿರ್ಭಯವಾಗಿ ಮುಂದೆಹೋಗುತ್ತಿದ್ದುದನ್ನು ನೋಡಿ ಯೂ ನಿನ್ನ ಸೈನಿಕರು ಭಯದಿಂದ ಅವನನ್ನು ನೋಡದಹಾಗೆಯೇ ನಟಿಸಿ ಕಾರ್ಯಾಂತರಗಳಲ್ಲಿದ್ದರು. ಆ ಯುದ್ಧದಲ್ಲಿ ಸಾತ್ಯಕಿಯು ತನ್ನನ್ನೂ, ತನ್ನ ಸಾರಥಿಯನ್ನೂ ಅಪಾಯವಿಲ್ಲದಂತೆ ರಕ್ಷಿಸಿಕೊಂಡು ಬಾಣಗಳನ್ನು ಪ್ರಯೋ ಗಿಸುವ ರೀತಿಯನ್ನು ನೋಡಿ ನಿನ್ನವರೆಲ್ಲರೂ ಅವನನ್ನು ಬಹಳವಾಗಿ ಪ್ರಶಂ ಸಿಸಿದರು.

ಇದು ನೂರಇಪ್ಪತ್ತನೆಯ ಅಧ್ಯಾಯವು.



## ಸಾತ್ಯಕಿಯ ಯುದ್ಧವರ್ಣನವು.

ಧೃತರಾಷ್ಟ್ರನು ಸಂಜಯನನ್ನು ಕುರಿತು “ಸಂಜಯಾ! ಹೀಗೆ ಸಾತ್ಯಕಿಯು ನಮ್ಮ ದೊಡ್ಡ ಸೈನ್ಯವನ್ನೆಲ್ಲ ಕೊಂದು, ಅರ್ಜುನನಬಳಿಗೆ ಹೋಗುತ್ತಿರುವಾಗಲೂ ನಾಚಿಕೆಯಿಲ್ಲದ ನನ್ನ ಮಕ್ಕಳು ಏನನ್ನು ಮಾಡಿ ದರು? ಅರ್ಜುನನಂತೆ ಪರಾಕ್ರಮವನ್ನು ತೋರಿಸುತ್ತಿದ್ದ ಆ ಸಾತ್ಯಕಿಯ ಮುಂದೆ ತಿರುಗಿ ಯುದ್ಧಕ್ಕೆ ನಿಲ್ಲಲು ಅವರಿಗೆ ಹೇಗೆತಾನೇ ಧೈರ್ಯವುಂಟಾ ಯಿತು? ಶತ್ರುವಿನಿಂದ ಹಾಗೆ ಪರಾಜಿತರಾದ ನನ್ನ ಮಕ್ಕಳು, ತಮ್ಮ ಕ್ಷತ್ರಿಯವೀರ್ಯವನ್ನು ಕುರಿತು ಏನನ್ನುತಾನೇ ಹೇಳಿದರು? ಸಾತ್ಯಕಿಯು ಇನ್ನೂ ಮುಂದೆಮುಂದೆ ನಮ್ಮ ಸೈನ್ಯವನ್ನು ಜಯಿಸಿಕೊಂಡುಹೋದ ರೀತಿ ಯೇನು? ನನ್ನ ಅಷ್ಟುಮಂದಿ ಮಕ್ಕಳು ಬದುಕಿರುವಾಗಲೇ, ಅವರನ್ನೆಲ್ಲ ಸಾತ್ಯಕಿಯು ಲಕ್ಷ್ಯಮಾಡದೆಹೋದ ಬಗೆಯೇನು? ಸಂಜಯಾ! ನಿನ್ನಿಂದ

ಕೇಳುವ ಮಾತೆಲ್ಲ ನನಗೆ ಅತ್ಯಾಶ್ಚರ್ಯವನ್ನುಂಟುಮಾಡುತ್ತಿದೆ. ಆ ಸಾತ್ಯಕಿಯೊಬ್ಬನೇ ನಮ್ಮಕಡೆಯ ಅನೇಕ ಮಹಾರಥರೊಡನೆ ಹೇಗೆತಾನೇ ಯುದ್ಧಮಾಡಿದನೋ? ದುರ್ಭಾಗ್ಯನಾದ ನನ್ನ ಮಗನ ವಿಷಯದಲ್ಲಿ ಇದೆಲ್ಲಾ ವಿಪರೀತವೆಂದೇ ನನಗೆ ತೋರುವುದು! ಸಾತ್ಯಕಿಯೊಬ್ಬನೇ ನಮ್ಮಲ್ಲಿ ಅನೇಕ ಮಹಾರಥರನ್ನು ಕೊಂದನಲ್ಲವೆ? ಸಂಜಯಾ! ಪಾಂಡವರೆಲ್ಲರ ಮಾತೂ ಹಾಗಿರಲಿ! ನಮ್ಮ ಅಷ್ಟೊಂದು ದೊಡ್ಡ ಸೈನ್ಯವು ಆ ಸಾತ್ಯಕಿಯೊಬ್ಬನ ಕೈಗೇ ಸಾಲದಂತಾಯಿತಲ್ಲಾ? ಸಾತ್ಯಕಿಯು ಈಗಿನ ಸೇನಾಪತಿಯಾದ ದ್ರೋಣನನ್ನು ಯುದ್ಧದಲ್ಲಿ ಸುಲಭವಾಗಿ ಜಯಿಸಿ, ಸಿಂಹವು ಪಶುಗಳ ಮಂದೆಯನ್ನು ಕೊಲ್ಲುವಂತೆ ನಮ್ಮ ಮಕ್ಕಳನ್ನೆಲ್ಲ ಕೊಂದುತೀರಿಸಿಬಿಡುವನು ಕೃತವರ್ಮನೇ ಮೊದಲಾದ ಅನೇಕಶೂರರು ಪ್ರಯತ್ನಪಟ್ಟರೂ ಸಾತ್ಯಕಿಯೊಬ್ಬನನ್ನು ಅಡಗಿಸುವುದಕ್ಕಾಗಲಿಲ್ಲ. ಸಾತ್ಯಕಿಯು ನಡೆಸಿದ ಇಂತಹ ಯುದ್ಧವನ್ನು ಅರ್ಜುನನೂ ಹಿಂದೆ ಯಾವಾಗಲೂ ಮಾಡಿರಲಾರನು" ಎಂದನು. ಅದಕ್ಕಾ ಸಂಜಯನು "ಮಹಾರಾಜಾ! ಇದೆಲ್ಲ ನಿನ್ನ ಮತ್ತು ನಿನ್ನಮಗನ ದುರಾಲೋಚನೆಯ ಫಲವೇ! ನಾನು ಹೇಳುವುದನ್ನು ಸಾವಧಾನವಾಗಿ ಕೇಳು. ಸಾತ್ಯಕಿಯಿಂದ ಪರಾಜಿತರಾಗಿ ಓಡಿಹೋದ ನಿನ್ನ ಕಡೆಯವರೆಲ್ಲರೂ ತಿರುಗಿ ನಿನ್ನ ಮಗನ ಆಜ್ಞೆಯಮೇಲೆ ಯುದ್ಧಕ್ಕಾಗಿ ದೃಢಸಂಕಲ್ಪವನ್ನು ಮಾಡಿಕೊಂಡು ಹಿಂತಿರುಗಿದರು. ದುರ್ಯೋಧನನನ್ನು ಮುಂದಿಟ್ಟುಕೊಂಡು ಮೂರುಸಾವಿರ ಗಜಯೋಧರು ಗುಂಪಾಗಿ ನಡೆದರು. ಶಕ, ಯವನ, ಕಾಂಭೋಜ, ಬಾಹ್ಲೀಕ, ಪಾರದ, ಕುಳಿಂದ, ಟಂಕಣ, ಅಂಬಷ್ಠ, ಪೈಶಾಚ, ಬರ್ಬರರೆಂಬ ವಿವಿಧಸೇನಾವರ್ಗದವರು ನಿನ್ನ ಮಗನನ್ನು ಹಿಂಬಾಲಿಸಿದರು. ಪರ್ವತವಾಸಿಗಳಾದ ಸೈನಿಕರು ಕಲ್ಲುಗಳನ್ನು ಕೈಯಲ್ಲಿ ಹಿಡಿದು ಬೆಂಕಿಯಮೇಲೆ ಬೀಳುವ ಶಲಭಗಳಂತೆ ಸಾತ್ಯಕಿಯನ್ನಿದಿರಿಸಿಬಂದರು. ಶಿಲೆಗಳಿಂದಲೇ ಯುದ್ಧಮಾಡತಕ್ಕ ಪಾರ್ವತೀಯರ ಐನೂರು ರಥಗಳು ಸಾತ್ಯಕಿಯನ್ನು ಇದಿರಿಸಿಬಂದುವು. ಸಾವಿರ ಮಂದಿ ರಥಿಕರು, ನೂರುಮಂದಿ ಮಹಾರಥರು, ಸಾವಿರ ಆನೆಗಳು, ಎರಡು ಸಾವಿರ ಕುದುರೆಗಳು, ಇವಿಷ್ಟೂ ಒಂದಾಗಿ ಸೇರಿ, ಬಾಣಗಳನ್ನು ಬಿಡುತ್ತ ಸಾತ್ಯಕಿಯನ್ನಿದಿರಿಸಿದುವು. ಲೆಕ್ಕವಿಲ್ಲದಷ್ಟು ಕಾಲಾಳುಗಳು ಆಯುಧ

ಪಾಣಿಗಳಾಗಿ ಬಂದರು. ಇವರಿಗೆ ನಿಯಾಮಕನಾಗಿ ದುಶ್ಶಾಸನನು "ನಡೆಯಿರಿ! ಹೊಡೆಯಿರಿ!" ಎಂದು ಅವರನ್ನು ಪ್ರೋತ್ಸಾಹಿಸುತ್ತ, ಸಾತ್ಯಕಿಯನ್ನು ಇದಿರಿಸಿಬಂದು, ಸುತ್ತಲೂ ಮುತ್ತಿಕೊಂಡನು. ಆದರೇನು? ಅಷ್ಟು ಮಂದಿಯನ್ನೂ ಸಾತ್ಯಕಿಯೊಬ್ಬನೇ ನಿರ್ಭಯವಾಗಿ ಇದಿರಿಸಿ, ಯುದ್ಧಮಾಡಿದನು. ಇದು ನಮಗೆ ಆಶ್ಚರ್ಯವನ್ನುಂಟುಮಾಡಿತು. ಯುಯುಧಾನನ ಅದ್ಭುತಪರಾಕ್ರಮವೆಂತದೆಂಬುದನ್ನು ಆಗ ನಾವು ನೋಡಿದೆವು. ಆಗ ಸಾತ್ಯಕಿಯು ಎಷ್ಟೋ ರಥಗಳನ್ನೂ, ಆನೆಗಳನ್ನೂ, ಗಜಯೋಧರನ್ನೂ, ದಸ್ಯುಗಳನ್ನೂ ಕೊಂದುಕೆಡಹಿದನು. ರಥಚಕ್ರಗಳು, ಆಯುಧಗಳು, ಅಚ್ಚು, ಮೂಕಿ, ಇವೆಲ್ಲವೂ ಸಾತ್ಯಕಿಯ ಬಾಣಗಳಿಂದ ಪುಡಿಪುಡಿಯಾಗಿ ಬಿದ್ದುವು. ಎಷ್ಟೋ ಆನೆಗಳು ಸತ್ತುವು! ಧ್ವಜಗಳು ಮುರಿದುವು! ಕವಚಗಳು ಹರಿದುವು! ರಣಭೂಮಿಯೆಲ್ಲ ಅವುಗಳಿಂದ ಮುಚ್ಚಿಹೋದಂತಾಯಿತು. ಕಂಠಮಾಲಿಕೆಗಳು, ಆಭರಣಗಳು, ವಸ್ತ್ರಗಳು, ಅನುಕರ್ಷಗಳು, ಇವೆಲ್ಲವೂ ಅಲ್ಲಲ್ಲಿ ಬಿದ್ದು, ರಣಾಂಗಣವೆಲ್ಲ ಗ್ರಹಗಳಿಂದ ತುಂಬಿದ ಆಕಾಶದಂತೆ ಕಾಣಿಸಿತು. ಎಷ್ಟೋ ಮಹಾಗಜಗಳು ಮೇಲೇರಿದ ಮ್ಲೇಚ್ಛಯೋಧರೊಡನೆ ಕಾಡಿಗೆಯ ರಾಶಿಯಂತೆ ಕಪ್ಪಾಗಿ, ಬೆಟ್ಟಗಳಂತೆ ಅಲ್ಲಲ್ಲಿ ಬಿದ್ದಿದ್ದುವು. ಭದ್ರ, ಮಂದ್ರ, ಮೃಗ, ಮೃಗಮಂದ್ರ, ಭದ್ರಮೃಗಗಳೆಂಬ ಬೇರೆಬೇರೆ ಉತ್ತಮಲಕ್ಷಣಗಳುಳ್ಳ ಆನೆಗಳೆಲ್ಲ ಹತವಾಗಿ ಬಿದ್ದು, ರಣರಂಗವೆಲ್ಲ ಆವುಗಳ ಮೃತಶರೀರದಿಂದ ಮುಚ್ಚಿಹೋಯಿತು. ಅಂಜನ, ವಾಮನ, ಸುಪ್ರತೀಕ, ಮಹಾಪದ್ಮ, ಐರಾವತಗಳೆಂಬ ದಿಗ್ಗಜಗಳ ವಂಶದಲ್ಲಿ ಸಾಕ್ಷಾತ್ತಾಗಿ ಹುಟ್ಟಿದ ಎಷ್ಟೋ ಆನೆಗಳು ಅಲ್ಲಿ ಬಿದ್ದುಹೋದುವು. ಅದರಂತೆಯೇ ವನಾಯುಜ, ಪರ್ವತ, ಕಾಂಭೋಜ, ಬಾಹ್ಲೀಕ, ಪ್ರಾಂತಗಳ ಉತ್ತಮಾಶ್ವಗಳು ಸಾತ್ಯಕಿಯಿಂದ ಹತವಾಗಿ ಬಿದ್ದುವು. ಹೀಗೆ ಸಾತ್ಯಕಿಯು ನಾನಾದೇಶದಿಂದ ಬಂದ ನಾನಾಜಾತಿಯ ಆನೆಕುದುರೆಗಳನ್ನೆಲ್ಲ ನೂರು ಸಾವಿರ ಸಂಖ್ಯೆಯಿಂದ ಧ್ವಂಸಮಾಡಿಬಿಟ್ಟನು. ದಸ್ಯುಜಾತಿಯ ಗಜಯೋಧರೆಲ್ಲರೂ ಹೀಗೆ ಬಹಳವಾಗಿ ನೊಂದು, ಪಲಾಯನಮಾಡುವ ಪ್ರಯತ್ನದಲ್ಲಿರುವುದನ್ನು ನೋಡಿ ದುಶ್ಶಾಸನನು "ಎಲೈ! ಓಡಿಹೋಗಿ ಫಲವೇನು? ಹಿಂತಿರುಗಿರಿ! ಯುದ್ಧಮಾಡಿರಿ! ನೀವು ಯುದ್ಧಧರ್ಮವನ್ನು ತಿಳಿಯದವರಲ್ಲ! ಹೊರ

ಡಿರಿ!” ಎಂದನು. ಅದರಂತೆಯೇ ಶಿಲೆಗಳಿಂದ ಯುದ್ಧಮಾಡತಕ್ಕ ಪಾರ್ವತೀಯಯೋಧರನ್ನೂ, ನಿನ್ನ ಮಗನು ಓಡಿಹೋಗದಂತೆ ಪ್ರೋತ್ಸಾಹಗೊಳಿಸುತ್ತ “ನೀವೇಕೆ ಹೆದರುವಿರಿ? ನೀವು ಶಿಲಾಯುದ್ಧದಲ್ಲಿ ನೈಪುಣ್ಯವುಳ್ಳವರು! ಅದು ಸಾತ್ಯಕಿಗೆ ತಿಳಿಯದು. ಅವನನ್ನು ನೀವು ಸುಲಭವಾಗಿ ಕೊಲ್ಲಬಹುದು. ಅವನು ಧೈರ್ಯದಿಂದ ನಿಮ್ಮನ್ನಿದಿರಿಸಲಾರನು” ಎಂದನು. ಅದರಂತೆಯೇ ಅವರೆಲ್ಲರೂ ಪರ್ವತಾಕಾರವಾದ ಬಂಡೆಗಳನ್ನು ಎತ್ತಿ ಹಿಡಿದು ಸಾತ್ಯಕಿಗಿದಿರಾದರು. ಕೆಲವರು ಶಸ್ತ್ರಧಾರಿಗಳಾಗಿ ಬಂದರು. ನಿನ್ನ ಮಗನ ಪ್ರೇರಣೆಯಿಂದ ಸಾತ್ಯಕಿಯನ್ನು ಕೊಂದುಬಿಡಬೇಕೆಂದೇ ಆ ಪಾರ್ವತೀಯರು ಸುತ್ತಲೂ ಆವರಿಸಿಕೊಂಡರು. ಶಿಲಾಯುದ್ಧವನ್ನು ಆರಂಭಿಸಿದ ಅವರನ್ನೆಲ್ಲ ಸಾತ್ಯಕಿಯು ತನ್ನ ತೀಕ್ಷ್ಣಬಾಣಗಳಿಂದ ನಿವಾರಿಸುತ್ತಬಂದನು. ಅವರು ಬೀಸಿದ ದೊಡ್ಡದೊಡ್ಡ ಶಿಲೆಗಳನ್ನೆಲ್ಲ ಬಾಣಗಳಿಂದ ಪುಡಿಪುಡಿ ಮಾಡಿದನು. ಆ ಶಿಲೆಗಳಿಗೆ ಸಾತ್ಯಕಿಯ ಬಾಣಗಳು ತಗುಲಿದಾಗ, ಅವು ಬೆಂಕಿಯ ಕಿಡಿಗಳನ್ನೆರಚುತ್ತ ಕೆಳಗೆ ಬಿದ್ದುವು. ಅದರಿಂದಲೇ ನಿನ್ನ ಸೈನ್ಯಗಳೆಷ್ಟೋ ದಗ್ಧವಾದುವು. ನಿನ್ನ ಸೈನ್ಯದಲ್ಲಿ ಹಾಹಾಕಾರವುಂಟಾಯಿತು. ದೊಡ್ಡ ಶಿಲೆಗಳನ್ನು ಕೈಯಲ್ಲಿ ಹಿಡಿದುಬಂದ ಐನೂರು ಮಂದಿ ಪಾರ್ವತೀಯರ ತೋಳುಗಳನ್ನು ಸಾತ್ಯಕಿಯು ಕತ್ತರಿಸಿಕೆಡಹಿದನು. ಅವರೆಲ್ಲರೂ ಸತ್ತುಬಿದ್ದರು. ಸಾತ್ಯಕಿಯ ಬಾಣಗಳಿಂದಲೂ, ಅವನು ಭೇದಿಸಿದ ಭಂಡೆಯ ಕಲ್ಲುಗಳಿಂದಲೂ ಎಷ್ಟೋ ಮ್ಲೇಚ್ಛಸೈನಿಕರು ಹತರಾದರು. ಕೆಲಕೆಲವರು ಆಗಲೂ ಸಾತ್ಯಕಿಯಮೇಲೆ ಕಲ್ಮಳೆಯನ್ನು ಕರೆಯುತ್ತಿದ್ದರು. ಸಾತ್ಯಕಿಯು ಅನೇಕ ಸಹಸ್ರಯೋಧರನ್ನು ಏಕಾಕಿಯಾಗಿಯೇ ಕೊಂದು ಕೆಡಹಿದನು. ಇದು ನಮಗೆಲ್ಲ ಆಶ್ಚರ್ಯಕರವಾಯಿತು. ಹಾಗೆಯೇ ಅಲ್ಲಿ ಬಸ್ತಮುಖರು, ಅಘೋಬಸ್ತರು, ಸ್ಥೂಲಬಸ್ತರು, ದರದರು, ಖಸರು, ಟಂಕಣರು, ಲಂಬಕರು, ಪಣಿಂದರು, ಮುಂತಾದ ಪರ್ವತವಾಸಿಗಳು ನಾನಾದಿಕ್ಕುಗಳಿಂದ ಬೀಸಿದ ಶಿಲಾವೃಷ್ಟಿಗಳನ್ನೆಲ್ಲ, ಸಾತ್ಯಕಿಯು ತನ್ನ ಬಾಣಗಳಿಂದ ಭೇದಿಸುತ್ತ ಬಂದನು. ಆಗ ಸಾತ್ಯಕಿಯ ಬಾಣಗಳು ತಾಗಿ, ಅಂತರಿಕ್ಷದಲ್ಲಿಯೇ ಭೇದಿಸಲ್ಪಡುವ ಪರ್ವತಾಕಾರವಾದ ಶಿಲೆಗಳ ಶಬ್ದವನ್ನು ಕೇಳಿ ನಿನ್ನ ಸೈನ್ಯವೆಲ್ಲವೂ ಭಯದಿಂದ ಓಡಲಾರಂಭಿಸಿತು. ನಿನ್ನ

ಚತುರಂಗಸೈನ್ಯದಮೇಲೆ ಕಲ್ಲಿನ ಶಕಲಗಳು ಮಳೆಯಂತೆ ಬೀಳುತ್ತಿದ್ದುವು. ಜೇನುಹುಳಗಳಿಂದ ಮುತ್ತಲ್ಪಟ್ಟವರಂತೆ ನಿನ್ನ ಸೈನಿಕರು ರಣರಂಗದಲ್ಲಿ ನಿಲ್ಲಲಾರದೆ ಓಡಿದರು. ಅನೇಕರು ತಲೆಯೊಡೆದು ರಕ್ತಸ್ರಾವದೊಡನೆ ಬಿದ್ದಿದ್ದರು. ಆನೆಗಳಲ್ಲಿ ಕೆಲವಕ್ಕೆ ದಂತಗಳು ಮುರಿದುವು! ಕೆಲವಕ್ಕೆ ಸುಂಡಿಲುಗಳು ಕತ್ತರಿಸಿಬಿದ್ದುವು! ನೂರಾರು ಆನೆಗಳು ಅಂಗಹೀನಗಳಾದುವು. ಒಂದು ಕ್ಷಣಮಾತ್ರದಲ್ಲಿ ಸಾತ್ಯಕಿಯು ತನ್ನ ಹಸ್ತವೇಗದಿಂದ ಐನೂರುಮಂದಿ ಪ್ರಬಲಯೋಧರನ್ನು ಕೊಂದನು. ಆನೆಗಳು ಸಾತ್ಯಕಿಯ ಕೊಲೆಯಿಂದ ತಬ್ಬಿಬ್ಬಾಗಿ ಓಡುತ್ತಿದ್ದುವು. ಬಾಣಗಳಿಂದ ಭೇದಿಸಲ್ಪಡುವ ಶಿಲೆಗಳ ಧ್ವನಿಯು ತಾವರೆಯೆಲೆಗಳಮೇಲೆ ಬೀಳುವ ವರ್ಷಧಾರೆಗಳ ಧ್ವನಿಯಂತೆ ಎಡೆಬಿಡದೆ ಕೇಳಿಸುತ್ತಿದ್ದಿತು. ಇಷ್ಟರಲ್ಲಿಯೇ ಪರ್ವಕಾಲದ ಸಮುದ್ರಘೋಷದಂತೆ ನಿನ್ನ ಸೈನ್ಯದಲ್ಲಿ ದೊಡ್ಡ ಹಾಹಾಕಾರವೆದ್ದಿತು. ಸಾತ್ಯಕಿಯ ಬಾಣಗಳಿಂದ ನೊಂದ ಕೌರವಸೈನ್ಯದ ಈ ದೀನಧ್ವನಿಯು ದ್ರೋಣನ ಕಿವಿಗೆ ಮುಟ್ಟಲು, ದ್ರೋಣನು ತನ್ನ ಸಾರಥಿಯನ್ನು ಕುರಿತು “ಸೂತಾ! ಅದೋ! ಅಲ್ಲಿ ಸಾತ್ಯಕಿಯು ನಮ್ಮ ಸೈನ್ಯಗಳನ್ನೆಲ್ಲ ಭೇದಿಸುತ್ತ, ಕಾಲಯಮನಂತೆ ರಣಾಂಗಣದಲ್ಲಿ ಸಂಚರಿಸುತ್ತಿರುವನು. ಅದೋ! ಅಲ್ಲಿ ನಮ್ಮ ಸೈನ್ಯದ ಕೂಗು ಕೇಳಿಸುತ್ತಿರುವುದು ನೋಡು. ಅಲ್ಲಿಗೆ ರಥವನ್ನು ಬೇಗನೆ ಬಿಡು. ಈಗ ಸಾತ್ಯಕಿಯು ಶಿಲಾಯುದ್ಧನಿಪುಣರಾದ ನಮ್ಮ ಪಾರ್ವತೀಯ ಸೈನ್ಯಗಳೊಡನೆ ಯುದ್ಧಮಾಡುವಂತಿದೆ. ಮತ್ತು ನಮ್ಮಕಡೆಯ ಅನೇಕ ರಥಿಕರು ಶಸ್ತ್ರಹೀನರಾಗಿ, ಕವಚಗಳು ಹರಿದು, ಸಾತ್ಯಕಿಯ ಬಾಣಗಳಿಂದ ಬಹಳವಾಗಿ ನೊಂದು, ತಮ್ಮ ರಥಗಳಿಂದ ಕೆಳಕ್ಕೆ ಬೀಳುವುದನ್ನೂ, ಕುದುರೆಗಳು ಅಂಕೆಯಿಲ್ಲದೆ ಓಡುತ್ತಿರುವುದನ್ನೂ ನೋಡು. ಸಾರಥಿಗಳಿಗೆ ಕುದುರೆಗಳನ್ನು ತಡೆದು ನಿಲ್ಲಿಸುವುದೇ ಸಾಧ್ಯವಿಲ್ಲದಿದೆ” ಎಂದನು. ಅದಕ್ಕಾ ಸಾರಥಿಯು ದ್ರೋಣನನ್ನು ಕುರಿತು “ಆಯುಷ್ಮನ್! ವಾಸ್ತವವೇ! ಕೌರವ ಸೈನ್ಯವು ಭಯದಿಂದ ನಾನಾಕಡೆಗೆ ಚದರುತ್ತಿರುವುದು. ಅಲ್ಲಿ ಕೌರವ ಯೋಧರು ಪರಾಜಿತರಾಗಿ ಓಡುವರು. ಇತ್ತಲಾಗಿ ಪಾಂಚಾಲರು ಪಾಂಡವರೊಡಗೂಡಿ ನಿನ್ನನ್ನು ಕೊಲ್ಲುವುದಕ್ಕಾಗಿ ಬರುತ್ತಿರುವರು. ಈಗ ಏನು ಮಾಡಬೇಕೆಂಬುದನ್ನು ನೀನು ಚೆನ್ನಾಗಿ ಮನಸ್ಸಿನಲ್ಲಿ ಆಲೋಚಿಸಿ ನಿರ್ಧರಿಸ

ಬೇಕು. ಇಲ್ಲಿಯೇ ನಿಂತು ಪಾಂಚಾಲರನ್ನು ತಡೆಯಬೇಕೇ? ಅಲ್ಲಿಗೆ ಹೋಗಬೇಕೆ? ಎಂಬುದನ್ನು ಯೋಚಿಸು. ಸಾತ್ಯಕಿಯೇನೋ ಬಹುದೂ ರಕ್ಕೆ ಹೊರಟುಹೋದನು" ಎಂದನು. ಸಾತ್ಯಕಿಯು ಹೀಗೆ ಹೇಳುತ್ತಿರು ವಾಗಲೇ, ಸಾತ್ಯಕಿಯಿಂದ ಪರಾಜಿತರಾಗಿ ಅನೇಕ ಕೌರವರಥಿಕರು ಅವನ ರಥವನ್ನು ಬಿಟ್ಟು, ದ್ರೋಣನ ಸೈನ್ಯದಕಡೆಗೆ ಓಡಿಬಂದರು. ಇದಕ್ಕೆ ಮೊದಲು ದುಶ್ಶಾಸನನೊಡನೆ ಯಾವಯಾವ ರಥಗಳು ಹೋಗಿದ್ದುವೋ, ಅವೆಲ್ಲ ತಿರುಗಿ ದ್ರೋಣನಬಳಿಗೇ ಬಂದುಸೇರಿದುವು.

ಇದು ನೂರ ಇಪ್ಪತ್ತೊಂದನೆಯ ಅಧ್ಯಾಯವು.



{ ಭಯದಿಂದೋಡಿಬಂದ ದುಶ್ಶಾಸನನನ್ನು ದ್ರೋಣನು ನಿಂದಿಸಿದುದು. ದ್ರೋಣಧೃಷ್ಟದ್ಯುಮ್ನರ ಯುದ್ಧವು. }

ಧೃತರಾಷ್ಟ್ರಮಹಾರಾಜಾ! ಹೀಗೆ ನಿನ್ನ ಕಡೆಯ ರಥಿಕರೆಲ್ಲ ಭಯ ದಿಂದೋಡಿಬಂದು ದ್ರೋಣನ ಸೈನ್ಯವನ್ನು ಪ್ರವೇಶಿಸಿ, ತಲೆತಪ್ಪಿಸಿಕೊಂಡ ಮೇಲೆ, ದ್ರೋಣನು ದುಶ್ಶಾಸನನ ರಥವು ತನ್ನ ಪಕ್ಕದಲ್ಲಿ ನಿಂತಿರುವುದನ್ನು ನೋಡಿ "ಓ ದುಶ್ಶಾಸನಾ! ನಿನ್ನೊಡನೆ ಈ ರಥಿಕರೆಲ್ಲ ಇಲ್ಲಿಗೆ ಓಡಿ ಬಂದುದೇಕೆ? ದುರ್ಯೋಧನನಿಗೆ ಕ್ಷೇಮವಷ್ಟೆ? ಸಿಂಧುರಾಜನು ಇನ್ನೂ ಬದುಕಿರುವನಷ್ಟೆ? ನೀನಾದರೋ ಮಹಾರಾಜಕುಮಾರನು! ರಾಜನಾದ ದುರ್ಯೋಧನನ ಸಹೋದರನು! ಮಹಾರಥನೆಂಬ ಬಿರುದನ್ನು ಪಡೆದ ವನು! ಇಂತಹ ನೀನು ಯುವರಾಜಪದವಿಯಲ್ಲಿದ್ದುಕೊಂಡು, ಈಗಿನ ಯು ದ್ಧಕ್ಕೆ ಹೆದರಿ ಓಡಿಬರುವುದುಂಟೆ? ದುಶ್ಶಾಸನಾ! ನೀನು ಹಿಂದೆ ರಾಜಸಭೆ ಯಲ್ಲಿ ಆ ದ್ರೌಪದಿಯಮುಂದೆ ಆಡಿದ ಗರ್ವೋಕ್ತಿಗಳನ್ನು ಮರೆತುಬಿಟ್ಟೆ ಯಾ? ಆಗ ಅಬಲೆಯಾದ ಆಕೆಯನ್ನು ಕುರಿತು "ಎಲೆ ದಾಸೀ! ನೀನು ಜೂಜಿನಲ್ಲಿ ನಿನ್ನ ಪತಿಗಳಿಂದ ಒತ್ತೆಯಾಗಿಡಲ್ಪಟ್ಟು, ನಮ್ಮ ವಶ ಳಾದೆ! ಇನ್ನು ನೀನು ಸ್ವೈರಿಣಿಯಂತೆ ನಡೆಯುತ್ತ, ನಮಗೆ ದಾಸಿಯಾಗಿರ ಬೇಕು! ಇನ್ನು ನೀನು ನನ್ನಣ್ಣನ ಬಟ್ಟೆಗಳನ್ನು ಹೊರತಕ್ಕವಳು! ಇನ್ನು ನಿನಗೆ ಪತಿಗಳಿಲ್ಲವೆಂದು ತಿಳಿ! ಅವರೆಲ್ಲರೂ ಈಗ ಎಳ್ಳಿನ ಜಳ್ಳುಕಾಳುಗಳಿಗೆ

ಸಮಾನರು" ಎಂದು ಹೇಳಿದವನಲ್ಲವೆ? ಇಷ್ಟು ಅಹಂಕಾರದಿಂದಿದ್ದ ನೀನು ಹೇಗೆತಾನೇ ಈಗ ಓಡಿಬಂದೆ? ನೀನಾಗಿಯೇ ಪಾಂಡವ ಪಾಂಚಾಲರೊಡನೆ ಪ್ರಬಲವೈರವನ್ನು ಬೆಳೆಸಿ, ಈಗ ಸಾತ್ಯಕಿಯೊಬ್ಬನಮುಂದೆ ನಿಲ್ಲಲಾರದೆ ಯುದ್ಧಕ್ಕೆ ಭಯಪಟ್ಟು ಬಂದೆಯಲ್ಲಾ? ಎಲ ಮೂಢಾ! ಹಿಂದೆ ನೀನು ದ್ಯೂತಸಭೆಯಲ್ಲಿ ಬೀಸಿದ ವಾಗ್ಬಾಣಗಳೇ ಮುಂದೆ ಸರ್ಪಗಳಂತೆ ನಿನ್ನನ್ನು ಕೊಲ್ಲುವ ಬಾಣಗಳಾಗಿ ಬರುವುವೆಂಬುದನ್ನು ನೀನು ತಿಳಿಯದೆಹೋದೆ! ದುಶ್ಶಾಸನಾ! ಪಾಂಡವರ ವಿಷಯದಲ್ಲಿ, ಮುಖ್ಯವಾಗಿ ದ್ರೌಪದಿಯ ವಿಷಯದಲ್ಲಿ, ನೀನು ಆಡಬಾರದ ಮಾತುಗಳನ್ನೆಲ್ಲ ಆಡಿದೆ. ದ್ರೌಪದಿಗೆ ಆ ವಿಧವಾದ ಪರಿಭವವುಂಟಾದುದಕ್ಕೆ ನೀನೇ ಮೂಲವು! ಆ ನಿನ್ನ ಹೆಮ್ಮೆ ಯೆಲ್ಲಿ? ಆ ನಿನ್ನ ದರ್ಪವೆಲ್ಲಿ? ನಿನ್ನ ವೀರ್ಯವೆಲ್ಲಿ? ಆಗ ನೀನು ಮಾಡಿದ ಆರ್ಭಟಗಳೆಲ್ಲವೂ ಎಲ್ಲಿಹೋದುವು? ಸರ್ಪಗಳನ್ನು ಕೆಣಕಿದಂತೆ ಪಾಂಡವ ರನ್ನು ಬಹಳವಾಗಿ ರೇಗಿಸಿದ ನೀನು, ಈಗ ಎಲ್ಲಿಗೆ ಓಡಿಹೋಗುತ್ತಿರುವೆ? ನಿನ್ನಿಂದಲ್ಲವೇ ಕೌರವರ ಸ್ಥಿತಿಯು ಇಷ್ಟು ಶೋಚನೀಯವಾಯಿತು? ಕೌರವ ರಾಜ್ಯವು ಇಂತಹ ದುಸ್ಥಿತಿಗೆ ಬಂದಿತು! ರಾಜನಾದ ದುರ್ಯೋಧ ನನ ಸ್ಥಿತಿಯೂ ಶೋಚನೀಯವಾಯಿತು. ಆತನಿಗೆ ಒಡಹುಟ್ಟಿದ ನೀನು ಯುದ್ಧಕ್ಕೆ ಹೆದರಿ ಓಡಿಬಂದೆಯಲ್ಲವೆ? ಇತರಸೈನ್ಯಗಳು ಶತ್ರುಗಳಿಂದ ಭಯಪಟ್ಟು ಓಡಿಬಂದಾಗ, ನಿನ್ನ ಬಾಹುಬಲವನ್ನು ಹಿಡಿದು ಅವು ಗಳನ್ನೆಲ್ಲ ತಡೆದು ನಿಲ್ಲಿಸಿ, ಅವುಗಳನ್ನು ಅಪಾಯಕ್ಕೀಡಾಗದಂತೆ ರಕ್ಷಿಸ ಬೇಕಾದವನೂ ನೀನೇ! ಅಂತಹ ನೀನೇ ಯುದ್ಧಕ್ಕೆ ಹೆದರಿ ಓಡಿಬಂದು, ಶತ್ರುಗಳು ನಗುವಂತೆ ಮಾಡುತ್ತಿರುವೆಯಲ್ಲಾ? ನಮ್ಮ ಸೈನ್ಯಕ್ಕೆ ನಿಯಾಮಕನೆನಿಸಿಕೊಂಡ ನೀನೇ ಓಡಿಬಂದಮೇಲೆ, ಬೇರೆ ಯಾವನು ತಾನೇ ಯುದ್ಧಕ್ಕೆ ನಿಂತು ನಿರ್ಭಯವಾಗಿ ಹೋರಾಡುವನು? ಅತ್ತಲಾಗಿ ಸಾತ್ಯಕಿಯೊಬ್ಬನು ಅಸಹಾಯನಾಗಿ ಬಂದಿರುವಾಗಲೂ, ಅವನೊಡನೆ ಯುದ್ಧಮಾಡಲಾರದೆ ರಣರಂಗದಿಂದ ಓಡಿಹೋಗಬೇಕೆಂಬ ಬುದ್ಧಿಯು ನಿನಗೆ ಹೇಗೆತಾನೇ ಹುಟ್ಟಿತು? ನಿನ್ನ ಸ್ಥಿತಿಯು ಈಗಲೇ ಹೀಗಾದಮೇಲೆ, ಮುಂದೆ ಗಾಂಡಿವಧಾರಿಯಾದ ಆ ಅರ್ಜುನನನ್ನೂ, ಆ ಭೀಮಸೇನನನ್ನೂ, ಆ ನಕುಲಸಹದೇವರನ್ನೂ ಕಂಡಾಗ, ನೀನು ಏನನ್ನುತಾನೇ ಮಾಡಬಲ್ಲೆ?

ಸೂರ್ಯಾಗ್ನಿಗಳಿಗೆ ಸಮಾನವಾದ ಆ ಅರ್ಜುನನ ಬಾಣಗಳಿಗೆ ಸಾತ್ಯಕಿಯ ಬಾಣಗಳು ಯಾವಭಾಗದಲ್ಲಿಯೂ ಸಾಟಿಯಾಗಲಾರವು! ಆ ಸಾತ್ಯಕಿಯ ಬಾಣಗಳಿಗೇ ನೀನು ಹೆದರಿ ಓಡಿಬಂದೆಯಲ್ಲಾ? ದುಃಶ್ಶಾಸನಾ! ಇನ್ನು ನೀನು ಯಾರಿಗೂ ಮುಖವನ್ನು ತೋರಿಸದೆ, ಬೇಗನೆ ಓಡಿಹೋಗಿ, ನಿನ್ನ ತಾಯಿಯ ಹೊಟ್ಟೆಯಲ್ಲಿಯೇ ತಿರುಗಿ ಹುದುಗಿರು! ಯುದ್ಧದಲ್ಲಿ ಓಡಿಬಂದ ನಿನ್ನಂಥವನಿಗೆ ಬೇರೆ ಯಾವ ವಿಧವಾದ ಬದುಕೂ ಕಾಣುವುದಿಲ್ಲ. ಯುದ್ಧಕ್ಕೆ ಹೆದರಿ ಓಡಿಬರುವುದಕ್ಕಿಂತಲೂ, ಧರ್ಮರಾಜನೊಡನೆ ವೈರವನ್ನು ಬೆಳೆಸದೆ ಶಾಂತಿಯಿಂದಲೇ ರಾಜ್ಯವನ್ನೊಪ್ಪಿಸಬಹುದಾಗಿತ್ತಲ್ಲವೆ? ಈಗಲೂ ನೀನು ಸಮಾಧಾನದಿಂದ ಪಾಂಡವರಿಗೆ ರಾಜ್ಯವನ್ನೊಪ್ಪಿಸಿಬಿಡಲು ಪ್ರಯತ್ನಿಸು. ಅರ್ಜುನನ ಬಾಣಗಳು ನಿನ್ನ ಮೈಯಲ್ಲಿ ನಾಟುವುದಕ್ಕೆಮೊದಲೇ ಪಾಂಡವರೊಡನೆ ಸಮಾಧಾನವನ್ನು ಬೆಳೆಸು! ಪಾಂಡವರು ನಿನ್ನ ಸಹೋದರರನ್ನೆಲ್ಲ ಕೊಂದು ಬಲಾತ್ಕಾರದಿಂದ ರಾಜ್ಯವನ್ನು ಕಿತ್ತುಕೊಳ್ಳುವುದಕ್ಕೆಮೊದಲೇ, ಅವರೊಡನೆ ನೀನು ಶಾಂತಿಯನ್ನು ಮಾಡಿಕೊಂಡು, ಸಮಾಧಾನದಿಂದಿರು. ಆ ಧರ್ಮಪುತ್ರನೂ, ಶ್ರೀಕೃಷ್ಣನೂ ಕೋಪಗೊಳ್ಳುವಮೊದಲೇ, ಪಾಂಡವರೊಡನೆ ಸಮಾಧಾನವನ್ನು ಬೆಳೆಸು. ಮಹಾಬಾಹುವಾದ ಭೀಮಸೇನನು ನಮ್ಮ ಕೌರವಸೈನ್ಯದಲ್ಲಿ ಪ್ರವೇಶಿಸಿ, ನಿನ್ನ ಸಹೋದರರನ್ನೆಲ್ಲ ಕೊಲ್ಲುವಮೊದಲೇ ಪಾಂಡವರೊಡನೆ ಸಮಾಧಾನವನ್ನು ಬೆಳೆಸು. ದುಶ್ಶಾಸನಾ! ಹಿಂದೆ ಮಹಾತ್ಮನಾದ ಭೀಷ್ಮನು ನಿನ್ನಣ್ಣನಾದ ದುರ್ಯೋಧನನನ್ನು ಕರೆದು "ಓ ಸೌಮ್ಯಾ! ಪಾಂಡವರನ್ನು ನೀನು ಜಯಿಸಲಾರೆ! ಅವರೊಡನೆ ಸಮಾಧಾನದಿಂದಿರು" ಎಂದು ಎಷ್ಟೋ ಸಾರಿ ಬುದ್ಧಿವಾದಗಳನ್ನು ಹೇಳಿದನು. ನಾನೂ ನಿನ್ನಣ್ಣನಿಗೆ ಅದೇ ಬುದ್ಧಿವಾದಗಳನ್ನು ಹೇಳಿದೆನು. ಹೋದವರು ಹೋಗಲಿ. ಈಗಲೂ ಪಾಂಡವರೊಡನೆ ಸಂಧಿಮಾಡಿಕೊಂಡು, ಉಳಿದ ಕ್ಷತ್ರಿಯರನ್ನಾದರೂ ಜೀವದಿಂದುಳಿಸು" ಎಂದು ನಾನು ಈಗಲೂ ಹೇಳುತ್ತಿರುವೆನು. ನಿನ್ನಣ್ಣನು ಆ ಮಾತುಗಳೊಂದನ್ನೂ ನಡೆಸಲಿಲ್ಲ. ಮೂಢನಾದ ಆತನು ಯುದ್ಧಕ್ಕೆ ಕಂಕಣವನ್ನು ಕಟ್ಟಿ ನಿಂತನು. ದುಶ್ಶಾಸನಾ! ನೀನು ಯುದ್ಧಕ್ಕೆ ಹೋಗುವುದಾದರೆ, ಆ ಭೀಮನು ನಿನ್ನ ರಕ್ತವನ್ನು ಕುಡಿಯದೆ ಬಿಡನು. ಅವನ

ಪ್ರತಿಜ್ಞೆಯು ಎಂದಿಗೂ ಸುಳ್ಳಾಗದು. ಅದು ಹಾಗೆಯೇ ನಡೆಯುವುದು. ಎಲ ಮೂಢಾ! ಭೀಮನೊಡನೆ ವೈರವನ್ನು ಬೆಳೆಸಿದವನು ನೀನೇ! ಎಷ್ಟೋ ಯುದ್ಧದಲ್ಲಿ ನೀನು ಅವನಿಗೆ ಹೆದರಿ ಓಡಿಬಂದಿರುವೆ. ಆ ಭೀಮನ ಪರಾಕ್ರಮವೆಷ್ಟೆಂಬುದು ಇನ್ನೂ ನಿನಗೆ ತಿಳಿಯಲಿಲ್ಲವೇ? ಆದುದಾಯಿತು! ಈಗಲೂ ನೀನು ಬೇಗನೆ ರಥವನ್ನು ಬಿಟ್ಟುಕೊಂಡು ಆ ಸಾತ್ಯಕಿಯ ಕಡೆಗೆ ಹೊರಡು. ಅಲ್ಲಿ ನಮ್ಮ ಸೈನ್ಯವೆಲ್ಲ ಅಂಕೆಯಿಲ್ಲದೆ ಓಡುತ್ತಿರುವುದು ನೋಡು. ನಿನ್ನ ಕ್ಷೇಮಕ್ಕಾಗಿ ನೀನು ಆ ಸಾತ್ಯಕಿಯನ್ನು ಇದಿರಿಸಿ ಯುದ್ಧ ಮಾಡು" ಎಂದನು. ಧೃತರಾಷ್ಟ್ರಮಹಾರಾಜಾ! ದ್ರೋಣನ ಈ ನಿಂದಾವಾಕ್ಯಗಳನ್ನೆಲ್ಲ ನಿನ್ನ ಮಗನು ಕೇಳಿಯೂ ಕೇಳದಂತೆ ಬಾಯೆತ್ತದೆ ಸುಮ್ಮನಿದ್ದನು. ಕೊನೆಗೆ ದೊಡ್ಡ ಮ್ಲೇಚ್ಛಸೈನ್ಯವನ್ನು ಸೇರಿಸಿಕೊಂಡು, ಸಾತ್ಯಕಿಯಿದ್ದಸ್ಥಳಕ್ಕೆ ಹೊರಟನು. ಅಲ್ಲಿ ಬಹಳ ಎಚ್ಚರಿಕೆಯಿಂದ ಯುದ್ಧಮಾಡತೊಡಗಿದನು. ಇತ್ತಲಾಗಿ ದ್ರೋಣನೂ ಕೂಡ ಪಾಂಡವ ಪಾಂಚಾಲ ಸೈನ್ಯಗಳನ್ನು ಇದಿರಿಸಿ ಯುದ್ಧಮಾಡುತ್ತ, ಆ ಸೈನ್ಯಗಳನ್ನು ಚದರಿಸುತ್ತಿದ್ದನು. ನೂರುಸಾವಿರ ಸಂಖ್ಯೆಯಿಂದ ಶತ್ರುಸೈನ್ಯವನ್ನು ಭಂಗಿಸಿದನು. ಆಮೇಲೆ ದ್ರೋಣನು ತನ್ನ ಮುಂದಿದ್ದ ಪಾಂಡು ಪಾಂಚಾಲ ಮತ್ಸ್ಯಸೈನ್ಯಗಳಿಗೆ ತನ್ನ ಹೆಸರನ್ನು ತಿಳಿಸಿ ಪ್ರಬಲಯುದ್ಧವನ್ನು ತೊಡಗಿದನು. ತಮ್ಮ ಸೇನೆಗಳನ್ನೆಲ್ಲ ನಾಶಗೊಳಿಸುತ್ತಿರುವ ಆ ದ್ರೋಣನನ್ನು ಪಾಂಚಾಲಪುತ್ರನಾದ ವೀರಕೇತುವೆಂಬವನು ಇದಿರಿಸಿ ತಡೆದನು. ಅವನು ದ್ರೋಣನನ್ನು ಐದು ಬಾಣಗಳಿಂದ ಹೊಡೆದು, ಒಂದು ಬಾಣದಿಂದ ದ್ರೋಣನ ಧ್ವಜವನ್ನು ಮುರಿದನು. ಏಳು ಬಾಣಗಳಿಂದ ದ್ರೋಣನ ಸಾರಥಿಯನ್ನು ಬಲವಾಗಿ ನೋಯಿಸಿದನು. ಆಗ ದ್ರೋಣನಿಗೂ ಆ ಪಾಂಚಾಲಕುಮಾರನ ವೇಗವನ್ನು ತಡೆಯಲಸಾಧ್ಯವಾಯಿತು. ಅದು ನನಗೆ ಅತ್ಯಾಶ್ಚರ್ಯಕರವಾಗಿದ್ದಿತು. ದ್ರೋಣನು ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದಿರುವುದನ್ನು ನೋಡಿ, ಇದೇ ಸಮಯವೆಂದು ಅನೇಕ ಪಾಂಚಾಲಯೋಧರು ಅವನನ್ನು ಆವರಿಸಿಕೊಂಡರು. ಎಲ್ಲರೂ ಸುತ್ತಿಮುತ್ತಿ ನಿಂತು ಅಗ್ನಿಸಮಾನವಾದ ಬಾಣಗಳಿಂದಲೂ, ದೊಡ್ಡ ತೋಮರಗಳಿಂದಲೂ, ವಿವಿಧಶಸ್ತ್ರಗಳಿಂದಲೂ ದ್ರೋಣನನ್ನು ಮರೆಸುತ್ತಿದ್ದರು. ಆದರೇನು? ದ್ರೋಣನು ಬಿರುಗಾಳಿಯು ಮೇಘ

ಗಳನ್ನು ಹೇಗೋ ಹಾಗೆ, ಆ ಯೋಧರನ್ನೆಲ್ಲ ತನ್ನ ವೇಗದಿಂದ ತೂರಿಬಿಟ್ಟನು. ಸೂರ್ಯಾಗ್ನಿಸಮಾನವಾದ ಬಾಣವೊಂದನ್ನು ಬಿಲ್ಲಿನಲ್ಲಿ ಸಂಧಿಸಿ, ವೀರಕೇತುವಿನ ರಥಕ್ಕೆ ಗುರಿಯಿಟ್ಟು ಹೊಡೆದನು. ಆ ಬಾಣವು ವೀರಕೇತುವಿನ ಶರೀರವನ್ನು ಭೇದಿಸಿಕೊಂಡುಹೋಗಿ ಭೂಮಿಯಲ್ಲಿ ನಾಟಿತು. ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಪರ್ವತಾಗ್ರದಿಂದ ಮುರಿದುಬೀಳುವ ದೊಡ್ಡ ಸಂಪಗೆಯ ಮರದಂತೆ, ಪಾಂಚಾಲಕುಮಾರನು (ವೀರಕೇತುವು) ರಥದಿಂದ ಕೆಳಕ್ಕುರುಳಿದನು. ತಮ್ಮ ರಾಜಕುಮಾರನ ವಧವನ್ನು ನೋಡಿ ಸಹಿಸಲಾರದೆ, ಅನೇಕ ಪಾಂಚಾಲರು ದ್ರೋಣನನ್ನು ಸುತ್ತಲೂ ಮುತ್ತಿಕೊಂಡು ಹೊಡೆಯಲಾರಂಭಿಸಿದರು. ವೀರಕೇತುವಿನ ಸಹೋದರರಾದ ಚಿತ್ರಕೇತು, ಸುಧನ್ವನು, ಚಿತ್ರವರ್ಮನು, ಚಿತ್ರರಥನು, ಎಂಬೀ ನಾಲ್ವರೂ ದ್ರೋಣನನ್ನು ಕೊಂದೇಬಿಡಬೇಕೆಂದು, ಮೇಘಗಳು ಮಳೆಯನ್ನು ಕರೆಯುವಂತೆ ಬಾಣವರ್ಷವನ್ನು ಕರೆಯುತ್ತ, ದ್ರೋಣನ ಸುಳಿವೇ ತಿಳಿಯದಂತೆ ಅವನನ್ನು ಬಾಣಗಳಿಂದ ಮುಚ್ಚಿಬಿಟ್ಟರು. ದ್ರೋಣನು ಇದನ್ನು ನೋಡಿ ದುಸ್ಸಹವಾದ ಕೋಪದಿಂದ ಆ ಪಾಂಚಾಲರನ್ನೆಲ್ಲ ಆಗಲೇ ತೀರಿಸಿಬಿಡಬೇಕೆಂದು ಅವರ ಸುತ್ತಲೂ ಬಾಣದ ಬಲೆಯನ್ನು ಹರಡಿದನು. ದ್ರೋಣನ ಬಾಣಪ್ರಹಾರಗಳಿಂದ ಅವರಿಗೆ ದಿಗ್ಭ್ರಮೆಹಿಡಿದಂತಾಯಿತು. ಅವರು ಮುಂದೇನುಮಾಡಬೇಕೆಂದು ತೋರದೆ ಮೋಹಾಕುಲರಾಗಿದ್ದರು. ಇದೇಸಮಯದಲ್ಲಿ ದ್ರೋಣನು ನಗುತ್ತ, ಅವರ ರಥಾಶ್ವಸಾರಥಿಗಳನ್ನೆಲ್ಲ ಕೊಂದು, ಬಿರುಗಾಳಿಯು ಮರದಿಂದ ಹೂಗಳನ್ನುದಿರಿಸುವಂತೆ ತೀಕ್ಷ್ಣಬಾಣಗಳಿಂದ ಅವರ ತಲೆಗಳನ್ನು ಹಾರಿಸಿಬಿಟ್ಟನು. ಹೀಗೆ ಆ ಸಹೋದರರನ್ನೆಲ್ಲ ಕೊಂದ ಮೇಲೆಯೂ ದ್ರೋಣನು ವೀರಾವೇಶದಿಂದ ಬಿಲ್ಲನ್ನು ಮಿಡಿಯುತ್ತ ರಣರಂಗದಲ್ಲಿ ಸುತ್ತುತ್ತಿದ್ದನು. ಮಹಾರಥರೆನಿಸಿದ ಪಾಂಚಾಲಕುಮಾರರು ದ್ರೋಣನಿಂದ ಹತರಾದುದನ್ನು ನೋಡಿ, ಧೃಷ್ಟದ್ಯುಮ್ನನು ಮಹತ್ತಾದ ಬಂಧುವ್ಯಸನದಿಂದ ಕಣ್ಣೀರು ಸುರಿಸಿದನು. ಆಮೇಲೆ ಕೋಪೋದ್ರೇಕದಿಂದ ದ್ರೋಣನ ರಥಕ್ಕೆ ಇದಿರಾಗಿ ಹೊರಟನು. ಧೃಷ್ಟದ್ಯುಮ್ನನು ಮಿತಿಮೀರಿದ ಕೋಪಾವೇಶದಿಂದ ದ್ರೋಣನಿಗಿದಿರಾಗಿ ಬಂದು ನಿಂತುದನ್ನು ನೋಡಿ ಕೌರವಸೈನ್ಯದಲ್ಲಿ ದೊಡ್ಡ ಹಾಹಾಕಾರವೆದ್ದಿತು. ಧೃಷ್ಟದ್ಯುಮ್ನನ

ಬಾಣಗಳಿಂದ ಮುಚ್ಚಲ್ಪಟ್ಟಾಗಲೂ ದ್ರೋಣನು ಸ್ವಲ್ಪವಾದರೂ ಎದೆಗುಂದದೆ, ನಗುಮುಖದಿಂದಲೇ ಆ ಬಾಣಗಳನ್ನು ಪ್ರತಿಗ್ರಹಿಸಿದನು. ಇದನ್ನು ನೋಡಿ ಧೃಷ್ಟದ್ಯುಮ್ನನಿಗೆ ಮತ್ತಷ್ಟು ಕೋಪವು ಹೆಚ್ಚಿತು. ತಿರುಗಿ ತೊಂಭತ್ತು ಬಾಣಗಳನ್ನು ದ್ರೋಣನ ಎದೆಗೆ ಗುರಿಯಿಟ್ಟು ಹೊಡೆದನು. ಈ ಪ್ರಹಾರದಿಂದ ದ್ರೋಣನು ಬಹಳವಾಗಿ ನೊಂದು, ರಥದ ಗದ್ದುಗೆಯಮೇಲೆ ಒರಗಿ ಕುಳಿತನು. ಅವನಿಗೆ ಪ್ರಜ್ಞೆತಪ್ಪಿದಂತಾಯಿತು. ದ್ರೋಣನ ಈ ಸ್ಥಿತಿಯನ್ನು ನೋಡಿ, ಧೃಷ್ಟದ್ಯುಮ್ನನು ಧನುಸ್ಸನ್ನು ಕೆಳಗಿಟ್ಟು, ಒಂದು ಕತ್ತಿಯನ್ನು ಕೈಗೆತ್ತಿಕೊಂಡು, ತನ್ನ ರಥದಿಂದ ಕೆಳಕ್ಕೆ ಹಾರಿ ದ್ರೋಣನ ರಥವನ್ನೇರಿದನು. ಆಗಲೇ ಅವನು ದ್ರೋಣನ ತಲೆಯನ್ನು ಕತ್ತರಿಸಿಬಿಡಬೇಕೆಂದು ಕೋಪದಿಂದ ಕೆಂಪೇರಿದ ಕಣ್ಣುಗಳೊಡನೆ ನಿಂತಿರುವಷ್ಟರಲ್ಲಿ, ದ್ರೋಣನಿಗೆ ಮೂರ್ಛೆತಿಳಿದು ಎಚ್ಚರವಾಯಿತು. ತನ್ನನ್ನು ಕೊಲ್ಲಬೇಕೆಂದು ಬಂದು, ತನಗೆ ಬಹಳ ಹತ್ತಿರದಲ್ಲಿ ನಿಂತಿರುವ ಧೃಷ್ಟದ್ಯುಮ್ನನನ್ನು ಕಂಡೊಡನೆ ದ್ರೋಣನು, ಥಟ್ಟನೆ ಕೈಗೆ ಬಿಲ್ಲನ್ನೆತ್ತಿಕೊಂಡು, ಬಹುಸಮೀಪದಲ್ಲಿದ್ದವರನ್ನು ಕೊಲ್ಲತಕ್ಕ ವೈತಸ್ತಿಕಗಳೆಂಬ ಬಾಣಗಳನ್ನು ಸಂಧಾನಮಾಡಿ, ಧೃಷ್ಟದ್ಯುಮ್ನನಮೇಲೆ ಪ್ರಯೋಗಿಸಿದನು. ಸಮೀಪದಲ್ಲಿದ್ದವರನ್ನು ಕೊಲ್ಲತಕ್ಕ ಈ ವೈತಸ್ತಿಕಬಾಣಗಳು ಆ ದ್ರೋಣನಿಗೆಮಾತ್ರ ತಿಳಿದವುಗಳೇಹೊರತು ಬೇರೆಯವರಿಗೆ ತಿಳಿಯದು. ಆ ಬಾಣಗಳು ಧೃಷ್ಟದ್ಯುಮ್ನನನ್ನು ಸುತ್ತಲೂ ಆವರಿಸಿಕೊಂಡುವು. ಅಸಂಖ್ಯಾತಬಾಣಗಳಿಂದ ಪೀಡಿತನಾದ ಧೃಷ್ಟದ್ಯುಮ್ನನು, ಮುಂದೆ ಕೈಸಾಗದೆ, ದ್ರೋಣನ ರಥದಿಂದ ಕೆಳಕ್ಕೆ ಹಾರಿ ತನ್ನರಥವನ್ನೇರಿ ಕುಳಿತು, ತಿರುಗಿ ಬಿಲ್ಲನ್ನು ಹಿಡಿದು ಯುದ್ಧವನ್ನಾರಂಭಿಸಿದನು. ದ್ರೋಣನಮೇಲೆ ಎಡೆಬಿಡದೆ ಬಾಣಗಳನ್ನು ಸುರಿದನು. ದ್ರೋಣನೂ ಧೃಷ್ಟದ್ಯುಮ್ನನನ್ನು ಬಾಣಗಳಿಂದ ಮುಚ್ಚಿದನು. ಹಿಂದೆ ತ್ರೈಲೋಕ್ಯಾಧಿಪತ್ಯಕ್ಕಾಗಿ ಇಂದ್ರನಿಗೂ, ಪ್ರಹ್ಲಾದನೆಂಬ ಕ್ರೂರದೈತ್ಯನಿಗೂ ನಡೆದ ಯುದ್ಧದಂತೆ ದ್ರೋಣಧೃಷ್ಟದ್ಯುಮ್ನರಿಗೆ ಅದ್ಭುತಯುದ್ಧವಾಯಿತು. ಯುದ್ಧಮಾರ್ಗವನ್ನು ಚೆನ್ನಾಗಿ ಬಲ್ಲ ಅವರಿಬ್ಬರೂ ಯಮಕಗಳೇ ಮೊದಲಾದ ವಿಚಿತ್ರಮಂಡಲಗತಿಗಳಿಂದ ತಿರುಗುತ್ತ, ಯೋಧರ ಮನಸ್ಸು ಮೋಹಗೊಳ್ಳುವಂತೆ ಒಬ್ಬರನ್ನೊಬ್ಬರು ಬಾಣಗಳಿಂದ ಹೊಡೆಯುತ್ತಿದ್ದರು. ಭೂ

ವ್ಯಾಕಾಶಗಳನ್ನೂ, ದಿಕ್ಕುಗಳನ್ನೂ ಮರೆಸುವಂತೆ ಬಾಣವರ್ಷವನ್ನು ಸುರಿಸಿದರು. ಆಶ್ಚರ್ಯಕರವಾದ ಅವರ ಯುದ್ಧವನ್ನು ಎಲ್ಲಾ ಭೂತಗಳೂ, ಕ್ಷತ್ರಿಯರೂ, ನಿನ್ನ ಕಡೆಯ ಸೈನಿಕರೂ ಕೊಂಡಾಡಿದರು. ಧೃಷ್ಟದ್ಯುಮ್ನ ನೊಡನೆ ದ್ರೋಣನು ಕೈಕಲೆತುದರಿಂದ, ಇನ್ನು ಅವನು ನಮ್ಮ ಕೈಗೆ ಸಿಕ್ಕಿಬಿದ್ದಂತೆಯೇ ಎಂದು ಪಾಂಚಾಲರೆಲ್ಲರೂ ಸಂತೋಷದಿಂದ ಕೂಗಿಟ್ಟರು. ಆದರೆ, ಇಷ್ಟರಲ್ಲಿಯೇ ದ್ರೋಣನು ಮಾಗಿದ ಹಣ್ಣನ್ನು ಮರದಿಂದ ಕೆಡಹುವಂತೆ ಧೃಷ್ಟದ್ಯುಮ್ನನ ಸಾರಥಿಯ ತಲೆಯನ್ನು ಕತ್ತರಿಸಿ ಕೆಡಹಿದನು. ಸಾರಥಿಯಿಲ್ಲದುದರಿಂದ ಕುದುರೆಗಳು ಧೃಷ್ಟದ್ಯುಮ್ನನ ರಥವನ್ನು ಎಳೆದುಕೊಂಡು ರಣರಂಗದಿಂದ ಹಿಂತಿರುಗಿ ಓಡಿದುವು. ಇತ್ತಲಾಗಿ ದ್ರೋಣನು ಪಾಂಡವ ಪಾಂಚಾಲಸೈನಿಕರನ್ನು ಕಂಡಕಂಡ ಕಡೆಯಲ್ಲಿ ಹೊಡೆದೋಡಿಸುತ್ತಿದ್ದನು. ಹೀಗೆ ಆಗಿನ ಯುದ್ಧದಲ್ಲಿ ದ್ರೋಣನು ಜಯಶೀಲನಾಗಿ, ತಿರುಗಿ ತಾನು ಮೊದಲಿದ್ದ ವ್ಯೂಹದ್ವಾರದಲ್ಲಿ ಬಂದು ನಿಂತನು. ಅವನನ್ನು ಜಯಿಸಲು ಪಾಂಡವರಿಗೆ ಸಾಧ್ಯವಾಗಲಿಲ್ಲ.

ಇದು ನೂರ ಇಪ್ಪತ್ತೆರಡನೆಯ ಅಧ್ಯಾಯವು.



### ಸಾತ್ಯಕಿಯಿಂದ ದುಶ್ಶಾಸನನು ಪರಾಜಿತನಾದುದು.

ಮಹಾರಾಜಾ! ದ್ರೋಣನ ನಿಂದಾವಾಕ್ಯಗಳನ್ನು ಕೇಳಿದಮೇಲೆ ನಿನ್ನ ಮಗನಾದ ದುಶ್ಶಾಸನನು ತಿರುಗಿ ಸಾತ್ಯಕಿಯನ್ನಿದಿರಿಸುವುದಕ್ಕಾಗಿ ಬಂದನು. ಮೇಘವು ಮಳೆಯನ್ನು ಕರೆಯುವಂತೆ ಸಾತ್ಯಕಿಯಮೇಲೆ ಬಾಣಗಳನ್ನು ಕರೆಯುತ್ತ, ಮೊದಲು ಅರುವತ್ತು, ಆಮೇಲೆ ಹದಿನಾರು, ಹೀಗೆ ತೀಕ್ಷ್ಣಬಾಣಗಳನ್ನು ಪ್ರಯೋಗಿಸಿದನು. ಆದರೇನು? ಸಾತ್ಯಕಿಯು ಮೈನಾಕಪರ್ವತದಂತೆ ನಿಶ್ಚಲನಾಗಿದ್ದನು. ದುಶ್ಶಾಸನನೋ, ತನ್ನ ಕಡೆಯ ಅನೇಕರಥಿಕರೊಡನೆ ಸೇರಿ ಸಾತ್ಯಕಿಯನ್ನು ಮುತ್ತಿಕೊಂಡು, ನಾನಾಕಡೆಗಳಿಂದ ಬಾಣವರ್ಷಗಳನ್ನು ಸುರಿಸಿದನು. ಮೇಘಧ್ವನಿಯಂತೆ ಬಾಣಧ್ವನಿಗಳು ದಿಕ್ಕುಗಳನ್ನೆಲ್ಲ ಮೊಳಗಿಸುತ್ತಿದ್ದುವು. ಇದನ್ನು ನೋಡಿ ಸಾತ್ಯಕಿಯು ತನ್ನ ಹಸ್ತವೇಗದಿಂದ ಎಡೆಬಿಡದೆ ಬಾಣಗಳನ್ನು ಬಿಟ್ಟು,

ನಿನ್ನವರನ್ನೆಲ್ಲ ಬಾಣಗಳಿಂದ ಮರೆಸಿಬಿಟ್ಟನು. ಆ ಬಾಣವೇಗವನ್ನು ತಡೆಯಲಾರದೆ ಅನೇಕ ರಥಿಕರು ನಾಚಿಕೆಯಿಲ್ಲದೆ ಓಡುತ್ತಿದ್ದರು. ನಿನ್ನ ಮಗನಾದ ದುಶ್ಶಾಸನನೊಬ್ಬನುಮಾತ್ರ ನಿರ್ಭಯವಾಗಿ ಎದೆಗೊಟ್ಟು ನಿಂತು, ನಾಲ್ಕು ಬಾಣಗಳಿಂದ ಸಾತ್ಯಕಿಯ ನಾಲ್ಕು ರಥಾಶ್ವಗಳನ್ನೂ, ಮೂರು ಬಾಣಗಳಿಂದ ಸಾರಥಿಯನ್ನೂ, ಬೇರೆ ನೂರು ಬಾಣಗಳಿಂದ ಸಾತ್ಯಕಿಯನ್ನೂ ಬಲವಾಗಿ ಹೊಡೆದು ಸಿಂಹನಾದಮಾಡಿದನು. ಇದನ್ನು ಸಹಿಸಲಾರದೆ ಸಾತ್ಯಕಿಯು ಅತಿಕೋಪಾವಿಷ್ಟನಾಗಿ, ಎಡೆಬಿಡದೆ ಬಾಣಗಳನ್ನು ಬಿಡುತ್ತ, ದುಶ್ಶಾಸನನನ್ನೂ, ಅವನ ಸಾರಥಿಯನ್ನೂ, ರಥವನ್ನೂ, ಧ್ವಜವನ್ನೂ ಕಣ್ಣಿಗೆ ಕಾಣದಂತೆ ಮುಚ್ಚಿಬಿಟ್ಟನು. ಜೇಡರಹುಳುವು ತನ್ನ ಬಲೆಯ ಸಮೀಪಕ್ಕೆ ಬಂದ ಸಣ್ಣ ಸೊಳ್ಳೆಯನ್ನು ತನ್ನ ದಾರದಿಂದ ಸುತ್ತಲೂ ಬಿಗಿಯುವಂತೆ, ಸಾತ್ಯಕಿಯು ನಿನ್ನ ಮಗನನ್ನು ತನ್ನ ಬಾಣದ ಬಲೆಯಲ್ಲಿ ಸಿಕ್ಕಿಸಿಬಿಟ್ಟನು ಇದನ್ನು ನೋಡಿ ನಿನ್ನ ಮಗನಾದ ದುರ್ಯೋಧನನು ದುಶ್ಶಾಸನನ ರಕ್ಷಣೆಗಾಗಿ ತ್ರಿಗರ್ತರನ್ನು ಕಳುಹಿಸಿದನು. ಯುದ್ಧವಿಶಾರದರೂ, ಕ್ರೂರಕರ್ಮಿಗಳೂ ಆದ ಮೂರು ಸಾವಿರಮಂದಿ ತ್ರಿಗರ್ತರು, ಸಾತ್ಯಕಿಯ ರಥವನ್ನು ಮುತ್ತುವುದಕ್ಕಾಗಿ ಬಂದರು. ದೊಡ್ಡ ರಥಸಮೂಹಗಳಿಂದ ಸಾತ್ಯಕಿಯ ರಥವನ್ನು ಆವರಿಸಿಕೊಂಡರು. ಸಂಶಪ್ತಕರೆಂದು ಪ್ರಸಿದ್ಧರಾದ ಆ ತ್ರಿಗರ್ತರು, "ಯುದ್ಧದಲ್ಲಿ ಸಾಯುವುದೊಂದು, ಇಲ್ಲದಿದ್ದರೆ ಜಯಿಸುವುದೊಂದು, ಇವೆರಡರಲ್ಲಿ ಒಂದಿಲ್ಲದೆ ಹಿಂತಿರುಗುವುದಿಲ್ಲ" ವೆಂಬ ದೃಢಪ್ರತಿಜ್ಞೆಯಿಂದ ಮನಸ್ಸನ್ನು ಸ್ಥಿರಪಡಿಸಿಕೊಂಡು ಹೊರಟರು. ಬಾಣವರ್ಷಗಳನ್ನು ಕರೆಯುತ್ತ ಬರುತ್ತಿದ್ದ ಅವರನ್ನು ಕಂಡು ಸಾತ್ಯಕಿಯು ಅವರಲ್ಲಿ ಪ್ರಧಾನರಾದ ಐನೂರುಮಂದಿ ಯೋಧರನ್ನು ಕ್ಷಣಮಾತ್ರದಲ್ಲಿ ಕೊನೆಗಾಣಿಸಿಬಿಟ್ಟನು. ಬಿರುಗಾಳಿಗೆ ಮುರಿದು ಬಿದ್ದ ಮರಗಳಂತೆ ಅವರು ನೆಲಕ್ಕುರುಳಿದರು. ಸಾತ್ಯಕಿಯ ಬಾಣಗಳಿಂದ ಆನೆ, ಕುದುರೆ, ಕಾಲಾಳು, ಮುಂತಾದುವು ಅಸಂಖ್ಯಾತವಾಗಿ ಸತ್ತುಬಿದ್ದುವು. ಧ್ವಜಗಳು ಪುಡಿಪುಡಿಯಾದುವು. ರಕ್ತಪ್ರವಾಹದಿಂದ ನೆಲವೆಲ್ಲ ತೊಯ್ದು, ಪುಷ್ಪಿತಗಳಾದ ಮುತ್ತುಗದ ಮರಗಳಿಂದ ಆಚ್ಛಾದಿತವಾದಂತೆ ಕಾಣಿಸಿತು. ಸಾತ್ಯಕಿಯ ಕೊಲೆಯಿಂದ ತಪ್ಪಿಸಲು ಸಹಾಯಕರಾರೂ ಮುಂದೆ ಬಾರದೆ,

ಅವು ಕೆಸರಿನಲ್ಲಿ ಸಿಕ್ಕಿಬಿದ್ದ ಆನೆಗಳಂತೆ ತತ್ತರಿಸುತ್ತಿದ್ದುವು. ಕೊನೆಗೆ ಅವರು ತಾವು ಮಾಡಿಬಂದ ಪ್ರತಿಜ್ಞೆಯನ್ನೇ ಮರೆತು, ಗರುಡನಿಗೆ ಭಯ ಪಟ್ಟು ಹೆದರಿದ ಹಾವುಗಳು ಭೂರಂಧ್ರಗಳಲ್ಲಿ ಹುದುಗಿಕೊಳ್ಳುವಂತೆ, ಎಲ್ಲರೂ ಓಡಿಹೋಗಿ ದ್ರೋಣನ ರಥದಬಳಿಯಲ್ಲಿ ಅಡಗಿಕೊಂಡರು. ಸಾತ್ಯಕಿಯು ಹೀಗೆ ಐನೂರುಮಂದಿ ತ್ರಿಗರ್ತರನ್ನು ಕೊಂದಮೇಲೆ ಅಲ್ಲಿಂದಮುಂದೆ ಅರ್ಜುನನಿದ್ದಕಡೆಗೆ ಹೊರಟನು. ಇಷ್ಟರಲ್ಲಿ ನಿನ್ನ ಮಗನಾದ ದುಶ್ಶಾಸನನು ಅವನನ್ನಡ್ಡೈಸಿ, ಅವನಮೇಲೆ ಒಂಭತ್ತು ಬಾಣಗಳನ್ನು ಹೊಡೆದನು. ಅದಕ್ಕೆ ಪ್ರತಿಯಾಗಿ ಸಾತ್ಯಕಿಯು ಐದು ತೀಕ್ಷ್ಣಬಾಣಗಳನ್ನು ಪ್ರಯೋಗಿಸಿದನು. ದುಶ್ಶಾಸನನು ತಿರುಗಿ ಸಾತ್ಯಕಿಯನ್ನು ನೋಡಿ ಗರ್ವದಿಂದ ನಗುತ್ತ, ಮೊದಲು ಮೂರು ಬಾಣಗಳಿಂದಲೂ, ತಿರುಗಿ ಐದು ಬಾಣಗಳಿಂದಲೂ ಹೊಡೆದನು. ಸಾತ್ಯಕಿಯು ಅದಕ್ಕಿಂತ ತೀವ್ರವಾದ ಬಾಣಗಳಿಂದ ನಿನ್ನ ಮಗನನ್ನು ಒಲವಾಗಿ ನೋಯಿಸಿ, ಅವನ ಧನುಸ್ಸನ್ನು ಕತ್ತರಿಸಿ ಅರ್ಜುನನಬಳಿಗೆ ಹೊರಟನು. ಇಷ್ಟರಲ್ಲಿಯೇ ದುಶ್ಶಾಸನನು ಓಡಿಬಂದು ಸಾತ್ಯಕಿಯನ್ನು ತಡೆದು, ಪೂರ್ಣವಾಗಿ ಉಕ್ಕಿನಿಂದ ನಿರ್ಮಿತವಾದ ಶಕ್ತಿಯೊಂದನ್ನು ಸಾತ್ಯಕಿಯಮೇಲೆ ಪ್ರಯೋಗಿಸಿದನು. ಸಾತ್ಯಕಿಯು ಅದನ್ನು ತನ್ನ ಬಾಣಗಳಿಂದ ಶತಖಂಡವಾಗಿ ಕತ್ತರಿಸಿದನು. ಆಮೇಲೆ ನಿನ್ನ ಮಗನು ಬೇರೊಂದು ಬಿಲ್ಲನ್ನೆತ್ತಿಕೊಂಡು ಸಾತ್ಯಕಿಯಮೇಲೆ ಬಾಣಗಳನ್ನು ಹೊಡೆದು ಸಿಂಹನಾದವನ್ನು ಮಾಡಿದನು. ತಿರುಗಿ ಸಾತ್ಯಕಿಯು ಅಗ್ನಿಜ್ವಾಲೆಯಂತಿರುವ ಬಾಣಗಳನ್ನು ನಿನ್ನ ಮಗನ ಎದೆಗೆ ಗುರಿಯಿಟ್ಟು ಹೊಡೆದು, ಅವನನ್ನು ಮೂರ್ಛೆಗೊಳಿಸಿದನು. ತಿರುಗಿ ಎಂಟು ತೀಕ್ಷ್ಣ ಬಾಣಗಳನ್ನು ಹೊಡೆದನು. ಆಗಲೂ ನಿನ್ನ ಮಗನು ಹೆದರದೆ ಚೇತರಿಸಿಕೊಂಡು, ಸಾತ್ಯಕಿಯಮೇಲೆ ಇಪ್ಪತ್ತು ಬಾಣಗಳನ್ನು ಹೊಡೆದನು. ಅದಕ್ಕೆ ಪ್ರತಿಯಾಗಿ ಸಾತ್ಯಕಿಯು ದುಶ್ಶಾಸನನ ಎದೆಗೆ ಮೂರು ಬಾಣಗಳನ್ನು ಹೊಡೆದು, ಬೇರೆಬೇರೆ ಬಾಣಗಳಿಂದ ಅವನ ಸಾರಥಿಯನ್ನೂ, ಕುದುರೆಗಳನ್ನೂ, ಅವನ ಬಿಲ್ಲನ್ನೂ, ಕೈಚೀಲವನ್ನೂ, ಧ್ವಜವನ್ನೂ, ಎರಡು ಭಲ್ಲಗಳಿಂದ ಅವನ ರಥಶಕ್ತಿಯನ್ನೂ, ಬೇರೆ ಕೆಲವು ಬಾಣಗಳಿಂದ ಅವನ ಪಾರ್ಶ್ವರಕ್ಷಕರಾದ ಇಬ್ಬರು ಸಾರಥಿಗಳನ್ನೂ ಹೊಡೆದನು. ಧನುಸ್ಸು ಮುರಿದು,

ವಿರಥನಾದ ನಿನ್ನ ಮಗನನ್ನು ನೋಡಿ, ತ್ರಿಗರ್ತಸೈನ್ಯಾಧಿಪತಿಯು ಅವನನ್ನು ತನ್ನ ರಥಕ್ಕೇರಿಸಿ, ರಣರಂಗದಿಂದ ಬೇರೆಕಡೆಗೆ ಸಾಗಿಸಿಕೊಂಡು ಹೊರಟನು. ಆಗಲೂ ಬಿಡದೆ ಸಾತ್ಯಕಿಯು ಮುಹೂರ್ತಕಾಲದವರೆಗೆ ಅವನನ್ನು ಬೆನ್ನಟ್ಟಿಹೋದನು. ಆದರೆ ಭೀಮನ ಪ್ರತಿಜ್ಞೆಯನ್ನು ನೆನೆಸಿಕೊಂಡು, ನಿನ್ನ ಮಗನನ್ನು ತಾನು ಕೊಲ್ಲದೆ ಹಿಂತಿರುಗಿಬಿಟ್ಟನು. ಮಹಾರಾಜಾ! ಹಿಂದೆ ದ್ಯೂತಸಭೆಯಲ್ಲಿ ಭೀಮನು ನಿನ್ನ ನೂರುಮಂದಿ ಪುತ್ರರನ್ನೂ ತಾನೇ ಕೊಲ್ಲುವುದಾಗಿ ಪ್ರತಿಜ್ಞೆಮಾಡಿದುದನ್ನು ನೀನೂ ಕೇಳಿದೆಯಲ್ಲವೆ? ಅದನ್ನು ಸ್ಮರಿಸಿಕೊಂಡು ಸಾತ್ಯಕಿಯು ದುಶ್ಶಾಸನನನ್ನು ತನ್ನ ಕೈಯಿಂದ ಕೊಲ್ಲದೆ ಹಿಂತಿರುಗಿ, ಅರ್ಜುನನ ದಾರಿಯನ್ನು ಹಿಡಿದು ಹೊರಟನು.

ಇದು ನೂರ ಇಪ್ಪತ್ತುಮೂರನೆಯ ಅಧ್ಯಾಯವು.

## ಸಂಕುಲಯುದ್ಧವು.

ಆಗ ಧೃತರಾಷ್ಟ್ರನು "ಸಂಜಯಾ! ನಮ್ಮ ಸೈನ್ಯದಲ್ಲಿ ಆ ಸಾತ್ಯಕಿಯನ್ನು ತಡೆಯುವುದಕ್ಕಾಗಲಿ, ಕೊಲ್ಲುವುದಕ್ಕಾಗಲಿ ಸಮರ್ಥರೊಬ್ಬರೂ ಇರಲಿಲ್ಲವೆ? ಏತಕ್ಕಾಗಿ ನಮ್ಮವರು ಮುಂದೆ ಬರಲಿಲ್ಲ? ಇಂದ್ರಪರಾಕ್ರಮವುಳ್ಳ ಆ ಸಾತ್ಯಕಿಯೊಬ್ಬನೇ ಅದ್ಭುತ ವೀರಕಾರ್ಯಗಳನ್ನು ನಡೆಸಿ ಮಹೇಂದ್ರನು ದೈತ್ಯರನ್ನು ಕೊಲ್ಲುವಂತೆ ನಮ್ಮ ಸೈನ್ಯವನ್ನೆಲ್ಲ ಕೊಂದನಲ್ಲಾ? ಸಂಜಯಾ! ನಮ್ಮ ಸೇನಾಮಧ್ಯದಲ್ಲಿ ಆ ಸಾತ್ಯಕಿಯು ಹೋದದಾರಿಯು ಕೇವಲ ಶೂನ್ಯಪ್ರಾಯವಾಗಿತ್ತೇನು? ನಮ್ಮವರೆಲ್ಲರೂ ನಿಶ್ಶೇಷವಾಗಿ ಹತರಾದರೇನು? ಈಗ ನೀನು ಹೇಳಿದಂತೆ ಸಾತ್ಯಕಿಯು ಮಾಡಿದ ಕಾರ್ಯವನ್ನು ಇಂದ್ರನೂ ಮಾಡಲಾರನೆಂದು ನನಗೆ ತೋರುವುದು. ಸಾತ್ಯಕಿಯು ನಡೆಸಿದ ಪರಾಕ್ರಮಕಾರ್ಯವು ನಂಬುವುದಕ್ಕಾಗಲಿ, ಊಹಿಸುವುದಕ್ಕಾಗಲಿ ಸಾಧ್ಯವಿಲ್ಲದಂತಿದೆ. ಆ ವೃಷ್ಣಿವೀರನ ಪರಾಕ್ರಮವನ್ನು ಕೇಳಿದಷ್ಟೂ ನನ್ನ ಮನಸ್ಸು ಮಹತ್ತಾದ ಸಂಕಟಕ್ಕೀಡಾಗುತ್ತಿದೆ. ಸಂಜಯಾ! ಈಗ ನನ್ನ ಮಕ್ಕಳೇ ಬದುಕಿರಲಾರರೆಂದು ನನ್ನ ಮನಸ್ಸಿಗೆ

ತೋರುತ್ತಿದೆ. ಆ ಸಾತ್ಯಕಿಯೊಬ್ಬನೇ ನಮ್ಮ ಅನೇಕಸೈನ್ಯಗಳನ್ನೆಲ್ಲ ಧ್ವಂಸ ಮಾಡಿ, ಮುಂದೆಮುಂದೆ ಹೋದನಲ್ಲವೆ? ಅವನ ಯುದ್ಧಕ್ರಮವನ್ನು ಇನ್ನೂ ವಿವರವಾಗಿ ತಿಳಿಸು" ಎಂದನು. ಆಗ ಸಂಜಯನು "ರಾಜಾ! ನಿನ್ನ ಸೈನ್ಯದ ಪ್ರಯತ್ನಕ್ಕೇನೂ ಕಡಿಮೆಯಿಲ್ಲ. ಪ್ರಳಯಕಾಲದ ಆರ್ಭಟದಂತೆ ನಿನ್ನ ಚತುರಂಗಸೈನ್ಯವೂ ಎಣೆಯಿಲ್ಲದ ಸನ್ನಾಹಗಳೊಡನೆ ಬಂದುಸೇರಿತು. ಯುದ್ಧಕ್ಕಾಗಿ ಕರೆದೊಡನೆ ಸನ್ನದ್ಧವಾಗಿ ಬಂದು ನಿಂತ ನಿನ್ನ ಸೈನ್ಯದ ಸಂಖ್ಯೆಯಷ್ಟು ಲೋಕದಲ್ಲಿ ಬೇರೆಲ್ಲಿಯೂ ಇರಲಾರದು. ಆ ಸೈನ್ಯವನ್ನು ನೋಡಿ ಆಕಾಶದಲ್ಲಿ ನೆರೆದಿದ್ದ ದೇವತೆಗಳೂ, ಚಾರಣರೂ ಕೂಡ, "ಲೋಕದಲ್ಲಿ ಮಹತ್ತಾದ ಸೇನಾಸಮೂಹಕ್ಕೆ ಇದೇ ಕೊನೆ!" ಎಂದೂ, "ಇನ್ನು ಮುಂದೆ ಇಂತಹ ಕೂಟವೇ ಇರಲಾರ"ದೆಂದೂ ಹೇಳುತ್ತಿದ್ದರು. ಅಲ್ಲದೆ ಜಯದ್ರಥನ ವಧಕಾಲದಲ್ಲಿ ಅವನ ರಕ್ಷಣೆಗಾಗಿ ದ್ರೋಣನು ನಿರ್ಮಿಸಿದ್ದ ವ್ಯೂಹಕ್ಕೆ ಸಮಾನವಾದ ಬೇರೆ ವ್ಯೂಹವೂ ಇದುವರೆಗೆ ಇದ್ದುದಿಲ್ಲ. ಜನಗಳೆಲ್ಲ ಆ ಸೈನ್ಯದ ಕೂಟವನ್ನು ನೋಡಿ "ಈ ಜನಸಮೂಹದಿಂದಲೇ ಭೂಮಿಯು ತಲೆಕೆಳಕಾಗುವಂತಿದೆ!" ಎಂದು ಆಡಿಕೊಳ್ಳುತ್ತಿದ್ದರು. ಅಲ್ಲಿ ಇದಿರಿಸಿಬಂದ ನಿನ್ನ ಸೈನ್ಯದ ಘೋಷವು, ಬಿರುಗಾಳಿಯಿಂದ ಕ್ಷುಭಿತವಾದ ಮಹಾಸಮುದ್ರಘೋಷದಂತೆ ಕೇಳಿಸುತ್ತಿತ್ತು. ನಮ್ಮ ಮತ್ತು ಪಾಂಡವರಕಡೆಯ ಸೈನ್ಯಗಳೆರಡರಲ್ಲಿಯೂ ಅನೇಕಸಹಸ್ರಜನರು ಸೇರಿದ್ದರು ಯುದ್ಧಾತುರವುಳ್ಳವರೂ, ಕಾರ್ಯಸಮರ್ಥರೂ ಆದ ವೀರರ ಕೂಗಾಟವು ಅತಿಪ್ರಬಲವಾಯಿತು. ಅತ್ತಲಾಗಿ ಪಾಂಡವರೂ, ಇತ್ತಲಾಗಿ ಕುರುಗಳೂ, ಒಬ್ಬರನ್ನೊಬ್ಬರು ನೋಡಿ ಕೋಪದಿಂದ ಗರ್ಜಿಸುವರು! ಸಿಂಹನಾದಗಳನ್ನು ಮಾಡುವರು! ಒಬ್ಬರಿಗೆಮೇಲೊಬ್ಬರು ರಣಭೇರಿಗಳನ್ನು ವಾದಿಸುವರು! ಇದರಮೇಲೆ ಉಭಯಪಕ್ಷದವರ ಬಾಣಧ್ವನಿಗಳು, ಪ್ರಹಾರಧ್ವನಿಗಳು, ಇವೆಲ್ಲಾ ಸೇರಿ ಒಂದೇ ಶಬ್ದಮಯವಾಗಿದ್ದಿತು. ಇದು ಹೀಗಿರಲು, ಅತ್ತಲಾಗಿ ಧರ್ಮರಾಜ ಭೀಮ ನಕುಲ ಸಹದೇವರೂ, ಧೃಷ್ಟದ್ಯುಮ್ನನೂ ತಮ್ಮ ಸೈನ್ಯಗಳನ್ನು ನೋಡಿ "ಬನ್ನಿರಿ! ಹೊಡೆಯಿರಿ! ಓಡಿರಿ! ಕೃಷ್ಣಾರ್ಜುನರಿಬ್ಬರೂ ಶತ್ರುಸೈನ್ಯದಲ್ಲಿ ಪ್ರವೇಶಿಸಿರುವರು! ಅವರು ಸುಖವಾಗಿ ಹೋಗಿ ಜಯದ್ರಥವಧವನ್ನು

ಪೂರೈಸಿಬರುವಂತೆ ಮಾಡಿರಿ! ಆ ಕೃಷ್ಣಾರ್ಜುನರಿಗೇನಾದರೂ ಅಪಾಯ ವುಂಟಾದರೆ ಕೌರವರು ಕೃತಾರ್ಥರಾದಂತೆಯೇ! ನಾವು ಪರಾಜಿತರೇ ಆಗು ವೆವು. ಆದುದರಿಂದ ಮಹಾತ್ಮರಾದ ಕೃಷ್ಣಾರ್ಜುನರು ಹೋದಕಡೆಗೆ ನೀವೆಲ್ಲರೂ ಗುಂಪಾಗಿ ಹೋಗಿ, ಗಾಳಿಯು ಸಮುದ್ರವನ್ನು ಹೇಗೋ ಹಾಗೆ ಶತ್ರುಸೈನ್ಯವನ್ನು ಕಲಗಿಸಿರಿ" ಎಂದರು. ಭೀಮನೂ, ಧೃಷ್ಟದ್ಯುಮ್ನನೂ ಬಾರಿಬಾರಿಗೂ ಪ್ರೋತ್ಸಾಹಿಸುತ್ತಿರಲು, ಪಾಂಡವಯೋಧರು ತಮ್ಮ ಸಾವ ನ್ನೂ ಲಕ್ಷ್ಯಮಾಡದೆ, ಕೌರವಸೈನ್ಯಗಳನ್ನು ನಾನಾಕಡೆಗಳಿಂದ ಹೊಡೆದ ಟ್ಟುತ್ತಬಂದರು. ವೀರಸ್ವರ್ಗದಲ್ಲಿ ಆಶೆಯುಳ್ಳವರಾಗಿ, ಮಿತ್ರಕಾರ್ಯವೇ ತಮಗೆ ಪ್ರಧಾನವೆಂದು ತಿಳಿದು, ತಮ್ಮ ಜೀವದಾಸೆಯನ್ನು ಬಿಟ್ಟು ಮುಂದು ವರಿದರು. ಅದರಂತೆಯೇ ನಿನ್ನವರೂಕೂಡ ಕೀರ್ತಿಯೊಂದನ್ನೇ ಪ್ರಧಾ ನವಾಗಿ ಭಾವಿಸಿ, ಯುದ್ಧನಿಶ್ಚಯದಿಂದ ಪಾಂಡವಸೈನ್ಯವನ್ನು ಇದಿರಿಸಿ ನಿಂತರು. ಹೀಗೆ ಭಯಂಕರವಾದ ದ್ವಂದ್ವಯುದ್ಧವು ನಡೆಯುತ್ತಿರುವಾಗ, ಸಾತ್ಯಕಿಯು ನಮ್ಮ ಸೈನ್ಯಗಳನ್ನು ಜಯಿಸಿಕೊಂಡು, ಅರ್ಜುನನ ದಾರಿ ಯನ್ನು ಹಿಡಿದು ಹೊರಟನು. ಅಲ್ಲಲ್ಲಿ ಹರಿದುಬಿದ್ದ ಮಹಾರಥರ ಕವಚಗಳ ಮೇಲೆ ಸೂರ್ಯರಶ್ಮಿಯು ಪ್ರತಿಫಲಿಸಿ, ಆ ಕಾಂತಿಯಿಂದ ಸೈನಿಕರಿಗೆ ಕಣ್ಣೇ ಕಾಣದಂತಾಯಿತು. ಈ ಪ್ರತಿಫಲನಕಾಂತಿಯು ತಿರುಗಿ ಶಸ್ತ್ರಗಳಮೇಲೆ ಯೂ, ಧ್ವಜಗಳಮೇಲೆಯೂ ಬಿದ್ದು, ಲೋಕಗಳನ್ನೇ ದಹಿಸುವಂತೆ ತೋ ರುತ್ತಿತ್ತು. ಬಿರುಗಾಳಿಯಿಂದ ಚದರಿಸಲ್ಪಟ್ಟ ಮೇಘಗಳನ್ನು ಸೂರ್ಯನು ತನ್ನ ಕಿರಣಗಳಿಂದ ತಪಿಸುವಂತೆ, ಸಾತ್ಯಕಿಯು ನಿನ್ನ ದೊಡ್ಡ ಸೈನ್ಯವ ನ್ನೆಲ್ಲ ತಾಪಗೊಳಿಸುತ್ತಿದ್ದನು. ಮಹಾಮಕರವು ಸಮುದ್ರವನ್ನು ಕಲಗಿಸು ವಂತೆ ಅತ್ತಲಾಗಿ ಅರ್ಜುನನೂಕೂಡ ನಿನ್ನ ಸೈನ್ಯವೆಂಬ ಮಹಾಸಮುದ್ರ ವನ್ನು ಬಹಳವಾಗಿ ಕ್ಷೋಭಗೊಳಿಸುತ್ತಿದ್ದನು. ಅರ್ಜುನನಿಗೂ, ನಿನ್ನವರಿಗೂ ನಡೆದ ಯುದ್ಧವು ಪ್ರಳಯಕಾಲದ ರುದ್ರನ ಕ್ರೀಡೆಯಂತೆ, ಬಹುಜನಗಳ ನಾಶಕ್ಕೆ ಕಾರಣವಾಯಿತು. ಇಷ್ಟರಲ್ಲಿಯೇ ಅರ್ಜುನನಿದ್ದಕಡೆಯಿಂದ ಪ್ರಬ ಲವಾದ ಶಬ್ದವು ಕೇಳಿಸುತ್ತಿದ್ದಿತು. ಅಲ್ಲಿ ಅರ್ಜುನನಿಗೆ ನಿನ್ನವರೊಡನೆ ಭಯಂಕರಯುದ್ಧವು ನಡೆಯುತ್ತಿದ್ದಿತು. ಇತ್ತಲಾಗಿ ವ್ಯೂಹದ್ವಾರದಲ್ಲಿಯೂ ಪಾಂಡವರಿಗೆ ದ್ರೋಣನೊಡನೆ ಭಯಂಕರಯುದ್ಧವು ನಡೆಯುತ್ತಿದ್ದಿತು.

ಇವರಿಬ್ಬರಿಗೆ ನಡುವೆ ಸಾತ್ಯಕಿಯೂ ನಮ್ಮ ಸೈನ್ಯಗಳನ್ನು ಕೊಲ್ಲುತ್ತಿದ್ದನು. ಹೀಗೆ ಒಂದುಕಡೆಯಲ್ಲಿ ಅರ್ಜುನನು, ಇನ್ನೊಂದುಕಡೆಯಲ್ಲಿ ದ್ರೋಣನು, ಬೇರೊಂದುಕಡೆಯಲ್ಲಿ ಸಾತ್ಯಕಿ, ಈ ಮೂವರೂ ನಮ್ಮ ಸೈನ್ಯಗಳನ್ನು ಕೊಲ್ಲುತ್ತಿರಲು, ಉಭಯಪಕ್ಷದಲ್ಲಿಯೂ ಜನಕ್ಷಯವಾಗುತ್ತಿದ್ದಿತು. ದುರ್ಯೋಧನನು ಪಾಂಡವರ ಸೈನ್ಯವನ್ನು ಪ್ರವೇಶಿಸಿ ಯುದ್ಧವನ್ನಾರಂಭಿಸಿದನು. ಅಲ್ಲಿಯೂ ಅನೇಕಪ್ರಾಣನಾಶಕ್ಕೆ ಕಾರಣವಾದ ಘೋರಯುದ್ಧವು ನಡೆಯಿತು. ರಾಜೇಂದ್ರಾ! ನಿನ್ನ ಮಗನೊಬ್ಬನೇ ಮದದಾನೆಯು ಕಮಲಸರೋವರವನ್ನು ಕಲಗಿಸುವಂತೆ ಆ ಸೈನ್ಯವನ್ನೆಲ್ಲ ಚದರಿಸುತ್ತಿದ್ದನು. ಇದನ್ನು ನೋಡಿ ಭೀಮಸೇನನೂ, ಪಾಂಚಾಲರೂ ನಿನ್ನ ಮಗನನ್ನಿದಿರಿಸಿಬಂದರು. ನಿನ್ನ ಮಗನು ಭೀಮನನ್ನೂ, ನಕುಲಸಹದೇವರನ್ನೂ ಮೂರುಮೂರು ಬಾಣಗಳಿಂದ ಹೊಡೆದು, ಧರ್ಮರಾಜನಮೇಲೆ ಏಳು ಬಾಣಗಳನ್ನು ಬಿಟ್ಟನು. ವಿರಾಟದ್ರುಪದರನ್ನು ಆರಾರು ಬಾಣಗಳಿಂದ ಪ್ರಹರಿಸಿದನು. ಶಿಖಂಡಿಯಮೇಲೆ ನೂರು, ಧೃಷ್ಟದ್ಯುಮ್ನನಮೇಲೆ ಇಪ್ಪತ್ತು, ಉಪಪಾಂಡವರಲ್ಲಿ ಒಬ್ಬೊಬ್ಬರಮೇಲೆ ಮೂರುಮೂರು, ಹೀಗೆ ಬಾಣಗಳನ್ನು ಬಿಟ್ಟನು. ಇತರಯೋಧರನ್ನೂ, ಆನೆಗಳನ್ನೂ, ರಥಗಳನ್ನೂ ನೂರಾರುಸಂಖ್ಯೆಯಿಂದ ಕೊಂದು, ಪ್ರಳಯಕಾಲದಲ್ಲಿ ಕೋಪಗೊಂಡ ಯಮನಂತೆ ಕಾಣಿಸುತ್ತಿದ್ದನು. ನಿನ್ನ ಮಗನು ತನ್ನ ಎಣೆಯಿಲ್ಲದ ಅಸ್ತ್ರಶಿಕ್ಷೆಯಿಂದಲೂ, ಬಾಹುಬಲದಿಂದಲೂ ಪಾಂಡವಸೈನ್ಯವನ್ನು ಕೊಲ್ಲುವಾಗ, ಅವನು ಬಿಲ್ಲಿನಲ್ಲಿ ಬಾಣಗಳನ್ನು ಜೋಡಿಸುವುದಾಗಲಿ, ಪ್ರಯೋಗಿಸುವುದಾಗಲಿ, ಯಾರ ಕಣ್ಣಿಗೂ ತಿಳಿಯದೆ, ಸೈನ್ಯಗಳು ಸಾಯುವುದುಮಾತ್ರ ಕಣ್ಣಿಗೆ ಕಾಣುತ್ತಿದ್ದಿತು. ಅವನ ಕೈಯಲ್ಲಿದ್ದ ಮಂಡಲಾಕಾರವಾದ ಬಿಲ್ಲುಮಾತ್ರ ಜನರ ಕಣ್ಣಿಗೆ ಬೀಳುತ್ತಿತ್ತು. ಇದನ್ನು ನೋಡಿ ಸಹಿಸಲಾರದೆ ಧರ್ಮರಾಜನು, ಎರಡು ಭಲ್ಲಗಳಿಂದ ನಿನ್ನ ಮಗನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿಬಿಟ್ಟನು. ಹತ್ತು ತೀಕ್ಷ್ಣಬಾಣಗಳಿಂದ ನಿನ್ನ ಮಗನನ್ನು ಪ್ರಹರಿಸಿದನು. ಆ ಬಾಣಗಳು ನಿನ್ನ ಮಗನ ಯುದ್ಧಕವಚವನ್ನು ಹರಿದು ಭೂಮಿಗೆ ಬಿದ್ದುವು. ಇದನ್ನು ನೋಡಿ ಸಂತೋಷಗೊಂಡ ಪಾಂಡವಸೈನ್ಯಗಳು, ವೃತ್ರವಧವಾದಮೇಲೆ ಮಹರ್ಷಿಗಳು ಇಂದ್ರನನ್ನು ಹೇಗೋ ಹಾಗೆ

ಧರ್ಮರಾಜನ ಸುತ್ತಲೂ ಗುಂಪುಕೂಡಿ ಅವನನ್ನು ಅಭಿನಂದಿಸುತ್ತಿದ್ದರು. ಇಷ್ಟರಲ್ಲಿಯೇ ನಿನ್ನ ಮಗನು ಬೇರೊಂದು ಬಿಲ್ಲನ್ನು ಕೈಗೆತ್ತಿಕೊಂಡು "ನಿಲ್ಲು! ನಿಲ್ಲು!" ಎಂದು ಯುಧಿಷ್ಠಿರನನ್ನು ಮೂದಲಿಸುತ್ತ ಇದಿರಿಸಿ ಹೋದನು. ಇದನ್ನು ಕಂಡು ಪಾಂಚಾಲರೆಲ್ಲರೂ ಯುಧಿಷ್ಠಿರನಿಗೆ ಬೆಂಬಲ ವಾಗಿ ನಿಲ್ಲಲು ಹೊರಟುಬಂದರು. ಅವರನ್ನು ದ್ರೋಣನು ತನ್ನ ಬಾಣಗ ಳಿಂದ ನಿವಾರಿಸುತ್ತ, ಧರ್ಮರಾಜನನ್ನು ಸೆರೆಹಿಡಿಯುವ ಉದ್ದೇಶದಲ್ಲಿದ್ದನು. ಬಿರುಗಾಳಿಯಿಂದ ಪ್ರೇರಿತವಾಗಿ, ಜಲಧಾರೆಯನ್ನು ಕರೆಯುವ ಮೇಘಗ ಳನ್ನು ಪರ್ವತವು ಹೇಗೋ ಹಾಗೆ, ದ್ರೋಣನು ಪಾಂಚಾಲರ ಬಾಣವರ್ಷ ಗಳನ್ನು ಲಕ್ಷ್ಯಮಾಡದೆ ಅವರನ್ನೆಲ್ಲ ಓಡಿಸುತ್ತಿದ್ದನು. ಆಗ ನಿನ್ನವ ರಿಗೂ, ಪಾಂಡವರಿಗೂ ಪ್ರಬಲಯುದ್ಧವಾಯಿತು. ಎಷ್ಟೋ ಪ್ರಾಣಿಗಳು ಹತವಾಗುತಿದ್ದುವು. ಹೀಗೆ ಅರ್ಜುನ ದ್ರೋಣ ಸಾತ್ಯಕಿಗಳು ಮೂವರೂ ಕಾಲಯಮರಂತೆ ಕೋಪಾವಿಷ್ಟರಾಗಿ ಅನೇಕ ಸೈನ್ಯಗಳನ್ನು ಧ್ವಂಸ ಮಾಡಿದರು.

ಇದು ನೂರ ಇಪ್ಪತ್ತುನಾಲ್ಕನೆಯ ಅಧ್ಯಾಯವು.



## ದ್ರೋಣಪರಾಕ್ರಮವರ್ಣನವು.

ಮಹಾರಾಜಾ! ಇಷ್ಟರಲ್ಲಿ ಅಪರಾಹ್ಣಸಮಯವಾಗುತ್ತ ಬಂದಿತು. ಯುದ್ಧವು ಮೇಲೆಮೇಲೆ ಪ್ರಬಲವಾಯಿತು. ದ್ರೋಣನು ಕೆಂಪು ಕುದುರೆಗ ಳನ್ನು ಹೂಡಿದ ರಥದಮೇಲೆ ಕುಳಿತು, ಪಾಂಚಾಲರನ್ನೂ, ಪಾಂಡವರನ್ನೂ, ನಿವಾರಿಸಿ, ತನ್ನ ಶಕ್ತಿಮೀರಿ ಅವರನ್ನು ನಿಗ್ರಹಿಸುತಿದ್ದನು. ಮಹಾ ಬಲಾ ಢ್ಯನೂ, ಮಹಾ ಧನುರ್ಧಾರಿಯೂ, ಆದ ದ್ರೋಣನು ನಿನ್ನ ಪ್ರಿಯದ ಲ್ಲಿಯೇ ಆಕ್ಕರೆಯುಳ್ಳವನಾಗಿ, ಶತ್ರುಪಕ್ಷದ ಸೋಮಕ, ಸೃಂಜಯ ಕೇಕಯ ವೀರರಲ್ಲಿ ಮುಖ್ಯಮುಖ್ಯರಾದವರನ್ನೇ ಹುಡುಕಿ ಕೊಲ್ಲುತ್ತ, ರಣಲೀಲೆಯನ್ನು ನಡೆಸುತಿದ್ದನು. ಇದನ್ನು ನೋಡಿ ಐದುಮಂದಿ ಕೇಕಯಸಹೋದರರಲ್ಲಿ ಪ್ರಧಾನನೆನಿಸಿಕೊಂಡ ಬೃಹತ್ಕ್ಷತ್ರನೆಂಬವನು, ತೀವ್ರಬಾಣಗಳಿಂದ ದ್ರೋ

ಣನನ್ನು ಬಲವಾಗಿ ನೋಯಿಸುತ್ತ ಇದಿರಿಸಿಬಂದನು. ಬೆಟ್ಟದಮೇಲೆ ಮೇಘವು ಮಳೆಯನ್ನು ಕರೆಯುವಂತೆ ಎಡೆಬಿಡದೆ ದ್ರೋಣನಮೇಲೆ ಬಾಣಗಳನ್ನು ಬಿಡುತ್ತಿದ್ದನು. ಆದರೆ ದ್ರೋಣನು ಆ ಬಾಣಗಳನ್ನೆಲ್ಲ ತನ್ನ ಬಾಣದಿಂದ ನಿಗ್ರಹಿಸಿ, ಹದಿನೈದು ಬಾಣಗಳಿಂದ ಆ ಕೇಕಯರಾಜರನ್ನು ಹೊಡೆದನು. ಈ ಬಾಣಗಳು ಬರುವಾಗ ಅರ್ಧದಾರಿಯಲ್ಲಿಯೇ ಬೃಹತ್ಕ್ಷತ್ರನು ಆ ಒಂದೊಂದು ಬಾಣವನ್ನೂ ಐದೈದುಬಾಣಗಳಿಂದ ತುಂಡುಮಾಡಿ, ಆಶ್ಚರ್ಯಕರವಾದ ತನ್ನ ಹಸ್ತವೇಗವನ್ನು ತೋರಿಸಿದನು. ದ್ರೋಣನೂ ಕೂಡ ಆ ಕೇಕಯರಾಜನ ಹಸ್ತಲಾಘವವನ್ನು ನೋಡಿ, ಸಂತೋಷದಿಂದ ನಗುಮುಖದೊಡನೆ, ತಿರುಗಿ ಎಂಟುಬಾಣಗಳನ್ನು ಪ್ರಯೋಗಿಸಿದನು. ಅವುಗಳನ್ನೂ ಕೇಕಯರಾಜನು ಅಷ್ಟೇ ಬಾಣಗಳಿಂದ ಭೇದಿಸಿಕೆಡಹಿದನು. ಬೃಹತ್ಕ್ಷತ್ರನ ಈ ಕಾರ್ಯವನ್ನು ನೋಡಿ ನಿನ್ನ ಸೈನ್ಯಕ್ಕೆಲ್ಲಾ ಆಶ್ಚರ್ಯವಾಯಿತು. ಆಗ ದ್ರೋಣನು ಕೇಕಯರಾಜನಮೇಲೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಅದನ್ನು ಕೇಕಯರಾಜನು ಬ್ರಹ್ಮಾಸ್ತ್ರದಿಂದಲೇ ನಿಗ್ರಹಿಸಿಬಿಟ್ಟನು. ಆಮೇಲೆ ಬೃಹತ್ಕ್ಷತ್ರನು ದ್ರೋಣನಮೇಲೆ ಅರುವತ್ತು ಬಾಣಗಳನ್ನು ಪ್ರಯೋಗಿಸಿದನು. ದ್ರೋಣನು ಅದಕ್ಕೆ ಪ್ರತಿಯಾಗಿ ಒಂದು ನಾರಾಚವನ್ನು ಕೇಕಯರಾಜನಮೇಲೆ ಪ್ರಯೋಗಿಸಿದನು. ಅದು ಕೇಕಯರಾಜನ ಕವಚವನ್ನು ಹರಿದು, ಆ ರಾಜನ ದೇಹವನ್ನು ಭೇದಿಸಿಕೊಂಡುಹೋಗಿ, ಹುತ್ತದಲ್ಲಿ ಹಾಗುವ ಹಂವಿನಂತೆ ನೆಲದಲ್ಲಿ ನಾಟಿತು. ಇದರಿಂದ ಕೇಕಯರಾಜನು ಬಹಳವಾಗಿ ನೊಂದನು. ಅತ್ಯಾಕ್ರೋಶದಿಂದ ಕಣ್ಣುಗಳನ್ನು ತೊಳಲಿಸುತ್ತ ಎಪ್ಪತ್ತುಬಾಣಗಳಿಂದ ದ್ರೋಣನನ್ನೂ, ಒಂದುಬಾಣದಿಂದ ಅವನ ಸಾರಥಿಯನ್ನೂ ಮರ್ಮಸ್ಥಾನಗಳಿಗೆ ತಗುಲುವಂತೆ ಹೊಡೆದನು. ದ್ರೋಣನು ಪ್ರತಿಯಾಗಿ ತೀಕ್ಷ್ಣಬಾಣಗಳನ್ನು ಬಿಟ್ಟು, ಆ ಕೇಕಯರಾಜನಿಗೆ ಬುದ್ಧಿಭ್ರಮೆಹಿಡಿಯುವಂತೆ ಮಾಡಿ, ಕೊನೆಗೆ ನಾಲ್ಕುಬಾಣಗಳಿಂದ ನಾಲ್ಕು ರಥಾಶ್ವಗಳನ್ನೂ, ಒಂದುಬಾಣದಿಂದ ಅವನ ಸಾರಥಿಯನ್ನೂ, ಎರಡುಬಾಣಗಳಿಂದ ಅವನ ಧ್ವಜಚ್ಛತ್ರಗಳನ್ನೂ ಭೇದಿಸಿ ಕೆಡಹಿದನು. ಆಮೇಲೆ ಅತಿತೀಕ್ಷ್ಣವಾದ ಒಂದು ನಾರಾಚವನ್ನು ತೆಗೆದು ಬೃಹತ್ಕ್ಷತ್ರನ ಎದೆಗೆ ಗುರಿಯಿಟ್ಟು ಹೊಡೆಯಲು, ಅದರಿಂದ ಆ ಕೇಕಯ

ರಾಜನು ಎದೆಮುರಿದು ಸತ್ತುಬಿದ್ದನು. ಕೇಕಯರಲ್ಲಿ ಮಹಾರಥನೆನಿಸಿಕೊಂಡ ಬೃಹತ್ಕ್ಷತ್ರನು ಹತನಾದುದನ್ನು ನೋಡಿ, ಶಿಶುಪಾಲಕುಮಾರನು ಅತಿಕೋಪಾವಿಷ್ಟನಾಗಿ, ತನ್ನ ಸಾರಥಿಯನ್ನು ಕುರಿತು, "ಸೂತಾ! ಅದೋ! ಅಲ್ಲಿ ದ್ರೋಣನು ನಮ್ಮಕಡೆಯ ಕೇಕಯಪಾಂಚಾಲವೀರರನ್ನು ಯಥೇಚ್ಛವಾಗಿಕೊಲ್ಲುತ್ತ ಯುದ್ಧಮಾಡುತ್ತಿರುವನು. ಬೇಗನೆ ಅಲ್ಲಿಗೆ ರಥವನ್ನು ಬಿಡು" ಎನಲು, ಸಾರಥಿಯು ಒಡನೆ ಅಲ್ಲಿಗೆ ರಥವನ್ನು ತಂದನು. ಚೇದಿರಾಜನಾದ ಆ ಧೃಷ್ಟಕೇತುವು ಬೆಂಕಿಯಮೇಲೆ ಬೀಳುವ ಮಿಡಿತೆಯಂತೆ ದ್ರೋಣನನ್ನು ಕೊಲ್ಲಬೇಕೆಂದು ಮುಂದೆಬಂದು, ಅರುವತ್ತುಬಾಣಗಳಿಂದ ದ್ರೋಣನನ್ನೂ, ಅವನ ರಥರಥಾಶ್ವಧ್ವಜಗಳನ್ನೂ ಬಲವಾಗಿ ಹೊಡೆದನು. ಮಲಗಿದ ಹುಲಿಯನ್ನು ಎಬ್ಬಿಸುವಂತೆ ಮೇಲೆಮೇಲೆ ಬಾಣಗಳನ್ನು ಹೊಡೆದು, ದ್ರೋಣನನ್ನು ಬಹಳವಾಗಿ ಕೋಪಗೊಳಿಸಿದನು. ಅದನ್ನು ನೋಡಿ ದ್ರೋಣನು ಒಂದು ಕ್ಷುರಪ್ರದಿಂದ ಆ ಧೃಷ್ಟಕೇತುವಿನ ಧನುಸ್ಸನ್ನು ಅದರ ಮಧ್ಯಭಾಗಕ್ಕೆ ಸರಿಯಾಗಿ ಭೇದಿಸಿಕೆಡಹಿದನು. ಒಡನೆಯೇ ಆ ಶಿಶುಪಾಲಪುತ್ರನು ಬೇರೊಂದು ಬಿಲ್ಲನ್ನು ಕೈಗೆತ್ತಿಕೊಂಡು, ದ್ರೋಣನಮೇಲೆ ಬಾಣಗಳನ್ನು ಬಿಟ್ಟನು. ಆಗ ದ್ರೋಣನು ನಾಲ್ಕುಬಾಣಗಳಿಂದ ಆ ಚೇದಿರಾಜನ ನಾಲ್ಕು ರಥಾಶ್ವಗಳನ್ನೂ, ಒಂದು ಬಾಣದಿಂದ ಸಾರಥಿಯ ತಲೆಯನ್ನೂ ಕತ್ತರಿಸಿಕೆಡಹಿ, ಇಪ್ಪತ್ತೈದುಬಾಣಗಳನ್ನು ಆ ಧೃಷ್ಟಕೇತುವಿನಮೇಲೆ ಪ್ರಯೋಗಿಸಿದನು. ಒಡನೆಯೇ ಆ ಚೈದ್ಯನು ಮುರಿದ ರಥದಿಂದ ಕೆಳಕ್ಕೆ ಹಾರಿ, ದೊಡ್ಡ ಗದೆಯನ್ನೆತ್ತಿಕೊಂಡು, ಅದನ್ನು ದ್ರೋಣನಮೇಲೆ ಬೀಸಿದನು. ಕೋಪಗೊಂಡ ಹಾವಿನಂತೆಯೂ, ಕಾಲರಾತ್ರಿಯಂತೆಯೂ, ಭಯಂಕರವಾಗಿಯೂ, ಮಹತ್ತಾಗಿಯೂ, ಉಕ್ಕಿನಿಂದ ನಿರ್ಮಿತವಾಗಿಯೂ, ಚಿನ್ನದ ಕಟ್ಟುಗಳಿಂದ ಅಲಂಕೃತವಾಗಿಯೂ ಇದ್ದ ಆ ಮಹಾಗದೆಯನ್ನು ದ್ರೋಣನು ಅನೇಕ ಸಹಸ್ರಬಾಣಗಳಿಂದ ಭೇದಿಸಿಕೆಡಹಿದನು. ಮಹಾಧ್ವನಿಯೊಡನೆ ಆ ಗದೆಯು ಮುರಿದು ಕೆಳಗೆಬಿದ್ದಿತು. ಇದನ್ನು ನೋಡಿ ಸಹಿಸಲಾರದೆ, ಧೃಷ್ಟಕೇತುವು ಒಂದು ತೋಮರವನ್ನೂ, ಆಮೇಲೆ ಒಂದು ಶಕ್ತ್ಯಾಯುಧವನ್ನೂ, ದ್ರೋಣನಮೇಲೆ ಬೀಸಿದನು. ಆ ತೋಮರಶಕ್ತಿಗಳೆರಡನ್ನೂ ದ್ರೋಣನು ಐದೈದು ಬಾಣಗಳಿಂದ ತುಂಡು

ಮಾಡಿದನು. ಗರುಡನಿಂದ ಕಚ್ಚಿ ತುಂಡುಮಾಡಲ್ಪಟ್ಟ ಹಾವುಗಳಂತೆ, ಅವೆರಡೂ ತುಂಡಾಗಿ ಕೆಳಗೆ ಬಿದ್ದುವು. ಆಮೇಲೆ ದ್ರೋಣನು ಒಂದು ತೀಕ್ಷ್ಣಬಾಣವನ್ನು ಪ್ರಯೋಗಿಸಲು, ಆ ಬಾಣವು ಧೃಷ್ಟಕೇತುವಿನ ಕವಚವನ್ನು ಭೇದಿಸಿಕೊಂಡುಹೋಗಿ, ಅವನ ಎದೆಯಲ್ಲಿ ನಾಟಿ, ಅದನ್ನು ಎರಡಾಗಿ ಸೀಳಿ, ಭೂಮಿಯಲ್ಲಿ ಬಿದ್ದಿತು. ಹಸಿವಿನಿಂದ ಆತುರಗೊಂಡ ಗುಬ್ಬಿಯು ಸಣ್ಣ ಮಿಡಿತೆಯನ್ನು ಹೇಗೋ ಹಾಗೆ ದ್ರೋಣನು ಚೇದಿರಾಜನಾದ ಆ ಧೃಷ್ಟಕೇತುವನ್ನು ಕೊನೆಗಾಣಿಸಿಬಿಟ್ಟನು. ಧೃಷ್ಟಕೇತುವು ಹತನಾದುದನ್ನು ನೋಡಿ, ಉತ್ತಮಾಸ್ತ್ರಗಳನ್ನು ಬಲ್ಲ ಅವನ ಮಗನು, ತನ್ನ ತಂದೆಯಿದ್ದ ಸ್ಥಳಕ್ಕೆ ಬಂದು, ದ್ರೋಣನೊಡನೆ ಯುದ್ಧವನ್ನಾರಂಭಿಸಿದನು. ಅವನನ್ನೂ ದ್ರೋಣನು, ಹೆಬ್ಬುಲಿಯು ಜಿಂಕೆಯಮರಿಯನ್ನು ಕೊಲ್ಲುವಂತೆ ಕ್ಷಣಮಾತ್ರದಲ್ಲಿ ಯಮಪುರಿಗೆ ಕಳುಹಿಸಿಬಿಟ್ಟನು. ಇದನ್ನು ನೋಡಿ ವೀರನಾದ ಜರಾಸಂಧನ ಮಗನು ದ್ರೋಣನಿಗಿದಿರಾಗಿ ಬಂದು, ಮೇಘವು ಸೂರ್ಯನನ್ನು ಮರೆಸುವಂತೆ ಬಾಣಪರಂಪರೆಗಳಿಂದ ದ್ರೋಣನನ್ನು ಕಣ್ಣಿಗೇ ಕಾಣದಂತೆ ಮುಚ್ಚಿಬಿಟ್ಟನು. ಅವನ ಹಸ್ತಲಾಘವವನ್ನು ನೋಡಿ ಅಭಿನಂದಿಸುತ್ತ ದ್ರೋಣನು, ಅವನಿಗಿಂತಲೂ ನೂರುಸಾವಿರಸಂಖ್ಯೆಯಿಂದಹೆಚ್ಚುಬಾಣಗಳನ್ನುಬಿಟ್ಟು, ಆ ಜರಾಸಂಧಸುತನನ್ನು ಅದೃಶ್ಯನನ್ನಾಗಿ ಮಾಡಿಕೊನೆಗೆ, ಎಲ್ಲರೂ ನೋಡುತ್ತಿರುವಹಾಗೆಯೇ ಆ ಜರಾಸಂಧಪುತ್ರನನ್ನು ಕೊನೆಗಾಣಿಸಿಬಿಟ್ಟನು. ಮಹಾರಾಜಾ! ಇದೇರೀತಿಯಲ್ಲಿ ದ್ರೋಣನು ತನಗಿದಿರಾಗಿ ನಿಲ್ಲಿಸಲ್ಪಟ್ಟವರನ್ನೆಲ್ಲ ಕ್ಷಣಮಾತ್ರದಲ್ಲಿ ಕೊನೆಗಾಣಿಸುತ್ತ, ಪ್ರಳಯಕಾಲದ ಯಮನಂತೆ ರಣರಂಗದಲ್ಲಿ ನಿರಂಕುಶವಾಗಿ ಸಂಚರಿಸುತ್ತಿದ್ದನು. ಆಗ ದ್ರೋಣನು ತನ್ನ ಹೆಸರನ್ನು ಹೇಳಿಹೇಳಿ ಬಾಣಗಳನ್ನು ಬಿಡುತ್ತ, ಪಾಂಡವಸೈನ್ಯಗಳನ್ನೆಲ್ಲ ಬಾಣಗಳಿಂದ ಮುಚ್ಚುತ್ತಿದ್ದನು. ದ್ರೋಣನಾಮಾಂಕಿತಗಳಾದ ಬಾಣಗಳು ಅಸಂಖ್ಯಾತಗಳಾದ ಗಜತುರಗಪದಾತಿಗಳನ್ನು ಆಹುತಿಯಾಗಿ ತೆಗೆದುಕೊಂಡುವು. ಇಂದ್ರನಿಂದ ಕೊಲೆಗೀಡಾದ ದೈತ್ಯಸೈನ್ಯದಂತೆ ಪಾಂಡವಪಾಂಚಾಲಸೈನ್ಯಗಳು ನೂರುಸಾವಿರಸಂಖ್ಯೆಯಿಂದ ಹತವಾಗಿ, ಚಳಿಗೆ ಸಿಕ್ಕಿಬಿದ್ದ ಗೋವುಗಳಂತೆ ನಡುಗುತ್ತಿದ್ದುವು. ದ್ರೋಣನಿಂದ ಕೊಲೆಗೀಡಾದ ಪಾಂಡವಸೈನ್ಯದಲ್ಲಿ ಭಯಂಕರವಾದ ದೀನಧ್ವನಿಯು

ಕೇಳಲಾರಂಭಿಸಿತು. ಮೇಲೆ ಸೂರ್ಯನ ತಾಪವೊಂದು, ಕೆಳಗೆ ದ್ರೋಣನ ಬಾಣಜ್ವಾಲೆಯೊಂದು, ಇವೆರಡೂ ಅಗ್ನಿಯಂತೆ ದಹಿಸುತ್ತಿರಲು, ಪಾಂಚಾಲಸೈನ್ಯವೆಲ್ಲ ಭಯಗ್ರಸ್ತವಾಗಿ ಹಿಂದುಮುಂದುತೋರದೆ ತತ್ತಳಿಸುತ್ತಿದ್ದಿತು. ಅವುಗಳಿಗೆ ಓಡಿಹೋಗುವುದಕ್ಕೂ ಕಾಲುಬಾರದಂತಾಯಿತು. ಪಾಂಚಾಲದೇಶದ ಮಹಾರಥರೆಲ್ಲರೂ ದ್ರೋಣನ ಬಾಣದ ಬಲೆಯಿಂದ ಆವರಿಸಲ್ಪಟ್ಟು, ದಿಗ್ಭ್ರಾಂತರಾಗಿದ್ದರು. ಇದನ್ನು ನೋಡಿ ಅಲ್ಲಲ್ಲಿದ್ದ ಚೇದಿ, ಸೃಂಜಯ, ಕಾಶಿ, ಕೋಸಲದೇಶದ ಯೋಧರೆಲ್ಲ "ದ್ರೋಣನನ್ನು ಕೊಲ್ಲಿರಿ! ದ್ರೋಣನನ್ನು ಕೊಲ್ಲಿರಿ!" ಎಂದು ಕೂಗುತ್ತ ಅವನನ್ನು ಇದಿರಿಸಿಬಂದರು. ತಮ್ಮ ಸರ್ವಪ್ರಯತ್ನದಿಂದ ದ್ರೋಣನನ್ನು ಕೊಲ್ಲಬೇಕೆಂದು ಬಂದ ಆ ಸೈನಿಕರಲ್ಲಿ ಒಬ್ಬೊಬ್ಬನನ್ನೂ ದ್ರೋಣನು ತನ್ನ ಬಾಣಗಳಿಂದ ಕ್ಷಣಮಾತ್ರದಲ್ಲಿ ಕೊಂದು ಕೆಡಹಿದನು. ಅವರಲ್ಲಿಯೂ ಚೇದಿದೇಶದ ಪ್ರಮುಖವೀರರು ವಿಶೇಷವಾಗಿ ಕೊಲೆಗೀಡಾದರು. ಚೇದಿದೇಶದವರೆಲ್ಲರೂ ಪ್ರಾಯಕವಾಗಿ ಹತರಾದುದನ್ನು ನೋಡಿ, ದ್ರೋಣನ ಬಾಣವೇಗವನ್ನು ತಡೆಯಲಾರದೆ, ಪಾಂಚಾಲರೂ, ಇತರಸೈನಿಕರೂ ಭಯದಿಂದ ತಮ್ಮ ರಕ್ಷಣೆಗಾಗಿ ಭೀಮಸೇನನನ್ನೂ, ಧೃಷ್ಟದ್ಯುಮ್ನನನ್ನೂ ಕುರಿತು ಮೊರೆಯಿಟ್ಟರು. ಆಗ ಭೀಮನು ತನ್ನ ಸೈನಿಕರನ್ನು ನೋಡಿ "ಎಲೈ! ಆಚಾರ್ಯನಾದ ಆ ಬ್ರಾಹ್ಮಣನು ಮಹಾತಪಸ್ಸನ್ನು ನಡೆಸಿರಬೇಕು! ಇದರಲ್ಲಿ ಸಂದೇಹವಿಲ್ಲ! ಆದರಿಂದಲೇ ಅವನು ಯುದ್ಧದಲ್ಲಿ ಕೋಪವಶನಾಗಿ ಕ್ಷತ್ರಿಯವೀರರನ್ನೆಲ್ಲ ತನ್ನ ಬಾಣಜ್ವಾಲೆಯಿಂದ ದಹಿಸುತ್ತಿರುವನು. ಯುದ್ಧವು ಕ್ಷತ್ರಿಯನ ಧರ್ಮವು. ಉತ್ತಮವಾದ ತಪಸು ಬ್ರಾಹ್ಮಣನ ಧರ್ಮವು. ದ್ರೋಣಾಚಾರ್ಯನು ಮಹಾ ತಪಸ್ವಿ! ಅದರಮೇಲೆ ಶಸ್ತ್ರವಿದ್ಯೆಯಲ್ಲಿ ಸುಶಿಕ್ಷಿತನು. ದೃಷ್ಟಿಮಾತ್ರದಿಂದಲೇ ಅವನು ವೀರಕ್ಷತ್ರಿಯರನ್ನೆಲ್ಲ ಸುಟ್ಟುಬಿಡಬಲ್ಲನು. ಅಸ್ತ್ರಜ್ವಾಲೆಗಳನ್ನು ಕೆದರುವ ದ್ರೋಣನೆಂಬ ಅಗ್ನಿಯಲ್ಲಿ ಪ್ರವೇಶಿಸಿ, ಅನೇಕ ಕ್ಷತ್ರಿಯವೀರರು ದಗ್ಧರಾದುದೇನೂ ಆಶ್ಚರ್ಯವಲ್ಲ. ಆ ದ್ರೋಣನು ಮಹಾತೇಜಸ್ವಿ! ತನ್ನ ಬಲಕ್ಕೂ, ಉತ್ಸಾಹಕ್ಕೂ, ವೀರ್ಯಕ್ಕೂ ತಕ್ಕಂತೆ ಸಮಸ್ತಭೂತಗಳನ್ನೂ ಮೋಹಗೊಳಿಸಿ, ನಮ್ಮ ಸೈನ್ಯಗಳನ್ನೆಲ್ಲ ಕೊಲ್ಲುತ್ತಿರುವನು. ಮಾಡುವುದೇನು? ಆದರೂ ನಮ್ಮ ಪ್ರಯತ್ನವನ್ನು ಬಿಡಬಾರದು" ಎಂದನು. ಈ ಮಾತನ್ನು

ಕೇಳಿದೊಡನೆ ಕ್ಷತ್ರಧರ್ಮನೆಂಬವನು ಅರ್ಧಚಂದ್ರಬಾಣವೊಂದನ್ನು ಪ್ರಯೋಗಿಸಿ, ದ್ರೋಣನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿದನು. ಆಗಲೇ ದ್ರೋಣನು ಅದಕ್ಕಿಂತಲೂ ಮಹತ್ತಾದ ಬೇರೊಂದು ಬಿಲ್ಲನ್ನು ಕೈಗೆತ್ತಿಕೊಂಡು, ತೀಕ್ಷ್ಣಬಾಣಗಳನ್ನು ಅದರಲ್ಲಿ ಸಂಧಿಸಿ, ಕಿವಿಯವರೆಗೆ ನಾಣನ್ನೆಳೆದು, ಕ್ಷತ್ರಧರ್ಮನ ಮೇಲೆ ವೇಗದಿಂದ ಪ್ರಯೋಗಿಸಿದನು. ಅದರಿಂದ ಕ್ಷತ್ರಧರ್ಮನು ಎದೆಯೊಡೆದು, ತನ್ನ ವಾಹನದಿಂದ ಕೆಳಕ್ಕೆ ಬಿದ್ದುಬಿಟ್ಟನು. ಧೃಷ್ಟದ್ಯುಮ್ನನ ಮಗನಾದ ಕ್ಷತ್ರಧರ್ಮನು ಹತನಾದುದನ್ನು ನೋಡಿ, ಪಾಂಡವಸೈನ್ಯಗಳೆಲ್ಲ ಭಯದಿಂದ ನಡುಗಿದುವು. ಆಮೇಲೆ ಮಹಾಬಲಾಢ್ಯನಾದ ಚೇಕಿತಾನನು ಮುಂದೆಬಂದು, ಹತ್ತುಬಾಣಗಳನ್ನು ದ್ರೋಣನ ಎದೆಗೆ ಗುರಿಯಿಟ್ಟು ಹೊಡೆದನು. ನಾಲ್ಕುಬಾಣಗಳನ್ನು ದ್ರೋಣನ ಸಾರಥಿಗೂ, ಬೇರೆ ನಾಲ್ಕುಬಾಣಗಳನ್ನು ಅವನ ರಥಾಶ್ವಗಳಿಗೂ ಹೊಡೆದನು. ಅದಕ್ಕೆ ಪ್ರತಿಯಾಗಿ ದ್ರೋಣನು ಒಂದು ಬಾಣವನ್ನು ಆ ಚೇಕಿತಾನನ ಎದೆಗೂ, ಬೇರೆ ಎರಡುಬಾಣಗಳನ್ನು ಅವನ ತೋಳಿಗೂ ಹೊಡೆದು, ಏಳು ಬಾಣಗಳಿಂದ ಅವನ ಧ್ವಜವನ್ನು ಮುರಿದನು. ಬೇರೆ ಮೂರು ಬಾಣಗಳಿಂದ ಅವನ ಸಾರಥಿಯನ್ನು ಕೊಂದುಕೆಡಹಿದನು. ಆಗ ಚೇಕಿತಾನನ ರಥಾಶ್ವಗಳು ಭಯದಿಂದ ಸಿಕ್ಕಿದಕಡೆಗೆ ರಥವನ್ನೆಳೆದುಕೊಂಡು, ಓಡಲಾರಂಭಿಸಿದುವು. ಅವನ ಕುದುರೆಗಳು ಬಾಣಗಳಿಂದ ನೊಂದು ಸತ್ತುಬಿದ್ದುವು. ಆಮೇಲೆ ದ್ರೋಣನು ಅಲ್ಲಲ್ಲಿದ್ದ ಚೇದಿ ಪಾಂಚಾಲ ಸೃಂಜಯ ಸೈನ್ಯಗಳನ್ನೆಲ್ಲ ನಾನಾಕಡೆಗಳಿಗೆ ಓಡಿಸಿಬಿಟ್ಟನು. ಮಹಾರಾಜಾ! ಆ ದ್ರೋಣನಾದರೋ ನಾನೂರುವರ್ಷದ ವೃದ್ಧನು. ಕಿವಿಯವರೆಗೆ ಸಂಪೂರ್ಣವಾಗಿ ನರೆತ ಕೂದಲುಳ್ಳವನು. ಅಂತಹ ವೃದ್ಧನು ಹದಿನಾರುವಯಸ್ಸಿನ ತರುಣನಂತೆರಣರಂಗದಲ್ಲಿ ತನ್ನ ಅದ್ಭುತಪರಾಕ್ರಮವನ್ನು ತೋರಿಸಿ, ತಾನೇತಾನಾಗಿ ಸಂಚರಿಸುತಿದ್ದನು. ಆಗ ಜನರೆಲ್ಲರೂ ಅವನನ್ನು ವಜ್ರಪಾಣಿಯಾದ ಇಂದ್ರನೆಂದೇ ತಿಳಿದುಕೊಂಡರು. ಆಗ ದ್ರುಪದನು ತನ್ನ ಕಡೆಯವರನ್ನು ನೋಡಿ, "ಎಲೈ ವೀರರೇ! ಹುಲಿಯು ಸಣ್ಣಮೃಗಗಳನ್ನು ಹೇಗೋಹಾಗೆ ದ್ರೋಣನು ನಮ್ಮಕಡೆಯ ಕ್ಷತ್ರಿಯರನ್ನೆಲ್ಲ ಕೊಲ್ಲುತ್ತಿರುವನು. ಅವನು ಇನ್ನೂ ವಿಶೇಷಯುದ್ಧಾತುರದಿಂದಲೇ ಇರುವನು. ಈ ಅನರ್ಥಕ್ಕೆಲ್ಲ

ಪಾಪಿಯಾದ ಆ ದುರ್ಯೋಧನನಲ್ಲವೇ ಕಾರಣವು! ದುರಾತ್ಮನಾದ ಆತನು ಅತ್ಯಂತ ಕಷ್ಟಕ್ಕೀಡಾದ ನರಕಗಳನ್ನು ಹೊಂದುವುದರಲ್ಲಿ ಸಂದೇಹವಿಲ್ಲ. ಅವನ ದುರಾಶೆಯಿಂದಲ್ಲವೇ ಇಷ್ಟುಮಂದಿ ಕ್ಷತ್ರಿಯವೀರರು ಕತ್ತಿಯಿಂದ ಕಡಿಯಲ್ಪಟ್ಟ ವೃಷಭಗಳಂತೆ ರಕ್ತದಿಗ್ಧಶರೀರರಾಗಿ, ನಾಯಿನರಿಗಳಿಗೆ ಆಹಾರವಾಗಿ ಇಲ್ಲಿ ಬಿದ್ದಿರುವರು. ಮುಖ್ಯವಾಗಿ ಆ ಪಾಪಿ ದುರ್ಯೋಧನನಿಗೆ ಸದ್ಗತಿಯಿಲ್ಲ!" ಎಂದನು. ಹೀಗೆಂದುಹೇಳಿ ದ್ರುಪದನು ತನ್ನ ದೊಡ್ಡ ಸೈನ್ಯವನ್ನು ಕೂಡಿಸಿಕೊಂಡು, ಪಾಂಡವರನ್ನು ತನ್ನ ಸಹಾಯಕ್ಕೆ ಕರೆದುಕೊಂಡು ದ್ರೋಣನನ್ನು ಇದಿರಿಸಿಹೋದನು.

ಇದು ನೂರಿಪ್ಪತ್ತೈದನೆಯ ಅಧ್ಯಾಯವು.

---

{ ಅರ್ಜುನನ ವೃತ್ತಾಂತವನ್ನು ತಿಳಿಯುವುದಕ್ಕಾಗಿ ಸಾತ್ಯಕಿಯನ್ನು ಕಳುಹಿಸಿದ ಧರ್ಮರಾಜನು, ಕಾಲವಿಳಂಬವನ್ನು ಸಹಿಸಲಾರದೆ, ತಿರುಗಿ ಭೀಮನನ್ನು ಕಳುಹಿಸಿದುದು. }

ಮಹಾರಾಜಾ! ಪಾಂಡವಸೈನ್ಯಗಳೆಲ್ಲ ಹೀಗೆ ದ್ರೋಣನಿಂದ ಚದರಿಸಲ್ಪಡುತ್ತಿರುವಾಗ, ಪಾಂಚಾಲರು, ಸೋಮಕರು, ಪಾಂಡವರು, ಇವರೆಲ್ಲರೂ ಸೇರಿ ಬಹುದೂರದವರೆಗೆ ಕೌರವಸೈನ್ಯಗಳನ್ನು ಬೆನ್ನಟ್ಟುತ್ತ ಹೋದರು. ಪ್ರಳಯಕಾಲದಂತೆ ಲೋಕಕ್ಷಯಕಾರಣವಾದ ಭಯಂಕರಯುದ್ಧವು ನಡೆಯುತ್ತಿತ್ತು. ದ್ರೋಣನ ಪರಾಕ್ರಮವು ಮೇಲೆಮೇಲೆ ಪ್ರಬಲವಾಯಿತು! ಅವನುಬಾರಿಬಾರಿಗೂ ಗರ್ಜಿಸಿ,ಸಿಂಹನಾದಗಳನ್ನು ಮಾಡುತ್ತಿದ್ದನು. ಪಾಂಚಾಲಪಾಂಡವ ಸೈನ್ಯಗಳೆಲ್ಲವೂ ಕ್ಷೀಣಿಸುತ್ತ ಬಂದುವು. ಆಗ ಧರ್ಮರಾಜನು ತನಗೆ ಬೆಂಬಲವಾರೆಂದು ತಿಳಿಯದೆ, ಮುಂದೇನಾಗುವುದೋ ಎಂದು ಚಿಂತಿಸುತ್ತಿದ್ದನು. ನಾಲ್ಕು ದಿಕ್ಕುಗಳನ್ನೂ ನೋಡಿದನು. ತನಗೆ ಯಾವಾಗಲೂ ಆಪತ್ಕಾಲದಲ್ಲಿ ರಕ್ಷಕರೆನಿಸಿದ ಅರ್ಜುನನಾಗಲಿ, ಕೃಷ್ಣನಾಗಲಿ ಕಣ್ಣಿಗೆ ಬೀಳದಿರುವುದನ್ನು ನೋಡಿ ಚಿಂತಾಕುಲನಾದನು. ವಾನರಧ್ವಜವುಳ್ಳ ಅರ್ಜುನನಾಗಲಿ, ತಮಗೆ ರಕ್ಷಕನಾದ ಶ್ರೀ ಕೃಷ್ಣನಾಗಲಿ, ಕೊನೆಗೆ ಸಾತ್ಯಕಿಯಾಗಲಿ, ಈ ಸಮಯದಲ್ಲಿ ತನ್ನ ಸಹಾಯಕ್ಕಿಲ್ಲದೆ, ಕೊನೆಗೆ,

ಅರ್ಜುನನ ಗಾಂಡೀವಘೋಷವಾದರೂ, ತನ್ನ ಕಿವಿಗೆ ಬೀಳದಿರುವುದನ್ನು ನೋಡಿ ಯುಧಿಷ್ಠಿರನಿಗೆ ದೇಹವೆಲ್ಲ ನಡುಗುವಂತೆ ಮಹತ್ತಾದ ಭೀತಿಯುಂಟಾಯಿತು. ಅವನ ಮನಸ್ಸಿಗೆ ಯಾವ ವಿಧದಲ್ಲಿಯೂ ಶಾಂತಿಯುಂಟಾಗಲಿಲ್ಲ. ಇದಲ್ಲದೆ ಸಾತ್ಯಕಿಯನ್ನು ಇಲ್ಲಿಂದ ತಾನು ಕಳುಹಿಸಿದುದಕ್ಕಾಗಿ ಅವನಿಗೆ ಲೋಕಾಪವಾದದ ಭಯವೂ ಮನಸ್ಸನ್ನು ಬಾಧಿಸುತಿದ್ದಿತು. ಆಗ ಅವನು ತನ್ನಲ್ಲಿ ತಾನು "ಅಯ್ಯೋ! ಅರ್ಜುನನ ವೃತ್ತಾಂತವನ್ನು ತಿಳಿಯುವುದಕ್ಕಾಗಿ ನಾನು ವೀರನಾದ ಸಾತ್ಯಕಿಯನ್ನು ಕಳುಹಿಸಿದೆನು. ಅವನ ಗತಿಯೇನಾಯಿತೋ ಅದೂ ತಿಳಿಯಲಿಲ್ಲ. ಮೊದಲು ನನಗೆ ಅರ್ಜುನನ ಚಿಂತೆಯೊಂದೇ ಇದ್ದುದು, ಈಗ ಸಾತ್ಯಕಿಯ ಚಿಂತೆಯೂ ಸೇರಿ, ಅದು ದ್ವಿಗುಣವಾಯಿತು. ಸಾತ್ಯಕಿಯ ಮತ್ತು ಅರ್ಜುನನ ಕ್ಷೇಮವನ್ನುಮೊದಲು ತಿಳಿಯಬೇಕಾಗಿದೆ. ಅರ್ಜುನನಿಗಾಗಿ ಸಾತ್ಯಕಿಯನ್ನು ಕಳುಹಿಸಿದ ನಾನು, ಈಗ ಸಾತ್ಯಕಿಗಾಗಿ ಬೇರೆ ಯಾರನ್ನು ಕಳುಹಿಸಲಿ? ನನ್ನ ಸಹೋದರನಾದ ಅರ್ಜುನನ ಕ್ಷೇಮವನ್ನು ಮಾತ್ರ ಅಷ್ಟು ಅಕ್ಕರೆಯಿಂದ ನೋಡಿದ ನಾನು, ಈಗ ಸಾತ್ಯಕಿಯ ವಿಷಯದಲ್ಲಿ ಉದಾಸೀನನಾಗಿ ಸುಮ್ಮನಿದ್ದರೆ, ಲೋಕವು ನನ್ನನ್ನು ತಪ್ಪದೆ ನಿಂದಿಸುವುದು ಧರ್ಮರಾಜನಿಗೆ ತನ್ನ ತಮ್ಮನಲ್ಲಿರುವ ಪ್ರೇಮವು ಸಾತ್ಯಕಿಯಲ್ಲಿ ಇಲ್ಲವಾಯಿತೆಂದು ಜನರು ನನ್ನನ್ನು ಬಯ್ಯುವರು. ಈ ಅಪವಾದದ ಭಯದಿಂದ ಈಗ ನಾನು ಆ ಸಾತ್ಯಕಿಯ ಕ್ಷೇಮವನ್ನು ತಿಳಿದುಬರುವುದಕ್ಕಾಗಿ ನನ್ನ ಸಹೋದರನಾದ ಭೀಮನನ್ನೇ ಕಳುಹಿಸಬೇಕು. ನನಗೆ ಅರ್ಜುನನು ಬೇರೆ, ಸಾತ್ಯಕಿಯು ಬೇರೆಯಲ್ಲ. ಅರ್ಜುನನಲ್ಲಿರುವ ಪ್ರೀತಿಯೇ ನನಗೆ ಸಾತ್ಯಕಿಯಲ್ಲಿಯೂ ಇರುವುದು. ಈಗ ನಾನು ಸಾತ್ಯಕಿಯಮೇಲೆ ದೊಡ್ಡ ಯುದ್ಧಭಾರವನ್ನು ಹೊರಿಸಿ ಕಳುಹಿಸಿರುವೆನು. ಅವನು ತನ್ನ ಸ್ನೇಹಿತನಾದ ಅರ್ಜುನನಲ್ಲಿರುವ ಪ್ರೀತಿಗಾಗಿಯೂ, ನನ್ನಲ್ಲಿರುವ ಗೌರವಕ್ಕಾಗಿಯೂ, ಮಹಾಮಕರವು ಸಮುದ್ರದಲ್ಲಿ ಪ್ರವೇಶಿಸಿದಂತೆ ಕೌರವಸೈನ್ಯದೊಳಗೆ ಪ್ರವೇಶಿಸಿಬಿಟ್ಟನು. ಅದೋ! ಅತ್ತಲಾಗಿ ಸಾತ್ಯಕಿಯೊಡನೆ ಯುದ್ಧಮಾಡುತ್ತಿರುವ ಕೌರವಸೈನಿಕರ ಕೋಲಾಹಲವು ಕಿವಿಗೆ ಬೀಳುತ್ತಿದೆ. ನಾನು ಪೂರ್ವೋತ್ತರಗಳನ್ನು ಯೋಚಿಸಿ, ಕಾಲಕ್ಕೆ ತಕ್ಕ ಕಾರ್ಯವನ್ನು ಮಾಡದೆತೀರದು! ಆದುದರಿಂದ,

ಈಗ ಅರ್ಜುನನ ಮತ್ತು ಸಾತ್ಯಕಿಯ ವೃತ್ತಾಂತವನ್ನು ತಿಳಿಯುವುದಕ್ಕಾಗಿ ಭೀಮನನ್ನೇ ಕಳುಹಿಸದೆ ತೀರದು. ಭೀಮನಿಗೆ ಈ ಲೋಕದಲ್ಲಿ ಅಸಾಧ್ಯವಾದ ಕಾರ್ಯವೇ ಇಲ್ಲ. ಅವನು ಯುದ್ಧದಲ್ಲಿ ತನ್ನ ಬಾಹುಬಲದಿಂದಲೇ ಶತ್ರುಗಳನ್ನು ನಿವಾರಿಸಬಲ್ಲನು. ಅವನ ಬಾಹುಬಲದ ಆಶ್ರಯದಿಂದಲೇ ನಾವು ವನವಾಸದ ಕಷ್ಟಗಳನ್ನೆಲ್ಲ ಕಳೆದುಬಂದೆವು. ನಮಗೆ ಇದುವರೆಗೆ ಯಾವ ಯುದ್ಧದಲ್ಲಿಯೂ ಪರಾಜಯವಾಗದಿದ್ದುದೂ ಅವನ ಬಲದಿಂದಲೇ! ಆದುದರಿಂದ ಭೀಮನು ಅಲ್ಲಿಗೆ ಹೋದರೆ, ಅರ್ಜುನಸಾತ್ಯಕಿಗಳಿಬ್ಬರಿಗೂ, ಒಳ್ಳೇ ಬೆಂಬಲವುಂಟಾಗುವುದು. ಆಗ ಅವರ ಚಿಂತೆಯು ನನಗೆ ಬಿಟ್ಟು ಹೋಗುವುದು. ಅವರಿಬ್ಬರೂ ಶ್ರೀಕೃಷ್ಣನ ರಕ್ಷಣೆಯಲ್ಲಿರತಕ್ಕವರು. ಇಬ್ಬರೂ ಶಸ್ತ್ರಾಸ್ತ್ರಗಳಲ್ಲಿ ಸಮರ್ಥರು. ಅಂತವರಿಗೆ ಈ ಭೀಮನ ಸಹಾಯವೂ ಒದಗಿತೆಂದರೆ, ಅವರ ವಿಷಯದಲ್ಲಿ ಅಪಾಯಶಂಕೆಯಿಲ್ಲದೆ ನಾನು ನಿಶ್ಚಿಂತನಾಗಿರಬಹುದು. ಆದುದರಿಂದ ನಾನು ಈಗಲೇ ಭೀಮನನ್ನು ಸಾತ್ಯಕಿಯಬಳಿಗೆ ಕಳುಹಿಸುವೆನು. ಆಗ ಸಾತ್ಯಕಿಯ ವಿಷಯದಲ್ಲಿ ತೋರಿಸಬೇಕಾದ ಪ್ರೇಮವನ್ನು ನಾನು ತೋರಿಸಿದಂತಾಗುವುದು" ಎಂದು ನಿಶ್ಚಯಿಸಿಕೊಂಡು, ತನ್ನ ಸಾರಥಿಯನ್ನು ನೋಡಿ, ಭೀಮನಿರುವ ಸ್ಥಳಕ್ಕೆ ರಥವನ್ನು ಬಿಡುವಂತೆ" ಹೇಳಿದನು. ಒಡನೆಯೇ ಸಾರಥಿಯು ಭೀಮನಿದ್ದ ಸ್ಥಳಕ್ಕೆ ರಥವನ್ನು ತಂದು ನಿಲ್ಲಿಸಿದನು. ಆಗ ಧರ್ಮರಾಜನಿಗೆ, ತಾನು ಭೀಮನನ್ನು ಯಾವವಿಧದಿಂದ ಸಮಾಧಾನಗೊಳಿಸಿ ಅಲ್ಲಿಗೆ ಕಳುಹಿಸಬೇಕೆಂಬ ಚಿಂತೆಯಿಂದ ಮನಸ್ಸಿಗೆ ಏನೂ ತಿಳಿಯದಂತಾಯಿತು. ಕೊನೆಗೆ ಮನಸ್ಸನ್ನು ಸ್ಥಿರಮಾಡಿಕೊಂಡು, ಭೀಮನನ್ನು ಕುರಿತು "ವತ್ಸ ಭೀಮಾ! ಯಾವನು ದೇವ ದಾನವ ಗಂಧರ್ವರನ್ನೆಲ್ಲ ಜಯಿಸಿದನೋ, ಅಂತಹ ನಿನ್ನ ತಮ್ಮನ ಸುಳಿವೇ ಈಗ ತಿಳಿಯದಂತಾಗಿದೆ. ಈಗ ಮಾಡುವುದೇನು?" ಎನಲು, ಭೀಮನು "ಅಣ್ಣಾ! ಏನಿದು? ನೀನೂ ಹೀಗೆ ಅರ್ಜುನನ ವಿಷಯವಾದ ಚಿಂತೆಯಿಂದ ಕಳವಳಿಸುವುದೆಂದರೇನು? ಮಹಾಧೀರನಾದ ನೀನು ಇಂತಹ ಚಿಂತೆಗೆ ಒಳಗಾದುದನ್ನು ಹಿಂದೆ ನಾನು ಕಣ್ಣಿಂದ ನೋಡಲಿಲ್ಲ! ಕಿವಿಯಿಂದ ಕೇಳಿಯೂ ಇಲ್ಲ! ಹಿಂದೆ ಆಗಾಗ ಮಹತ್ತಾದ ದುಃಖಕ್ಕೊಳಗಾದ ನಮಗೆಲ್ಲ ನೀನೇ ಧೈರ್ಯವನ್ನು ಹೇಳುತಿದ್ದೆಯಲ್ಲವೆ? ಈಗ ನಿನಗೆ ಇಷ್ಟು ಚಿಂತೆ

ಯೇಕೆ? ಏಳು! ಏಳು! ನನ್ನಿಂದೇನಾಗಬೇಕೆಂಬುವನ್ನು ಆಜ್ಞಾಪಿಸು! ನನಗೆ ನಿನ್ನ ವಿಷಯದಲ್ಲಿ ಅಸಾಧ್ಯವಾಗಲಿ, ಅಕಾರ್ಯವಾಗಲಿ ಯಾವುದೂ ಇಲ್ಲ. ದುಃಖಿಸಬೇಡ. ನನ್ನಿಂದೇನಾಗಬೇಕು? ಆಜ್ಞಾಪಿಸು" ಎಂದನು. ಆಗ ಧರ್ಮರಾಜನು ವ್ಯಸನದಿಂದ ಕಂದಿದ ಮುಖವುಳ್ಳವನಾಗಿ, ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು, ಸರ್ಪದಂತೆ ನಿಟ್ಟುಸಿರನ್ನು ಬಿಡುತ್ತ "ಕುಮಾರಾ! ಅದೋ! ಅತ್ತಲಿಂದ ಶ್ರೀಕೃಷ್ಣನ ಪಾಂಚಜನ್ಯಧ್ವನಿಯು, ಮಾತ್ರ ಕೇಳುತ್ತಿರುವುದೇಹೊರತು, ಅರ್ಜುನನ ಗಾಂಡೀವಧ್ವನಿಯೇ ಕೇಳಿಸುವುದಿಲ್ಲ. ನಿನ್ನ ಸಹೋದರನಾದ ಅರ್ಜುನನು ನಿಶ್ಚಯವಾಗಿಯೂ ಶತ್ರುಗಳಿಂದ ಹತನಾಗಿರಬೇಕು. ಅರ್ಜುನನ ಸಾವನ್ನು ನೋಡಿ ಸಹಿಸಲಾರದೆ ಶ್ರೀಕೃಷ್ಣನು ತಾನೇ ಶತ್ರುಗಳೊಡನೆ ಯುದ್ಧಮಾಡುತ್ತಿರುವನೆಂದೂ ತೋರುವುದು. ಯಾವನ ಪರಾಕ್ರಮದಿಂದಲೇ ಪಾಂಡವರು ಬದುಕುತಿದ್ದರೋ, ದೇವತೆಗಳು ಇಂದ್ರನನ್ನು ಹೇಗೋ ಹಾಗೆ ಭಯಕಾಲಗಳಲ್ಲಿ ಯಾವನನ್ನು ಪಾಂಡವರು ಮರೆಹೊಗುತ್ತಿದ್ದರೋ, ಅಂತಹ ಮಹಾಶೂರನಾದ ಅರ್ಜುನನು ಸೈಂಧವನನ್ನು ಕೊಲ್ಲಲುದ್ದೇಶಿಸಿ, ಕೌರವಸೈನ್ಯದಲ್ಲಿ ಪ್ರವೇಶಿಸಿಬಿಟ್ಟನು. ಅವನು ಅಲ್ಲಿಗೆ ಹೋದುದನ್ನು ಮಾತ್ರ ನಾವು ಬಲ್ಲೆವೇ ಹೊರತು, ಮುಂದೆ ಅವನ ವೃತ್ತಾಂತವೇ ತಿಳಿಯಲಿಲ್ಲ. ಅವನು ಹಿಂತಿರುಗಿಯೂ ಬರಲಿಲ್ಲ ಶ್ಯಾಮಲಾಂಗನೂ, ಯುವಕನೂ, ಸುರುಳಿಗಟ್ಟಿದ ತಲೆಕೂದಲುಳ್ಳವನೂ, ಸುಂದರಾಕಾರನೂ, ಮಹಾರಥನೂ ಆದ ಅರ್ಜುನನ ಗತಿಯೇನಾಗಿರುವುದೋ? ಅವನಾದರೋ ಉಬ್ಬಿದ ಎದೆಕಟ್ಟುಳ್ಳವನು! ದುಂಡಗೆ ನೀಡಿದ ತೋಳುಗಳುಳ್ಳವನು! ಮದದಾನೆಯಂತೆ ಗಂಭೀರವಾದ ನಡೆಯುಳ್ಳವನು. ಶತ್ರುಭಯಂಕರನು! ಚಕೋರನೇತ್ರನು! ವೃದ್ಧರನ್ನು ಸೇವಿಸಿದವನು! ಧೀರನು! ಸತ್ಯಸಂಗರನು! ಅವನು ಹಿಂದೆ ಇಂದ್ರಲೋಕಕ್ಕೆ ಹೋದಾಗ ಅಲ್ಲಿಯೇ ತಾನು ಸುಖವಾಗಿರಬಹುದಾದರೂ, ನನ್ನ ಪ್ರಿಯಕ್ಕಾಗಿಯೇ ತಿರುಗಿ ಭೂಲೋಕಕ್ಕೆ ಬಂದನು. ಅಂತಹ ಅರ್ಜುನನು ಅಪಾರವಾದ ಕೌರವಸೈನ್ಯದೊಳಗೆ ಪ್ರವೇಶಿಸಿಬಿಟ್ಟನು. ಅವನ ವೃತ್ತಾಂತವನ್ನು ತಿಳಿಯುವುದಕ್ಕಾಗಿ ನಾನು ಸಾತ್ಯಕಿಯನ್ನು ಕಳುಹಿಸಿದೆನು. ಅವನೂ ಅಲ್ಲಿಗೆ ಹೋದಮೇಲೆ ಹಿಂತಿರುಗಿ ಬರಲಿಲ್ಲ. ಅರ್ಜುನಸಾತ್ಯಕಿಗಳಿಬ್ಬರ

ಚಿಂತೆಯಿಂದಲೇ ಈಗ ನಾನು ಕಳವಳಿಸುತ್ತಿರುವೆನು. ಹವಿಸ್ಸಿನಿಂದ ಉರಿಸಿದ ಬೆಂಕಿಯಂತೆ, ನನ್ನ ಚಿಂತಾಗ್ನಿಯು ಮೇಲೆಮೇಲೆ ಹೆಚ್ಚುತ್ತಿದೆ. ಆ ಅರ್ಜುನನ ಮತ್ತು ಸಾತ್ಯಕಿಯ ಸಂಗತಿಯೇನೂ ತಿಳಿಯದುದಕ್ಕಾಗಿ ನನ್ನ ಮನಸ್ಸು ಮೋಹಕ್ಕೀಡಾಗಿದೆ. ಆದುದರಿಂದ ನಿನ್ನ ತಮ್ಮನಾದ ಅರ್ಜುನನನ್ನೂ, ಅವನನ್ನು ಹುಡುಕುವುದಕ್ಕಾಗಿ ಹೋದ ಸಾತ್ಯಕಿಯನ್ನೂ ನೀನು ನೋಡಿಬರಬೇಕು. ಆ ಸಾತ್ಯಕಿಯ ವಿಷಯವಾದ ಚಿಂತೆಯು ನನ್ನ ಮನಸ್ಸನ್ನು ಬಹಳವಾಗಿ ಕೊರಗಿಸುತ್ತಿದೆ. ಆ ಅರ್ಜುನನು ಇಷ್ಟರೊಳಗೆ ಶತ್ರುಗಳಿಂದ ಹತನಾಗಿಯೇ ಇರಬೇಕು. ಒಂದುವೇಳೆ ಅವನು ಇನ್ನೂ ಬದುಕಿದ್ದು, ಶ್ರೀಕೃಷ್ಣಸಾತ್ಯಕಿಗಳೊಡನೆ ಕ್ಷೇಮದಿಂದಿರುವುದಾದರೆ, ಸೈಂಧವವಧಾನಂತರದಲ್ಲಿ ಅವರನ್ನು ನೀನು ಕಂಡರೆ, ಒಡನೆ ನಿನ್ನ ದೊಡ್ಡ ಸಿಂಹನಾದದಿಂದ ಆ ಸಂತೋಷವನ್ನು ನನಗೆ ಅಲ್ಲಿಂದಲೇ ಸೂಚಿಸು. ಅರ್ಜುನನು ಹತನಾದುದರಿಂದ ಕೃಷ್ಣನೊಬ್ಬನೇ ಯುದ್ಧಮಾಡುತ್ತಿರಬೇಕೆಂದು ತೋರುವುದು. ಅವನಿಗೂ ಈಗ ಸಹಾಯಕರಾರೂ ಇಲ್ಲ. ಆ ಮೂವರ ವಿಷಯವಾದ ಚಿಂತೆಯು ನನ್ನ ಮನಸ್ಸನ್ನು ಬಿಟ್ಟುಹೋಗುವಹಾಗಿಲ್ಲ. ಆದುದರಿಂದ ನೀನು ಈಗಲೇ ಅವರು ಹೋದ ದಾರಿಯನ್ನು ಹಿಡಿದು ಹೋಗಬೇಕು. ನಿನಗೆ ಜ್ಯೇಷ್ಠಸಹೋದರನೆನಿಸಿದ ನನ್ನ ಮಾತನ್ನು ನಡೆಸಬೇಕಾದುದು ಧರ್ಮವೆಂದು ನಿನಗೆ ತೋರಿದರೆ, ಈಗಲೇ ಹೊರಡು. ಭೀಮಾ! ಈಗ ನನಗೆ ಅರ್ಜುನನ ವಿಷಯವಾದ ಚಿಂತೆಯೂ ಅಷ್ಟಾಗಿಲ್ಲ. ಮೊದಲು ಸಾತ್ಯಕಿಯ ಕ್ಷೇಮವನ್ನು ನಾನು ತಿಳಿಯಬೇಕಾಗಿದೆ. ಅವನು ನನ್ನ ಪ್ರಿಯವನ್ನುದ್ದೇಶಿಸಿ, ನನ್ನ ಮಾತಿಗಾಗಿ ಅರ್ಜುನನ ದಾರಿಯನ್ನು ಹಿಡಿದು ಹೊರಟನು. ಬೇರೊಬ್ಬರಿಗೆ ದುರ್ಗಮವಾದ ಶತ್ರುಸೈನ್ಯದ ನಡುವೆ ಪ್ರವೇಶಿಸಿರುವನು. ಭೀಮಾ! ಈಗಲೇ ನೀನು ಹೋಗಿ,ಕೃಷ್ಣಾರ್ಜುನರೂ ಸಾತ್ಯಕಿಯೂ ಕ್ಷೇಮದಿಂದಿರುವುದನ್ನು ನೋಡಿದರೆ, ಅದನ್ನು ನಿನ್ನ ಸಿಂಹನಾದಧ್ವನಿಯಿಂದ ನನಗೆ ಸೂಚಿಸಬೇಕು " ಎಂದನು.

ಇದು ನೂರಿಪ್ಪತ್ತಾರನೆಯ ಅಧ್ಯಾಯವು.



ಭೀಮನು ತಾನು ಹೋಗುವ ದಾರಿಯಲ್ಲಿ ಕೆಲವುಮಂದಿ ಧೃತರಾಷ್ಟ್ರಪುತ್ರರನ್ನು ಕೊಂದು, ತನ್ನನ್ನು ಅಡ್ಡೈಸಿ ಬಂದ ದ್ರೋಣನ ರಥವನ್ನು ಮುರಿದುದು.

ಮಹಾರಾಜಾ! ಕೇಳು! ಭೀಮನು ಧರ್ಮರಾಜನನ್ನು ಕುರಿತು "ಅಣ್ಣಾ! ನೀನೇಕೆ ಚಿಂತಿಸುವೆ? ಪೂರ್ವದಲ್ಲಿ ಯಾವ ರಥವು ಬ್ರಹ್ಮ ರುದ್ರರನ್ನೂ, ಇಂದ್ರವರುಣಾದಿಗಳನ್ನೂ ವಹಿಸುತಿದ್ದಿತೋ, ಅಂತಹ ದಿವ್ಯ ರಥವನ್ನೇರಿ ಹೋಗಿರುವ ಕೃಷ್ಣಾರ್ಜುನರಿಗೆ ಭಯವೆಂದರೇನು? ಅವರಿಗೆ ಎಂದಿಗೂ ಭಯವಿಲ್ಲ. ಆದರೂ ನಿನ್ನ ಆಜ್ಞೆಯನ್ನು ಶಿರಸಾವಹಿಸಿ ನಡೆಯ ಬೇಕಾದುದು ನನ್ನ ಕರ್ತವ್ಯವು. ಇದೋ! ಹೊರಡುವೆನು. ಚಿಂತಿಸ ಬೇಡ. ನಾನು ಆ ಕೃಷ್ಣಾರ್ಜುನಸಾತ್ಯಕಿಗಳಬಳಿಗೆ ಸೇರಿದೊಡನೆ, ನಿನಗೆ ಸೂಚನೆಯನ್ನು ಕೊಡುವೆನು" ಎಂದು ಹೇಳಿ ಯುಧಿಷ್ಠಿರನಿಗೆನಮಸ್ಕ ರಿಸಿ, ಆ ಯುಧಿಷ್ಠಿರನ ರಕ್ಷಣೆಯ ಭಾರವನ್ನು ಧೃಷ್ಟದ್ಯುಮ್ನನಿಗೂ, ಇತರ ಮಿತ್ರರಿಗೂ ಒಪ್ಪಿಸಿ, ಧೃಷ್ಟದ್ಯುಮ್ನನನ್ನು ಕುರಿತು ಹೀಗೆಂದನು. "ಓ ಮಹಾಬಾಹೂ! ಮಹಾರಥನಾದ ದ್ರೋಣನು ಸರ್ವೋಪಾಯದಿಂದ ಧರ್ಮರಾಜನನ್ನು ಸೆರೆಹಿಡಿಯುವುದಕ್ಕಾಗಿ ಯತ್ನಿಸುತ್ತಿರುವನೆಂಬುದು ನಿನಗೂ ತಿಳಿದುದೇ! ಇಲ್ಲಿ ನಮಗೆ ಧರ್ಮರಾಜನನ್ನು ಶತ್ರುಗಳ ಕೈಗೆ ಸಿಕ್ಕ ಸದೆ ಕಾಪಾಡಿಕೊಳ್ಳುವುದಕ್ಕಿಂತಲೂ ಪ್ರಧಾನವಾದ ಕಾರ್ಯವು ಬೇರೊಂ ದಿಲ್ಲ. ನಾನು ಇವನನ್ನು ಬಿಟ್ಟುಹೋಗಿ ಮಾಡಬೇಕಾದ ಕಾರ್ಯವೂ ಇಲ್ಲ. ಆದರೂ ಧರ್ಮರಾಜನ ನಿರ್ಬಂಧಕ್ಕಾಗಿ ನಾನು ಹೊರಡಬೇಕಾಗಿದೆ. ಅವನ ಮಾತಿಗೆ ಪ್ರತಿಯಾಗಿ ನಾನು ಹೇಳಲಾರೆನು. ಸೈಂಧವನು ಸಾಯುವುದಕ್ಕೆ ಸಿದ್ಧನಾಗಿರುವ ಸ್ಥಳಕ್ಕೆ ನಾನು ಹೊರಡುವೆನು. ಧರ್ಮರಾಜನ ಮಾತನ್ನು ಮೀರುವುದಕ್ಕಿಲ್ಲ! ಅರ್ಜುನ ಸಾತ್ಯಕಿಗಳ ದಾರಿಯನ್ನು ಹಿಡಿದು ನಾನು ಹೋಗುವೆನು. ಇಲ್ಲಿ ನೀನು ಯುಧಿಷ್ಠಿರನನ್ನು ಬಹಳಎಚ್ಚರಿಕೆಯಿಂದ ರಕ್ಷಿಸಿಕೊಳ್ಳಬೇಕು. ಎಲ್ಲಕ್ಕಿಂತಲೂ ಇದೇ ನಮಗೆ ಪ್ರಧಾನಕಾರ್ಯವು" ಎಂದನು. ಆದಕ್ಕಾ ಧೃಷ್ಟದ್ಯುಮ್ನನು "ಭೀಮಸೇನಾ! ನಿನ್ನ ಇಷ್ಟದಂ ತೆಯೇ ನಡೆಯುವೆನು. ನೀನು ನಿಶ್ಚಿಂತನಾಗಿ ಹೊರಡು. ಧೃಷ್ಟದ್ಯುಮ್ನ ನಾದ ನನ್ನನ್ನು ಕೊಂದಲ್ಲದೆ ದ್ರೋಣನು ಧರ್ಮರಾಜನನ್ನು ಎಂದಿಗೂ

ಹಿಡಿಯಲಾರನು. ಇದು ನಿಶ್ಚಯವು" ಎಂದನು. ಆಮೇಲೆ ಭೀಮನು ಧರ್ಮರಾಜನನ್ನು ಧೃಷ್ಟದ್ಯುಮ್ನನ ವಶಕ್ಕೊಪ್ಪಿಸಿ, ಅಮೇಲೆ ಅಣ್ಣನ ಪಾದಗಳನ್ನು ಹಿಡಿದು ನಮಸ್ಕರಿಸಿದನು. ಧರ್ಮರಾಜನು ಭೀಮನನ್ನಪ್ಪಿ ಕೊಂಡು ಅವನ ತಲೆಯನ್ನಾಘ್ರಾಣಿಸಿ, ಶುಭಾಶೀರ್ವಾದಗಳನ್ನು ಮಾಡಿ ದನು. ಆಮೇಲೆ ಭೀಮನು ಬ್ರಾಹ್ಮಣರಿಗೆ ನಮಸ್ಕರಿಸಿದನು. (ಅಗ್ನಿ, ಗೋವು, ಸುವರ್ಣ, ಗರಿಕೆ, ಗೋರೋಚನ, ಹಾಲು, ಅಕ್ಷತೆ, ಮೊಸರು,) ಎಂಬೀ ಎಂಟು ಬಗೆಯ ಮಂಗಳದ್ರವ್ಯಗಳನ್ನೂ ಸ್ಪರ್ಶಿಸಿದನು. ಕೈರಾತವೆಂಬ ಮಧುವನ್ನು ಪಾನಮಾಡಿದನು. ಆ ಮಧುಪಾನದಿಂದ ಇಮ್ಮಡಿಯಾದ ಬಲವನ್ನೂ, ಉತ್ಸಾಹವನ್ನೂ ಹೊಂದಿ, ಕೆಂಪೇರಿದ ಕಣ್ಣುಗಳಿಂದ ಕೂಡಿದ ವನಾಗಿ, ಬ್ರಾಹ್ಮಣರಿಂದ ಜಯಶಬ್ದಪೂರ್ವಕವಾದ ಸ್ವಸ್ತಿವಾಚನಗಳನ್ನು ಪಡೆದನು. ತನ್ನ ಬುದ್ಧಿಯು ತನ್ನ ಮುಂದಿನ ಜಯಕ್ಕೂ, ಆನಂದಕ್ಕೂ ಸೂಚಕವಾಗಿರುವುದನ್ನೂ, ತನಗೆ ಶುಭಸೂಚಕವಾಗಿ ಅನುಕೂಲವಾಯುವು ಬೀಸುತ್ತಿರುವುದನ್ನೂ ನೋಡಿ ಆನಂದಿತನಾದನು. ಯುದ್ಧಕವಚವನ್ನೂ, ಕೈಚೀಲವನ್ನೂ, ಗದೆಯನ್ನೂ, ಬಾಣಗಳನ್ನೂ ಸಿದ್ಧಪಡಿಸಿಕೊಂಡನು. ಕುಂಡಲಾಲಂಕೃತನಾಗಿ, ಎಲ್ಲಾ ಯುದ್ಧಸಾಮಗ್ರಿಗಳಿಂದ ತುಂಬಿದ ರಥವ ನ್ನೇರಿದನು. ಸುವರ್ಣಚಿತ್ರಿತವಾದ ಅವನ ಉಕ್ಕಿನ ಕವಚವು ಮಿಂಚಿನಿಂ ದೊಡಗೂಡಿದ ಕಾಲಮೇಘದಂತೆ ಶೋಭಿಸುತ್ತಿತ್ತು. ಹಳದಿ, ಕೆಂಪು, ಕಪ್ಪು ಬಿಳುಪು, ಮುಂತಾದ ಬೇರೆಬೇರೆ ಬಣ್ಣದ ಉಡುಪುಗಳಿಂದಲೂ, ಬೆಲೆಯುಳ್ಳ ಕಂಠಸೂತ್ರದಿಂದಲೂ ಅಲಂಕೃತನಾದ ಆತನು, ಇಂದ್ರಧನುಸ್ಸಿನಿಂದ ಕೂಡಿದ ಮಹಾಮೇಘದಂತೆ ತೋರುತ್ತಿದ್ದನು. ಹೀಗೆ ಭೀಮನು ಸಿದ್ಧನಾಗಿ ಹೊರ ಟಕೂಡಲೆ, ಅತ್ತಲಿಂದ ತ್ರೈಲೋಕ್ಯವನ್ನೂ ಕ್ಷೋಭಗೊಳಿಸುವಂತೆ ಶ್ರೀ ಕೃಷ್ಣನ ಪಾಂಚಜನ್ಯಘೋಷವು ಕಿವಿಗೆ ಬಿದ್ದಿತು. ಇದನ್ನು ಕೇಳಿ ಧರ್ಮ ರಾಜನು ಮತ್ತಷ್ಟು ಭಯಾಕುಲನಾಗಿ "ಭೀಮಸೇನಾ! ಅದೋ! ಕೇಳಿ ದೆಯಲ್ಲವೆ? ಭೂಮ್ಯಾಕಾಶಗಳನ್ನೆಲ್ಲ ಮೊಳಗಿಸುವಂತೆ ಶ್ರೀಕೃಷ್ಣನ ಶಂಖ ಧ್ವನಿಯು ಹೊರಡುತ್ತಿರುವುದು. ಅರ್ಜುನನಿಗೆ ನಿಜವಾಗಿಯೂ ವಿಪತ್ತು ಸಂಭವಿಸಿರಬೇಕು! ಆದುದರಿಂದಲೇ ಕೃಷ್ಣನು ತಾನಾಗಿಯೇ ಕೌರವರೊಡನೆ ಯುದ್ಧಮಾಡುತ್ತಿರುವನು. ಅಯ್ಯೋ! ತಾಯಿಯಾದ ಕುಂತಿಗೆ ಈ ಕೊನೆ

ಗಾಲದಲ್ಲಿ ಇಂತಹ ವ್ಯಸನವು ಬಂದೊದಗಬಹುದೆ? ದ್ರೌಪದಿಯೂ, ಸುಭ ದ್ರೆಯೂ ಇಂತಹ ವ್ಯಸನವನ್ನು ನೋಡಬೇಕಾಯಿತೆ? ಭೀಮಾ! ಹೇಗಾ ದರೂ ಆಗಲಿ! ನೀನು ಅಲ್ಲಿಗೆ ಹೊರಡು! ಬೇಗನೆ ಹೊರಡು! ಅರ್ಜುನ ನನ್ನು ಕಾಣದೆ ನನ್ನ ಮನಸ್ಸು ಮೋಹಾಕುಲವಾಗುತ್ತಿದೆ! ದಿಕ್ಕುವಿದಿ ಕ್ಕುಗಳೆಲ್ಲ ಈಗ ನನಗೆ ಕತ್ತಲೆಕವಿದಂತಾಗಿದೆ! ಆ ಸಾತ್ಯಕಿಯನ್ನು ಕಾಣದೆ ನನ್ನ ಮನಸ್ಸಿಗೆ ಮೂರ್ಛೆಬರುವಂತಿದೆ. ಹೊರಡು! ಬೇಗನೆ ಹೊರಡು" ಎಂದನು. ಒಡನೆಯೇ ಭೀಮನು ಉಡುವಿನ ಚರ್ಮದಿಂದ ಮಾಡಿದ ಕೈಚೀಲಗಳನ್ನು ಧರಿಸಿ, ಬಿಲ್ಲನ್ನು ಕೈಗೆತ್ತಿಕೊಂಡು ಹೊರಟನು. ತನ್ನ ಪ್ರಯಾಣಸೂಚಕವಾಗಿ ಜಯದುಂದುಭಿಯನ್ನು ಹೊಡೆಯಿಸಿ, ಶಂಖಧ್ವನಿ ಯನ್ನು ಮಾಡಿದನು. ಸಿಂಹನಾದವನ್ನು ಮಾಡಿದನು. ಬಾರಿಬಾರಿಗೂ ಧನು ಸ್ಸನ್ನು ಟಂಕಾರಮಾಡಿದನು. ಈ ಶಬ್ದಗಳಿಂದಲೂ, ತನ್ನ ಭಯಂಕರ ರೂಪದಿಂದಲೂ ಶತ್ರುವೀರರ ಮನಸ್ಸನ್ನು ನಡುಗಿಸುತ್ತ ಹೊರಟನು. ವಿಶೋಕನೆಂಬ ಸಾರಥಿಯಿಂದ ನಡೆಸಲ್ಪಟ್ಟ ರಥಾಶ್ವಗಳುಕೂಡ, ಉತ್ಸಾಹ ಧ್ವನಿಯನ್ನು ತೋರಿಸುತ್ತ ಮನೋವಾಯುವೇಗದಿಂದ ಓಡಿದುವು. ರಥಾ ರೂಢನಾದ ಭೀಮನು ತನಗಿದಿರಾದ ಶತ್ರುಗಳನ್ನು ಭೇದಿಸುತ್ತಲೂ, ಕತ್ತ ರಿಸುತ್ತಲೂ, ನಾಣನ್ನು ತೀಡುತ್ತಲೂ, ಮಿಡಿಯುತ್ತಲೂ ಕೌರವಸೈನ್ಯವ ನ್ನೆಲ್ಲ ಚದರಿಸುತ್ತ ಹೋದನು. ಕೆಲವು ಪಾಂಚಾಲ ಸೋಮಕಸೈನಿಕರು ಅವನಿಗೆ ಬೆಂಬಲವಾಗಿ ಹೊರಟರು. ಭೀಮನು ಹೀಗೆ ಬರುತ್ತಿರುವುದನ್ನು ನೋಡಿ ನಿನ್ನಕಡೆಯಲ್ಲಿ ಕೆಲವರು ಅವನನ್ನು ತಡೆಯುವುದಕ್ಕಾಗಿ ಸುತ್ತ ಲೂ ಮುತ್ತಿಕೊಂಡರು. ನಿನ್ನ ಮಕ್ಕಳಾದ ದುಶ್ಶಾಸನನು, ಚಿತ್ರಸೇನನು, ಕುಂಡಭೇದಿ, ವಿವಿಂಶತಿ, ದುರ್ಮುಖನು, ದುಸ್ಸಹನು, ವಿಕರ್ಣನು, ಶಲನು, ವಿಂದಾನುವಿಂದರು, ಸುಮುಖನು, ದೀರ್ಘಬಾಹು, ಸುದರ್ಶನನು, ಬೃಂದಾ ರಕನು, ಸುಹಸ್ತನು, ಸುಷೇಣನು, ದೀರ್ಘಲೋಚನನು, ಅಭಯನು, ರೌದ್ರಕರ್ಮನು, ಸುವರ್ಮನು, ದುರ್ವಿಮೋಚನನು, ಇವರೇ ಮೊದಲಾಗಿ ಇನ್ನೂ ಅನೇಕರಥಿಕರು, ತಮ್ಮತಮ್ಮ ಸೈನ್ಯಗಳೊಡಗೂಡಿ ಭೀಮನನ್ನು ಆವರಿಸಿಕೊಂಡರು. ಆದರೇನು? ಭೀಮನು ಧೈರ್ಯಗೆಡದೆ, ಸಿಂಹವು ಕ್ಷುದ್ರಮೃಗಗಳನ್ನು ಹೇಗೋ ಹಾಗೆ ಅವರನ್ನೆಲ್ಲ ಚದರಿಸಿ ಅಟ್ಟುತ್ತ

ಬಂದನು. ನಿನ್ನವರೂ ತಮ್ಮ ದಿವ್ಯಾಸ್ತ್ರಶಕ್ತಿಯನ್ನು ತೋರಿಸುತ್ತ, ಮೇಘಗಳು ಸೂರ್ಯನನ್ನು ಹೇಗೋ ಹಾಗೆ ಭೀಮಸೇನನನ್ನು ಮರೆಸಿದರು ಭೀಮನು ತನ್ನ ಬಾಣಗಳಿಂದ ಅವರ ರಥಗಳನ್ನೆಲ್ಲ ಮುಚ್ಚುತ್ತಿದ್ದನು. ನಿನ್ನ ಮಕ್ಕಳೊಡನೆ ಭೀಮನಿಗೆ ಪ್ರಬಲಯುದ್ಧವಾಯಿತು. ಆಗ ದುಶ್ಶಾಸನನು ಕೋಪದಿಂದ ಉಕ್ಕಿನ ರಥಶಕ್ತಿಯೆಂಬ ಆಯುಧವನ್ನು ಭೀಮನ ಮೇಲೆ ಪ್ರಯೋಗಿಸಿದನು. ಆ ಮಹಾಶಕ್ತಿಯನ್ನು ಭೀಮನು ನಡುದಾರಿಯಲ್ಲಿಯೇ ಎರಡು ತುಂಡಾಗಿ ಕಡಿದುಬಿಟ್ಟನು. ಇದು ನೋಡುವವರಿಗೆ ಆಶ್ಚರ್ಯವನ್ನುಂಟುಮಾಡಿತು. ಆಮೇಲೆ ಭೀಮನು ಕುಂಡಭೇದಿ, ಸುಷೇಷ, ದೀರ್ಘನೇತ್ರರೆಂಬ ಮೂವರನ್ನೂ, ಮೂರೇಬಾಣಗಳಿಂದ ಕೊಂದು ಕೆಡಹಿದನು. ಆಮೇಲೆ ಬೃಂದಾರಕನೆಂಬವನನ್ನು ನಿನ್ನ ಬೇರೆ ಮಕ್ಕಳ ಕಣ್ಣೆದಿರಾಗಿಯೇ ಹೊಡೆದುಕೆಡಹಿದನು. ಬೇರೆ ಮೂರು ಬಾಣಗಳಿಂದ ಅಭಯ, ರೌದ್ರಕರ್ಮ, ದುರ್ವಿಮೋಚನರೆಂಬವರನ್ನು ಕೊನೆಗಾಣಿಸಿಬಿಟ್ಟನು. ನಿನ್ನವರಿಗೆ ಮೇಲೆಮೇಲೆ ಕೋಪೋದ್ರೇಕವುಂಟಾಯಿತು. ಉಳಿದವರೆಲ್ಲರೂ ಭೀಮನ ಸೈನ್ಯಗಳನ್ನು ಸುತ್ತಿಮುತ್ತಿ ಆವರಿಸಿಕೊಂಡು, ಬೆಟ್ಟದಮೇಲೆ ಮಳೆಸುರಿದಂತೆ ಭೀಮನಮೇಲೆ ಬಾಣವರ್ಷಗಳನ್ನು ಕರೆದರು. ಆದರೇನು? ಆ ಬಾಣಗಳೆಲ್ಲ ಬೆಟ್ಟದಮೇಲೆ ಕಲ್ಲುಗಳನ್ನೆಸೆದಂತೆ ಭೀಮನ ಮೇಲೆ ವಿಫಲವಾದುವು. ಭೀಮನಿಗೆ ಲವಮಾತ್ರವೂ ಅದರಿಂದ ನೋವಾಗಲಿಲ್ಲ. ಆಮೇಲೆ ಭೀಮನು ವಿಂದಾನುವಿಂದರಿಬ್ಬರನ್ನೂ ಏಕಕಾಲದಲ್ಲಿ ಕೊಂದುಕೆಡಹಿದನು. ಆಮೇಲೆ ನಿನ್ನ ಮಗನಾದ ಸುವರ್ಮನನ್ನೂ, ಸುದರ್ಶನನನ್ನೂ ಲೀಲಾಮಾತ್ರದಿಂದ ನಗುತ್ತ ಕೊಂದುಕೆಡಹಿದನು. ಭೀಮನು ಸ್ವಲ್ಪಕಾಲದಲ್ಲಿಯೇ ನಿನ್ನಕಡೆಯ ರಥಸಮೂಹಗಳನ್ನೆಲ್ಲ ದಿಕ್ಕುದಿಕ್ಕಿಗೆ ಓಡುವಂತೆ ಮಾಡಿದನು. ಸಿಂಹಗರ್ಜನೆಯನ್ನು ಕೇಳಿದ ಮೃಗಗಳಂತೆ ಭೀಮನ ರಥಘೋಷವನ್ನು ಕೇಳಿದಾಗಲೇ ನಿನ್ನ ಸೈನಿಕರೆಲ್ಲ ಭಯಪಟ್ಟು ಓಡಲಾರಂಭಿಸಿದರು. ಆಗಲೂ ಬಿಡದೆ ಭೀಮನು ಅವರನ್ನು ಬೆನ್ನಟ್ಟಿ ಕೊಲ್ಲುತ್ತಿದ್ದನು. ಹೀಗೆ ಭೀಮನು ನಿನ್ನವರಲ್ಲಿ ಅನೇಕರನ್ನು ಕೊಂದು, ಅನೇಕರನ್ನು ಹೊಡೆದೋಡಿಸಿ, ಆಗಾಗ ಸಿಂಹನಾದಗಳನ್ನು ಮಾಡುವನು! ತೋಳುಗಳನ್ನು ತಟ್ಟುವನು! ನಾಣನ್ನು ತೀಡುವನು! ಹೀಗೆ ಭೀಮನು

ಮುಂದೆ ಸಾಗುತ್ತಿರುವಾಗ, ದ್ರೋಣನು ಆತುರದಿಂದ ಬಂದು ಅವನನ್ನು ತಡೆದನು. ಸಮುದ್ರವೇಗವನ್ನು ಅದರ ವೇಲೆಯು ಹೇಗೋ ಹಾಗೆ, ದ್ರೋಣನು ಭೀಮನನ್ನು ತಡೆದು ನಿಲ್ಲಿಸಿ, ಅವನ ರಥರಥಾಶ್ವಸಾರಥಿಗಳೊಡನೆ ಅವನನ್ನು ಕಣ್ಣಿಗೆ ಬೀಳದಂತೆ ಬಾಣಗಳಿಂದ ಮುಚ್ಚಿಬಿಟ್ಟನು. ಇದು ಜನರಿಗೆ ಆಶ್ಚರ್ಯಕರವಾಯಿತು. ಆಮೇಲೆ ಭೀಮನ ಹಣೆಗೆ ಒಂದು ಬಾಣವನ್ನು ನಾಟಿದನು. ಅದರಿಂದ ಭೀಮನು ಮೇಲುಮುಖವಾಗಿ ಕಿರಣಗಳನ್ನು ಪ್ರಸರಿಸುತ್ತಿರುವ ಸೂರ್ಯನಂತೆ ಕಾಣಿಸಿದನು. ಆಮೇಲೆ ದ್ರೋಣನು ಭೀಮನೂ ಅರ್ಜುನನಂತೆಯೇ ತನ್ನನ್ನು ಗುರುಭಾವದಿಂದ ಕಂಡು ಪೂಜಿಸುವನೆಂದು ಭಾವಿಸಿ, ಆ ಭೀಮನನ್ನು ಕುರಿತು "ವತ್ಸ ಭೀಮಸೇನಾ! ಶತ್ರುವಾದ ನನ್ನನ್ನು ಜಯಿಸದೆ ನೀನು ಈ ಸೈನ್ಯವನ್ನು ಪ್ರವೇಶಿಸಲಾರೆ" ಎಂದನು. ಈ ಮಾತನ್ನು ಕೇಳಿ ಭೀಮನು ಕೋಪದಿಂದ ಬುಸುಗುಟ್ಟುತ್ತ ಕೆಂಪೇರಿದ ಕಣ್ಣುಗಳೊಡನೆ "ಓ ಬ್ರಹ್ಮಬಂಧೂ! ಅರ್ಜುನನು ನಿನ್ನ ಸಮ್ಮತಿಯಿಂದಲೇ ಈ ರಣಾಂಗಣವನ್ನು ದಾಟಿ ಶತ್ರುಸೈನ್ಯವನ್ನು ಪ್ರವೇಶಿಸಿದನೆಂದು ತಿಳಿಯಬೇಡ! ಅವನನ್ನು ತಡೆಯಲು ಯಾರಿಗೂ ಸಾಧ್ಯವಲ್ಲ! ಅವನು ಸ್ವಪ್ರಯತ್ನದಿಂದಲೇ ಇಂದ್ರಸೈನ್ಯವನ್ನಾದರೂ ಪ್ರವೇಶಿಸಬಲ್ಲನು. ಅವನು ಗುರುಭಾವದಿಂದ ನಿನ್ನನ್ನು ಪೂಜಿಸಿರಬಹುದು! ಅವನಿಂದ ನೀನು ವಿಶೇಷವಾಗಿ ಗೌರವಿಸಲ್ಪಟ್ಟಿರಬಹುದು. ನಾನೇನೂ ಅರ್ಜುನನಲ್ಲ! ನನಗೆ ಆ ಮೃದುತ್ವವೂ ಇಲ್ಲ. ಓ ಬ್ರಾಹ್ಮಣಾ! ನಾನು ನಿನ್ನ ಶತ್ರುವಾದ ಭೀಮಸೇನನೆಂದು ತಿಳಿ! ಆದರೆ "ನಮಗೆ ನೀನೇ ತಂದೆ! ನೀನೇ ಬಂಧು! ನೀನೇ ಗುರು! ನಾವೆಲ್ಲರೂ ನಿನ್ನ ಮಕ್ಕಳು!" ಎಂಬ ಭಾವದಿಂದಲೇ ನಿನ್ನಲ್ಲಿ ನಾವೆಲ್ಲರೂ ವಿನೀತರಾಗಿದ್ದೆವು. ಈಗ ನಿನ್ನ ಮಾತಿನಿಂದಲೇ ಅದು ಮಾರ್ಪಟ್ಟಂತೆ ಕಾಣುವುದು. ನೀನು ನನ್ನನ್ನು ಶತ್ರುವೆಂದು ಕರೆದೆಯಲ್ಲವೆ? ಅದು ಹಾಗೆಯೇ ಆಗಲಿ! ನಿನ್ನ ಶತ್ರುವು ಮಾಡತಕ್ಕ ಕಾರ್ಯವನ್ನೇ ಈ ಭೀಮಸೇನನು ನಿನ್ನಲ್ಲಿ ನಡೆಸುವನು ನೋಡು" ಎಂದನು. ಮಹಾರಾಜಾ! ಈ ಮಾತನ್ನು ಹೇಳಿ ಮುಗಿಸುವಷ್ಟರಲ್ಲಿಯೇ ಭೀಮನು ಕಾಲದಂಡಕ್ಕೆ ಸಮಾನವಾದ ಗದೆಯನ್ನೆತ್ತಿ, ಗಿರಗಿರನೆ ತಿರುಗಿಸಿ, ಅದನ್ನು ದ್ರೋಣನ ರಥದಮೇಲೆ ಬೀಸಿದನು. ಆ ಗದೆಯಿಂದ ದ್ರೋಣನ ರಥವು

ರಥಾಶ್ವ ಸಾರಥಿಧ್ವಜಗಳೊಡನೆ ಪುಡಿಪುಡಿಯಾಗಿ ಬಿದ್ದಿತು. ಅಷ್ಟರಲ್ಲಿಯೇ ದ್ರೋಣನು ರಥದಿಂದ ಕೆಳಕ್ಕೆ ಹಾರಿ ತನ್ನ ಅಪಾಯವನ್ನು ತಪ್ಪಿಸಿಕೊಂಡನು. ಆಗ ನಾವು ಭೀಮನ ಅದ್ಭುತಪರಾಕ್ರಮವನ್ನು ಕಂಡೆವು. ಭೀಮನು ದ್ರೋಣನನ್ನು ವಿರಥನನ್ನಾಗಿ ಮಾಡಿ, ಕುರುಸೈನ್ಯಗಳನ್ನೆಲ್ಲ ನಾನಾಕಡೆಗಳಲ್ಲಿ ಒಡಿದೋಡಿಸುತ್ತಿದ್ದನು. ಬಿರುಗಾಳಿಯ ವೇಗಕ್ಕೆ ಮುರಿದುಬೀಳುವ ಮರಗಳಂತೆ ಅನೇಕಯೋಧರು ಸತ್ತುಬಿದ್ದರು. ಭೀಮನು ರಣಾಂಗಣದಲ್ಲಿ ವಾಯುವೇಗದಿಂದ ಸಂಚರಿಸುತ್ತಿದ್ದನು. ದ್ರೋಣನು ಅವನಿಂದ ಪರಾಜಿತನಾಗಿ ಬೇರೊಂದು ರಥವನ್ನೇರಿ ಕುಳಿತನು.

ಇದು ನೂರಇಪ್ಪತ್ತೇಳನೆಯ ಅಧ್ಯಾಯವು.

ಭೀಮನು ದ್ರೋಣನ ರಥವನ್ನು ಮುರಿದು ಮುಂದೆ ಹೋಗಿ, ಅರ್ಜುನನನ್ನು ಕಂಡೊಡನೆ ಸಿಂಹನಾದವನ್ನು ಮಾಡಿದುದು. ಅದನ್ನು ಕೇಳಿ ಯುಧಿಷ್ಠಿರನು ಹರ್ಷಿತನಾದುದು.

ಮಹಾರಾಜಾ! ಭೀಮನು ಹೀಗೆ ನಿನ್ನಕಡೆಯ ರಥಸೈನ್ಯಗಳನ್ನೆಲ್ಲ ದಾಟಿಕೊಂಡು ಹೋಗುತ್ತಿರುವುದನ್ನು ನೋಡಿ, ದ್ರೋಣನು ನಗುತ್ತ ಅವನನ್ನು ತಡೆಯಬೇಕೆಂದು ಬಾಣವರ್ಷಗಳನ್ನು ಕರೆದನು. ಭೀಮನು ಆ ದ್ರೋಣನ ಬಾಣಗಳನ್ನೆಲ್ಲ ತಾನು ಕುಡಿದುಬಿಡುವಂತೆ ನಿಗ್ರಹಿಸಿ, ತನ್ನ ಬಲಾತಿಶಯದಿಂದ ನಿನ್ನ ಮಕ್ಕಳನ್ನೆಲ್ಲ ಮೋಹಗೊಳಿಸುತ್ತ ಮುಂದುವರಿಯುತ್ತಿದ್ದನು. ಇಷ್ಟರಲ್ಲಿ ನಿನ್ನ ಮಕ್ಕಳಿಂದ ಪ್ರೇರಿತರಾದ ಅನೇಕ ಧನುರ್ಧಾರಿಗಳು ಭೀಮನನ್ನು ಮುತ್ತಿಕೊಂಡರು. ಭೀಮನು ನಗುತ್ತಿರುವವನಂತೆಯೇ ತನ್ನ ಮಹಾಗದೆಯನ್ನೆತ್ತಿ ತಿರುಗಿಸುತ್ತ, ಕೋಪದಿಂದಲೇ ಶತ್ರುಗಳನ್ನೆಲ್ಲ ದಹಿಸುವಂತೆ ದುರದುರನೆ ನೋಡಿ, ಗದೆಯನ್ನು ವೇಗದಿಂದ ಬೀಸಿದನು. ಇಂದ್ರಪ್ರೇರಿತವಾದ ವಜ್ರಾಯುಧದಂತೆ ಆ ಗದೆಯು ಮಹಾಘೋಷದಿಂದ ಭೂಮಿಯನ್ನೆಲ್ಲ ಮೊಳಗಿಸುತ್ತಬಂದು, ನಿನ್ನ ಸೈನ್ಯದಲ್ಲಿ ಬಿದ್ದು ಅನೇಕರನ್ನು ಕೊಂದಿತು. ತೇಜಸ್ಸಿನಿಂದ ಜ್ವಲಿಸುವಂತೆ ಬರುತ್ತಿರುವ

ಆ ಗದೆಯನ್ನು ನೋಡಿದಾಗಲೇ ನಿನ್ನವರನೇಕರು ದೀನಧ್ವನಿಯಿಂದ ಕೂಗುತ್ತ ಓಡಿಹೋದರು. ಕೆಲವರು ಆ ಭೀಮನ ಸಿಂಹನಾದಧ್ವನಿಗೆ ಹೆದರಿ ಮೂರ್ಛಿತರಾಗಿ ಕೆಳಗೆ ಬಿದ್ದರು. ಅನೇಕರಥಿಕರು ರಥದಿಂದ ಕೆಳ ಕ್ಕುರುಳಿದರು. ಹುಲಿಯನ್ನು ಕಂಡ ಮೃಗಗಳಂತೆ ಅನೇಕರು ಓಡಿಹೋ ದರು. ಹೀಗೆ ಆ ಕುಂತೀಕುಮಾರನು ನಿನ್ನವರನ್ನೆಲ್ಲ ಓಡಿಸುತ್ತ, ಪಕ್ಷಿ ರಾಜನಾದ ಗರುಡನಂತೆ ವೇಗದಿಂದ ನಿನ್ನ ಸೈನ್ಯವನ್ನು ದಾಟಿ ಮುಂದೆ ಸಾಗುತ್ತಿದ್ದನು. ಹೀಗೆ ಭೀಮನು ನಿನ್ನಕಡೆಯ ಮುಖ್ಯಮುಖ್ಯ ರಥಿಕರ ನ್ನೆಲ್ಲ ಜಯಿಸಿ ಮುಂದೆ ಸಾಗುತ್ತಿರುವುದನ್ನು ನೋಡಿ, ದ್ರೋಣನು ಸಹಿ ಸಲಾರದೆ ಅತಿತೀವ್ರಬಾಣಗಳಿಂದ ಅವನನ್ನು ತಡೆದು, ಪಾಂಡವಸೈನ್ಯ ಕ್ಕೆಲ್ಲ ಭಯವುಂಟಾಗುವಂತೆ ಸಿಂಹನಾದವನ್ನು ಮಾಡಿದನು. ಆಗ ಭೀಮ ದ್ರೋಣರಿಬ್ಬರಿಗೂ ದೇವಾಸುರಯುದ್ಧದಂತೆ ತೀವ್ರಯುದ್ಧವಾಯಿತು. ದ್ರೋಣನ ಬಾಣಗಳಿಂದ ತನ್ನಕಡೆಯ ಅನೇಕವೀರರು ಹತರಾಗುತ್ತಿರು ವುದನ್ನು ನೋಡಿ ಭೀಮನು ಥಟ್ಟನೆ ರಥದಿಂದ ಕೆಳಕ್ಕೆ ಹಾರಿ, ಕಣ್ಣನ್ನು ಮುಚ್ಚಿಕೊಂಡು ತಲೆಯನ್ನು ಒಂದು ಪಕ್ಕದ ಭುಜದಕಡೆಗೆ ಬಾಗಿಸಿ, ಕೈಗ ಳೆರಡನ್ನೂ ಎದೆಯಮೇಲೆ ಬಿಗಿಯಾಗಿ ಅಪ್ಪಿಕೊಂಡು ಅತಿವೇಗದಿಂದ ಕಾಲ್ನ ಡೆಯಿಂದಲೇ ಮುಂದೆ ಹೋದನು. ಮಹಾವೃಷಭವು ದೊಡ್ಡ ವರ್ಷಧಾ ರೆಯನ್ನು ಹೇಗೋ ಹಾಗೆ ತನ್ನಮೇಲೆ ಬೀಳುತ್ತಿರುವ ದ್ರೋಣನ ಬಾಣ ಗಳಿಗೆ ಅಲಕ್ಷ್ಯವಾಗಿ ಮೈಯೊಡ್ಡುತ್ತ ಓಡಿಬಂದು, ದ್ರೋಣನರಥದ ಮೂಕಿ ಯನ್ನು ಕೈಯಿಂದ ಹಿಡಿದು ಮೊತ್ತಕ್ಕೆ ರಥವನ್ನೆತ್ತಿ ದೂರಕ್ಕೆ ಬಿಸುಟನು. ಹೀಗೆ ಭೀಮನು ದ್ರೋಣಸಹಿತವಾಗಿ ಅವನ ರಥವನ್ನು ಕೈಯಿಂದೆತ್ತಿ ದೂರಕ್ಕೆಸೆದುದನ್ನು ನಿಮ್ಮವರೆಲ್ಲರೂ ಅತ್ಯಾಶ್ಚರ್ಯದಿಂದ ನೋಡುತ್ತಿದ್ದರು. ದ್ರೋಣನ ರಥವು ಕೆಳಗೆ ಬಿದ್ದು ಪುಡಿಪುಡಿಯಾಯಿತು. ಅದು ಕೆಳಗೆ ಬೀಳುವಷ್ಟರಲ್ಲಿಯೇ ದ್ರೋಣನು ಬೇರೊಂದು ರಥವನ್ನೇರಿ ತಿರುಗಿ ತಾನು ಮೊದಲಿದ್ದ ವ್ಯೂಹದ್ವಾರದಕಡೆಗೆ ಹೊರಟನು. ಹೀಗೆ ದ್ರೋಣನು ಉತ್ಸಾ ಹಭಂಗದಿಂದ ಬೇರೆ ರಥವನ್ನೇರಿ ಹೋಗುತ್ತಿರುವುದನ್ನು ನೋಡಿ, ಭೀಮ ನು ತಿರುಗಿ ಅವನನ್ನು ಬೆನ್ನಟ್ಟಿ, ಅವನು ಕುಳಿತಿದ್ದ ರಥದ ಮೂಕಿಯನ್ನು ಹಿಡಿದು ಮೇಲಕ್ಕೆತ್ತಿ ಕೋಪದಿಂದ ಬಿಸುಟನು. ದ್ರೋಣನು ತಿರುಗಿ

ಮತ್ತೊಂದು ರಥವನ್ನೇರಿ ಹೊರಟನು. ಅದನ್ನೂ ಭೀಮನು ಹಾಗೆಯೇ ಎತ್ತಿಬಿಸುಟನು. ಹೀಗೆ ದ್ರೋಣನ ಎಂಟು ರಥಗಳನ್ನು ಭೀಮನು ಮುರಿದುಕೆಡಹಿದನು. ಒಂದೊಂದು ನಿಮಿಷಕಾಲದಲ್ಲಿ ಭೀಮನು ದ್ರೋಣನ ರಥವನ್ನು ಮುರಿದುಬಂದು, ತನ್ನ ರಥವನ್ನೇರಿ ಕುಳ್ಳಿರುವುದನ್ನು ನೋಡಿ ನಿನ್ನವರೆಲ್ಲ ಆಶ್ಚರ್ಯದಿಂದ ಸ್ತಬ್ಧರಾಗಿದ್ದರು. ಇದೇಸಮಯದಲ್ಲಿ ಭೀಮನ ಸಾರಥಿಯು ವೇಗದಿಂದ ಕುದುರೆಗಳನ್ನೋಡಿಸಿ ಮುಂದೆ ಹೋದನು. ಇದೂ ನೋಡುವವರಿಗೆ ಆಶ್ಚರ್ಯಕರವಾಯಿತು. ಭೀಮನು ರಥಾರೂಢನಾಗಿ ನಿನ್ನ ಮಗನ ಸೈನ್ಯದೊಳಗೆ ಪ್ರವೇಶಿಸಿದನು. ನದೀಪ್ರವಾಹವು ವೃಕ್ಷಗಳನ್ನು ಹೇಗೋ ಹಾಗೆ ಭೀಮನು ನಿನ್ನಕಡೆಯ ಅನೇಕಕ್ಷತ್ರಿಯರನ್ನು ಕೆಡಹುತ್ತ, ಕೃತವರ್ಮನಿಂದ ರಕ್ಷಿತವಾದ ಭೋಜಸೈನ್ಯವನ್ನು ಪ್ರವೇಶಿಸಿದನು. ಆ ಸೈನ್ಯವನ್ನೂ ಲೀಲಾಮಾತ್ರದಿಂದಲೇ ಜಯಿಸಿ, ಮುಂದೆ ಹೊರಟನು. ಅವನ ತಲಶಬ್ದದಿಂದಲೇ ಅನೇಕರು ಹೆದರಿ ಪಲಾಯನಮಾಡಿದರು. ಹುಲಿಯನ್ನು ಕಂಡ ಎತ್ತುಗಳಂತೆ ಅನೇಕರು ತಲೆತಪ್ಪಿಸಿಕೊಂಡು ಹೋದರು. ಹೀಗೆಯೇ ಭೋಜರು, ದರದರು, ಯುದ್ಧವಿಶಾರದರಾದ ಮ್ಲೇಚ್ಛಸೈನಿಕರು, ಇವರನ್ನೆಲ್ಲ ಜಯಿಸಿಕೊಂಡು ಭೀಮನು ಮುಂದೆ ಹೋಗಿ, ಅಲ್ಲಿ ಸಾತ್ಯಕಿಯು ಶತ್ರುಸೈನ್ಯದೊಡನೆ ಯುದ್ಧಮಾಡುತಿದ್ದುದನ್ನು ಕಂಡನು. ಆ ಸಾತ್ಯಕಿಯನ್ನು ಕಂಡಕೂಡಲೇ ಉತ್ಸಾಹದಿಂದ ಅವನಿಗೆ ಅರ್ಜುನನನ್ನೂ ನೋಡಬೇಕೆಂಬ ಆತುರವು ಹೆಚ್ಚಿತು. ತನಗಿದಿರಾದ ಅನೇಕ ಯೋಧರನ್ನು ಹೊಡೆದೋಡಿಸಿ, ಕೊನೆಗೆ ಮುಂದೆ ಶತ್ರುಗಳೊಡನೆ ಯುದ್ಧಮಾಡುತ್ತಿದ್ದ ಅರ್ಜುನನನ್ನೂ ಕಂಡನು. ಅಲ್ಲಿ ಸೈಂಧವವಧಕ್ಕಾಗಿ ಮುಂದುವರಿಯುತ್ತಿರುವ ಮಹಾರಥನಾದ ಅರ್ಜುನನನ್ನು ಕಂಡೊಡನೆ, ಭೀಮನು ತನ್ನ ಅಣ್ಣನ ಮಾತನ್ನು ನೆನೆಸಿಕೊಂಡು, ದೊಡ್ಡ ಸಿಂಹನಾದವನ್ನು ಮಾಡಿದನು. ವರ್ಷಾಕಾಲದಲ್ಲಿ ಮಹಾಮೇಘದ ಗರ್ಜನೆಯಂತಿರುವ ಆ ಭೀಮನ ಗರ್ಜನೆಯು ಅರ್ಜುನನ ಮತ್ತು ಕೃಷ್ಣನ ಕಿವಿಗೆ ಬಿದ್ದಿತು. ಭೀಮನ ಧ್ವನಿಯನ್ನು ಕೇಳಿದೊಡನೆ ಅತ್ತಲಾಗಿ ಕೃಷ್ಣಾರ್ಜುನರೂ ಸಂತೋಷದಿಂದ ಏಕಕಾಲದಲ್ಲಿ ಪ್ರತಿಸಿಂಹನಾದವನ್ನು ಮಾಡಿ ತಮಗೆ ಭೀಮನನ್ನು ನೋಡುವುದರಲ್ಲಿದ್ದ ಆತುರವನ್ನು ಸೂಚಿಸಿದರು. ಅತ್ತಲಾಗಿ ಭೀಮನೂ, ಇತ್ತ

ಲಾಗಿ ಕೃಷ್ಣಾರ್ಜುನರೂ ಮೇಲೆಮೇಲೆ ಪ್ರತಿಧ್ವನಿಗಳನ್ನು ಕೊಡುತ್ತ, ಒಬ್ಬರನ್ನೊಬ್ಬರು ಇದಿರಿಸಿಹೋದರು. ಈ ಮೂವರ ಸಿಂಹನಾದಗಳೂ ಒಂದಾಗಿ ಧರ್ಮರಾಜನ ಕಿವಿಗೆ ಬಿದ್ದಿತು ಅದನ್ನು ಕೇಳಿದೊಡನೆ ಧರ್ಮರಾಜನು ಪರಮಸಂತೋಷದಿಂದ "ಅರ್ಜುನನಿಗೆ ಜಯವಾಗಲಿ!" ಎಂದು ಹರಸಿದನು. ಭೀಮನ ಉತ್ಸಾಹಗರ್ಜನೆಯನ್ನು ಕೇಳಿ ಧರ್ಮರಾಜನು ಸಂತೋಷದಿಂದ ನಗುಮುಖವುಳ್ಳವನಾಗಿ ತನ್ನಲ್ಲಿತಾನೇ ಹೀಗೆಂದನು. "ಭೀಮಾ! ನೀನು ವಾಗ್ದಾನಮಾಡಿದಂತೆ ಗುರುವಾಕ್ಯವನ್ನು ನಡೆಸಿದೆ. ನಿನ್ನನ್ನು ದ್ವೇಷಿಸತಕ್ಕವರಿಗೆ ಎಂದಿಗೂ ಜಯವಿಲ್ಲ. ಭಾಗ್ಯವಶದಿಂದ ಧನಂಜಯನು ಜೀವಿಸಿರುವನು! ಸಾತ್ಯಕಿಯೂ ಕ್ಷೇಮದಿಂದಿರುವನು! ಕೃಷ್ಣಾರ್ಜುನರ ಗರ್ಜನೆಗಳು ಭಾಗ್ಯವಶದಿಂದ ನನ್ನ ಕಿವಿಗೆ ಬೀಳುವಂತಾಯಿತು. ಹಿಂದೆ ದೇವೇಂದ್ರನನ್ನು ಜಯಿಸಿ ಖಾಂಡವವನದಿಂದ ಅಗ್ನಿಯನ್ನು ತೃಪ್ತಿಗೊಳಿಸಿದ ಶತ್ರುಸಂಹಾರಕನಾದ ಪಾರ್ಥನು ಭಾಗ್ಯವಶದಿಂದ ಬದುಕಿರುವನು. ನಮ್ಮ ಬದುಕಿಗೆ ಮುಖ್ಯಾಶ್ರಯನಾದ ಆ ಸವ್ಯಸಾಚಿಯು ಬದುಕಿರುವುದು ನಮ್ಮ ಭಾಗ್ಯವು! ದೇವತೆಗಳಿಗೂ ದುರ್ಜಯರಾದ ನಿವಾತಕವಚರನ್ನು ತನ್ನ ಒಂದೇ ಧನುಸ್ಸಿನಿಂದ ಜಯಿಸಿದ ಆ ಪಾರ್ಥನು ಬದುಕಿರುವುದು ನಮ್ಮ ಭಾಗ್ಯವು. ಹಿಂದೆ ವಿರಾಟನಗರದಲ್ಲಿ ಗೋಗ್ರಹಣಕ್ಕಾಗಿ ಬಂದ ಕೌರವರನ್ನು ಯಾವನು ಜಯಿಸಿದನೋ, ಆ ಪಾರ್ಥನು ಬದುಕಿರುವುದು ನಮ್ಮ ಭಾಗ್ಯವು! ಯಾವನು ತನ್ನ ಭುಜವೀರ್ಯದಿಂದ ಹದಿನಾಲ್ಕು ಸಾವಿರಮಂದಿ ಕಾಲಕೇಯರನ್ನೂ, ದುರ್ಯೋಧನನನ್ನು ಸೆರೆಹಿಡಿದಿದ್ದ ಚಿತ್ರಸೇನನೆಂಬ ಗಂಧರ್ವನನ್ನೂ ಜಯಿಸಿದನೋ, ಅಂತಹ ಫಲ್ಗುನನು ನಮ್ಮ ಭಾಗ್ಯದಿಂದ ಜೀವಿಸಿರುವನು. ಕಿರೀಟಿಯೆಂದೂ, ಶ್ವೇತಾಶ್ವನೆಂದೂ ಪ್ರಖ್ಯಾತನಾಗಿ, ಶ್ರೀಕೃಷ್ಣನನ್ನೇ ತನಗೆ ಸಾರಥಿಯನ್ನಾಗಿ ಇಟ್ಟುಕೊಂಡಿರುವ ನನ್ನ ಪ್ರಿಯಸಹೋದರನು ಭಾಗ್ಯವಶದಿಂದ ಬದುಕಿರುವನು. ತನ್ನ ಮಗನ ಕೊಲೆಯಿಂದುಂಟಾದ ಶೋಕವನ್ನು ತಡೆಯಲಾರದೆ ಜಯದ್ರಥನನ್ನು ತಾನು ಕೊಲ್ಲುವುದಾಗಿ ಅವನು ದುಸ್ಸಾಧ್ಯವಾದ ಪ್ರತಿಜ್ಞೆಯನ್ನು ಮಾಡಿಬಿಟ್ಟನು. ಆ ಧನಂಜಯನು ಸೈಂಧವನನ್ನು ಕೊಲ್ಲುವನೇ? ಈಗಿನ ಸೂರ್ಯಾಸ್ತಮಯದೊಳಗಾಗಿ ಶ್ರೀಕೃಷ್ಣನ ರಕ್ಷಣೆಯಿಂದ ಅವನು ತನ್ನ

ಪ್ರತಿಜ್ಞೆಯನ್ನು ಪೂರೈಸಿ, ನನ್ನ ಕಣ್ಣಿಗೆ ಕಾಣಿಸುವನೇ? ದುರ್ಯೋಧನನ ಹಿತದಲ್ಲಿಯೇ ನಿರತನಾದ ಆ ಸೀಂಧವನು ಅರ್ಜುನನಿಂದ ಹತನಾಗಿ ತನ್ನ ಶತ್ರುಗಳಿಗೆಲ್ಲ ಸಂತೋಷಕರನಾಗುವನೇ? ಮುಂದೆ ನಡೆಯುವ ಯುದ್ಧದಲ್ಲಿ ದುರ್ಯೋಧನನು ಭೀಮನಿಂದ ಹತರಾಗುವ ತನ್ನ ಸಹೋದರರನ್ನೆಲ್ಲ ನೋಡಿ, ಆಗಲಾದರೂ ಪಶ್ಚಾತ್ತಾಪದಿಂದ ನಮ್ಮೊಡನೆ ಶಾಂತಿಯನ್ನು ಬಯಸುವನೇ? ತನ್ನ ಕಡೆಯ ಇನ್ನೂ ಅನೇಕಮಹಾರಥರು ರಣಾಂಗಣದಲ್ಲಿ ಸತ್ತು ಬಿದ್ದಿರುವುದನ್ನು ನೋಡಿಯಾದರೂ ಮೂಢದುರ್ಯೋಧನನು ತನ್ನ ದುರ್ಬುದ್ಧಿಗಾಗಿ ಪಶ್ಚಾತ್ತಾಪಪಡುವನೇ? ಆ ಭೀಷ್ಮನೊಬ್ಬನ ಮರಣವೊಂದರೊಡನೆ ನಮ್ಮ ವೈರವು ತೀರಿಹೋಗಿ, ಉಳಿದವರನ್ನಾದರೂ ರಕ್ಷಿಸಿಕೊಳ್ಳುವದಕ್ಕಾಗಿ ದುರ್ಯೋಧನನು ನಮ್ಮೊಡನೆ ಸಂಧಿ ಮಾಡಿಕೊಳ್ಳುವನೇ?" ಎಂದು ಧರ್ಮರಾಜನು ವಿಧವಿಧವಾಗಿ ಮನಸ್ಸಿನಲ್ಲಿ ಚಿಂತಿಸಿ, ದುರ್ಯೋಧನನಿಗಾಗಿಯೇ ಕನಿಕರಪಡುತ್ತಿದ್ದನು. ಅತ್ತಲಾಗಿ ಯುದ್ಧವು ಭಯಂಕರವಾಗಿ ನಡೆಯುತ್ತಲೇ ಇದ್ದಿತು.

ಇದು ನೂರ ಇಪ್ಪತ್ತೆಂಟನೆಯ ಅಧ್ಯಾಯವು.



## ಭೀಮನು ಕರ್ಣನನ್ನು ಸೋಲಿಸಿ, ದುಶ್ಶಲನೆಂಬ ಧೃತರಾಷ್ಟ್ರ ಪುತ್ರನನ್ನು ಕೊಂದುದು.

ಈನಡುವೆ ಧೃತರಾಷ್ಟ್ರನು ಸಂಜಯನನ್ನು ಕುರಿತು "ಸಂಜಯಾ! ಭೀಮಸೇನನು ಮೇಘಧ್ವನಿಯಂತೆ ಉತ್ಸಾಹಘೋಷದಿಂದ ಮುಂದೆ ಬರುತ್ತಿರುವಾಗ, ನಮ್ಮ ಕಡೆಯ ವೀರರಲ್ಲಿ ಯಾರೂ ಅವನನ್ನು ತಡೆಯಲಿಲ್ಲವೆ? ಕೋಪಗೊಂಡ ಆ ಭೀಮನ ಮುಂದೆ ನಿಲ್ಲುವ ಸಮರ್ಥನು ಮೂರುಲೋಕದಲ್ಲಿಯೂ ಇಲ್ಲವೆಂದೇ ನನಗೆ ತೋರುವುದು! ದಂಡಪಾಣಿಯಾದ ಕಾಲಯಮನಂತೆ ಗದಾಧಾರಿಯಾಗಿ ನಿಂತ ಆ ಭೀಮನ ಮುಂದೆ ಯುದ್ಧಕ್ಕಾಗಿ ನಿಲ್ಲುವ ಮನುಷ್ಯನಾವನೂ ಈ ಲೋಕದಲ್ಲಿರುವಂತೆ ತೋರಲಿಲ್ಲ. ಆ ಭೀಮನೋ, ರಥದಿಂದಲೇ ರಥವನ್ನು ಬಡಿದು ಪುಡಿಮಾಡುವನು! ಆನೆ

ಯಿಂದ ಆನೆಯನ್ನು ಬಡಿದು ಕೊಲ್ಲುವನು. ಅವನಮುಂದೆ ಇಂದ್ರನಾದರೂ ಧೈರ್ಯದಿಂದ ಯುದ್ಧಕ್ಕೆ ನಿಲ್ಲುವನೇ? ಎಂದಿಗೂ ಇಲ್ಲಲಾರನು. ಹೀಗೆ ಕುಪಿತನಾಗಿ ನನ್ನ ಮಕ್ಕಳನ್ನೆಲ್ಲ ಕೊಲ್ಲಬೇಕೆಂದು ಬರುತ್ತಿರುವ ಆ ಭೀಮನನ್ನು ತಡೆದವರಾರು? ದುರ್ಯೋಧನನ ಹಿತಕ್ಕಾಗಿ ಯಾರು ತಮ್ಮ ಜೀವದಾಸೆಯನ್ನು ಬಿಟ್ಟು ಮುಂದೆ ಬಂದರು? ಭೀಮನೆಂಬ ದೊಡ್ಡ ಕಾಡುಗಿಚ್ಚು ನನ್ನ ಮಕ್ಕಳೆಂಬ ಒಣಹುಲ್ಲಿನ ಮೆದೆಯನ್ನು ದಹಿಸಬೇಕೆಂದು ಬರುತ್ತಿದ್ದಾಗ, ಅವನನ್ನು ಅಡ್ಡೈಸಿದವರಾರು? ಕಾಲಯಮನು ಪ್ರಜೆಗಳನ್ನು ಹೇಗೋ ಹಾಗೆ, ನನ್ನ ಮಕ್ಕಳನ್ನು ಕೊಲ್ಲಲು ಬಂದ ಭೀಮನನ್ನು ಧೈರ್ಯದಿಂದ ಆವರಿಸಿ ನಿಂತವರಾರು? ಸಂಜಯಾ! ನನಗೆ ಅರ್ಜುನನಿಂದಲೂ ಅಷ್ಟು ಭಯವಿಲ್ಲ! ಕೃಷ್ಣನಿಂದಲೂ ಅಷ್ಟು ಭಯವಿಲ್ಲ! ಸಾತ್ಯಕಿಯಿಂದಾಗಲಿ, ಅಗ್ನಿಪುತ್ರನೆನಿಸಿದ ಧೃಷ್ಟದ್ಯುಮ್ನನಿಂದಾಗಲಿ ನನಗೆ ಅಷ್ಟು ಭಯವಿಲ್ಲ. ನನಗೆ ಆ ಭೀಮನ ಭಯವೇ ಹೆಚ್ಚಾಗಿರುವುದು. ನನ್ನ ಪುತ್ರರನ್ನು ದಹಿಸಬೇಕೆಂದು ಬರುತ್ತಿರುವ ಭೀಮಾಗ್ನಿಯನ್ನು ನಂದಿಸಬಲ್ಲ ಶೂರರೊಬ್ಬರೂ ನಮ್ಮಲ್ಲಿರಲಿಲ್ಲವೆ?" ಎಂದನು.

ಅದಕ್ಕಾ ಸಂಜಯನು ಮಹಾರಾಜಾ! ಗರ್ಜಿಸುತ್ತ ಬರುವ ಭೀಮನನ್ನು ಪ್ರತಿಗರ್ಜನೆಯೊಡನೆ ಕರ್ಣನು ಇದಿರಿಸಿ ಬಂದು ತಡೆದನು. ಭೀಮನೊಡನೆ ಪ್ರಬಲಯುದ್ಧವನ್ನು ಮಾಡಿ ತನ್ನ ಪರಾಕ್ರಮವನ್ನು ತೋರಿಸಬೇಕೆಂದು ಕರ್ಣನು ತನ್ನ ಮಹಾಧನುಸ್ಸನ್ನು ಮಿಡಿಯುತ್ತ ಭೀಮನನ್ನಡ್ಡೈಸಿ ನಿಂತನು. ಅವನನ್ನು ಕಂಡೊಡನೆ ಭೀಮನು ಆಕ್ರೋಶದಿಂದ ತೀಕ್ಷ್ಣಬಾಣಗಳನ್ನು ಪ್ರಯೋಗಿಸಿದನು. ಪ್ರತಿಯಾಗಿ ಕರ್ಣನೂ ಬಾಣಗಳನ್ನು ಬಿಟ್ಟನು. ಭೀಮಕರ್ಣರ ಈ ಪ್ರಬಲಯುದ್ಧವನ್ನು ನೋಡುತ್ತಿದ್ದ ಜನರಿಗೆಲ್ಲ, ದೇಹವು ನಡುಗುವಂತಾಯಿತು. ರಥಿಕರು, ಗಜಯೋಧರು, ರಾವುತರು, ಇವರೆಲ್ಲರೂ ಕರ್ಣನ ತಲಶಬ್ದವನ್ನೂ, ಭೀಮನ ಸಿಂಹನಾದವನ್ನೂ ಕೇಳಿ ಭಯಗ್ರಸ್ತರಾದರು. ಅಲ್ಲಿದ್ದ ಕ್ಷತ್ರಿಯರು ಭೀಮನ ಧ್ವನಿಯಿಂದ ಭೂಮ್ಯಾಕಾಶಗಳೇ ಕಿತ್ತುಹೋಗುವುವೋ ಎಂದು ನೆನೆಸಿದರು. ಭೀಮನ ಗರ್ಜನೆಯನ್ನು ಕೇಳಿ ಭಯದಿಂದಕೆಲವರ ಕೈಯಲ್ಲಿದ್ದ ಧನುಸ್ಸು ಜಾರಿಬಿದ್ದಿತು.

ಇನ್ನು ಕೆಲವರಿಗೆ ಕೈಯಲ್ಲಿದ್ದ ಶಸ್ತ್ರಗಳು ಬಿದ್ದುಹೋದುವು. ಆನೆ ಕುದುರೆ ಮೊದಲಾದ ವಾಹನಗಳಿಗೆಲ್ಲ ಭಯದಿಂದ ಮಲಮೂತ್ರಗಳು ಸ್ರವಿಸಿದುವು. ಸೈನ್ಯಗಳಿಗೆಲ್ಲ ದಿಗ್ಭ್ರಮೆಹಿಡಿದಂತಾಯಿತು. ಆ ಸೈನ್ಯದ ಮುಂದೆ ಭಯಂಕರ ದುರ್ನಿಮಿತ್ತಗಳು ತಲೆದೋರಿದುವು. ಹದ್ದು, ಗಿಡುಗ, ಮೊದಲಾದ ಮಾಂಸಾಹಾರಿ ಪಕ್ಷಿಗಳು ಆಕಾಶವನ್ನು ಆವರಿಸಿಕೊಂಡುವು. ಕರ್ಣಭೀಮರ ಯುದ್ಧವು ಮೇಲೆಮೇಲೆ ಪ್ರಬಲವಾಯಿತು. ಕರ್ಣನು ಇಪ್ಪತ್ತು ಬಾಣಗಳಿಂದ ಭೀಮನನ್ನೂ, ಐದುಬಾಣಗಳಿಂದ ಅವನ ಸಾರಥಿಯನ್ನೂ, ಬಲವಾಗಿ ನೋಯಿಸಿದನು. ಆಗ ಭೀಮನು ಕರ್ಣನನ್ನು ನೋಡಿ ನಗುತ್ತ, ತನ್ನ ಹಸ್ತವೇಗದಿಂದ ಪರಂಪರೆಯಾಗಿ ಅರುವತ್ತುನಾಲ್ಕು ಬಾಣಗಳನ್ನು ಅವನಮೇಲೆ ಪ್ರಯೋಗಿಸಿದನು. ಕರ್ಣನು ತಿರುಗಿ ನಾಲ್ಕುಬಾಣಗಳನ್ನು ಬಿಟ್ಟನು. ಅವುಗಳನ್ನು ಭೀಮನು ಅರ್ಧದಾರಿಯಲ್ಲಿಯೇ ತುಂಡುಮಾಡಿದನು. ತಿರುಗಿ ಕರ್ಣನು ಅನೇಕಬಾಣಗಳಿಂದ ಭೀಮನನ್ನು ಮುಚ್ಚಿದನು. ಒಡನೆಯೇ ಭೀಮನು ಕರ್ಣನ ಬಿಲ್ಲನ್ನು ಮುಷ್ಟಿಭಾಗದಲ್ಲಿ ಕತ್ತರಿಸಿ, ಹಲವು ಬಾಣಗಳಿಂದ ಅವನನ್ನು ಹೊಡೆದನು. ಕೂಡಲೇ ಕರ್ಣನು ಬೇರೊಂದು ಬಿಲ್ಲನ್ನು ಎತ್ತಿಕೊಂಡು ನಾಣೇರಿಸಿ, ತೀಕ್ಷ್ಣಬಾಣಗಳನ್ನು ಬಿಡಲಾರಂಭಿಸಿದನು. ಭೀಮನು ಅತಿಕೋಪದಿಂದ ಮೂರುಬಾಣಗಳನ್ನು ಕರ್ಣನ ಎದೆಗೆ ವೇಗದಿಂದ ಹೊಡೆದನು. ಆ ಮೂರುಬಾಣಗಳೂ ಕರ್ಣನ ಎದೆಯಲ್ಲಿ ನಾಟಿ ನಿಲ್ಲಲು, ಅವನು ಮೂರುಶಿಖರಗಳುಳ್ಳ ಪರ್ವತದಂತೆ ಕಾಣಿಸಿದನು. ಬೆಟ್ಟದಿಂದ ಧಾತುಮಿಶ್ರವಾದ ಪ್ರವಾಹವು ಹರಿಯುವಂತೆ ಕರ್ಣನ ದೇಹದಿಂದ ರಕ್ತವು ಸುರಿಯುತ್ತಿತ್ತು. ಅದರಿಂದ ಕರ್ಣನಿಗೆ ದೇಹವು ಸ್ವಲ್ಪ ನಡುಗಿದಂತಾಯಿತು. ಆಗಲೂ ಅವನು ಕೂಡಲೇ ಚೇತರಿಸಿಕೊಂಡು, ಕಿವಿಯವರೆಗೆ ನಾಣನ್ನೆಳೆದು, ನೂರುಸಾವಿರಲೆಕ್ಕದಿಂದ ಭೀಮನಮೇಲೆ ಬಾಣಗಳನ್ನು ಬಿಟ್ಟನು. ಆ ಬಾಣಗಳಿಂದ ಭೀಮನು ಬಹಳವಾಗಿ ನೊಂದಿದ್ದರೂ, ಲಕ್ಷ್ಯಮಾಡದೆ, ತಿರುಗಿ ಒಂದು ಕ್ಷುರಾಯುಧದಿಂದ ಕರ್ಣನ ಕೈಯಲ್ಲಿದ್ದ ಬಿಲ್ಲಿನ ನಾಣನ್ನು ಕತ್ತರಿಸಿದನು. ಒಂದು ಭಲ್ಲದಿಂದ ಕರ್ಣನ ಸಾರಥಿಯನ್ನು ಕೊಂದುಕೆಡಹಿದನು. ಅವನ ನಾಲ್ಕು ರಥಾಶ್ವಗಳನ್ನೂ ವಧಿಸಿದನು. ತನ್ನ ರಥವು ವ್ಯರ್ಥವಾದುದನ್ನು ನೋಡಿ ಕರ್ಣನು

ಕೆಳಕ್ಕೆ ಹಾರಿ, ತನ್ನ ಮಗನಾದ ವೃಷಸೇನನ ರಥವನ್ನೇರಿಕೊಂಡು ಪ್ರಾಣ ಭಯದಿಂದ ಹಿಂತಿರುಗಿ ಓಡಿದನು. ಆಮೇಲೆ ಭೀಮನು ಕರ್ಣನನ್ನು ತಾನು ಜಯಿಸಿದ ಸಂತೋಷದಿಂದ ದೊಡ್ಡ ಸಿಂಹನಾದವನ್ನು ಮಾಡಿದನು. ಇದು ಅತ್ತಲಾಗಿ ಯುಧಿಷ್ಠಿರನ ಕಿವಿಗೆ ಬಿದ್ದಿತು. ಭೀಮನಿಂದ ಕರ್ಣನು ಪರಾಜಿತನಾದುದನ್ನು ತಿಳಿದು ಯುಧಿಷ್ಠಿರನು ಪರಮಹರ್ಷಿತನಾದನು. ಪಾಂಡವಸೇನೆಯೊಳಗೆಲ್ಲ ಶಂಖಧ್ವನಿಗಳು ಮೊಳಗಿದುವು. ಈ ಪಾಂಡವರ ಕೋಲಾಹಲವನ್ನು ಕೇಳಿ ನಿನ್ನ ಕಡೆಯ ಸೈನ್ಯಗಳು ಪ್ರತಿಘೋಷಗಳನ್ನು ಮಾಡಿತು. ಇತ್ತಲಾಗಿ ಯುಧಿಷ್ಠಿರನು ತನ್ನ ಸೈನ್ಯವನ್ನು ಪ್ರೋತ್ಸಾಹಿಸಿ, ಜಯಘೋಷಗಳನ್ನು ಮಾಡುವಂತೆ ಆಜ್ಞಾಪಿಸಿದನು. ಒಂದುಕಡೆ ಅರ್ಜುನನು ಗಾಂಡೀವದ ನಾಣನ್ನು ತಟ್ಟುವ ಧ್ವನಿ! ಇನ್ನೊಂದುಕಡೆ ಕೃಷ್ಣನ ಶಂಖಧ್ವನಿ! ಇವೆರಡನ್ನೂ ಮರೆಸುವಂತೆ ಜಯಶೀಲನಾದ ಭೀಮನ ಸಿಂಹನಾದಧ್ವನಿ! ಇವೆಲ್ಲ ಒಂದಾಗಿ ಸೇರಿ, ನಿನ್ನ ಸೈನ್ಯಗಳಿಗೆ ಭೀತಿ ಹುಟ್ಟುವಂತೆ ಪ್ರಬಲಘೋಷವುಂಟಾಯಿತು. ಆಮೇಲೆ ತಿರುಗಿ ಕರ್ಣನು ಭೀಮನನ್ನಿದಿರಿಸಿಬರಲು, ಇಬ್ಬರಿಗೂ ಯುದ್ಧವಾಯಿತು. ಕರ್ಣನು ಮೃದುವಾಗಿ ಬಾಣಗಳನ್ನು ಬಿಡುವನು. ಭೀಮನು ಒರಟಾಗಿ ಬಾಣಗಳನ್ನು ಬಿಡುವನು. ಕೊನೆಗೆ ದೈತ್ಯಸೈನ್ಯದಲ್ಲಿದ್ದ ತಾರಕನನ್ನು ಷಣ್ಮುಖನು ಹೇಗೋ ಹಾಗೆ ಭೀಮನು ಕರ್ಣನನ್ನು ಓಡಿಸಲು ಪ್ರಯತ್ನಿಸಿದನು. ಇಬ್ಬರಿಗೂ ಪ್ರಬಲಯುದ್ಧವಾಯಿತು. ಭೀಮನು ತಿರುಗಿ ಕರ್ಣನ ಸಾರಥಿಯನ್ನೂ, ಕುದುರೆಗಳನ್ನೂ ಕೊಂದನು. ಅವನ ಧ್ವಜಪತಾಕೆಗಳನ್ನು ಮುರಿದನು. ಅವನ ರಥವನ್ನು ಚೂರ್ಣಮಾಡಿದನು. ಅವನ ಚಕ್ರರಕ್ಷಕರಿಬ್ಬರನ್ನೂ ಕೊಂದನು. ವಿರಥನಾದ ಕರ್ಣನು ಕತ್ತಿಗುರಾಣಿಗಳನ್ನು ಹಿಡಿದು, ಭೀಮನನ್ನು ಕೊಲ್ಲುವುದಕ್ಕಾಗಿ ಓಡಿಬರಲು, ಭೀಮನು ತನ್ನ ಬಾಣದಿಂದ ಅವನ ಕೈಯಲ್ಲಿದ್ದ ಕತ್ತಿಗುರಾಣಿಗಳನ್ನೂ ತುಂಡುಮಾಡಿಕೆಡಹಿದನು. ಹೀಗೆ ಕರ್ಣನು ಭೀಮನಿಂದ ಅಪಾಯಕ್ಕೀಡಾಗುವ ಸಂಭವವನ್ನು ನೋಡಿ, ದುರ್ಯೋಧನನು ತನ್ನ ತಮ್ಮನಾದ ದುಶ್ಶಲನನ್ನು ಕರೆದು "ದುಶ್ಶಲಾ! ಅದೋ! ಕರ್ಣನು ಅಪಾಯಕ್ಕೀಡಾಗಿರುವುದನ್ನು ನೋಡು. ಬೇಗನೆ ಅವನಿಗೆ ವಾಹನವನ್ನೊದಗಿಸಿ ಹಿಂತಿರುಗಿಸು" ಎಂದನು. ಈ ಮಾತನು

ಕೇಳಿದೊಡನೆ ದುಶ್ಶಲನು ಕರ್ಣನಿದ್ದ ಸ್ಥಳಕ್ಕೆ ರಥವನ್ನು ತೆಗೆದುಕೊಂಡು ಹೋದನು. ಕರ್ಣನು ದುಶ್ಶಲನ ರಥವನ್ನೇರಿ ಕುಳಿತನು. ಇದನ್ನು ನೋಡಿ ಭೀಮನು ಅವರಿಬ್ಬರನ್ನೂ ಹತ್ತುಬಾಣಗಳಿಂದ ಹೊಡೆದು, ಕರ್ಣನನ್ನು ಬಹಳವಾಗಿ ನೋಯಿಸಿ, ದುಶ್ಶಲನ ತಲೆಯನ್ನು ಹಾರಿಸಿಬಿಟ್ಟನು. ದುಶ್ಶಲನು ಭೀಮನಿಂದ ಹತನಾದುದನ್ನು ನೋಡಿ, ಕರ್ಣನು ಅವನ ಕೈಯಲ್ಲಿದ್ದ ಬಿಲ್ಲನ್ನು ತಾನು ತೆಗೆದುಕೊಂಡು, ಭೀಮನಮೇಲೆ ಬಾಣಗಳನ್ನು ಬಿಡಲಾರಂಭಿಸಿದನು. ತಿರುಗಿ ಇಂದ್ರಬಲಾಸುರರಿಗೆ ನಡೆದ ಯುದ್ಧದಂತೆ ಇಬ್ಬರಿಗೂ ಪ್ರಬಲಯುದ್ಧವಾಯಿತು. ಭೀಮನು ತಿರುಗಿತಿರುಗಿ ಅವನ ಕುಮರೆಗಳನ್ನೂ, ಸಾರಥಿಯನ್ನೂ ಕೊಲ್ಲುತ್ತಾ ಬಂದನು. ಹೀಗೆ ಭೀಮನ ಪರಾಕ್ರಮವನ್ನು ನೋಡಿ, ನಿನ್ನ ಸಮಸ್ತಸೈನ್ಯವೂ, ಹಿಂದು ಮುಂದು ತೋರದೆ ದಿಗ್ಭ್ರಮೆಹಿಡಿದಂತಿದ್ದಿತು.

ಇದು ನೂರಿಪ್ಪತ್ತೊಂಭತ್ತನೆಯ ಅಧ್ಯಾಯವು.



## ದ್ರೋಣದುರ್ಯೋಧನರ ಸಂವಾದವು. ದುರ್ಯೋಧನನ ಯುದ್ಧವು.

ಮಹಾರಾಜಾ! ಭೀಮನಿಂದ ನಿನ್ನ ಸೈನ್ಯವೆಲ್ಲ ಚದರಿಸಲ್ಪಟ್ಟಿತು. ಅತ್ತಲಾಗಿ ಅರ್ಜುನನು ಸೈಂಧವನನ್ನು ಸಮೀಪಿಸುತ್ತ ಬಂದುಬಿಟ್ಟನು. ಸಾತ್ಯಕಿಭೀಮರಿಬ್ಬರೂ ಕಂಡಕಂಡ ಕಡೆಯಲ್ಲಿ ಕೌರವಸೈನ್ಯವನ್ನು ಕೊಲ್ಲುತ್ತ ಮುಂದೆಹೋಗುತ್ತಿದ್ದರು. ಇದನ್ನೆಲ್ಲ ನೋಡಿ, ನಿನ್ನ ಮಗನಾದ ದುರ್ಯೋಧನನು ಸೇನಾಪತಿಯಾದ ದ್ರೋಣನಲ್ಲಿ ಬಹುವಿಷಯಗಳನ್ನು ಆಲೋಚಿಸಬೇಕೆಂಬುದಕ್ಕಾಗಿ ಒಂದೇ ರಥದಿಂದ ಹೊರಟನು. ಆಗ ದುರ್ಯೋಧನನ ರಥವು ಕಾಣಿಸುದುದೆಲ್ಲಿ? ಹೋದುದೆಲ್ಲಿ? ಎಂಬುದೇ ತಿಳಿಯದಂತೆ ಮುಹೂರ್ತಮಾತ್ರದಲ್ಲಿ ದ್ರೋಣನಬಳಿಗೆ ಬಂದುಸೇರಿತು. ದ್ರೋಣನನ್ನು ಕಂಡೊಡನೆ ನಿನ್ನ ಮಗನು ಆತುರದಿಂದ "ಆಚಾರ್ಯ! ಅರ್ಜುನ ಭೀಮ ಸಾತ್ಯಕಿಗಳೀ ಮೂವರೂ, ನಮ್ಮ ದೊಡ್ಡ ಸೈನ್ಯಗಳ

ನ್ನೆಲ್ಲ ನಾಶಮಾಡಿಕೊಂಡು, ಸಿಂಧುರಾಜನನ್ನು ಸಮೀಪಿಸುತ್ತ ಬಂದರು. ಅವರನ್ನು ತಡೆಯಲು ಯಾರೂ ಸಮರ್ಥರಾಗಲಿಲ್ಲ. ಅವರು ಮುಂದೆ ಮುಂದೆ ಪರಾಜಯವಿಲ್ಲದೆ ನಿರಂಕುಶವಾಗಿ ಹೋಗುತ್ತಿರುವರು. ಬ್ರಾಹ್ಮಣೋತ್ತಮಾ! ಮಹಾರಥನೆನಿಸಿದ ಅರ್ಜುನನು ಒಂದುವೇಳೆ ತನ್ನ ಪರಾಕ್ರಮದಿಂದ ನಿನ್ನನ್ನು ಮೀರಿ ಮುಂದೆಹೋಗಿರಬಹುದು. ಆ ಭೀಮನೂ ಸಾತ್ಯಕಿಯೂ ನಿನ್ನನ್ನು ದಾಟಿಕೊಂಡುಹೋದುದು ಹೇಗೆ? ಹೇಗೆತಾನೇ ನೀನು ಅವರಿಂದ ಪರಾಭವಿಸಲ್ಪಟ್ಟೆಯೋ ತಿಳಿಯದು! ಸಾಗರವೇ ಶೋಷಿಸಿ ಹೋದಂತೆ ಇದು ಲೋಕಕ್ಕೆಲ್ಲ ಆಶ್ಚರ್ಯವನ್ನುಂಟುಮಾಡುತ್ತಿದೆ. ಅರ್ಜುನನು, ಭೀಮನು, ಸಾತ್ಯಕಿ, ಈ ಮೂವರಿಗೂ ನೀನು ಸೋತೆಯೆಂದರೆ, ಅದು ಲೋಕದಲ್ಲಿ ನಿನಗೆ ದೊಡ್ಡ ಅಪವಾದಕ್ಕೆ ಕಾರಣವಾಗಿರುವುದು. "ಧನುರ್ವೇದದಲ್ಲಿ ಪಾರಂಗತನೆನಿಸಿಕೊಂಡ ದ್ರೋಣನು ಯುದ್ಧದಲ್ಲಿ ಹೇಗೆತಾನೇ ಪರಾಜಿತನಾಗುವನು?" ಎಂದು ನಮ್ಮ ಯೋಧರೆಲ್ಲರೂ ಆಡಿಕೊಳ್ಳುತ್ತಿರುವರು. ಕೆಲವರಿಗೆ ಈ ಮಾತಿನಲ್ಲಿ ನಂಬಿಕೆಯೇ ಇಲ್ಲದಂತಿದೆ. ಆಚಾರ್ಯಾ! ಆ ಮೂವರೂ, ಪುರುಷಶ್ರೇಷ್ಠನೆನಿಸಿದ ನಿನ್ನನ್ನು ಜಯಿಸಿಕೊಂಡು ಹೋದಮೇಲೆ, ದುರ್ಭಾಗ್ಯನಾದ ನನಗೆ ಇದು ನಾಶಕಾಲವೆಂದು ಹೇಳಬೇಕಲ್ಲದೆ ಬೇರೇನೂ ಇಲ್ಲ" ಎಂದನು. ಆಗ ದ್ರೋಣನು "ದುರ್ಯೋಧನಾ! ಈಗಿನ ಕಾರ್ಯವೇನೋ ಈ ರೀತಿಯಾಗಿ ಪರಿಣಮಿಸಿತು. ಈಗ ನಿನ್ನ ಉದ್ದೇಶವೇನೆಂಬುದನ್ನು ತಿಳಿಸು. ನಡೆದುದು ನಡೆದುಹೋಯಿತು. ಮುಂದಿನ ವಿಷಯವನ್ನು ಆಲೋಚಿಸು" ಎಂದನು. ಅದಕ್ಕಾ ದುರ್ಯೋಧನನು "ಈಗ ಆಲೋಚಿಸಬೇಕಾದುದೇನಿದೆ? ಸಿಂಧುರಾಜನನ್ನು ರಕ್ಷಿಸಿಕೊಳ್ಳುವ ಪ್ರಯತ್ನವೇನೋ ಅದೇ ಈಗ ನಮಗೆ ಕಾಲೋಚಿತವಾದ ಕಾರ್ಯವು. ಅದಕ್ಕೆ ತಕ್ಕ ಉಪಾಯವನ್ನು ಯೋಚಿಸಿ, ತಕ್ಕ ಕಾರ್ಯವನ್ನು ಬೇಗನೆ ನಡೆಸು" ಎಂದನು. ಅದಕ್ಕಾ ದ್ರೋಣನು "ಕುಮಾರಾ! ಈ ವಿಷಯದಲ್ಲಿ ನಾವು ಹಲವು ಸಂಗತಿಗಳನ್ನು ಆಲೋಚಿಸಬೇಕಾದೆ. ಈಗ ನಾವು ಮಾಡಬೇಕಾದ ಅವಶ್ಯಕಾರ್ಯವೇನೋ ಅದನ್ನು ತಿಳಿಸುವೆನು ಕೇಳು! ಮಹಾರಥರಾದ ಅರ್ಜುನ ಭೀಮ ಸಾತ್ಯಕಿಗಳೆಂಬ ಮೂವರೂ ನನ್ನನ್ನು ದಾಟಿ ಹೋಗಿಬಿಟ್ಟರು. ಆದರೆ ಇತ್ತಲಾಗಿ ಅವರಹಿಂದೆ ನಾವು ಎಷು

ಭಯಪಡಬೇಕಾಗಿರುವುದೋ, ಅವರ ಮುಂಭಾಗದಲ್ಲಿ ನಮಗಿರತಕ್ಕ ಭಯವೂ ಅಷ್ಟೇ! ಆದರೂ, ಕೃಷ್ಣಾರ್ಜುನರಿಬ್ಬರೂ, ಸೇರಿರುವ ಕಡೆಯಲ್ಲಿ ನಾವು ಹೆಚ್ಚು ಭಯಪಡಬೇಕಾಗಿದೆ. ನಮ್ಮ ಕೌರವಸೈನ್ಯವು ನಮ್ಮ ಶತ್ರುಗಳಿಂದ ಎರಡುಕಡೆಗಳಲ್ಲಿಯೂ ಆವರಿಸಲ್ಪಟ್ಟಿವೆ. ಆದರೂ ಈಗ ಸೈಂಧವನನ್ನು ರಕ್ಷಿಸಿಕೊಳ್ಳಬೇಕಾದ ಪ್ರಯತ್ನವೇನೋ ನಮಗೆ ಆವಶ್ಯವಾದುದೇ. ಅರ್ಜುನನಿಂದ ಮೃತ್ಯುಭಯಕ್ಕೀಡಾಗಿರುವ ಅವನ ರಕ್ಷಣೆಯಲ್ಲಿ ನಾವು ಬಹಳ ಜಾಗರೂಕರಾಗಿರಬೇಕು" ಭೀಮಸಾತ್ಯಕಿಗಳಿಬ್ಬರೂ, ಈಗ ಸೈಂಧವನನ್ನು ಸಮೀಪಿಸುತ್ತಿರುವರು. ದುರ್ಯೋಧನಾ! ನಿನ್ನ ಮಾವನಾದ ಶಕುನಿಯ ತಂತ್ರದಿಂದ ಹಿಂದೆ ಸಭೆಯಲ್ಲಿ ನೀನು ಯಾವ ದ್ಯೂತವನ್ನು ನಡೆಸಿದೆಯೋ, ಅದರಿಂದ ನಿನಗೆ ಜಯವೂ ಇಲ್ಲ! ಪರಾಜಯವೂ ಇಲ್ಲವೆಂದು ತಿಳಿ. ಈಗ ಒದಗಿಬಂದಿರತಕ್ಕ ದ್ಯೂತವೇ ಅದಕ್ಕಿಂತಲೂ ಮುಖ್ಯವಾದುದು. ನಮ್ಮ ಜಯಪರಾಜಯಗಳನ್ನು ಇದರಲ್ಲಿ ತಿಳಿಯಬೇಕು. ಹಿಂದೆ ಶಕುನಿಯು ಕೌರವಸಭೆಯಲ್ಲ ಯಾವ ದಾಳಗಳನ್ನೆಸೆದನೋ, ಈಗ ಆ ದಾಳಗಳೇ ನಮ್ಮಿಂದ ತಡೆಯಲಸಾಧ್ಯಗಳಾದ ಬಾಣಗಳಾಗಿ ಬಂದು ಬೀಳುತ್ತಿರುವುವು. ಈಗ ನಮ್ಮ ಕೌರವಸೈನಿಕರನ್ನೇ, ಜೂಜಾಡತಕ್ಕವರನ್ನಾಗಿಯೂ, ಅವರ ಬಾಣಗಳನ್ನೇ ದಾಳಗಳನ್ನಾಗಿಯೂ ತಿಳಿ. ಈಗಿನ ದ್ಯೂತಕ್ಕೆ ನಿನ್ನ ಭಾವನಾದ ಸೈಂಧವನೇ ಪಣವಾಗಿರುವನು. ಈ ಜೂಜಿನಲ್ಲಿ ಸೈಂಧವರಕ್ಷಣೆಯಿಂದ ನಮ್ಮ ಜಯಾಪಜಯಗಳು ಏರ್ಪಡುವುವು ಆದುದರಿಂದ ನಿನ್ನ ಕಡೆಯವರೆಲ್ಲರೂ, ತಮ್ಮ ಪ್ರಾಣದಾಸೆಯನ್ನು ಬಿಟ್ಟು, ಸೈಂಧವನನ್ನು ಉಳಿಸಿಕೊಳ್ಳುವುದಕ್ಕೆ ಯತ್ನಿಸಬೇಕು. ನಿನ್ನ ಜಯಪರಾಜಯಗಳು ಅದರಲ್ಲಿ ನಿಶ್ಚಯಿಸಲ್ಪಡಬೇಕು. ಆದುದರಿಂದ ಕುಮಾರಾ! ನಿನ್ನಕಡೆಯ ಧನುರ್ಧಾರಿಗಳೆಲ್ಲ ಸೇರಿ, ಎಲ್ಲಿ ಸೈಂಧವನನ್ನು ರಕ್ಷಿಸುತ್ತಿರುವರೋ ಅಲ್ಲಿಗೆ ನೀನೂ ಹೋಗಿ, ಅವರನ್ನೂ, ಸೈಂಧವನನ್ನೂ ಉಳಿಸಿಕೊಳ್ಳುವ ಪ್ರಯತ್ನಮಾಡು. ನಾನು ಈ ವ್ಯೂಹದ್ವಾರದಲ್ಲಿಯೇ ಇದ್ದು ಪಾಂಡು, ಪಾಂಚಾಲ, ಸೃಂಜಯರನ್ನು ಒಳಗೆ ಬಾರದಹಾಗೆ ತಡೆಯುತ್ತಿರುವೆನು. ನಿನಗೆ ಬೆಂಬಲವಾಗಿ ಬೇರೆಯವರನ್ನು ಕಳುಹಿಸಿಕೊಡುವೆನು" ಎಂದನು. ಈ ಮಾತನ್ನು ಕೇಳಿದೊಡನೆ ದುರ್ಯೋಧನನು ಆಚಾ

ರ್ಯನ ಆಜ್ಞೆಯಂತೆ ಸೈಂಧವರಕ್ಷಣಕಾರ್ಯಕ್ಕಾಗಿ ತನ್ನ ಅನುಚರರೊಡನೆ ವೇಗದಿಂದ ಹೊರಟನು. ಇಷ್ಟರಲ್ಲಿ ಅತ್ತಲಾಗಿ ಯುಧಾಮನ್ಯು, ಉತ್ತಮೌಜಸ್ಸೆಂಬ ಪಾಂಚಾಲಸಹೋದರರಿಬ್ಬರೂ .ಅರ್ಜುನನ ಚಕ್ರರಕ್ಷಣೆಗಾಗಿ ವ್ಯೂಹದ ಹೊರಭಾಗದಲ್ಲಿ ಬೇರೆಕಡೆಯಿಂದ ಸೈನ್ಯದಲ್ಲಿ ಪ್ರವೇಶಿಸಿ, ಅರ್ಜುನನ ಬಳಿಗೆ ಸೇರಬಿಟ್ಟರು. ಮಹಾರಾಜಾ! ಹಿಂದೆ ಅರ್ಜುನನು ನಿನ್ನ ಸೈನ್ಯದೊಳಗೆ ಪ್ರವೇಶಿಸಿಬಿಟ್ಟಮೇಲೆ, ಅವನನ್ನು ಹಿಂಬಾಲಿಸಿ ಹೋಗುತ್ತಿದ್ದ ಈ ಪಾಂಚಾಲಸಹೋದರರಿಬ್ಬರನ್ನೂ, ಕೃತವರ್ಮನು ತಡೆದು ನಿಲ್ಲಿಸಿಬಿಟ್ಟನು. ಆಮೇಲೆ ಇವರು ವ್ಯೂಹದ ಪಾರ್ಶ್ವಭಾಗದಲ್ಲಿ ಸೈನ್ಯವನ್ನು ಭೇದಿಸಿಕೊಂಡು ಪ್ರವೇಶಿಸಿಬಿಟ್ಟರು. ಹೀಗೆ ಬೇರೆದಾರಿಯಿಂದ ಬರುತ್ತಿರುವ ಆವರಿಬ್ಬರನ್ನೂ ನಿನ್ನ ಮಗನಾದ ದುರ್ಯೋಧನನು ಕಂಡು, ಅಲ್ಲಿ ಅವರನ್ನು ತಡೆಯುವುದಕ್ಕಾಗಿ ಓಡಿಬಂದನು. ಅವರಿಬ್ಬರೊಡನೆ ನಿನ್ನ ಮಗನಿಗೆ ಪ್ರಬಲಯುದ್ಧವಾಯಿತು. ಅವರಿಬ್ಬರೂ ಮಹಾರಥರೆಂದು ಹೆಸರುಗೊಂಡವರು! ಮಹಾಧನುರ್ಧಾರಿಗಳು! ಕ್ಷತ್ರಿಯಶ್ರೇಷ್ಠರು! ನಿನ್ನ ಮಗನನ್ನು ಕಂಡೊಡನೆ ಯುಧಾಮನ್ಯುವು ಅವನಮೇಲೆ ಮೂವತ್ತುಬಾಣಗಳನ್ನು ಬಿಟ್ಟನು. ಇಪ್ಪತ್ತುಬಾಣಗಳಿಂದ ಸಾರಥಿಯನ್ನೂ, ನಾಲ್ಕುಬಾಣಗಳಿಂದ ರಥಾಶ್ವಗಳನ್ನೂ ಬಲವಾಗಿ ನೋಯಿಸಿದನು. ದುರ್ಯೋಧನನು ಒಂದೊಂದು ಬಾಣದಿಂದ ಯುಧಾಮನ್ಯುವಿನ ಧ್ವಜವನ್ನೂ, ಬಿಲ್ಲನ್ನೂ ಕತ್ತರಿಸಿ, ಒಂದು ಬಾಣದಿಂದ ಸಾರಥಿಯನ್ನು ಕೊಂದುಕೆಡಹಿ, ನಾಲ್ಕುಬಾಣಗಳಿಂದ ಅವನ ನಾಲ್ಕು ರಥಾಶ್ವಗಳನ್ನೂ ಸಂಹರಿಸಿದನು. ಯುಧಾಮನ್ಯುವು ಕುಪಿತನಾಗಿ ನಿನ್ನ ಮಗನ ಎದೆಗೆ ಗುರಿಯಿಟ್ಟು, ಮೂವತ್ತುಬಾಣಗಳನ್ನು ಹೊಡೆದನು. ಉತ್ತಮೌಜಸ್ಸು ನಿನ್ನ ಮಗನ ಸಾರಥಿಯನ್ನು ಹೊಡೆದುಕೆಡಹಿದನು. ಒಡನೆಯೇ ದುರ್ಯೋಧನನು ಉತ್ತಮೌಜಸ್ಸಿನ ರಥಾಶ್ವಗಳನ್ನೂ ಅವನಿಗೆ ಪಾರ್ಶ್ವರಕ್ಷಕರಾದ ಇಬ್ಬರು ಸಾರಥಿಗಳನ್ನೂ ಬಾಣಗಳಿಂದ ಹೊಡೆದುಕೊಂದನು. ವಿರಥನಾದ ಉತ್ತಮೌಜಸ್ಸು, ಥಟ್ಟನೆ ತನ್ನ ತಮ್ಮನಾದ ಯುಧಾಮನ್ಯುವಿನ ರಥವನ್ನೇರಿ ಕುಳಿತು, ಅಲ್ಲಿಂದ ಬಾಣಗಳನ್ನು ಬಿಟ್ಟು, ನಿನ್ನ ಮಗನ ರಥಾಶ್ವಗಳನ್ನು ಕೊಂದುಬಿಟ್ಟನು. ಇದೇ ಸಮಯದಲ್ಲಿ ಯುಧಾಮನ್ಯುವು ನಿನ್ನ ಮಗನ ಕೈಯಲ್ಲಿದ್ದ ಬಿಲ್ಲನ್ನೂ, ಬತ್ತಳಿಕೆಯನ್ನೂ ಕತ್ತರಿಸಿ

ಬಿಟ್ಟನು. ವಿರಥನಾದ ನಿನ್ನ ಮಗನು ಕೈಯಲ್ಲಿ ಗದೆಯನ್ನೆತ್ತಿಕೊಂಡು ಆ ಪಾಂಚಾಲಸಹೋದರರನ್ನು ಇದಿರಿಸಿಬಂದನು. ಹೀಗೆ ದುರ್ಯೋಧನನು ರಥದಿಂದ ಧುಮುಕಿ ಓಡಿಬರುವುದನ್ನು ಕಂಡೊಡನೆ, ಆ ಪಾಂಚಾಲಸಹೋದರರು ರಥದಿಂದ ಕೆಳಕ್ಕೆ ಹಾರಿ ಇದಿರಿಸಿಬಂದರು. ದುರ್ಯೋಧನನು ಮುಂದೆ ಹೋಗಿ, ತನ್ನ ಗದೆಯಿಂದ ಶತ್ರುಗಳ ರಥವನ್ನೂ, ರಥಾಶ್ವಗಳನ್ನೂ, ಸಾರಥಿಯನ್ನೂ, ಧ್ವಜವನ್ನೂ ಭೇದಿಸಿ ಕೆಡಹಿದನು. ಗದಾಯುದ್ಧದಲ್ಲಿ ಮೇಲೆನಿಸಿಕೊಂಡ ನಿನ್ನ ಮಗನ ಈ ಸಾಹಸಕಾರ್ಯವು ಆಶ್ಚರ್ಯಕರವಾಗಿದ್ದಿತು. ಈ ಕಾರ್ಯವನ್ನು ನಡೆಸಿದಮೇಲೆ ನಿನ್ನ ಮಗನು ತನ್ನ ರಥ ರಥಾಶ್ವ ಸಾರಥಿಗಳೆಲ್ಲವೂ ಹೋದುದರಿಂದ, ಸಮೀಪದಲ್ಲಿದ್ದ ಶಲ್ಯನ ರಥವನ್ನೇರಿ ಕುಳಿತನು. ಇಷ್ಟರಲ್ಲಿಯೇ ಆ ಪಾಂಚಾಲಸಹೋದರರು ಬೇರೆಬೇರೆ ರಥಗಳನ್ನೇರಿ, ಅರ್ಜುನನ ದಾರಿಯನ್ನು ಹಿಡಿದು ಹೊರಟುಹೋದರು.

ಇದು ನೂರ ಮೂವತ್ತನೆಯ ಅಧ್ಯಾಯವು.



## ಭೀಮನಿಂದ ಕರ್ಣನು ಪರಾಜಿತನಾದುದು.

ಮಹಾರಾಜಾ! ಹೀಗೆ ಪ್ರಬಲಯುದ್ಧವಾಯಿತು. ಉಭಯಸೈನ್ಯಗಳೂ ಅಲ್ಲಲ್ಲಿ ಹತವಾಗುತ್ತಿದ್ದುವು. ಇಷ್ಟರಲ್ಲಿಯೇ ಕರ್ಣನು ಅರ್ಜುನನ ಬಳಿಗೆ ಹೋಗುತ್ತಿದ್ದ ಭೀಮನನ್ನು ತಡೆದನು. ಕಾಡಿನಲ್ಲಿ ಮದದಾನೆಗಳು ಒಂದನ್ನೊಂದು ಇದಿರಿಸುವಂತೆ ಭೀಮಕರ್ಣರು ಯುದ್ಧಕ್ಕೆ ನಿಂತರು. ಇಬ್ಬರೂ ವಿವಿಧಾಸ್ತ್ರಗಳನ್ನು ಪ್ರಯೋಗಿಸಿದರು. ಕರ್ಣನು ಮೃದುವಾಗಿಯೂ, ಭೀಮನು ಒರಟಾಗಿಯೂ ತಮ್ಮತಮ್ಮ ಅಸ್ತ್ರಚಾತುರ್ಯಗಳನ್ನು ತೋರಿಸುತ್ತಿದ್ದರು" ಎನಲು, ಈ ನಡುವೆ ಧೃತರಾಷ್ಟ್ರನು "ಸಂಜಯಾ! ಭೀಮಕರ್ಣರಿಬ್ಬರೂ ಯುದ್ಧಕ್ಕೆ ನಿಂತರೆಂದು ಹೇಳಿದೆಯಲ್ಲವೆ? ಅತ್ತಲಾಗಿ ಅರ್ಜುನನ ರಥದ ಸಮೀಪದಲ್ಲಿ ಆಗ ನಡೆದ ಯುದ್ಧಕ್ರಮವೇನು? ಮೊದಲೇ ಕರ್ಣನು ಭೀಮನಿಂದ ಪರಾಜಿತನಾಗಿ ಓಡಿದನೆಂದು ಹೇಳಿದೆ. ತಿರುಗಿ

ಅವನು ಭೀಮನನ್ನು ಇದಿರಿಸಿಬಂದುದು ಹೇಗೆ? ಯಾವ ಬಲವನ್ನು ಮುಂದಿಟ್ಟುಕೊಂಡು ಅವನು ಯುದ್ಧಕ್ಕೆ ಬಂದನು? ಭೀಮನೇ ಕರ್ಣನನ್ನು ತಿರುಗಿ ಯುದ್ಧಕ್ಕೆ ಕರೆದನೇ? ಕರ್ಣನೇನೋ ಮಹಾರಥನೆಂದು ಪ್ರಸಿದ್ಧಿಗೊಂಡವನು. ಭೀಷ್ಮದ್ರೋಣರನ್ನು ಬಿಟ್ಟರೆ, ಧರ್ಮರಾಜನು ಈ ಕರ್ಣನಿಗೆ ಹೊರತು ಬೇರೆ ಯಾರಿಗೂ ಹೆದರತಕ್ಕವನಲ್ಲ. ಕರ್ಣನ ಭಯದಿಂದ ಯುಧಿಷ್ಠಿರನು ರಾತ್ರಿಯಲ್ಲಿ ನಿದ್ರೆಯೇ ಇಲ್ಲದೆ, ಎಷ್ಟೋ ದಿನಗಳನ್ನು ಕಳೆದಿರುವನು. ಕರ್ಣನ ಪರಾಕ್ರಮವನ್ನು ಕುರಿತ ಭಯವೇ ಅವನಿಗೆ ಸದಾ ಇರುತ್ತಿರುವುದು. ಅಂತಹ ಕರ್ಣನನ್ನು ಭೀಮನು ಹೇಗೆತಾನೇ ಧೈರ್ಯದಿಂದ ಇದಿರಿಸಿ ಯುದ್ಧಮಾಡಿದನು? ಕರ್ಣನು ಸೂತಪುತ್ರನೆನಿಸಿಕೊಂಡರೂ ಬ್ರಾಹ್ಮಣಪ್ರಿಯನು! ವೀರ್ಯಸಂಪನ್ನನು! ಯುದ್ಧದಲ್ಲಿ ಜಯಿಸದೆ ಹಿಂತಿರುಗತಕ್ಕವನಲ್ಲ. ಅವನನ್ನು ಭೀಮನು ಹೇಗೆತಾನೇ ಇದಿರಿಸಬಲ್ಲವನಾದನು? ಆ ಭೀಮಕರ್ಣರಿಬ್ಬರೂ ಹೇಗೆ ಯುದ್ಧವನ್ನು ನಡೆಸಿದರು? ಕರ್ಣನಾದರೋ ಮೊದಲೇ ಭೀಮನಲ್ಲಿ ತನಗಿರುವ ಸಹೋದರಭಾವವನ್ನು ಕುಂತಿಯೊಡನೆ ಸೂಚಿಸಿರುವನು. ಅಲ್ಲದೆ ಬಹಳ ದಯಾಗುಣವುಳ್ಳವನು. ತಾಯಿಯಾದ ಕುಂತಿಗೆ ತಾನು ಕೊಟ್ಟ ಮಾತು ನೆನಪಿನಲ್ಲಿರುವಾಗಲೂ, ಭೀಮನೊಡನೆ ಅವನು ಯುದ್ಧಕ್ಕೆ ನಿಂತುದು ಹೇಗೆ? ಭೀಮನು ಕರ್ಣನಲ್ಲಿ ತನಗಿರುವ ಪೂರ್ವವೈರವನ್ನು ಸ್ಮರಿಸಿಕೊಂಡು ಕರ್ಣನೊಡನೆ ಯುದ್ಧಮಾಡಿದ ಬಗೆಯೇನು? ಸಂಜಯಾ! ನನ್ನ ಮಗನಿಗೆ ಈ ಯುದ್ಧದಲ್ಲಿ ಜಯದಾಸೆಯು ಆ ಕರ್ಣನೊಬ್ಬನಲ್ಲಿಯೇ ಇರುವುದು. ಎಲ್ಲಾ ಪಾಂಡವರನ್ನೂ ಕರ್ಣನೊಬ್ಬನೇ ಜಯಿಸುವನೆಂದು ಮೂಢನಾದ ನನ್ನ ಮಗನು ಆಶೋತ್ತರವನ್ನಿಟ್ಟುಕೊಂಡಿರುವನು. ನನ್ನ ಮಕ್ಕಳೆಲ್ಲರೂ ಆ ಕರ್ಣನ ಆಶ್ರಯಬಲದಿಂದಲೇ ಪಾಂಡವರೊಡನೆ ದೊಡ್ಡ ವೈರವನ್ನು ಬೆಳೆಸಿಬಿಟ್ಟರು. ಅಂತಹ ಕರ್ಣನು ಈಗ ಭೀಮನೊಡನೆ ಯುದ್ಧಮಾಡಿದ ಕ್ರಮವನ್ನೆಲ್ಲ ನನಗೆ ತಿಳಿಸು. ಕರ್ಣನು ಮಾಡಿದ ಅನೇಕ ಪರಿಭವಗಳನ್ನೆಲ್ಲ ಭೀಮನು ಮನಸ್ಸಿನಲ್ಲಿಟ್ಟಿರುವನು. ಆ ಕೋಪವನ್ನು ಭೀಮನು ಯುದ್ಧದಲ್ಲಿ ಹೇಗೆ ತೀರಿಸಿಕೊಂಡನು? ಏಕರಥನಾಗಿ ಭೂಮಿಯನ್ನೆಲ್ಲ ಜಯಿಸಿಬಂದ ಆ ಸೂತಪುತ್ರನೊಡನೆ ಭೀಮನು ಹೇಗೆ ಯುದ್ಧಮಾಡಿದನು? ಯಾವನು

ಹುಟ್ಟುವಾಗಲೇ ದಿವ್ಯಕವಚಕುಂಡಲಗಳೊಡನೆ ಹುಟ್ಟಿದನೋ, ಯಾವನು ಪರಶುರಾಮನನ್ನು ಆಶ್ರಯಿಸಿ ಬ್ರಹ್ಮಾಸ್ತ್ರವೇ ಮೊದಲಾದ ದಿವ್ಯಾಸ್ತ್ರಗಳನ್ನು ಪಡೆದುಬಂದನೋ, ಅಂತಹ ಕರ್ಣನಿಗೂ, ಭೀಮನಿಗೂ ಹೇಗೆ ಯುದ್ಧವು ನಡೆಯಿತು? ಅವರಲ್ಲಿ ಜಯಿಸಿದವರಾರು?" ಎಂದನು.

ಆಗ ಸಂಜಯನು ಮಹಾರಾಜಾ! ಮೊದಲು ಭೀಮನು ಕರ್ಣನನ್ನು ಜಯಿಸಿ, ಕೃಷ್ಣಾರ್ಜುನರನ್ನು ಸೇರುವುದಕ್ಕಾಗಿ ಮುಂದೆ ಹೊರಟನು. ಅದನ್ನು ಸಹಿಸಲಾರದೆ ಕರ್ಣನು ತಿರುಗಿ ಭೀಮನಮೇಲೆ ಬಾಣವರ್ಷಗಳನ್ನು ಕರೆಯುತ್ತ ಬೆನ್ನಟ್ಟಿಬಂದನು. ಆಗಲೇ ಅರಳುವ ಕಮಲದಂತೆ ಮಂದಹಾಸವಿಶಿಷ್ಟವಾದ ಮುಖದಿಂದ ಕರ್ಣನು ಭೀಮನನ್ನು ಯುದ್ಧಕ್ಕಾಗಿ ಕೂಗಿಕರೆಯುತ್ತ "ಭೀಮಾ! ಶತ್ರುಗಳೊಡನೆ ಯುದ್ಧಮಾಡುವುದಕ್ಕೆ ಸ್ವಪ್ನದಲ್ಲಿಯೂ ನೀನು ಹಿಮ್ಮೆಟ್ಟತಕ್ಕವನಲ್ಲ. ಇಂತಹ ನೀನು ಈಗ ನನಗೆ ಮಾತ್ರ ಬೆನ್ನನ್ನು ತೋರಿಸಿ ಓಡಿಹೋಗುವೆಯೇಕೆ? ಕುಂತಿಯ ಹೊಟ್ಟೆಯಲ್ಲಿ ಹುಟ್ಟಿದ ನಿನಗೆ ಇದು ಯೋಗ್ಯವಾದ ಕಾರ್ಯವಲ್ಲ. ಆದುದರಿಂದ ಈಗ ನನಗಿದಿರಾಗಿ ನಿಂತು ನಿನ್ನ ಬಾಣಚಾತುರ್ಯವನ್ನು ತೋರಿಸು" ಎಂದನು. ಈ ಮಾತನ್ನು ಕೇಳಿ ಸಹಿಸಲಾರದೆ ಭೀಮನು ತನ್ನ ಬಿಲ್ಲನ್ನು ಅರ್ಧಮಂಡಲಾಕಾರವಾಗಿ ಎಳೆದು, ಕರ್ಣನಮೇಲೆ ಬಾಣವರ್ಷಗಳನ್ನು ಸುರಿಯಲಾರಂಭಿಸಿದನು. ದ್ವೈರಥಯುದ್ಧದಲ್ಲಿ ಆತುರಗೊಂಡವನಾಗಿ ಬಂದ ಸರ್ವಾಸ್ತ್ರವಿಶಾರದನಾದ ಕರ್ಣನನ್ನು ಆಗಲೇ ಕೊಂದು ಅದರಿಂದ ಕೌರವಪಾಂಡವರಲ್ಲಿರುವ ಕಲಹವನ್ನು ಕೊನೆಗಾಣಿಸಬೇಕೆಂದು ಭೀಮನು ಮೊದಲು ಅವನ ಅನುಚರರನ್ನೆಲ್ಲ ಕೊಂದನು. ಆಮೇಲೆ ಕರ್ಣನನ್ನೂ ಕೊಲ್ಲಬೇಕೆಂದು ನಾನಾತರದ ತೀಪ್ರಬಾಣಗಳನ್ನು ವರ್ಷಿಸಿದನು. ಕರ್ಣನೂ ತನ್ನ ಅಸ್ತ್ರಚಾತುರ್ಯದಿಂದ ಭೀಮನ ಬಾಣಗಳನ್ನೆಲ್ಲ ಭೇದಿಸಿ ವಿಫಲಮಾಡಿದನು. ತನ್ನ ವಿದ್ಯಾಭ್ಯಾಸಕಾಲದಲ್ಲಿ ಯಾವನು ಅಸ್ತ್ರವಿದ್ಯೆಯಲ್ಲಿ ಎಲ್ಲರಿಗಿಂತಲೂ ಮೇಲೆನಿಸಿಕೊಂಡಿದ್ದನೋ, ಆ ಕರ್ಣನು ಈಗ ತನ್ನ ಆಚಾರ್ಯನಂತೆಯೇ ಯುದ್ಧರಂಗದಲ್ಲಿ ತನ್ನ ಶಸ್ತ್ರಾಸ್ತ್ರಚಾತುರ್ಯವನ್ನು ತೋರಿಸುತ್ತಿದ್ದನು. ನಗುಮುಖದಿಂದಲೇ ಭೀಮನನ್ನು ಬಾಣಗಳಿಂದ ಹೊಡೆಯು

ತ್ತಿದ್ದನು. ಆ ಕರ್ಣನ ಗರ್ವದ ನಗೆಯನ್ನು ನೋಡಿ ಸಹಿಸಲಾರದೆ, ಭೀಮನು, ನಿನ್ನವರೆಲ್ಲರೂ ನೋಡುತ್ತಿರುವಾಗಲೇ ಮದದಾನೆಯನ್ನು ಅಂಕುಶದಿಂದ ಚುಚ್ಚಿದಂತೆ ಕರ್ಣನ ಎದೆಗೆ ಗುರಿಯಿಟ್ಟು ವತ್ಸದಂತಗಳೆಂಬ ತೀವ್ರಬಾಣಗಳನ್ನು ಬಿಟ್ಟನು. ತಿರುಗಿ ಎಡೆಬಿಡದೆ ಇಪ್ಪತ್ತೊಂದು ಬಾಣಗಳನ್ನು ಕರ್ಣನಮೇಲೆ ಹೊಡೆದನು. ಅವೊಂದನ್ನೂ ಲಕ್ಷ್ಯಮಾಡದೆ ಕರ್ಣನು ಐದೈದು ಬಾಣಗಳನ್ನು ಭೀಮನ ರಥಾಶ್ವಗಳಿಗೆ ಹೊಡೆದನು. ಅರ್ಧನಿಮಿಷಮಾತ್ರದಲ್ಲಿ ಭೀಮನ ರಥವೆಲ್ಲ ಕರ್ಣನ ಬಾಣಗಳ ಬಲೆಯಿಂದ ಮರೆಸಿಹೋದುವು. ಆಮೇಲೆ ತಿರುಗಿ ಕರ್ಣನು ಅರುವತ್ತನಾಲ್ಕು ಬಾಣಗಳಿಂದ ಭೀಮನ ಕವಚವನ್ನು ಭೇದಿಸಲು ಯತ್ನಿಸಿದನು. ಭೀಮನು ಅವುಗಳನ್ನು ಲಕ್ಷ್ಯಮಾಡದೆ ಕರ್ಣನೊಡನೆ ಹೆಣಗಾಡುತ್ತಲೇ ಇದ್ದನು. ಕರ್ಣನ ಬಾಣಗಳಿಂದ ಸಂಪೂರ್ಣವಾಗಿ ತಾನು ಮುಚ್ಚಿಹೋಗಿದ್ದರೂ ಎದೆಗುಂದದೆ, ಮೂವತ್ತೆರಡು ಬಾಣಗಳಿಂದ ಕರ್ಣನನ್ನು ಹೊಡೆದನು. ಕರ್ಣನು ಬಹುಮೃದುಸ್ವಭಾವದಿಂದ ನಗುತ್ತಲೇ ಭೀಮನನ್ನು ಹೊಡೆಯುವನು! ಭೀಮನು ಪೂರ್ವವೈರವನ್ನು ಸ್ಮರಿಸಿಕೊಂಡು ಅತ್ಯಾಕ್ರೋಶದಿಂದ ಬಾಣಗಳನ್ನು ಬಿಡುವನು. ಕರ್ಣನ ನಗೆಮುಖವನ್ನು ನೋಡಿ ಭೀಮನಿಗೆ ಮೇಲೆಮೇಲೆ ಕೋಪವು ಹೆಚ್ಚುತ್ತಿರಲು, ಎಡೆಬಿಡದೆ ಕರ್ಣನಮೇಲೆ ಬಾಣಗಳನ್ನು ವರ್ಷಿಸುತ್ತಿದ್ದನು. ಆ ಬಾಣಗಳು ಹಕ್ಕಿಯ ಹಿಂಡುಗಳಂತೆ ಮೊರೆಯುತ್ತ ಬಂದು, ಬೆಂಕಿಗೆ ಮುತ್ತುವ ಮಿಡಿತೆಗಳಂತೆ ಕರ್ಣನಮೇಲೆ ಬೀಳುತ್ತಿದ್ದುವು. ಕರ್ಣನೂ ತೀವ್ರಬಾಣವರ್ಷಗಳನ್ನು ಕರೆಯುತ್ತಿದ್ದನು. ಭೀಮನು ಅವುಗಳನ್ನೆಲ್ಲ ಕ್ಷಣಮಾತ್ರದಲ್ಲಿ ಮುರಿಯುತ್ತಬಂದನು. ಭೀಮನು ಕರ್ಣನನ್ನೂ, ಕರ್ಣನು ಭೀಮನನ್ನೂ ಆಗಾಗ ಬಾಣಗಳಿಂದ ಮರೆಸುತ್ತಿದ್ದರು. ಈ ನಡುವೆ ಕರ್ಣನು ಭೀಮನ ಮೈಗೆಲ್ಲಾ ನಾಟುವಂತೆ ತೀವ್ರಬಾಣಗಳನ್ನು ಬಿಟ್ಟನು. ಆ ಬಾಣಗಳಿಂದ ನಾಟಿದ ಮೈಯುಳ್ಳ ಭೀಮನು ಮುಳ್ಳುಗಳನ್ನು ನಿಗುರಿಸಿನಿಂತ ಮುಳ್ಳುಹಂದಿಯಂತೆ ಕಾಣುತ್ತಿದ್ದನು. ಚಿನ್ನದ ಹಿಡಿಗಳುಳ್ಳ ಕರ್ಣನ ಬಾಣಗಳು ಭೀಮನ ಮೈಯಲ್ಲಿ ನಾಟಿದಾಗ ಸುತ್ತಲೂ ಕಿರಣಗಳನ್ನು ಹರಡಿದ ಸೂರ್ಯನಂತೆ ತೋರುತ್ತಿದ್ದನು. ರಕ್ತದಿಗ್ಧಗಾತ್ರನಾದ ಭೀಮನ ದೇಹವು ವಸಂತಕಾಲದಲ್ಲಿ ಪುಷ್ಪಭರಿತವಾದ ಅಶೋಕವೃಕ್ಷದಂತೆ ತೋರು

ತ್ತಿತ್ತು. ಕರ್ಣನ ಈ ಕಾರ್ಯವನ್ನು ನೋಡಿ ಭೀಮನಿಗೆ ದುಸ್ಸಹವಾದ ಕೋಪವುಂಟಾಯಿತು. ಕೋಪದಿಂದ ಕಣ್ಣುಗಳನ್ನು ತೊಳಲಿಸುತ್ತ ಇಪ್ಪತ್ತೈದು ನಾರಾಚಗಳನ್ನು ಕರ್ಣನಮೇಲೆ ಪ್ರಯೋಗಿಸಿದನು. ಶ್ವೇತಪರ್ವತದಮೇಲೆ ಹೆಡೆಯಾಡುವ ವಿಷಸರ್ಪಗಳಂತೆ ಆ ಬಾಣಗಳು ಕರ್ಣನ ಮೈಯಲ್ಲಿ ನಾಟಿಕೊಂಡುವು. ಒಡನೆಯೇ ಭೀಮನು ಕರ್ಣನ ಮರ್ಮಸ್ಥಾನಗಳಿಗೆ ಗುರಿಯಿಟ್ಟು ಆರು ಬಾಣಗಳನ್ನು ಹೊಡೆದನು. ತಿರುಗಿ ಎಂಟು ಬಾಣಗಳನ್ನು ಹೊಡೆದನು. ಆಮೇಲೆ ಮತ್ತೊಂದು ಬಾಣದಿಂದ ಕರ್ಣನ ಕೈಯಲ್ಲಿದ್ದ ಬಿಲ್ಲನ್ನು ತುಂಡುಮಾಡಿದನು. ಉತ್ತರಕ್ಷಣದಲ್ಲಿಯೇ ಕರ್ಣನ ಸಾರಥಿಯನ್ನೂ, ರಥಾಶ್ವಗಳನ್ನೂ ಕೊಂದು, ಕರ್ಣನ ಎದೆಗೆ ತೀವ್ರವಾದ ಬಾಣಗಳನ್ನು ಹೊಡೆದನು. ಆ ಬಾಣಗಳು ಕರ್ಣನ ಮೈಯನ್ನು ಭೇದಿಸಿ, ಮೇಘದ ಮರೆಯಿಂದ ಹೊರಬೀಳುವ ಸೂರ್ಯಕಿರಣಗಳಂತೆ ಹೊರಬಿದ್ದು, ನೆಲದಲ್ಲಿ ನಾಟಿದುವು. ಕರ್ಣನಿಗೆ ಹಿಂದುಮುಂದು ತೋರದಂತಾಯಿತು. ಧನುಸ್ಸು ಮುರಿದು, ಬಾಣದಿಂದ ಬಹಳವಾಗಿ ನೊಂದ ಆ ಕರ್ಣನು, ಬಹಳ ಅಭಿಮಾನಿಯಾಗಿದ್ದರೂ, ಲಜ್ಜೆಯನ್ನು ಬಿಟ್ಟು ಭೀಮನ ಭಯದಿಂದ ರಣಾಂಗಣವನ್ನು ಬಿಟ್ಟು ಬೇರೆ ರಥವನ್ನೇರಿ ಹೋದನು.

ಇದು ನೂರ ಮೂವತ್ತೊಂದನೆಯ ಅಧ್ಯಾಯವು.



## ತಿರುಗಿ ಕರ್ಣನು ಭೀಮನೊಡನೆ ಯುದ್ಧಕ್ಕೆ ಬಂದುದು.

ಧೃತರಾಷ್ಟ್ರನು ಸಂಜಯನನ್ನು ಕುರಿತು “ಸಂಜಯಾ! ಏನು ವಿಪರೀತವಿದು? ಕರ್ಣನಾದರೋ ಮಹೇಶ್ವರನಿಗೆ ಸಾಕ್ಷಾತ್ತಾಗಿ ಶಿಷ್ಯನು. ಭೃಗುವಿನಿಂದ ಪರಂಪರೆಯಾಗಿ ಬಂದ ಧನುರ್ವಿದ್ಯೆಯನ್ನು ಬಲ್ಲವನು. ಪರಶುರಾಮನಲ್ಲಿ ಶಿಷ್ಯನಾಗಿದ್ದವನು. ಅಸ್ತ್ರವಿದ್ಯೆಯಲ್ಲಿ ಅವನಿಗೆ ಸಮಾನನು. ಅವನಿಗಿಂತಲೂ ಇವನನ್ನು ಮೇಲೆಂದೂ ಹೇಳಬಹುದು. ಶಿಷ್ಯಗುಣಗಳಿಂದ ಕೂಡಿದವನು. ಅವನು ಭೀಮನಿಂದ ಇಷ್ಟು ಸುಲಭವಾಗಿ ಪರಾಜಿತನಾದುದು ಹೇಗೆ? ನನ್ನ ಮಕ್ಕಳಿಗೆ ಯಾವನಲ್ಲಿ ಪೂರ್ಣವಾದ ಜಯದಾಸೆಯಿದ್ದಿತೋ,

ಅಂತಹ ಕರ್ಣನಿಗೇ ಈ ಅವಸ್ಥೆಯಾದಮೇಲೆ, ನನ್ನ ಮಗನ ಮುಂದಿನ ಆಲೋಚನೆಯೇನು? ಅಗ್ನಿಯಂತೆ ತೀವ್ರತೇಜಸ್ಸುಳ್ಳ ಭೀಮನೊಡನೆ ಕರ್ಣನು ಹೇಗೆ ಯುದ್ಧಮಾಡಿದನು? ಭೀಮನು ಕರ್ಣನನ್ನು ಹೇಗೆ ಇದಿರಿಸಿದನು? ಆಮೇಲೆ ಕರ್ಣನು ಮಾಡಿದುದೇನು?" ಎನಲು, ಸಂಜಯನು "ಮಹಾರಾಜಾ! ಕರ್ಣನು ಭೀಮನ ಬಾಣಗಳಿಂದ ಅಷ್ಟು ನೊಂದಿದ್ದರೂ, ಧೈರ್ಯಗೆಡದೆ ತಿರುಗಿ ಬೇರೆರಥವನ್ನೇರಿ ಬಿರುಗಾಳಿಯಿಂದ ಕಲಗಿಸಲ್ಪಟ್ಟ ಸಮುದ್ರದಂತೆ ವೇಗದಿಂದ ಭೀಮನನ್ನಿದಿರಿಸುವುದಕ್ಕಾಗಿ ಬಂದನು. ಕರ್ಣನು ಅಷ್ಟು ಕೋಪಾವೇಶದಿಂದ ಬರುವುದನ್ನು ನೋಡಿ ನಿನ್ನ ಮಕ್ಕಳೆಲ್ಲರೂ "ಇನ್ನು ಭೀಮನು ಕರ್ಣನ ಬಾಣಾಗ್ನಿಗೆ ಆಹುತಿಯಾದಂತೆಯೇ" ಎಂದು ತಿಳಿದುಬಿಟ್ಟರು. ಕರ್ಣನು ಭಯಂಕರವಾಗಿ ತಲಧ್ವನಿಯನ್ನೂ, ಚಾಪಧ್ವನಿಯನ್ನೂ ಮಾಡುತ್ತ ಭೀಮನ ರಥಕ್ಕಿದಿರಾದನು. ತಿರುಗಿ ಭೀಮಕರ್ಣರಿಗೆ ದೊಡ್ಡ ಯುದ್ಧವಾಯಿತು. ಒಬ್ಬರನ್ನೊಬ್ಬರು ಕೊಲ್ಲಬೇಕೆಂಬ ಕೋಪದಿಂದ ಕಣ್ಣುಗಳಿಂದಲೇ ದಹಿಸಿಬಿಡುವಂತೆ ದುರದುರನೆ ನೋಡಿದರು. ಇಬ್ಬರ ಕಣ್ಣುಗಳೂ ಕೆಂಪೇರಿದುವು. ಇಬ್ಬರೂ ಹಾವುಗಳಂತೆ ಬುಸುಗುಟ್ಟುತ್ತಿದ್ದರು. ಕೋಪಗೊಂಡ ಹುಲಿಗಳಂತೆಯೂ, ಗಿಡುಗಗಳಂತೆಯೂ ಇದಿರಿಸಿ ಬಾಣಗಳಿಂದ ಹೊಡೆಯುತ್ತಿದ್ದರು. ಆಗ ಭೀಮನಿಗೆ ಕರ್ಣನು ಹಿಂದೆ ತಮಗೆ ಮಾಡಿದ ಅಪರಾಧಗಳೆಲ್ಲವೂ ನೆನಪಿಗೆ ಬಂದುವು. ದ್ಯೂತಸಭೆಯಲ್ಲಿ, ಕಾಡಿನಲ್ಲಿ, ತಾವು ಅಜ್ಞಾತವಾಸದಲ್ಲಿದ್ದಾಗ, ವಿರಾಟನಗರದಲ್ಲಿ, ಅವನಿಂದ ತಮಗೆ ಸಂಭವಿಸಿದ ಕಷ್ಟಗಳು ಸ್ಮರಣೆಗೆ ಬಂದಹಾಗೆಲ್ಲಾ ಅವನ ಕೋಪವು ಹೆಚ್ಚುತ್ತಿದ್ದಿತು. ಸಂಪತ್ಸಮೃದ್ಧವಾದ ತಮ್ಮ ರಾಷ್ಟ್ರಗಳನ್ನೆಲ್ಲ ನಿನ್ನ ಮಕ್ಕಳು ಅಪಹರಿಸಿಕೊಂಡುದು, ನೀನು ನಿನ್ನ ಮಗನ ಮಾತಿಗೆ ಮರುಳಾಗಿ ಅವರಿಗೆ ಅನೇಕ ಕಷ್ಟಗಳನ್ನುಂಟುಮಾಡಿದುದು, ನೀನು ನಿರಪರಾಧಿಯಾದ ಕುಂತಿಯನ್ನು ಅವಳ ಎಲ್ಲಾ ಮಕ್ಕಳೊಡನೆ ಅರಗಿನ ಮನೆಯಲ್ಲಿ ಸುಡುವುದಕ್ಕೆ ಅನುಮತಿಯನ್ನು ಕೊಟ್ಟುದು, ದುರಾತ್ಮರಾದ ನಿನ್ನ ಮಕ್ಕಳು ಸಭಾಮಧ್ಯದಲ್ಲಿ ದ್ರೌಪದಿಯನ್ನು ಸೆಳೆತಂದು ನಿಲ್ಲಿಸಿದುದು, ದುಶ್ಶಾಸನನು ಅವಳ ತಲೆಕೂದಲನ್ನು ಹಿಡಿದೆಳೆದುದು, ಇವೆಲ್ಲ ಆಗ ಅವನ ಸ್ಮರಣೆಗೆ ಬಂದುವು. ಇಷ್ಟೇ ಅಲ್ಲ! ರಾಜಾ! ಆ

ಸಮಯದಲ್ಲಿ ಕರ್ಣನು ದ್ರೌಪದಿಯನ್ನು ಕುರಿತು ಆಡಬಾರದ ಮಾತುಗಳ ನ್ನಾಡುತ್ತ "ಎಲೆ ಗೌಡಿ! ಇನ್ನು ನಿನಗೆ ಪತಿಗಳಿಲ್ಲ! ಬೇರೆ ಪತಿಯನ್ನು ಹುಡುಕು! ನಿನ್ನ ಗಂಡಂದಿರೆಲ್ಲ ನರಕದಲ್ಲಿ ಬಿದ್ದರು. ಅವರು ಎಳ್ಳಿನ ಜಳ್ಳು ಕಾಳಿಗೆ ಸಮಾನರು" ಎಂಬೀ ಮಾತುಗಳನ್ನು ನಿನ್ನಿದಿರಾಗಿಯೇ ಹೇಳಿದ ನಲ್ಲವೆ? ನಿನ್ನ ಮಕ್ಕಳೆಲ್ಲರೂ ಆ ದ್ರೌಪದಿಯನ್ನು ದಾಸಿಯೆಂದು ಸಂಬೋಧಿಸಿ, ಅವಳನ್ನು ತಾವು ಭೋಗಿಸಬೇಕೆಂದು ಬಯಸಲಿಲ್ಲವೆ? ಇದಲ್ಲದೆ, ಆ ಪಾಂಡವರು ಕೃಷ್ಣಾಜಿನವನ್ನುಟ್ಟು ಕಾಡಿಗೆ ಹೊರಟಿರುವಾಗಲೂಕೂಡ, ಕರ್ಣನು ಆ ರಾಜಸಭೆಯಲ್ಲಿ ನಿನ್ನಿದಿರಾಗಿ ಕಠಿನವಾಕ್ಯಗಳನ್ನಾಡಿದನು! ನಿನ್ನ ಮಗನು ಆ ಪಾಂಡವರನ್ನು ಹುಲ್ಲಿಗಿಂತಲೂ ಕಡೆಯಾಗಿ ಎಣಿಸಿ, ನಿಂದಿಸಿದನು. ತಾನು ಸುಖದಲ್ಲಿರುವಾಗ ಕಷ್ಟದಶೆಯಲ್ಲಿರುವ ಆ ಪಾಂಡವರನ್ನು ನೋಡಿ ಬುದ್ಧಿಯಿಲ್ಲದೆ ನಿನ್ನ ಮಗನು ಅವರಮೇಲಿನ ಅಸೂಯೆಯಿಂದ ಎಷ್ಟೋ ಹಿಂಸೆಗಳನ್ನು ಕೊಟ್ಟನು. ಹೀಗೆ ಬಾಲ್ಯದಿಂದಲೂ ನಿನ್ನ ಮಕ್ಕಳಿಂದ ತಮಗುಂಟಾದ ಕಷ್ಟಗಳನ್ನು ಚಿಂತಿಸಿ ಭೀಮನಿಗೆ ತನ್ನ ಬದುಕಿನಲ್ಲಿಯೇ ಜಿಹಾಸೆಯುಂಟಾಯಿತು. ಅವೆಲ್ಲವೂ ಈಗ ಭೀಮನ ಸ್ಮರಣೆಗೆ ಬಂದು ಅವನಿಗೆ ಕೋಪವು ಮಿತಿಮೀರಿಹೋಯಿತು. ಹೆಬ್ಬುಲಿಯಂತೆ ಗರ್ಜಿಸುತ್ತ ಧನುಷ್ಟಂಕಾರಧ್ವನಿಯೊಡನೆ ಕರ್ಣನನ್ನಿದಿರಿಸಿ, ಕರ್ಣನ ರಥದ ಸುತ್ತಲೂ ಬಾಣದ ಬಲೆಯನ್ನು ಹರಡಿದನು. ಕರ್ಣನು ತನ್ನ ಬಾಣಗಳಿಂದ ಆ ಭೀಮನ ಬಾಣಸಮೂಹಗಳನ್ನೆಲ್ಲ ಕತ್ತರಿಸಿದನು. ಮಹಾರಥನೂ, ಮಹಾಬಾಹುವೂ, ಮಹಾಬಲಾಢ್ಯನೂ ಆದ ಆ ಅಧಿರಥಪುತ್ರನು (ಕರ್ಣನು) ಒಂಭತ್ತು ತೀವ್ರಬಾಣಗಳಿಂದ ಭೀಮನನ್ನು ಹೊಡೆದನು. ಇದರಿಂದ ಭೀಮನು ಅಂಕುಶದಿಂದ ತಿವಿಯಲ್ಪಟ್ಟ ಆನೆಯಂತೆ ಮತ್ತಷ್ಟು ರೇಗಿ, ಸೂತಪುತ್ರನನ್ನು ಕೊಂದೇಬಿಡಬೇಕೆಂದು ಮುಂದೆ ಹೋದನು. ಕರ್ಣನೂ ಮದದಾನೆಯನ್ನಿದಿರಿಸುವಂತೆ ಭೀಮನನ್ನು ಇದಿರಿಸಿಬಂದನು. ಆಗ ಉಭಯಸೈನ್ಯದಲ್ಲಿಯೂ ಶಂಖಧ್ವನಿಗಳೂ, ನೂರಾರು ಕಡೆಗಳಿಂದ ಭೇರೀಧ್ವನಿಗಳೂ ಹೊರಟುವು. ಉಕ್ಕಿಬರುವ ಸಮುದ್ರದಂತೆ ಸೈನ್ಯವು ಯುದ್ಧೋತ್ಸಾಹದಿಂದ ಉಕ್ಕುತ್ತಿದ್ದಿತು. ಭೀಮನು ಕರ್ಣನನ್ನು ಬಾಣಗಳಿಂದ ಮುಚ್ಚಿದನು. ಕರಡಿಗಳಂತೆ ಕಪ್ಪುಬಣ್ಣದ ಭೀಮನ ರಥಾಶ್ವಗಳೂ ಹಂಸ

ದಂತೆ ಬಿಳಿಯ ಬಣ್ಣವುಳ್ಳ ಕರ್ಣನ ರಥಾಶ್ವಗಳೂ ಒಂದಕ್ಕೊಂದು ಮುಂದೆ ಬಂದು ತಾಗಿದುವು. ಹೀಗೆ ಭೀಮಕರ್ಣರ ರಥಗಳು ಒಂದಕ್ಕೊಂದು ತಗುಲಿದುದನ್ನು ನೋಡಿ ನಿನ್ನ ಮಕ್ಕಳ ಸೈನ್ಯದಲ್ಲಿ ಹಾಹಾಕಾರವೆದ್ದಿತು. ಆ ಕಪ್ಪುಬಿಳುಪು ಕುದುರೆಗಳ ಸೇರುವೆಯು, ಆಕಾಶದಲ್ಲಿ ಕಪ್ಪುಬಿಳುಪು ಮೋಡಗಳು ಕಲೆತಂತೆ ತೋರಿತು. ಕೋಪದಿಂದ ಕೆಂಪೇರಿದ ಕಣ್ಣುಗಳೊಡನೆ ಇದಿರಿಸಿ ನಿಂತ ಭೀಮಕರ್ಣರ ಆರ್ಭಟಗಳನ್ನು ನೋಡಿ, ಉಭಯಪಕ್ಷದ ಮಹಾರಥರೂ ನಡುಗಿದರು. ಅವರಿಬ್ಬರ ರಣರಂಗವು ಯಮರಾಷ್ಟ್ರದಂತೆ ಭಯಂಕರವಾಗಿ, ಕಣ್ಣಿಂದ ನೋಡಲಸಾಧ್ಯವಾಯಿತು. ಆ ರಣರಂಗದ ಸ್ಥಿತಿಯನ್ನು ನೋಡಿದವರೆಲ್ಲ "ಅವರಿಬ್ಬರಲ್ಲಿ ಯಾರಿಗೆ ಜಯ" ವೆಂದು ನಿಶ್ಚಯಿಸಲು ಅಸಮರ್ಥರಾದರು. ಅವರಿಬ್ಬರ ಅಸ್ತ್ರಯುದ್ಧವನ್ನು ಎಲ್ಲರೂ ವಿಸ್ಮಯದಿಂದ ನೋಡುತ್ತಿದ್ದರು. ರಾಜಾ! ನೀನೂ, ನಿನ್ನ ಮಗನೂ ಸೇರಿ ನಡೆಸಿದ ದುರಾಲೋಚನೆಯ ಫಲವೇ ಇದೆಲ್ಲವೂ! ಅವರಿಬ್ಬರೂ ಎಡೆಬಿಡದೆ ಬಾಣವರ್ಷಗಳನ್ನು ಸುರಿಸುತ್ತಿದ್ದರು. ಆಕಾಶಕ್ಕೆಲ್ಲ ಬಾಣದ ಬಲೆಯನ್ನು ಹರಡಿದಂತಾಯಿತು. ಒಬ್ಬರನ್ನೊಬ್ಬರು ಕೊಲ್ಲಬೇಕೆಂದು ಮಳೆಯನ್ನು ಕರೆಯುವ ಮೇಘಗಳಂತೆ ತೀಕ್ಷ್ಣಬಾಣಗಳನ್ನು ಪ್ರಯೋಗಿಸುತ್ತಿದ್ದರು. ಚಿನ್ನದ ಹಿಡಿಗಳುಳ್ಳ ಅವರ ಬಾಣಗಳು ಮೇಲಿಂದ ಬಿಳುವ ಉಲ್ಕೆಗಳಂತೆ (ಕೊಳ್ಳಿ) ಆಕಾಶವನ್ನೆಲ್ಲ ಬೆಳಗುತ್ತಿದ್ದುವು. ಹದ್ದಿನ ಗರಿಗಳನ್ನು ಕಟ್ಟಿದ ಆ ಬಾಣಗಳು ಆಕಾಶದಲ್ಲಿ ಸಾರಸಪಕ್ಷಿಗಳ ಸಾಲಿನಂತೆ ಕಾಣುತ್ತಿದ್ದುವು. ಹೀಗೆ ಭೀಮನು ಕರ್ಣನಿಗಿದಿರಾಗಿ ನಿಂತಿರುವುದನ್ನು ನೋಡಿ, ಅತ್ತಲಾಗಿ ಕೃಷ್ಣಾರ್ಜುನರು, ಭೀಮನಿಗೆ ಈ ಕಾರ್ಯವು ದುರ್ಭರವೆಂದು ತಿಳಿದುಕೊಂಡರು. ಭೀಮಕರ್ಣರ ಬಾಣಗಳಿಂದ ಅನೇಕ ಚತುರಂಗಸೈನ್ಯಗಳು ಹತವಾದುವು. ಗತಪ್ರಾಣರಾಗಿ ಕೆಳಗೆ ಬಿದ್ದೂ, ಬೀಳುತ್ತಲೂ ಇರುವ ಅನೇಕ ಸೈನಿಕರಿಂದ ರಣರಂಗವೆಲ್ಲ ತುಂಬಿಹೋಯಿತು. ನಿನ್ನ ಮಕ್ಕಳ ಕಡೆಯಲ್ಲಿ ಜನಕ್ಷಯವು ಅತಿಪ್ರಬಲವಾಯಿತು.

ಇದು ನೂರ ಮೂವತ್ತೆರಡನೆಯ ಅಧ್ಯಾಯವು.



## { ಭೀಮನು ಕರ್ಣನಿಗೆ ಬೆಂಬಲವಾಗಿ ಬಂದ ದುರ್ಜಯನನ್ನು ಕೊಂದುದು. }

ಈ ನಡುವೆ ಧೃತರಾಷ್ಟ್ರನು "ಸಂಜಯಾ! ಹಾಗಿದ್ದರೆ ಭೀಮನು ಕರ್ಣನೊಡನೆ ಮಾಡಿದ ಈ ಯುದ್ಧವು ನನಗೆ ಆಶ್ಚರ್ಯಕರವಾಗಿ ತೋರಿದೆ! ಯಕ್ಷದಾನವಮಾನವರೊಡಗೂಡಿದ ದೇವತೆಗಳನ್ನಾದರೂ ಯುದ್ಧದಲ್ಲಿ ಯಾವನು ಜಯಿಸಬಲ್ಲನೋ, ಅಂತಹ ಕರ್ಣನು ಭೀಮನನ್ನು ಹೇಗೆ ತಾನೇ ಜಯಿಸಲಾರದೆ ಹೋದನು? ಅವರಿಬ್ಬರಿಗೂ ನಡೆದ ಯುದ್ಧಕ್ರಮವೇನು? ಪ್ರಾಣಗಳನ್ನೇ ಒತ್ತೆಯಾಗಿಟ್ಟು ನಡೆಸಿದ ಈ ಯುದ್ಧದ್ಯೂತದಲ್ಲಿಯೇ ನಮ್ಮ ಜಯಾಪಜಯಗಳ ನಿರ್ಣಯವೆಂದು ತೋರುವುದು. ನನ್ನ ಮಗನಾದ ದುರ್ಯೋಧನನು, ಆ ಕರ್ಣನೊಬ್ಬನ ಬಲದಿಂದಲೇ ಕೃಷ್ಣನೊಡಗೂಡಿದ ಪಾಂಡವರನ್ನೂ, ಪಾಂಚಾಲರನ್ನೂ ತಾನು ಜಯಿಸುವೆನೆಂದು ನಂಬಿದ್ದನು. ಈಗ ಭೀಮನಿಂದ ಕರ್ಣನಿಗೆ ಉಂಟಾದ ಪರಾಜಯವನ್ನು ಕೇಳಿ ನನ್ನ ಮನಸ್ಸಿಗೆ ಮೂರ್ಛೆಬರುವಂತಿದೆ. ನನ್ನ ಮಗನ ದುರ್ನಯದಿಂದ ಕೌರವರೆಲ್ಲರೂ ಈಗಲೇ ನಾಶಹೊಂದಿದರೆಂದೂ ನನಗೆ ತೋರಿದೆ. ಕರ್ಣನೇನೋ ಪಾಂಡವರನ್ನು ಜಯಿಸುವಂತೆ ತೋರಲಿಲ್ಲ. ಕರ್ಣನು ಪಾಂಡವರೊಡನೆ ಮಾಡಿದ ಯುದ್ಧಗಳೊಳಗೆಲ್ಲ ಪಾಂಡವರೇ ಜಯಿಸುತ್ತಿರುವರು. ಪಾಂಡವರೇನೋ ಇಂದ್ರಾದಿ ದೇವತೆಗಳಿಗೂ ದುರ್ಜಯರು. ಮೂಢನಾದ ನನ್ನ ಮಗನಿಗೆ ಅದು ತಿಳಿಯದೆಹೋಯಿತು. ಕೆಳಗಿರುವ ಅಗಾಧವಾದ ಕಮರಿಯನ್ನು ಕಾಣದೆ, ಮರದಮೇಲಿನ ಜೇನಿಗೆ ಆಸೆಪಟ್ಟು ಹೋಗುವ ಮೂಢನಂತೆ, ನನ್ನ ಮಗನು ಧರ್ಮರಾಜನ ರಾಜ್ಯಕ್ಕಾಗಿ ಆಸೆಪಟ್ಟು, ಮುಂದೆಬರುವ ಅನರ್ಥವನ್ನು ತಿಳಿಯದೆಹೋದನು. ಕುಬೇರನ ಧನವನ್ನು ಅಪಹರಿಸಿದಂತೆ ಮೋಸದಿಂದ ಪಾಂಡವರ ರಾಜ್ಯವನ್ನು ಕಿತ್ತುಕೊಂಡುದಲ್ಲದೆ ಅದರಿಂದಲೇ ತಾನು ಜಯಿಸಿದೆನೆಂದು ತಿಳಿದು ಪಾಂಡವರನ್ನು ಅವಮಾನಪಡಿಸಿದನು. ಅಯ್ಯೋ! ಸಂಜಯಾ! ನಾನೂಕೂಡ ಪುತ್ರಮೋಹದಿಂದ ಬುದ್ಧಿಗೆಟ್ಟು, ಧರ್ಮನಿಷ್ಠರೂ, ಮಹಾತ್ಮರೂ ಆದ ಪಾಂಡವರನ್ನು ಭಂಗಪಡಿಸಿದೆನು. ಆ ಯುಧಿಷ್ಠಿರನೋ ಶಾಂತಿಯನ್ನೇ ಬಯಸುತ್ತಿದ್ದವನು. ದೂರಾಲೋಚನೆಯುಳ್ಳವನು. ಅವನ ಸಾಧುತ್ವವನ್ನು ನೋಡಿ,

ಮೂಢರಾದ ನನ್ನ ಮಕ್ಕಳು ಅವನನ್ನು ಕೈಲಾಗದವನೆಂದು ನಿರಾಕರಿಸಿದರು. ಅವರ ವಿಷಯದಲ್ಲಿ ನನ್ನ ಮಕ್ಕಳು ನಡೆಸಿದ ಅಪಕಾರಗಳನ್ನೆಲ್ಲ ಮನಸ್ಸಿನಲ್ಲಿಟ್ಟುಕೊಂಡು, ಈಗ ಭೀಮನು ಯುದ್ಧಮಾಡುವಂತಿದೆ. ಸಂಜಯಾ! ಆ ಕರ್ಣಭೀಮರ ಯುದ್ಧಕ್ರಮವನ್ನೆಲ್ಲ ವಿವರವಾಗಿ ತಿಳಿಸು" ಎಂದನು.

ಆಗ ಸಂಜಯನು "ರಾಜೇಂದ್ರಾ! ಕೇಳು! ಭೀಮಕರ್ಣರಿಬ್ಬರೂ ಕಾಡಾನೆಗಳಂತೆ ಇದಿರಿಸಿ ಒಬ್ಬರನ್ನೊಬ್ಬರು ಕೊಲ್ಲಬೇಕೆಂದು ಹಟದಿಂದ ನಿಂತರು. ಕರ್ಣನು ಮುನ್ನೂರು ಬಾಣಗಳನ್ನು ಭೀಮನಮೇಲೆ ಬಿಟ್ಟನು. ಆದರೆ, ಎಷ್ಟೇ ವೇಗವುಳ್ಳ ಬಾಣಗಳನ್ನು ಬಿಟ್ಟರೂ, ಕರ್ಣನಿಂದ ಭೀಮನನ್ನು ತಡೆಯಲು ಸಾಧ್ಯವಾಗಲಿಲ್ಲ. ಮೂರೇ ಬಾಣಗಳಿಂದ ಭೀಮನು ಕರ್ಣನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿ, ಒಂದು ಭಲ್ಲದಿಂದ ಕರ್ಣನ ಸಾರಥಿಯನ್ನು ಹೊಡೆದು ರಥದಿಂದ ಕೆಳಕ್ಕೆ ಕೆಡಹಿದನು. ಆಗ ಕರ್ಣನು ಕೋಪಗೊಂಡು ವೈಡೂರ್ಯಖಚಿತವಾದ ಸುವರ್ಣದಂಡವುಳ್ಳ ದೊಡ್ಡ ಶಕ್ತಿಯನ್ನು ಕೈಗೆತ್ತಿಕೊಂಡು, ಕಾಲರಾತ್ರಿಯಂತೆ ಕ್ರೂರವಾದ ಆ ಮಹಾಶಕ್ತಿಯನ್ನು ಭೀಮನಮೇಲೆ ಪ್ರಯೋಗಿಸಿ ದೊಡ್ಡ ಸಿಂಹನಾದವನ್ನು ಮಾಡಿದನು. ಕರ್ಣನ ಸಿಂಹನಾದವನ್ನು ನೋಡಿ ನಿನ್ನವರೆಲ್ಲರೂ ಭೀಮನು ಹತನಾದಂತೆಯೇ ತಿಳಿದು ಹರ್ಷಿತರಾದರು. ಆದರೆ, ಸೂರ್ಯಾಗ್ನಿತೇಜಸ್ಸಿನಿಂದ ಬೆಳಗುತ್ತಿರುವ ಆ ಶಕ್ತಿಯನ್ನು ಭೀಮನು ಏಳು ಬಾಣಗಳಿಂದ ನಡುದಾರಿಯಲ್ಲಿಯೇ ತುಂಡುಮಾಡಿಬಿಟ್ಟನು. ಅಲ್ಲದೆ ಯಮದಂಡಕ್ಕೆ ಸಮಾನಗಳಾದ ಹಲವು ಬಾಣಗಳನ್ನು ಕರ್ಣನಮೇಲೆ ಪ್ರಯೋಗಿಸಿದನು. ಇಷ್ಟರಲ್ಲಿ ಕರ್ಣನು ಬೇರೊಂದು ಬಿಲ್ಲನ್ನು ಕೈಗೆತ್ತಿಕೊಂಡು, ಕಿವಿಯವರೆಗೆ ನಾಣನ್ನೆಳೆದು, ಹಲವು ಬಾಣಗಳನ್ನು ಪ್ರಯೋಗಿಸತೊಡಗಿದನು. ಭೀಮನು ಅವುಗಳನ್ನೆಲ್ಲ ನಡುದಾರಿಯಲ್ಲಿಯೇ ಕತ್ತರಿಸಿ, ಸಿಂಹದಂತೆ ಆಗಾಗ ಗರ್ಜಿಸುತ್ತಿದ್ದನು. ಇಬ್ಬರೂ ಕೊಬ್ಬಿದ ಗೂಳಿಗಳಂತೆ ಆರ್ಭಟಿಸುತ್ತಿದ್ದರು. ಒಂದೇ ಮಾಂಸಪಿಂಡಕ್ಕಾಗಿ ಹೋರಾಡುವ ಹುಲಿಗಳಂತೆ ಹೋರಾಡುತ್ತಿದ್ದರು. ಒಬ್ಬರನ್ನೊಬ್ಬರು ಕೊಲ್ಲಬೇಕೆಂದು ಅವಕಾಶವನ್ನು ಹುಡುಕುವರು!

ಒಬ್ಬರನ್ನೊಬ್ಬರು ದುರದುರನೆ ನೋಡುವರು! ಮಹಾವೃಷಭಗಳೂ, ಮಹಾಗಜಗಳೂ ತಮ್ಮ ಕೊಂಬುಗಳಿಂದ ತಿವಿದಾಡುವಂತೆ ಇಬ್ಬರೂ ಬಾಣಗಳಿಂದ ಹೊಡೆಯುವರು! ಶಸ್ತ್ರವರ್ಷದಿಂದಲೇ ಒಬ್ಬರನ್ನೊಬ್ಬರು ದಹಿಸಿಬಿಡುವಂತೆ ತೋರುವರು! ಒಬ್ಬರನ್ನೊಬ್ಬರು ನೋಡಿ ಕೋಪದಿಂದ ಕಣ್ಣುಗಳನ್ನು ತೊಳಲಿಸುವರು! ಹೆಮ್ಮೆಯಿಂದ ನಗುವರು! ಬಾರಿಬಾರಿಗೂ ಒಬ್ಬರನ್ನೊಬ್ಬರು ಹೆದರಿಸುವರು! ಆಗಾಗ ಶಂಖಧ್ವನಿಗಳನ್ನು ಮಾಡುವರು! ಇಷ್ಟರಲ್ಲಿ ಭೀಮನು ಕರ್ಣನ ಕೈಯಲ್ಲಿದ್ದ ಬಿಲ್ಲನ್ನು ತಿರುಗಿ ಮುಷ್ಟಿಭಾಗದಲ್ಲಿ ಕತ್ತರಿಸಿದನು. ಶಂಖವರ್ಣವುಳ್ಳ ಕರ್ಣನ ಕುದುರೆಗಳನ್ನೂ, ಅವನ ಸಾರಥಿಯನ್ನೂ ಕೊಂದುಕೆಡಹಿದನು. ಆಗ ಕರ್ಣನ ಮನಸ್ಸಿಗೆ ಹಿಂದುಮುಂದು ತೋರದಂತಾಯಿತು. ಭೀಮನ ಬಾಣಗಳೂ ಮೇಲೆಮೇಲೆ ಬಂದು ಬೀಳುತ್ತಿದ್ದುವು. ಕರ್ಣನು ಹೀಗೆ ವಿಪತ್ತಿಗೆ ಸಿಕ್ಕಿಬಿದ್ದಿರುವುದನ್ನು ನೋಡಿ ನಿನ್ನ ಮಗನಾದ ದುರ್ಯೋಧನನು, ಕೋಪದಿಂದ ನಡುಗುತ್ತ, ಸಮೀಪದಲ್ಲಿದ್ದ ತನ್ನ ತಮ್ಮನಾದ ದುರ್ಜಯನನ್ನು ಕುರಿತು "ದುರ್ಜಯಾ! ಅದೋ! ಕರ್ಣನು ಭೀಮನ ಕೊಲೆಗೆ ಗುರಿಯಾಗುವಂತಿದೆ. ವಿಳಂಬಮಾಡಿದರೆ ಪಾಂಡವನು ರಾಧೇಯನನ್ನು ನುಂಗಿಬಿಡುವನು. ನೀನು ಬೇಗನೆ ಹೊರಟು, ಕರ್ಣನಿಗೆ ಬೆಂಬಲವಾಗಿದ್ದು, ಮೀಸೆಯಿಲ್ಲದ ಆ ದುರಾತ್ಮನನ್ನು ಕೊಂದು ಬಾ" ಎಂದನು. ಒಡನೆಯೇ ದುರ್ಜಯನು ಮುಂದೆ ಹೋಗಿ ಒಂಭತ್ತು ಬಾಣಗಳಿಂದ ಭೀಮನನ್ನು ಹೊಡೆದು, ಎಂಟು ಬಾಣಗಳಿಂದ ಅವನ ರಥಾಶ್ವಗಳನ್ನೂ, ಆರು ಬಾಣಗಳಿಂದ ಸಾರಥಿಯನ್ನೂ ಬಲವಾಗಿ ನೋಯಿಸಿದನು. ಮೂರು ಬಾಣಗಳಿಂದ ಅವನ ಧ್ವಜವನ್ನು ಮುರಿದನು. ತಿರುಗಿ ಭೀಮನಮೇಲೆ ಏಳು ಬಾಣಗಳನ್ನು ಹೊಡೆದನು. ಇದನ್ನು ನೋಡಿ ಸಹಿಸಲಾರದೆ ಭೀಮನು ಅತ್ಯಾಕ್ರೋಶದಿಂದ ಮುಂದೆಬಿದ್ದು, ಒಂದೇ ಕ್ಷಣಮಾತ್ರದಲ್ಲಿ ದುರ್ಜಯನ ರಥರಥಾಶ್ವಸಾರಥಿಗಳನ್ನೆಲ್ಲ ಬಡಿದು, ಮರ್ಮಸ್ಥಾನದಲ್ಲಿ ಹೊಡೆದು, ಅವನನ್ನೂ ಯಮಪುರಿಗೆ ಕಳುಹಿಸಿಬಿಟ್ಟನು. ದುರ್ಜಯನು ಮರಣಾವಸ್ಥೆಯಿಂದ ಕೆಳಗೆ ಬಿದ್ದು, ಅರ್ಧಜೀವದಲ್ಲಿ ಹೊರಳಾಡುವ ಹಾವಿನಂತೆ ಹೊರಳಾಡುತ್ತ ಆರ್ತಸ್ವರದಿಂದ ಕೂಗಿಕೊಂಡನು. ಆಗ ಕರ್ಣನು ನಿನ್ನ ಮಗನ

ದುರವಸ್ಥೆಯನ್ನು ನೋಡಿ ವ್ಯಸನಪಡುತ್ತ, ಅವನನ್ನು ಪ್ರದಕ್ಷಿಣೆಮಾಡಿ ಬರುತ್ತಿದ್ದಾಗ, ಭೀಮನು ನಗುತ್ತ ಅವನಮೇಲೆ ಬಾಣಗಳನ್ನೂ, ಶತಘ್ನಿಗಳನ್ನೂ, ಶಂಕುಗಳನ್ನೂ ವರ್ಷಿಸಿ ಅವನನ್ನು ಮುಚ್ಚಿಬಿಟ್ಟನು. ಆದರೂ ಕರ್ಣನು ಎದೆಗುಂದದೆ ಚೇತರಿಸಿಕೊಂಡು, ತಿರುಗಿ ಕೋಪದಿಂದ ಭೀಮನನ್ನು ಇದಿರಿಸಿನಿಂತನು.

ಇದು ನೂರ ಮೂವತ್ತುಮೂರನೆಯ ಅಧ್ಯಾಯವು.



## ಕರ್ಣನು ಪರಾಜಿತನಾಗಿ ಓಡಿದುದು.

ಮಹಾರಾಜಾ ! ಹೀಗೆ ಕರ್ಣನು ಭೀಮನಿಂದ ವಿರಥನಾಗಿ ಮಾಡಲ್ಪಟ್ಟು ಪರಾಜಿತನಾದರೂ, ತನ್ನ ಹಟವನ್ನು ಬಿಡದೆ, ಬೇರೊಂದು ರಥವನ್ನೇರಿ ತಿರುಗಿ ಯುದ್ಧಕ್ಕೆ ಬಂದು ಭೀಮನಮೇಲೆ ಬಾಣಗಳನ್ನು ಹೊಡೆಯಲಾರಂಭಿಸಿದನು. ಎರಡು ಮಹಾಗಜಗಳು ಕೊಂಬುಗಳಿಂದ ತಿವಿದಾಡುವಂತೆ ಇಬ್ಬರೂ ಹೋರಾಡಿದರು. ಇಬ್ಬರೂ ಕಿವಿಯವರೆಗೆ ಬಾಣಗಳನ್ನೆಳೆದು ಒಬ್ಬರನ್ನೊಬ್ಬರು ಹೊಡೆಯುತಿದ್ದರು. ಕರ್ಣನು ಬಾಣಪರಂಪರೆಗಳನ್ನು ಭೀಮನಮೇಲೆ ಪ್ರಯೋಗಿಸಿ, ಒಂದು ತೀಕ್ಷ್ಣಬಾಣವನ್ನು ಅವನ ಎದೆಗೆ ಗುರಿಯಿಟ್ಟು ಹೊಡೆದನು. ಆ ಬಾಣವನ್ನು ಭೀಮನು ಹತ್ತು ಬಾಣಗಳಿಂದ ತುಂಡುಮಾಡಿ, ಕರ್ಣನಮೇಲೆ ಎಪ್ಪತ್ತು ಬಾಣಗಳನ್ನು ಬಿಟ್ಟನು. ಕರ್ಣನು ತಿರುಗಿ ಭೀಮನ ಎದೆಗೆ ಒಂಭತ್ತು ಬಾಣಗಳನ್ನು ಹೊಡೆದು ಒಂದು ಬಾಣದಿಂದ ಭೀಮನ ಧ್ವಜವನ್ನು ಮುರಿದನು. ಮೂರು ಬಾಣಗಳಿಂದ ಸಾರಥಿಯಾದ ವಿಶೋಕನನ್ನು ಬಲವಾಗಿ ನೋಯಿಸಿದನು. ಇದನ್ನು ನೋಡಿ ಸಹಿಸಲಾರದೆ ಭೀಮನು ಅರುವತ್ತುಮೂರು ಬಾಣಗಳನ್ನು ಎಡೆಬಿಡದೆ ಪ್ರಯೋಗಿಸುತ್ತ, ಅಂಕುಶದಿಂದ ಆನೆಯನ್ನೂ, ಚಾಟಿಯಿಂದ ಕುದುರೆಯನ್ನೂ ಹೊಡೆಯುವಂತೆ ಕರ್ಣನನ್ನು ಬಲವಾಗಿ ನೋಯಿಸಿದನು. ಕರ್ಣನು ಇದರಿಂದ ಅತಿಕ್ರೋಧಾವಿಷ್ಟನಾಗಿ, ಕೆಂಪೇರಿದ ಕಣ್ಣುಗಳೊಡನೆ ಕಡೆಬಾಯಿಗಳನ್ನು ನಕ್ಕುತ್ತ, ಇಂದ್ರನು ಬಲಾಸುರನಮೇಲೆ ವಜ್ರಾಯುಧವನ್ನು ಪ್ರಯೋಗಿಸಿದಂತೆ, ಶರೀರಭೇದಕವಾದ ಒಂದು ತೀವ್ರ

ಬಾಣವನ್ನು ಭೀಮನಮೇಲೆ ಪ್ರಯೋಗಿಸಿದನು. ಆದರಿಂದ ಭೀಮನ ಮೈಗೆ ಗಾಯವುಂಟಾಯಿತು. ಇದರಿಂದ ಭೀಮನು ಕುಪಿತನಾಗಿ, ನಾಲ್ಕು ಮೊಳದುದ್ದವುಳ್ಳ ವಜ್ರಸಮಾನವಾದ ಮತ್ತು ಆರು ಏಣುಗಳುಳ್ಳ ದೊಡ್ಡ ಗದೆಯೊಂದನ್ನು ಕರ್ಣನ ರಥದಮೇಲೆ ಬೀಸಿದನು. ಆ ಗದೆಯಿಂದ ಕರ್ಣನ ರಥಾಶ್ವಗಳು ಹತವಾದುವು. ಆಮೇಲೆ ಭೀಮನು ಎರಡು ಕ್ಷುರಗಳಿಂದ ಕರ್ಣನ ಧ್ವಜವನ್ನು ಕತ್ತರಿಸಿ, ಅವನ ಸಾರಥಿಯನ್ನು ಬಾಣಗಳಿಂದ ಹೊಡೆದನು. ಕರ್ಣನು ತನ್ನ ರಥ ರಥಾಶ್ವ ಧ್ವಜ ಸಾರಥಿಗಳೆಲ್ಲ ನಷ್ಟವಾದರೂ ಬಿಡದೆ, ರಥದಿಂದ ಕೆಳಕ್ಕೆ ಹಾರಿ, ಕಾಲ್ನಡೆಯಲ್ಲಿಯೇ ನಿಂತು, ಬಿಲ್ಲನ್ನು ಮಿಡಿಯುತ್ತ ಭೀಮನಿಗಿದಿರಾದನು. ಹೀಗೆ ವಿರಥನಾಗಿದ್ದರೂ, ಕರ್ಣನು ತೋರಿಸಿದ ಪರಾಕ್ರಮವು ಆಶ್ಚರ್ಯಕರವಾಯಿತು. ಕರ್ಣನು ವಿರಥನಾಗಿ ಯುದ್ಧಮಾಡುವುದನ್ನು ನೋಡಿ ದುರ್ಯೋಧನನು ತನ್ನ ತಮ್ಮನಾದ ದುರ್ಮುಖನನ್ನು ಕರೆದು "ದುರ್ಮುಖಾ! ಅದೋ! ಅಲ್ಲಿ ಕರ್ಣನು ವಿರಥನಾಗಿ ನಿಂತು ಭೀಮನೊಡನೆ ಯುದ್ಧಮಾಡುತ್ತಿರುವನು. ನೀನು ಬೇಗನೆ ಅವನಿಗೆ ರಥವನ್ನೊದಗಿಸಿಕೊಡು" ಎನಲು, ದುರ್ಮುಖನು ತನ್ನ ರಥವನ್ನು ಕರ್ಣನ ಬಳಿಗೆ ತಂದು, ಕರ್ಣನಿಗೆ ಸಹಕಾರಿಯಾಗಿ, ಭೀಮನನ್ನು ಬಾಣಗಳಿಂದ ಹೊಡೆಯಲಾರಂಭಿಸಿದನು. ಈ ದುರ್ಮುಖನನ್ನು ಕಂಡೊಡನೆ ಭೀಮನಿಗೆ ತನ್ನ ಪ್ರತಿಜ್ಞೆಯನ್ನು ಪೂರೈಸಲು ಮತ್ತೊಂದು ಅವಕಾಶವು ಸಿಕ್ಕಿತೆಂದು ಮನಸ್ಸಿನಲ್ಲಿ ಸಂತೋಷವಾಯಿತು. ಕೋಪದಿಂದ ಕಡೆಬಾಯಿಗಳನ್ನು ನೆಕ್ಕುತ್ತ, ಒಂದುಕಡೆಯಲ್ಲಿ ಬಾಣಗಳಿಂದ ಕರ್ಣನನ್ನು ತಡೆಯುತ್ತ, ಆ ದುರ್ಮುಖನಕಡೆಗೆ ನೆಟ್ಟಗೆ ರಥವನ್ನು ಬಿಟ್ಟು, ಒಂಭತ್ತು ಬಾಣಗಳಿಂದ ದುರ್ಮುಖನನ್ನು ಕ್ಷಣಮಾತ್ರದಲ್ಲಿ ಯಮಪುರಿಗೆ ಕಳುಹಿಸಿಬಿಟ್ಟನು. ದುರ್ಮುಖನು ಸತ್ತೊಡನೆ ಕರ್ಣನು ಅವನ ರಥವನ್ನೇರಿ ಕುಳಿತು, ರಕ್ತದಿಂದ ತೊಯ್ದ ಅವನ ಮೃತಶರೀರವನ್ನು ನೋಡಿ ದುಃಖದಿಂದ ಕಣ್ಣೀರುಬಿಡುತ್ತ ಒಂದು ಮುಹೂರ್ತಕಾಲದವರೆಗೆ ಏನೊಂದೂ ತೋರದೆ ಸುಮ್ಮನೆ ಕುಳಿತಿದ್ದನು. ಆಮೇಲೆ ಕರ್ಣನು ಆ ದುರ್ಮುಖನ ಮೃತದೇಹವನ್ನು ಪ್ರದಕ್ಷಿಣವಾಗಿ ಸುತ್ತಿಬಂದು, ದುಃಖದಿಂದ ಬಿಸಿಬಿಸಿಯಾಗಿ ನಿಟ್ಟುಸಿರನ್ನು ಬಿಡುತ್ತ ಸುಮ್ಮನಿದ್ದನು. ಏನೂ ತೋರದವನಂತೆ

ಕರ್ಣನು ದಿಗ್ಭ್ರಾಂತನಾಗಿರುವ ಸಮಯದಲ್ಲಿ ಭೀಮನು ಅವನಮೇಲೆ ಹದಿನಾಲ್ಕು ಬಾಣಗಳನ್ನು ಪ್ರಯೋಗಿಸಿದನು. ಆ ಬಾಣಗಳು ಕೋಪಗೊಂಡ ಸರ್ಪಗಳಂತೆ ಮೊರೆಯುತ್ತ ಬಂದು, ಕರ್ಣನ ಕವಚವನ್ನು ಭೇದಿಸಿ, ಅವನ ದೇಹದ ರಕ್ತವನ್ನು ಪಾನಮಾಡಿ, ಕೊನೆಗೆ ಬಿಲದಲ್ಲಿ ಹೊಕ್ಕ ಹಾವುಗಳಂತೆ ನೆಲದಲ್ಲಿ ನಾಟಿದುವು. ಕರ್ಣನೂ ಕೋಪದಿಂದ ಭೀಮನಮೇಲೆ ಹದಿನಾಲ್ಕು ಬಾಣಗಳನ್ನು ಬಿಡಲು, ಅವು ಭೀಮನ ಎಡಭುಜಕ್ಕೆ ತಗುಲಿ ಬಹಳವಾಗಿ ಗಾಯವನ್ನುಂಟುಮಾಡಿದುವು. ಭೀಮನ ತೋಳಿನಲ್ಲಿ ನಾಟಿದ ಚಿನ್ನದ ಓಡಿಗಳುಳ್ಳ ಆ ಬಾಣಗಳಿಂದ, ಭೀಮನು ಅಸ್ತಮಯಕಾಲದಲ್ಲಿ ಕಿರಣಗಳನ್ನು ಹರಡುವ ಸೂರ್ಯನಂತೆ ಕಾಣಿಸಿದನು. ಭೀಮನ ಮೈಯಿಂದ ರಕ್ತವು ಸುರಿಯಿತು. ಭೀಮನಿಗೆ ದುಸ್ಸಹವಾದ ಕೋಪವುಂಟಾಯಿತು. ಒಡನೆಯೇ ಭೀಮನು ಅತಿತೀವ್ರವೇಗವುಳ್ಳ ಮೂರು ಬಾಣಗಳಿಂದ ಕರ್ಣನನ್ನು ಬಲವಾಗಿ ನೋಯಿಸಿ, ಅವನ ಸಾರಥಿಗೆ ಏಳು ಬಾಣಗಳನ್ನು ಹೊಡೆದನು. ಆ ಪ್ರಹಾರದಿಂದ ಕರ್ಣನಿಗೆ ಮೂರ್ಛೆಬಂದಂತಾಯಿತು. ಅವನು ಭಯದಿಂದ ರಥವನ್ನು ಹಿಂತಿರುಗಿಸಿಕೊಂಡು ಓಡಿಹೋದನು. ಇತ್ತಲಾಗಿ ಭೀಮನು ಜಯೋತ್ಸಾಹದಿಂದ ಧನುಷ್ಟಂಕಾರಮಾಡುತ್ತ, ರಣರಂಗದಲ್ಲಿ ಉರಿಯುವ ಬೆಂಕಿಯಂತೆ ತೋರುತ್ತಿದ್ದನು.

ಇದು ನೂರ ಮೂವತ್ತುನಾಲ್ಕನೆಯ ಅಧ್ಯಾಯವು.

---

{ ಭೀಮನು ದುರ್ಮರ್ಷಣನೇ ಮೊದಲಾದ ಐದುಮಂದಿ ಧೃತರಾಷ್ಟ್ರಪುತ್ರರನ್ನು ವಧಿಸಿದುದು. }

ಧೃತರಾಷ್ಟ್ರನು ಸಂಜಯನನ್ನು ಕುರಿತು “ಸಂಜಯಾ! ದೈವಪೌರುಷಗಳಲ್ಲಿ ದೈವವೇ ಪ್ರಬಲವಲ್ಲದೆ, ಪೌರುಷವೆಂಬುದು ಯಾವ ಪ್ರಯೋಜನಕ್ಕೂ ಬಾರದೆಂದೇ ನನಗೆ ತೋರುವುದು. ಇದಕ್ಕೆ ಈ ಕರ್ಣನೇ ನಿದರ್ಶನವಾಗಿರುವನು. ಲೋಕದಲ್ಲಿ ಕರ್ಣನಿಗೆ ಸಮಾನರಾದ ಬೇರೆ ವೀರರಿಲ್ಲ. ಕೃಷ್ಣನೊಡಗೂಡಿದ ಎಲ್ಲಾ ಪಾಂಡವರನ್ನೂ ಆ ಕರ್ಣನೊಬ್ಬನೇ

ಜಯಿಸಬಲ್ಲವನು. ಕರ್ಣನು ಮಹಾಬಲಾಢ್ಯನೆಂದೂ, ಶೂರನೆಂದೂ, ದೃಢ ಧನುರ್ಧಾರಿಯೆಂದೂ, ಎಂತಹ ಕಷ್ಟಗಳನ್ನಾದರೂ ಸಹಿಸಬಲ್ಲವನೆಂದೂ, ಅವನಿಗೆ ಸಮಾನವಾಗಿ ಯುದ್ಧಮಾಡತಕ್ಕವನೇ ಇಲ್ಲವೆಂದೂ ದುರ್ಯೋಧನನಿಂದ ನಾನು ಎಷ್ಟೋ ಸಾರಿ ಕೇಳಿದ್ದೆನು. ಆ ವಸುಷೇಣನ (ಕರ್ಣನ) ಆಶ್ರಯವು ತನಗಿರುವವರೆಗೆ, ದೇವತೆಗಳಾದರೂ ತನ್ನನ್ನು ಜಯಿಸಲಾರರೆಂದೂ, ಇನ್ನು ಕೇವಲ ದುರ್ಬಲರೂ, ಉತ್ಸಾಹಹೀನರೂ ಆದ ಆ ಪಾಂಡವರು ತನಗೆ ಎಷ್ಟುಮಾತ್ರದವರೆಂದೂ, ನನ್ನ ಮಗನು ಆಗಾಗ ನನ್ನೊಡನೆ ಹೆಮ್ಮೆಯನ್ನು ಹೇಳಿಕೊಳ್ಳುತ್ತಿದ್ದನು. ಅಂತಹ ಕರ್ಣನೇ ಈಗ ಭೀಮನಿಗೆ ಸೋತು, ಯುದ್ಧದಿಂದ ಓಡಿಹೋಗಿ, ಹಲ್ಲುಕಿತ್ತ ಹಾವಿನಂತಾದನಲ್ಲಾ! ಈಗ ದುರ್ಯೋಧನನು ಏನನ್ನು ಹೇಳುವನು? ಅಯ್ಯೋ! ಬುದ್ಧಿಗೆಟ್ಟ ದುರ್ಯೋಧನನು ಯುದ್ಧದಲ್ಲಿ ಪರಿಚಯವಿಲ್ಲದ ನನ್ನ ಮಗನಾದ ದುರ್ಮುಖನನ್ನು ಯುದ್ಧಕ್ಕೆ ಕಳುಹಿಸಿ, ಅವನನ್ನು ಭೀಮನ ಕೈಯಿಂದ ಕೊಲ್ಲಿಸಿದನು. ಬೆಂಕಿಯಲ್ಲಿ ಬಿದ್ದ ಪತಂಗದಂತೆ ಆ ಅರಿಯದ ಬಾಲಕನು ಭೀಮಾಗ್ನಿಗೆ ಆಹುತಿಯಾದನು. ಅಶ್ವತ್ಥಾಮ, ಕೃಪ, ಕರ್ಣ, ಶಲ್ಯರೇ ಮೊದಲಾದ ಮಹಾವೀರರೆಲ್ಲ ಒಂದಾಗಿ ಸೇರಿಯೂ ಭೀಮನ ಮುಂದೆ ಯುದ್ಧಕ್ಕೆ ನಿಲ್ಲಲಾರದೆ ಹೋದರು. ಭೀಮನು ಸಾವಿರಾನೆಗಳ ಬಲವುಳ್ಳವನೆಂದೂ, ಅವನ ಯುದ್ಧಕಾರ್ಯವು ಅತಿಕ್ರೂರವಾದುದೆಂದೂ ಅವರು ಚೆನ್ನಾಗಿ ತಿಳಿದುಕೊಂಡರು. ಹೀಗಿರುವಾಗ ಮೂಢರಾದ ನನ್ನ ಮಕ್ಕಳು ಕಾಲಾಂತಕನಂತೆ ಕ್ರೂರಕರ್ಮಿಯಾದ ಆ ಭೀಮನನ್ನು ಏತಕ್ಕಾಗಿ ಕೋಪಗೊಳಿಸುವರೋ? ಮಹಾಬಾಹುವಾದ ಆ ಕರ್ಣನೊಬ್ಬನುಮಾತ್ರ ಭೀಮನನ್ನು ಲಕ್ಷ್ಯಮಾಡದೆ ಯುದ್ಧದಲ್ಲಿ ತನ್ನಿಂದಾದಷ್ಟು ಹೆಣಗಾಡಿದನು. ಕೊನೆಗೆ ಅವನೂ ಪರಾಜಿತನಾಗಿ ಓಡಿಹೋದನು. ಸಂಜಯಾ! ನಿಜವಾಗಿಯೂ ಆ ಭೀಮನನ್ನು ಜಯಿಸಲು ಯಾರಿಂದಲೂ ಸಾಧ್ಯವಲ್ಲ! ಆ ಭೀಮನು ತಾನೊಬ್ಬನೇ ದ್ರೋಣನನ್ನು ಜಯಿಸಿ, ಕುರುಸೈನ್ಯವನ್ನೆಲ್ಲ ಭೇದಿಸಿಕೊಂಡು, ಅರ್ಜುನನ ದಾರಿಯನ್ನು ಹಿಡಿದು ಹೊರಟುಹೋದನು. ಇನ್ನೂ ಬದುಕಿರಬೇಕೆಂಬ ಆಸೆಯುಳ್ಳ ಯಾವನುತಾನೇ ವಜ್ರಹಸ್ತನಾದ ಮಹೇಂದ್ರನಂತೆ ಆಯುಧಪಾಣಿಯಾಗಿ ಯುದ್ಧಕ್ಕೆ ನಿಂತ ಆ ಭೀಮನ ಮುಂದೆ

ನಿಲ್ಲಬಲ್ಲನು? ಮನುಷ್ಯನು ಯಮಪುರಿಗೆ ಹೋಗಿಯಾದರೂ ಹಿಂತಿರುಗಿ ಬರಬಹುದೇಹೊರತು, ಭೀಮನನ್ನಿದಿರಿಸಿ ಹೋದವನು ತಿರುಗಿ ಬದುಕಿಬರಲಾರನು. ಬೆಂಕಿಯಲ್ಲಿ ಬೀಳುವ ಮಿಡಿತೆಗಳಂತೆ ಬುದ್ಧಿಗೆಟ್ಟು ಭೀಮನನ್ನಿದಿರಿಸಿದವರು ಸಾಯುವರೇಹೊರತು ಬೇರೆಯಲ್ಲ. ಹಿಂದೆ ದ್ಯೂತಸಭೆಯಲ್ಲಿ ಭೀಮನು ನನ್ನ ಮಕ್ಕಳೆಲ್ಲರನ್ನೂ ಕೊಲ್ಲುವುದಾಗಿ ಎಲ್ಲಾ ಕುರುಗಳ ಮುಂದೆ ಪ್ರತಿಜ್ಞೆಮಾಡಿದನಲ್ಲವೆ? ಈಗ ಅದನ್ನು ಸ್ಮರಣೆಗೆ ತಂದುಕೊಂಡು, ಕರ್ಣನು ಪರಾಜಿತನಾದುದನ್ನೂ ನೋಡಿ, ನನ್ನ ಮಗನಾದ ದುಶ್ಶಾಸನನೂ, ದುರ್ಯೋಧನನೂ ಭೀಮನ ಭಯದಿಂದ ತಾವು ಯುದ್ಧಕ್ಕೆ ಹೋಗದೆ ಸುಮ್ಮನಿರುವಂತಿದೆ. ಹಿಂದೆ ದುರ್ಬುದ್ಧಿಯುಳ್ಳ ಆ ಕರ್ಣನು, ದುಶ್ಶಾಸನನೊಡನೆ ಸೇರಿಕೊಂಡು ತಾನು ಪಾಂಡವರನ್ನು ಜಯಿಸುವುದಾಗಿ ಹೇಳಿಕೊಂಡನು. ಈಗ ಕರ್ಣನು ಭೀಮನಿಂದ ವಿರಥವಾಗಿ ಮಾಡಲ್ಪಟ್ಟು, ಭಯದಿಂದ ಪಲಾಯನಮಾಡಿದುದನ್ನೂ, ಹಿಂದೆ ತನ್ನಲ್ಲಿಗೆ ರಾಯಭಾರಿಯಾಗಿ ಬಂದ ಶ್ರೀಕೃಷ್ಣನನ್ನು ತಾನು ಅವಮಾನಪಡಿಸಿದುದನ್ನೂ ನೆನೆಸಿಕೊಂಡು, ಅವನು ಬಹಳವಾಗಿ ಪಶ್ಚಾತ್ತಾಪಪಡದೆ ಇರಲಾರನು. ಭೀಮನಿಂದ ಯುದ್ಧದಲ್ಲಿ ಹತರಾದ ತನ್ನ ಸಹೋದರರನ್ನು ನೋಡಿದಾಗ ದುರ್ಯೋಧನನು ತನ್ನ ತಪ್ಪನ್ನು ನೆನೆಸಿಕೊಂಡು ಪಶ್ಚಾತ್ತಾಪಪಡದೆ ಇರಲಾರನು. ಭೂಮಿಯಲ್ಲಿ ಬದುಕಬೇಕೆಂಬ ಆಸೆಯುಳ್ಳ ಯಾವನುತಾನೇ ಸಾಕ್ಷಾದ್ಯಮನಂತಿರುವ ಆ ಭೀಮನನ್ನು ಯುದ್ಧಕ್ಕಾಗಿ ಇದಿರಿಸಿ ನಿಲ್ಲುವನು? ಬಡಬಾಗ್ನಿಯ ಮುಖದಲ್ಲಿ ಬಿದ್ದವನೂ ಒಂದುವೇಳೆ ಅದರಿಂದ ತಪ್ಪಿಸಿಕೊಂಡು ಬರಬಹುದು. ಭೀಮನಿಗೆ ಇದಿರಾದವನು ಬದುಕಿಬರಲಾರನೆಂಬುದೇ ನನ್ನ ನಿಶ್ಚಯವು. ಸಂಜಯಾ! ಆ ಪಾಂಡವರಾಗಲಿ, ಪಾಂಚಾಲರಾಗಲಿ, ಕೃಷ್ಣಸಾತ್ಯಕಿಗಳಾಗಲಿ ಯುದ್ಧದಲ್ಲಿ ಕೋಪಾವಿಷ್ಟರಾಗಿ ನಿಂತಮೇಲೆ, ಶತ್ರುವಿನ ಜೀವರಕ್ಷಣೆಯೆಂಬುದನ್ನು ಅವರು ಅರಿತವರೇ ಅಲ್ಲ. ಅಯ್ಯೋ! ನನ್ನ ಮಕ್ಕಳಿಗೆಲ್ಲ ಈಗಲೇ ಮೃತ್ಯುಕಾಲವು ಬಂದೊದಗಿತೆಂಬುದು ನಿಶ್ಚಯವು" ಎಂದನು. ಅದಕ್ಕಾ ಸಂಜಯನು "ಓ ಕೌರವೇಂದ್ರಾ! ನಾನು ಮೊದಲೇ ಹೇಳಿದೆನಲ್ಲವೆ! ಈಗಿನ ಲೋಕನಾಶಕ್ಕೆ ಮೂಲವು ನೀನೇ ಎಂಬುದರಲ್ಲಿ ಸಂದೇಹವಿಲ್ಲ. ಮಕ್ಕಳ ಮಾತಿಗೆ ಮರುಳಾಗಿ, ಪಾಂಡ

ವರೊಡನೆ ಪ್ರಬಲವೈರವನ್ನು ಬೆಳೆಸಿಕೊಂಡವನೂ ನೀನೇ! ರೋಗಿಯು ಪಥ್ಯವಾದ ಔಷಧಿಯನ್ನು ನಿರಾಕರಿಸುವಂತೆ, ನೀನು ಇತರರ ಹಿತವಾದವನ್ನು ಕೇಳದೆ ಹೋದೆ. ನೀನಾಗಿಯೇ ಪ್ರಾಣಾಂತಕರವಾದ ಕಾಲಕೂಟ ವಿಷವನ್ನು ಕೈಯಿಂದೆತ್ತಿ ಕುಡಿದು, ಈಗ ಅದರ ಫಲವನ್ನು ಅನುಭವಿಸುವುದಿಲ್ಲವೆಂದರೆ ಸಾಧ್ಯವೇ? ಅದರ ಪೂರ್ಣಫಲವನ್ನು ಅನುಭವಿಸಿಯೇ ತೀರಬೇಕು. ಮಹಾಬಲಾಢ್ಯರಾದ ನಿನ್ನಕಡೆಯ ಯೋಧರು ಪರಾಜಿತರಾದುದಕ್ಕಾಗಿ ನೀನು ಅವರನ್ನು ನಿಂದಿಸಿ ಫಲವೇನು? ಮುಂದಿನ ಯುದ್ಧಕ್ರಮವನ್ನು ಕೇಳು. ಭೀಮನಿಂದ ಪರಾಜಿತನಾದ ಕರ್ಣನನ್ನು ನೋಡಿದೊಡನೆ ನಿನ್ನ ಮಕ್ಕಳಾದ ದುರ್ಮರ್ಷಣ, ದುಸ್ಸಹ, ದುರ್ಮದ, ದುರ್ಧರ, ಜಯರೆಂಬ ಐದುಮಂದಿಯೂ, ಮಹತ್ತಾದ ಕೋಪದಿಂದ ಎಲ್ಲಾ ಯುದ್ಧಸಾಧನಗಳೊಡನೆ ಭೀಮನನ್ನಿದಿರಿಸಿಬಂದರು. ಆ ಐದುಮಂದಿಯೂ ಭೀಮನ ಸುತ್ತಲೂ ಆವರಿಸಿಕೊಂಡು, ಅವನಮೇಲೆ ಬಾಣಗಳನ್ನು ಬಿಡಲಾರಂಭಿಸಿದರು. ಮಿಡಿತೆಗಳ ಹಿಂಡಿನಂತೆ ಅವರ ಬಾಣಗಳು ಭೂವ್ಯಾಕಾಶ ದಿಕ್ಕು ವಿದಿಕ್ಕುಗಳನ್ನೆಲ್ಲ ಮರೆಸಿದುವು. ಭೀಮನು ಅವರನ್ನು ನೋಡಿ ನಗುಮುಖದಿಂದಲೇ ಇದಿರಿಸಿನಿಂತನು. ನಿನ್ನ ಮಕ್ಕಳು ತನಗೆ ಬೆಂಬಲವಾಗಿ ಬಂದುದನ್ನು ನೋಡಿ, ಕರ್ಣನೂಕೂಡ ಹಿಂತಿರುಗಿ ಬಂದು, ಬಾಣವರ್ಷವನ್ನು ಕರೆಯಲಾರಂಭಿಸಿದನು. ನಿನ್ನ ಮಕ್ಕಳು ಅಡ್ಡೈಸಿ ನಿಂತರೂ ಲಕ್ಷ್ಯಮಾಡದೆ ಭೀಮನು ಕರ್ಣನನ್ನೇ ಇದಿರಿಸಿಹೋದನು. ನಿನ್ನ ಮಕ್ಕಳು ಕರ್ಣನನ್ನು ಭೀಮನ ಕೈಗೆ ಬಿಟ್ಟುಕೊಡದಂತೆ, ಅವನ ಸುತ್ತಲೂ ಆವರಿಸಿ ನಿಂತು, ಭೀಮನನ್ನು ಬಾಣಗಳಿಂದ ತಡೆಯುತ್ತಿದ್ದರು. ಆಗ ಭೀಮನು ಅತಿಕೋಪಾವಿಷ್ಟನಾಗಿ ನಿನ್ನ ಐದು ಮಕ್ಕಳನ್ನೂ ಐದೈದು ಬಾಣಗಳಿಂದ ಅವರ ರಥಾಶ್ವಸಾರಥಿಗಳೊಡನೆ ಕೊಂದುಕೆಡಹಿದನು. ಬಿರುಗಾಳಿಯಿಂದ ಭಗ್ನವಾದ ಪುಷ್ಪವೃಕ್ಷಗಳಂತೆ, ನಿನ್ನ ಮಕ್ಕಳು ತಮ್ಮತಮ್ಮ ಸಾರಥಿಗಳೊಡನೆ ರಥದಿಂದ ಕೆಳಕ್ಕುರುಳಿದರು. ಭೀಮಸೇನನ ಆಶ್ಚರ್ಯಪರಾಕ್ರಮವನ್ನು ಆಗ ನಾವು ನೋಡಿದೆವು. ಆಗ ಭೀಮನು ಒಂದುಕಡೆಯಲ್ಲಿ ಕರ್ಣನ ಮೇಲೆ ಬಾಣಗಳನ್ನು ಬಿಡುತ್ತ, ಅದೇಸಮಯದಲ್ಲಿ ನಿನ್ನ ಐದುಮಂದಿ ಮಕ್ಕಳನ್ನೂ ಕೊಂದುತೀರಿಸಿಬಿಟ್ಟನು. ಭೀಮನ ಈ ಕಾರ್ಯವನ್ನು ಕಂಡು

ಕರ್ಣನು ಅತ್ಯಾವೇಶದಿಂದ ಭೀಮನನ್ನು ದುರದುರನೆ ನೋಡಿದನು. ಭೀಮನೂ ಕೂಡ ಕೋಪದಿಂದ ಕೆಂಪೇರಿದ ಕಣ್ಣುಗಳೊಡನೆ ಧನುಸ್ಸನ್ನು ಟಂಕಾರಮಾಡುತ್ತ ಕರ್ಣನನ್ನು ದುರದುರನೆ ನೋಡುತ್ತಿದ್ದನು.

ಇದು ನೂರ ಮೂವತ್ತೈದನೆಯ ಅಧ್ಯಾಯವು.

{ ಭೀಮನು ಚಿತ್ರೋಪಚಿತ್ರರೇ ಮೊದಲಾದ ಧೃತರಾಷ್ಟ್ರ ಪುತ್ರರನ್ನು ಕೊಂದುದು. }

ಮಹಾರಾಜಾ! ತನ್ನ ತಮ್ಮಂದಿರ ವಧವನ್ನು ನೋಡುತ್ತಿದ್ದ ದುರ್ಯೋಧನನಿಗೆ, ಭೀಮನಮೇಲೆ ದುಸ್ಸಹವಾದ ಕೋಪವುಂಟಾಯಿತು. ತನ್ನ ಬದುಕಿನಲ್ಲಿಯೇ ಅವನಿಗೆ ಜಿಹಾಸೆ ಹುಟ್ಟಿತು. ಆಗ ಕರ್ಣನಿಗೂ ಕೂಡ ತಾನೇ ಇದರಲ್ಲಿ ಅಪರಾಧಿಯೆಂದು ಮನಸ್ಸಿಗೆ ತೋರಿತು. ತಮ್ಮ ಕಣ್ಣೆದಿರಾಗಿಯೇ ನಿನ್ನ ಮಕ್ಕಳು ಭೀಮನಿಂದ ಹತರಾದುದನ್ನು ನೋಡಿ ಕರ್ಣದುರ್ಯೋಧನರಿಬ್ಬರಿಗೂ ಮಹಾವ್ಯಸನವುಂಟಾಯಿತು. ಇಷ್ಟರಲ್ಲಿ ಭೀಮನು ಕರ್ಣನ ಮೇಲೆ ತೀಕ್ಷ್ಣಬಾಣಗಳನ್ನು ಹೊಡೆದನು. ಕರ್ಣನೂ ಭೀಮನನ್ನು ಐದು ಬಾಣಗಳಿಂದ ಹೊಡೆದು, ತಿರುಗಿ ಬಿಡಬಿಡದೆ, ಭೀಮನಮೇಲೆ ಎಪ್ಪತ್ತು ಬಾಣಗಳನ್ನು ಪ್ರಯೋಗಿಸಿದನು. ಭೀಮನು ಅವುಗಳನ್ನು ಲಕ್ಷ್ಯಮಾಡದೆ, ಕರ್ಣನಮೇಲೆ ಮೊದಲು ಒಂದು ಬಾಣವನ್ನು ಬಿಟ್ಟು, ತಿರುಗಿ ಅವನ ಮರ್ಮಸ್ಥಾನಗಳಿಗೆ ಐದು ತೀಕ್ಷ್ಣಬಾಣಗಳನ್ನು ಬಿಟ್ಟನು. ಒಂದು ಬಾಣದಿಂದ ಕರ್ಣನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿದನು. ಒಡನೆಯೇ ಕರ್ಣನು ಬೇರೊಂದು ಬಿಲ್ಲನ್ನು ಕೈಗೆತ್ತಿಕೊಂಡು, ಭೀಮನನ್ನು ಬಾಣಗಳಿಂದ ಮುಚ್ಚಿದನು. ಅದನ್ನೂ ಲಕ್ಷ್ಯಮಾಡದೆ ಭೀಮನು ಕರ್ಣನ ರಥಾಶ್ವಗಳನ್ನೂ ಸಾರಥಿಯನ್ನೂ ಕೊಂದುಕೆಡಹಿ, ಅಟ್ಟಹಾಸದಿಂದ ಕರ್ಣನನ್ನು ನೋಡಿ ನಕ್ಕನು. ತಿರುಗಿ ಕರ್ಣನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿದನು. ಒಡನೆಯೇ ಕರ್ಣನು ರಥದಿಂದ ಕೆಳಕ್ಕೆ ಹಾರಿ, ಒಂದು ಗದೆಯನ್ನು ಎತ್ತಿಕೊಂಡು, ಅದನ್ನು ವೇಗದಿಂದ ಭೀಮನಮೇಲೆ ಬೀಸಿದನು. ಭೀಮನು ತನ್ನೆದಿರಾಗಿ ಬರುತ್ತಿದ್ದ ಆ ಮಹಾಗದೆಯನ್ನು ನಡುದಾರಿಯಲ್ಲಿಯೇ ಕತ್ತರಿಸಿದನು.

ಆಗಲೇ ಕರ್ಣನನ್ನು ಕೊಲ್ಲಬೇಕೆಂದು ಅವನಮೇಲೆ ಎಡೆಬಿಡದೆ ಸಾವಿರಾರು ಬಾಣಗಳನ್ನು ವರ್ಷಿಸಿದನು. ಕರ್ಣನು ತನ್ನ ಬಾಣಗಳಿಂದ ಅವನ್ನೆಲ್ಲ ತಡೆದು, ಭೀಮನ ಕವಚವನ್ನು ಬಾಣಗಳಿಂದ ಭೇದಿಸಿದನು. ಭೀಮನ ಮೇಲೆ ತೀಕ್ಷ್ಣಗಳಾದ ಇಪ್ಪತ್ತೈದು ನಾರಾಚಗಳನ್ನು ಪ್ರಯೋಗಿಸಿದನು. ಅದಕ್ಕೆ ಪ್ರತಿಯಾಗಿ ಭೀಮನು ಅತಿ ತೀಕ್ಷ್ಣಗಳಾದ ಒಂಭತ್ತುಬಾಣಗಳಿಂದ ಕರ್ಣನನ್ನು ಹೊಡೆದನು. ಅದರಿಂದ ಕರ್ಣನ ಯುದ್ಧಕವಚವು ಹರಿದು, ಅವನ ಬಲದೋಳಿಗೆ ಪ್ರಬಲವಾದ ಗಾಯವುಂಟಾಯಿತು. ಭೀಮನ ಬಾಣಗಳ ಮುಂದೆ ನಿಲ್ಲಲಾರದೆ ಕರ್ಣನು ತಿರುಗಿ ಯುದ್ಧರಂಗದಿಂದ ಹಿಂತಿರುಗಿ ಓಡಿದನು. ಹೀಗೆ ಕಾಲ್ನಡೆಯಿಂದಲೇ ಓಡಿಬರುತ್ತಿರುವ ಕರ್ಣನನ್ನು ಕಂಡು, ನನ್ನ ಮಗನಾದ ದುರ್ಯೋಧನನು ತನ್ನ ಸೈನ್ಯಗಳನ್ನು ಕುರಿತು, "ಎಲೈ ಯೋಧರೇ! ಅದೋ! ಕರ್ಣನ ರಥದಬಳಿಗೆ ಬೇಗದಿಂದೋಡಿರಿ! ಭೀಮನಿಂದ ಅವನ ವಿಪತ್ತನ್ನು ತಪ್ಪಿಸಿರಿ!" ಎನಲು, ಅಲ್ಲಿದ್ದ ನಿನ್ನ ಮಕ್ಕಳಲ್ಲಿ ಕೆಲವರು ಅಣ್ಣನ ಮಾತನ್ನು ಕೇಳಿದೊಡನೆ ಭೀಮನಮೇಲೆ ಬಾಣಗಳನ್ನು ಬಿಡುತ್ತ ಇದಿರಿಸಿ ಹೋದರು. ಚಿತ್ರನು, ಉಪಚಿತ್ರನು, ಚಿತ್ರಾಕ್ಷನು, ಚಾರುಚಿತ್ರನು, ಶರಾಸನನು, ಚಿತ್ರಾಯುಧನು, ಚಿತ್ರವರ್ಮನು ಎಂಬ ಇಪ್ಪುಮಂದಿಯೂ, ಏಕಕಾಲದಲ್ಲಿ ಭೀಮನನ್ನು ಇದಿರಿಸುವುದಕ್ಕಾಗಿ ಓಡಿಹೋದರು. ಅವರು ತನ್ನ ಕಡೆಗೆ ಬರುತ್ತಿರುವಾಗಲೇ ಭೀಮನು ಒಂದೊಂದೇ ಬಾಣದಿಂದ ಅವರನ್ನೆಲ್ಲ ಕೊಂದುಕೆಡಹಿದನು. ಬಿರುಗಾಳಿಗೆ ಮುರಿದುಬಿದ್ದ ಮರದಂತೆ ಎಲ್ಲರೂ ಹತರಾಗಿ ಬಿದ್ದರು. ಅದನ್ನು ನೋಡಿ ಕರ್ಣನು ಮಹಾವ್ಯಸನದಿಂದ ಕಣ್ಣೀರುಬಿಟ್ಟನು. ಆಗ ಅವನಿಗೆ, ಹಿಂದೆ ವಿದುರನು ತನಗೆ ಹೇಳಿದ ಬುದ್ಧಿವಾದಗಳೆಲ್ಲ ನೆನಪಿಗೆ ಬಂದುವು. ಅದರಿಂದ ಅವನಿಗೆ ಮಹತ್ತಾದ ಪಶ್ಚಾತ್ತಾಪವು ಹುಟ್ಟಿತು. ಆದರೇನು? ತಿರುಗಿ ಬೇರೊಂದು ರಥವನ್ನೇರಿ ಕರ್ಣನು ವೇಗದಿಂದ ಬಂದು, ಭೀಮನನ್ನಿದಿರಿಸಿದನು. ಕರ್ಣಭೀಮರಿಬ್ಬರಿಗೂ ಬಾಣಯುದ್ಧವು ನಡೆಯಿತು. ಒಬ್ಬರ ಮೇಲೊಬ್ಬರು ಎಡಬಿಡದೆ ಬಾಣಗಳನ್ನು ವರ್ಷಿಸಿದರು. ಬಾಣಗಳಿಂದಾವರಿಸಲ್ಪಟ್ಟ ಇಬ್ಬರ ರಥಗಳೂ ಸೂರ್ಯಕಿರಣಗಳಿಂದ ಪೋಣಿಸಲ್ಪಟ್ಟ ಮಹಾಮೇಘಗಳಂತೆ ಕಾಣಿಸಿದುವು. ಭೀಮನು ಮೂವತ್ತಾರು ತೀಕ್ಷ್ಣಬಾಣ

ಳನ್ನು ಪ್ರಯೋಗಿಸಿ ಕರ್ಣನ ಕವಚವನ್ನು ಭೇದಿಸಿದನು. ಕರ್ಣನು ಅದಕ್ಕೆ ಪ್ರತಿಯಾಗಿ ಐವತ್ತುಬಾಣಗಳನ್ನು ಹೊಡೆದನು. ಬಾಣಘಾತ ದಿಂದ ಇಬ್ಬರ ಮೈಯಲ್ಲಿಯೂ ರಕ್ತವು ಕಿತ್ತುಕೊಂಡಿತು. ಇಬ್ಬರ ಕವಚ ಗಳೂ ಹರಿದುಹೋಗಿ, ಇಬ್ಬರೂ ಪರೆಯುರ್ಚಿದ ಹಾವುಗಳಂತೆ ಕಾಣುತ್ತಿ ದ್ದರು. ಇಬ್ಬರ ಕಣ್ಣುಗಳೂ ಕೋಪದಿಂದ ಕೆಂಪೇರಿ, ಹೊಗೆಯಿಲ್ಲದ ಕೆಂಡ ಗಳಂತೆ ಕಾಣುತ್ತಿದ್ದುವು. ಕೋರೆದಾಡೆಗಳಿಂದ ಹೋರಾಡುವ ಹೆಬ್ಬುಲಿಗ ಳಂತೆಯೂ, ಮಳೆಯನ್ನು ಕರೆಯುವ ಮೇಘಗಳಂತೆಯೂ ಅವರು ಬಾಣಗ ಳಿಂದ ಹೊಡೆದಾಡಿದರು. ಕೊಂಬುಗಳಿಂದ ಒಂದಕ್ಕೊಂದು ತಿವಿದಾಡುವ ಮಹಾಗಜಗಳಂತೆ ಒಬ್ಬರನ್ನೊಬ್ಬರು ಬಾಣಗಳಿಂದ ಭೇದಿಸುತ್ತಿದ್ದರು. ಆ ಗಾಗ ಒಬ್ಬರನ್ನೊಬ್ಬರು ನೋಡಿ ಸಿಂಹನಾದಮಾಡುವರು! ಹೆಮ್ಮೆಯಿಂದ ನಗುವರು! ಯುದ್ಧಕ್ರೀಡೆಗಳನ್ನು ತೋರಿಸುವರು! ವಿಚಿತ್ರ ಮಂಡಲಗತಿ ಗಳಿಂದ ರಥಗಳನ್ನು ನಡೆಸುವರು! ಹಸುವಿನ ಆಸೆಗಾಗಿ ಹೋರಾಡುವ ಗೂಳಿಗಳಂತೆಯೂ, ಸಿಂಹಗಳಂತೆಯೂ ಕೋಪದಿಂದ ಒಬ್ಬರನ್ನೊಬ್ಬರು ದುರುದುರನೆ ನೋಡುವರು! ಇಂದ್ರ ಬಲಿಗಳಂತೆ ಇಬ್ಬರೂ ಯುದ್ಧವನ್ನು ಮಾಡುವರು! ಆಗ ಭೀಮನು ಮಿಂಚಿನೊಡಗೂಡಿದ ಮಹಾಮೇಘದಂತೆ ಧನುರ್ಧಾರಿಯಾಗಿ ರಥದಲ್ಲಿ ಶೋಭಿಸುತ್ತ, ಬಾಣವರ್ಷವನ್ನು ಕರೆಯಲಾರಂ ಭಿಸಿದನು. ರಥನೇಮಿಧ್ವನಿಯೆಂಬ ಗುಡುಗಿನಿಂದಲೂ, ಬಿಲ್ಲೆಂಬ ಮಿಂಚಿ ನಿಂದಲೂ, ಬಾಣಗಳೆಂಬ ಜಲವರ್ಷದಿಂದಲೂ ಕೂಡಿದ ಭೀಮನೆಂಬ ಮಹಾಮೇಘವು, ಕರ್ಣನೆಂಬ ಪರ್ವತವನ್ನು ಶರವರ್ಷದಿಂದಮುಚ್ಚಿತು. ಭೀಮನ ಸಾವಿರಾರು ಬಾಣಗಳು ಕರ್ಣನಮೇಲೆ ಎಡಬಿಡದೆ ಬೀಳುತ್ತಿದ್ದುವು. ಆಗ ನಿನ್ನ ಮಕ್ಕಳಿಗೆ ಧನುರ್ಯುದ್ಧದಲ್ಲಿ ಭೀಮನ ಪರಾಕ್ರಮವು ಎಷ್ಟೆಂ ಬುದು ಚೆನ್ನಾಗಿ ತೋರಿತು. ಭೀಮನು ಹೀಗೆ ಮಹಾಧನುರ್ಧಾರಿಯೆನಿ ಸಿದ ಕರ್ಣನನ್ನು ಬಾಣಗಳಿಂದ ಮರೆಸಿ, ಅರ್ಜುನನಿಗೂ, ಕೃಷ್ಣನಿಗೂ, ಸಾತ್ಯಕಿಗೂ, ತನ್ನ ಚಕ್ರರಕ್ಷಕರಿಗೂ, ಸಂತೋಷವುಂಟಾಗುವಂತೆ ಯುದ್ಧ ಮಾಡಿದನು. ಆಗ ಭೀಮನ ವೀರ್ಯ ಧೈರ್ಯ ಪರಾಕ್ರಮಗಳನ್ನು ಕಂಡು, ನಿನ್ನ ಮಕ್ಕಳಿಗೆ ಪೂರ್ಣವಾಗಿ ಎದೆಗೆಟ್ಟುಹೋಯಿತು.

ಇದು ನೂರ ಮೂವತ್ತಾರನೆಯ ಅಧ್ಯಾಯವು.

—{ ಭೀಮನು ಕರ್ಣನಿಗೆ ಸಹಾಯಕರಾಗಿ ಬಂದ ವಿಕರ್ಣನೇ ಮೊದಲಾದವರನ್ನು ಕೊಂದುದು. }—

ರಾಜೇಂದ್ರಾ ! ಭೀಮನು ಜಯೋತ್ಸಾಹದಿಂದ ಧನುಸ್ಸನ್ನು ತಟ್ಟುವ ಧ್ವನಿಯನ್ನು ಕೇಳಿ, ಕರ್ಣನಿಗೆ ಸಹಿಸಲಾರದಂತಾಯಿತು. ಪ್ರತಿಗಜದ ಧ್ವನಿಯನ್ನು ಕೇಳಿ ರೇಗುವ ಕೊಬ್ಬಿದ ಕಾಡಾನೆಯಂತೆ, ಕರ್ಣನು ಕೋಪದಿಂದ ಕುದಿಯುತ್ತ, ಒಂದು ಮುಹೂರ್ತಕಾಲದವರೆಗೆ ಭೀಮನ ಕಣ್ಣಿಗೆ ಬೀಳದಂತೆ ಹೋಗಿ ಅಲ್ಲಲ್ಲಿ ಹತರಾಗಿ ಬಿದ್ದಿದ್ದ ನಿನ್ನ ಮಕ್ಕಳನ್ನೆಲ್ಲ ನೋಡಿ ಬಂದು, ಬುಸುಗುಟ್ಟುವ ಮಹಾಸರ್ಪದಂತೆ ವ್ಯಸನದಿಂದ ಬಿಸಿಬಿಸಿಯಾಗಿ ನಿಟ್ಟುಸಿರನ್ನು ಬಿಟ್ಟನು. ಕೆಂಪೇರಿದ ಕಣ್ಣುಗಳುಳ್ಳವನಾಗಿ ಕೋಪದಿಂದ ಬಂದು, ತಿರುಗಿ ಭೀಮನನ್ನಿದಿರಿಸಿ, ಭೀಮನಮೇಲೆ ಬಾಣಗಳನ್ನು ಪ್ರಯೋಗಿಸತೊಡಗಿದನು. ಸೂರ್ಯಕಿರಣಗಳಿಂದ ಆವರಿಸಲ್ಪಟ್ಟ ಪರ್ವತದಂತೆ, ಭೀಮನು ಕರ್ಣನ ಬಾಣಗಳಿಂದ ಮರೆಸಲ್ಪಟ್ಟನು. ಹಕ್ಕಿಗಳಂತೆ ಕರ್ಣನ ಬಾಣಗಳು ದಿಕ್ಕುಗಳಲ್ಲಿ ಹಾರಾಡುತ್ತಿದ್ದುವು. ಚಿನ್ನದ ಕಟ್ಟುಗಳಿಂದ ಶೋಭಿತಗಳಾದ ಕರ್ಣನ ಬಾಣಗಳು ಆಕಾಶದಲ್ಲಿ ಸಾಲಾಗಿ ಹೋಗುತ್ತಿರುವಾಗು ಹಂಸಶ್ರೇಣಿಗಳಂತೆ ತೋರಿದುವು. ಆಗ ಕರ್ಣನು ಬಿಟ್ಟ ಬಾಣಗಳು ಅವನ ಬಿಲ್ಲಿನಿಂದ ಮಾತ್ರವಲ್ಲದೆ, ಅವನ ಧ್ವಜದಿಂದಲೂ, ರಥದ ಗದ್ದುಗೆ, ಮೂಕಿ, ನೊಗ, ಇವೆಲ್ಲವುಗಳಿಂದಲೂ ಹೊರಟುಬರುವಂತೆ ಕಾಣಿಸಿದುವು: ಹೀಗೆ ಕರ್ಣನು ಎಡೆಬಿಡದೆ ಬಾಣಗಳನ್ನು ಪ್ರಯೋಗಿಸಿ ಆಕಾಶವನ್ನೆಲ್ಲ ಮರೆಸಿದನು. ಕಾಲಯಮನಂತೆ ಕಾಣುತ್ತಿರುವ ಭೀಮನನ್ನು ಕರ್ಣನೂ ತನ್ನ ಶಕ್ತಿಮೀರಿ ಬಾಣಗಳಿಂದ ಹೊಡೆಯುತ್ತಿದ್ದನು. ಕರ್ಣನ ಈ ಹಸ್ತವೇಗವನ್ನೂ, ಮಹತ್ತಾದ ಅವನ ಬಾಣಸಮೂಹಗಳನ್ನೂ ನೋಡಿ, ಭೀಮನು ಸಹಿಸಲಾರದೆ, ತನ್ನ ಶಕ್ತಿಮೀರಿ ಅವುಗಳನ್ನು ತಡೆಯುತ್ತಬಂದನು. ಭೀಮನು ಕರ್ಣನ ಬಾಣಗಳನ್ನೆಲ್ಲ ನಿಗ್ರಹಿಸಿ, ಇಪ್ಪತ್ತು ತೀಕ್ಷ್ಣಬಾಣಗಳನ್ನು ಕರ್ಣನಮೇಲೆ ಬಿಟ್ಟನು. ಕರ್ಣನು ತನ್ನನ್ನು ಬಾಣಗಳಿಂದ ಮುಚ್ಚಿದಂತೆ ಅವನೂ ತನ್ನ ಬಾಣದಿಂದ ಕರ್ಣನನ್ನು ಮರೆಸಿದನು. ಭೀಮನ ಈ ಕಾರ್ಯವನ್ನು ನೋಡಿ, ಪಾಂಡವಯೋಧರು ಮಾತ್ರವಲ್ಲದೆ, ನಿನ್ನಕಡೆಯವರೂ, ಆಶ್ಚರ್ಯಪಟ್ಟು ಅಭಿನಂದಿಸಿದರು. ಆಕಾಶದಲ್ಲಿ ನೋಡುತ್ತಿದ್ದ ಚಾರಣರೂ

ಅತ್ಯಂತಹರ್ಷಿತರಾದರು. ಭೂರಿಶ್ರವಸ್ಸು, ಕೃತವರ್ಮನು, ಅಶ್ವತ್ಥಾಮನು ಶಲ್ಯನು, ಜಯದ್ರಥನು, ಉತ್ತಮೌಜಸ್ಸು, ಯುಧಾಮನ್ಯು, ಕೃಷ್ಣಾರ್ಜುನರು, ಸಾತ್ಯಕಿ, ಹೀಗೆ ನಮ್ಮ ಮತ್ತು ಪಾಂಡವರ ಪಕ್ಷಗಳಲ್ಲಿ ಪ್ರಖ್ಯಾತಿಗೊಂಡ ಹತ್ತುಮಂದಿ ಮಹಾರಥರೂ, "ಭಲೆ! ಭಲೆ!" ಎಂದುಕೂಗಿ ಸಿಂಹನಾದಮಾಡಿದರು. ಈ ಸಂತೋಷಕೋಲಾಹಲವು ನಿನ್ನ ಮಗನಾದ ದುರ್ಯೋಧನನ ಕಿವಿಗೆ ಬಿದ್ದಿತು. ಆಗ ಅವನು ತನ್ನ ಸಮೀಪದಲ್ಲಿದ್ದ ರಾಜರನ್ನೂ, ರಾಜಪುತ್ರರನ್ನೂ, ತಮ್ಮಂದಿರನ್ನೂ, ಕರೆದು, "ಎಲೈ! ಬೇಗನೆ ಕರ್ಣನಬಳಿಗೆ ಹೋಗಿರಿ! ನಿಮಗೆ ಮಂಗಳವಾಗಲಿ! ಅವನನ್ನು ಆ ವೃಕೋದರನಿಂದ ರಕ್ಷಿಸಿರಿ. ಭೀಮನ ಬಾಣಗಳಿಗೆ ರಾಧೇಯನು ಬಲಿಯಾಗುವಂತಿದೆ. ನನ್ನ ಮಿತ್ರನನ್ನು ರಕ್ಷಿಸಿರಿ" ಎಂದನು. ದುರ್ಯೋಧನನ ಈ ಮಾತುಗಳನ್ನು ಕೇಳಿದೊಡನೆ ಅವನ ಏಳುಮಂದಿ ತಮ್ಮಂದಿರೂ ಒಂದಾಗಿ ಭೀಮನನ್ನು ಮುತ್ತಿಕೊಂಡು ಮಳೆಗಾಲದ ಮೇಘಗಳು ಬೆಟ್ಟದಮೇಲೆ ಮಳೆಯನ್ನು ಕರೆದಂತೆ, ಭೀಮನಮೇಲೆ ಬಾಣಗಳನ್ನು ಸುರಿದರು. ಪ್ರಳಯಕಾಲದಲ್ಲಿ ಏಳುಗ್ರಹಗಳು ಚಂದ್ರನನ್ನು ಪೀಡಿಸುವಂತೆ, ಆ ಏಳುಮಂದಿಯೂ ಭೀಮನನ್ನು ಬಹಳವಾಗಿ ಪೀಡಿಸತೊಡಗಿದರು. ಆಗ ಭೀಮನು ದೃಢಮುಷ್ಟಿಯುಳ್ಳ ಬಿಲ್ಲನ್ನು ಹಿಡಿದು, ಅತಿಮಾನುಷವಾದ ತನ್ನ ಪರಾಕ್ರಮವನ್ನು ತೋರಿಸಲಾರಂಭಿಸಿದನು. ಸೂರ್ಯನಂತೆ ಬೆಳಗುತ್ತಿರುವ ಏಳು ತೀವ್ರಬಾಣಗಳನ್ನು ಬಿಲ್ಲಿನಲ್ಲಿ ಸಂಧಿಸಿ, ಒಂದೇ ಸಲಕ್ಕೆ ಆ ಏಳುಮಂದಿಯ ಪ್ರಾಣಗಳನ್ನೂ ನೀಗಿಸುವಂತೆ ಅವುಗಳನ್ನು ಪ್ರಯೋಗಿಸಿದನು. ತನಗೆ ನಿನ್ನ ಮಕ್ಕಳಿಂದಾದ ಪೂರ್ವವೈರವನ್ನು ಸ್ಮರಿಸಿಕೊಂಡು, ಕೋಪದಿಂದ ಪ್ರಯೋಗಿಸಿದ ಆ ಏಳುಬಾಣಗಳು, ನಿನ್ನ ಏಳುಮಂದಿ ಮಕ್ಕಳ ದೇಹವನ್ನೂ ಭೇದಿಸಿಕೊಂಡು ಹೋಗಿ, ಅವರ ದೇಹರಕ್ತದಿಂದ ತೊಯ್ದು, ಕೆಂಪಾದ ಗರಿಗಳಿಂದ ಆಕಾಶದಲ್ಲಿ ಹಾರುವ ಗರುಡಪಕ್ಷಿಗಳಂತೆ ಕಾಣುತಿದ್ದುವು. ನಿನ್ನ ಮಕ್ಕಳೆಲ್ಲರೂ ಆ ಬಾಣಗಳಿಂದ ಭಿನ್ನಗಾತ್ರರಾಗಿ ರಥಗಳಿಂದ ಕೆಳಕ್ಕುರುಳಿದರು. ಶತ್ರುಂಜಯನು, ಶತ್ರುಸಹನು, ಚಿತ್ರನು, ಚಿತ್ರಾಯುಧನು, ಚಿತ್ರಸೇನನು, ವಿಕರ್ಣನು, ದೃಢನು, ಎಂಬೀ ನಿನ್ನ ಏಳುಮಂದಿಮಕ್ಕಳೂ ಆನೆಗಳಿಂದ ಮುರಿಯಲ್ಪಟ್ಟ ಮರಗಳು ಬೆಟ್ಟದ ತಪ್ಪಲಿನಿಂದ ಕೆಳಕ್ಕುರುಳಿದಂತೆ,

ರಥದಿಂದ ಕೆಳಕ್ಕುರುಳಿದರು. ಮಹಾರಾಜಾ! ಭೀಮನು ನಿನ್ನ ಮಕ್ಕಳನ್ನು ತನ್ನ ಕೈಯಿಂದಲೇ ಕೊಂದರೂ ಅವರ ಸಾವಿಗಾಗಿ ತಾನೂ ಪಶ್ಚಾತ್ತಾಪ ಪಡುತ್ತಿದ್ದನು. ಅದರಲ್ಲಿಯೂ ವಿಕರ್ಣನ ಸಾವಿಗಾಗಿ ಅವನು ವಿಶೇಷವಾಗಿ ವ್ಯಥೆಪಟ್ಟನು. ಆಗ ಭೀಮನು ಅವನ ಮೃತಶರೀರವನ್ನು ನೋಡಿ, "ಕುಮಾರ ವಿಕರ್ಣಾ! ನಾನು ದುರ್ಯೋಧನನನ್ನು ಅವನ ಎಲ್ಲಾ ಸಹೋದರರೊಡನೆ ಸೇರಿಸಿ ಕೊಲ್ಲುವುದಾಗಿ ಪ್ರತಿಜ್ಞೆಮಾಡಿ ಬಂದೆನು. ಅದರಿಂದ ನಿಮ್ಮೆಲ್ಲರನ್ನೂ ನಾನು ಕೊಲ್ಲಬೇಕಾಯಿತು. ನೀನೂ ನನ್ನಿಂದ ವಧಿಸಲ್ಪಟ್ಟೆ! ನಾನು ಪ್ರತಿಜ್ಞೆಯನ್ನು ರಕ್ಷಿಸಿದಂತಾಯಿತು. ಕ್ಷತ್ರಿಯಧರ್ಮವನ್ನು, ನೆನೆಸಿಕೊಂಡು ನಾನು ಯುದ್ಧರಂಗಕ್ಕೆಬಂದುದರಿಂದ, ನಿನ್ನನ್ನು ನಾನು ಕೊಲ್ಲಬೇಕಾಯಿತು. ಯುದ್ಧಧರ್ಮವೆಂಬುದೇ ಕ್ರೂರವು! ಅದು ರಾಜರಿಗೆ ಬಹಳ ಮುಖ್ಯವೆನಿಸಿದೆ. ನೀನು ನಮ್ಮ ಹಿತದಲ್ಲಿ ಅಕ್ಕರೆಯುಳ್ಳವನೆಂದು ನಾನು ಬಲ್ಲೆನು. ಯುದ್ಧಕ್ಕೆ ಬಂದು ನಿಂತವನನ್ನು ನ್ಯಾಯದಿಂದಲೋ, ಅನ್ಯಾಯದಿಂದಲೋ ಕೊಲ್ಲದೆ ತೀರದು. ಲೋಕದಲ್ಲಿ ಬೃಹಸ್ಪತಿಯಂತೆ ಅಗಾಧಬುದ್ಧಿಯುಳ್ಳವನೂ, ಗಂಗಾಪುತ್ರನೂ, ಮಹಾತೇಜಸ್ವಿಯೂ, ಆದ ಭೀಷ್ಮನೇ ನಮ್ಮಿಂದ ಹತನಾಗಿ ಮಲಗಿರುವನಲ್ಲವೆ? ಯುದ್ಧವೆಂಬುದೇ ಯಾವಾಗಲೂ ಅತಿಕ್ರೂರವಾದುದು" ಎಂದನು. ಧೃತರಾಷ್ಟ್ರಮಹಾರಾಜಾ! ಹೀಗೆ ಭೀಮನು ಕರ್ಣನ ಕಣ್ಣೆದಿರಾಗಿಯೇ ನಿನ್ನ ಮಕ್ಕಳನ್ನೆಲ್ಲ ಕೊಂದಮೇಲೆ, ದೊಡ್ಡ ಸಿಂಹನಾದವನ್ನು ಮಾಡಿದನು. ಈ ಧ್ವನಿಯು ಧರ್ಮರಾಜನ ಕಿವಿಗೆ ಬಿದ್ದಿತು. ಆ ಧ್ವನಿಯು ಭೀಮನ ಜಯೋತ್ಸಾಹವನ್ನು ಅವನಿಗೆ ಸೂಚಿಸುವಂತಾಯಿತು. ತಾನೂ ಭೀಮನ ಸಿಂಹನಾದಕ್ಕೆ ಪ್ರತಿಧ್ವನಿಯನ್ನುಕೊಟ್ಟು, ಅಭಿನಂದಿಸುವಂತೆ ಧರ್ಮರಾಜನು ಇತ್ತಲಾಗಿ ರಣವಾದ್ಯಗಳನ್ನು ಮೊಳಗಿಸಿದನು. ಆಮೇಲೆ ತಾನು ದ್ರೋಣನೊಡನೆ ಯುದ್ಧಕ್ಕೆ ಸಿದ್ಧನಾದನು. ಇತ್ತಲಾಗಿ ದುರ್ಯೋಧನನು ತನ್ನ ಮೂವತ್ತೊಂದುಮಂದಿ ಸಹೋದರರೂ ಹತರಾದುದನ್ನು ನೋಡಿದಾಗ, ಅವನಿಗೆ ವಿದುರನು ಹಿಂದೆ ತನಗೆ ಹೇಳಿದ ಬುದ್ಧಿವಾದಗಳೆಲ್ಲ ಸ್ಮರಣೆಗೆ ಬಂದುವು. ಆಗ ಅವನು ತನ್ನಲ್ಲಿ ತಾನು "ಹಿಂದೆ ವಿದುರನು ನನ್ನ ಹಿತಚಿಂತೆಗಾಗಿ ಹೇಳಿದ ಮಾತುಗಳೆಲ್ಲ ಈಗ ಚೆನ್ನಾಗಿ ನಿದರ್ಶನಕ್ಕೆ ಬರುತ್ತಿವೆ!" ಎಂದು ಸ್ವಲ್ಪಹೊತ್ತಿನವರೆಗೆ ಚಿಂತಾಕುಲನಾಗಿ ಮೌ

ನದಿಂದಿದ್ದನು. ರಾಜೇಂದ್ರಾ! ಹಿಂದೆ ದ್ಯೂತಸಭೆಯಲ್ಲಿ ದುರ್ಬುದ್ಧಿಯುಳ್ಳ ನಿನ್ನ ಮಗನು ದ್ರೌಪದಿಯನ್ನು ಸಭಾಸ್ಥಾನಕ್ಕೆ ಎಳೆಯಿಸಿ ತಂದು ಯಾವ ಯಾವ ತಿರಸ್ಕಾರವಾಕ್ಯಗಳನ್ನು ನುಡಿದನೋ, ಅಲ್ಪಬುದ್ಧಿಯುಳ್ಳ ಕರ್ಣನೂಕೂಡ ಆ ಸಭೆಯಲ್ಲಿ ನಿನ್ನ ಮತ್ತು ಪಾಂಡವರೆಲ್ಲರ ಮುಂದೆ ದ್ರೌಪದಿಯನ್ನುಕುರಿತು ಎಂತಹ ಕಠಿನವಾಕ್ಯಗಳನ್ನಾಡಿದನೋ, ಅವುಗಳಿಗೆ ತಕ್ಕ ಫಲವು ಈಗ ಕಾಣಿಸುತ್ತಿದೆ. ನೀನೂ, ನಿನ್ನ ಮಕ್ಕಳಾದ ಕೌರವರೂ, ಕೇಳುತ್ತಿರುವಹಾಗೆಯೇ ಕರ್ಣನು ಆ ರಾಜಸಭಾಮಧ್ಯದಲ್ಲಿ ದ್ರೌಪದಿಯನ್ನು ಕುರಿತು, "ಎಲೆ ಕೃಷ್ಣೇ! ಇನ್ನು ಪಾಂಡವರ ಕಾರ್ಯವು ಮುಗಿಯಿತು! ಅವರು ಶಾಶ್ವತವಾದ ನರಕದಲ್ಲಿ ಮುಳುಗಿಹೋದರು. ಬೇರೆ ಪತಿಯನ್ನು ಹುಡುಕು." ಎಂದನಲ್ಲವೆ! ಅದರ ಫಲವೇ ಇದು! ಇದಲ್ಲದೆ ಆ ಸಭೆಯಲ್ಲಿ ಪಾಂಡವರನ್ನೆಲ್ಲ ಎಳ್ಳಿನ ಜಳ್ಳುಕಾಳುಗಳಿಗೆ ಸಮಾನರೆಂದನು! ಇವೇಮೊದಲಾದ ಎಷ್ಟೋಕ್ರೂರವಾಕ್ಯಗಳನ್ನು ನುಡಿದು ನಿನ್ನಮಕ್ಕಳು ಪಾಂಡವರನ್ನು ಬಹಳವಾಗಿ ಕೋಪಗೊಳಿಸಿದರು. ಆಗ ತನ್ನ ಮನಸ್ಸಿನಲ್ಲಿ ಹುಟ್ಟಿದ ಕೋಪಾಗ್ನಿಯನ್ನು ಭೀಮನು ತನ್ನಲ್ಲಿಯೇ ಬಹುಪ್ರಯತ್ನದಿಂದ ಅಡಗಿಸಿಕೊಂಡಿದ್ದನು. ಕಳೆದ ಹದಿಮೂರು ವರ್ಷಗಳಿಂದ ಅಡಗಿಸಿಡಲ್ಪಟ್ಟಿದ್ದ, ಆ ಕೋಪಾಗ್ನಿಯನ್ನು ಈಗ ಹೊರಕ್ಕೆ ಕಕ್ಕುತ್ತ ನಿನ್ನ ಮಕ್ಕಳನ್ನೆಲ್ಲ ಅದಕ್ಕೆ ಆಹುತಿಯಾಗಿ ಮಾಡುತ್ತಿರುವನು. ವಿದುರನೂಕೂಡ ನಿನ್ನಮಕ್ಕಳ ಮತ್ತು ನಿನ್ನ ದುರ್ನಯಕ್ಕಾಗಿ ಮನಸ್ಸಿನಲ್ಲಿ ನೆಮ್ಮದಿಯಿಲ್ಲದೆ ಕೊರಗುತ್ತಿರುವನು. ಆ ನಿನ್ನ ದುರ್ನಯದ ಫಲವನ್ನೆಲ್ಲ ನೀನು ಈಗ ನಿನ್ನ ಎಲ್ಲಾ ಮಕ್ಕಳೊಡನೆ ಅನುಭವಿಸುತ್ತಿರುವೆ! ರಾಜಾ! ನೀನಾದರೋ ವಯೋವೃದ್ಧನು! ಧೀರನು! ಕಾರ್ಯತತ್ವಗಳನ್ನು ಚೆನ್ನಾಗಿ ವಿಮರ್ಶಿಸಬಲ್ಲವನು! ಅಂತಹ ನೀನೇ ನಿನ್ನ ಸುಹೃತ್ತುಗಳ ವಾಕ್ಯವನ್ನು ಕೇಳಲಿಲ್ಲ! ನೀನೂ ಬುದ್ಧಿಗೆಟ್ಟು ಪ್ರವರ್ತಿಸಿದೆ. ಇದಕ್ಕೆ ನಿನ್ನ ದುರ್ದೈವವಲ್ಲದೆ ಬೇರೆ ಕಾರಣವಿಲ್ಲ. ಇವೆಲ್ಲಕ್ಕೂ ನಿನ್ನ ಅಪರಾಧವೇ ಮೂಲವು. ಇನ್ನು ವ್ಯಸನಪಟ್ಟು, ಫಲವೇನು? ನಿನ್ನ ಮಕ್ಕಳ ಸಾವಿಗೆ ನೀನೇ ಮುಖ್ಯಕಾರಣವೆಂದು ನನಗೆ ತೋರಿದೆ! ನಿನ್ನ ಮುದ್ದುಮಗನಾದ ವಿಕರ್ಣನು ಹತನಾದನು. ವೀರ್ಯಶಾಲಿಯೆನಿಸಿಕೊಂಡ ಚಿತ್ರಸೇನನು ಸತ್ತನು. ನಿನ್ನ ಮಕ್ಕಳಲ್ಲಿ ಪ್ರಮುಖರಾಗಿ ಮಹಾರಥರೆನಿಸಿಕೊಂಡ ಬೇರೆ

ಹಲವರು ಯಮಪುರಿಯನ್ನು ಸೇರಿದರು. ನಿನ್ನ ಮಕ್ಕಳಲ್ಲಿ ತನ್ನ ಕಣ್ಣಿಗೆ ಬಿದ್ದವರನೆಲ್ಲ ಭೀಮನು ಆಗಾಗಲೇ ಕೊಂದು ತೀರಿಸಿಬಿಟ್ಟನು. ಧೃತರಾಷ್ಟ್ರ ಮಹಾರಾಜಾ! ನಿನ್ನ ದೆಸೆಯಿಂದ ಕೌರವಪಾಂಡವ ಸೈನ್ಯಗಳೆಲ್ಲ ಸಾವಿರಾರು ಕಡೆಗಳಲ್ಲಿ ದಗ್ಧವಾಗುತ್ತಿರುವುದನ್ನು ನಾವೆಲ್ಲರೂ ನೋಡಬೇಕಾಯಿತು" ಎಂದನು.

ಇದು ನೂರ ಮೂವತ್ತೇಳನೆಯ ಅಧ್ಯಾಯವು.



## ಭೀಮಕರ್ಣರ ಯುದ್ಧವು.

ಧೃತರಾಷ್ಟ್ರನು ಸಂಜಯನನ್ನು ಕುರಿತು "ಸೂತಾ! ನೀನು ಹೇಳಿದಂತೆ ಇವೆಲ್ಲಕ್ಕೂ ಮೂಲವು ವಿಶೇಷವಾಗಿ ನನ್ನ ದುರ್ನಯವೇ! ಅದಕ್ಕೆ ತಕ್ಕ ಫಲವನ್ನು ಈಗ ನಾನು ಅನುಭವಿಸುವೆನು. ನಡೆದುಹೋದುದು ಹೋಯಿತೆಂದು ನಾನು ಮನಸ್ಸಿನಲ್ಲಿ ಎಣಿಸಿದ್ದೆನು. ಆದರೆ, ಅದು ಈಗ ಇಂತಹ ಅನರ್ಥದಲ್ಲಿ ಪರಿಣಮಿಸಿತು. ಸಂಜಯಾ! ಈಗ ನಾನೇನನ್ನು ತಾನೇ ಮಾಡಲಿ? ನನ್ನ ದುರ್ನಯದಿಂದ ಇನ್ನೂ ಯಾವಯಾವ ವೀರರ ಕ್ಷಯವುಂಟಾಯಿತೆಂಬುದನ್ನು ವಿವರವಾಗಿ ತಿಳಿಸು. ನಾನು ಮನಸ್ಸನ್ನು ಕಲ್ಲಿನಂತೆ ಸ್ಥಿರಮಾಡಿಕೊಂಡಿರುವೆನು" ಎಂದನು. ಆಗ ಸಂಜಯನು "ಮಹಾರಾಜಾ! ಕೇಳು! ಭೀಮಕರ್ಣರಿಬ್ಬರೂ ಮೇಘಗಳಂತೆ ಒಬ್ಬರ ಮೇಲೊಬ್ಬರು ಬಾಣಗಳನ್ನು ಬಿಡುತಿದ್ದರು. ಭೀಮನ ಹೆಸರನ್ನು ಕೆತ್ತಿದ ಬಾಣಗಳು ಕರ್ಣನನ್ನೂ, ಕರ್ಣನ ಬಾಣಗಳು ಭೀಮನನ್ನೂ ಮರೆಸಿಬಿಟ್ಟುವು. ಬಾಣಗಳಸಮೂಹದಿಂದ ಸೈನ್ಯವೆಲ್ಲ ಕ್ಷೋಭಹೊಂದಿದಂತಾಯಿತು. ಭೀಮನ ಬಾಣಗಳಿಂದ ನಿನ್ನ ಸೈನ್ಯದಲ್ಲಿ ಎಷ್ಟೋಮಂದಿ ಸತ್ತರು. ಅಲ್ಲಲ್ಲಿ ಸತ್ತುಬಿದ್ದ ಆನೆ, ಕುದುರೆ, ಕಾಲಾಳುಗಳ ಶರೀರಗಳಿಂದ ರಣಾಂಗಣವೆಲ್ಲ ಮರೆಸಿಹೋಯಿತು. ಭೀಮನ ಬಾಣಗಳ ಪ್ರಹಾರವನ್ನು ತಡೆಯಲಾರದೆ "ಅಯ್ಯೋ! ಏನುಗತಿ?" ಎಂದು ನಿನ್ನ ಸೈನ್ಯಗಳು ದಿಕ್ಕುಗೆಟ್ಟು ಓಡುತ್ತಿದ್ದುವು. ಸಿಂಧು, ಸೌವೀರ, ಕೌರವಸೈನ್ಯಗಳೆಲ್ಲ ಅಲ್ಲಲ್ಲಿ ಚದರಿಹೋದುವು. ಭೀಮಕರ್ಣರಿಬ್ಬರ ಬಾಣಗಳಿಂದ ಉಭಯಸೈನ್ಯದಲ್ಲಿಯೂ

ಅನೇಕರು ಹತರಾದರು. ಎಷ್ಟೋಮಂದಿ ಅವರನ್ನು ಬಿಟ್ಟು ಓಡಿಹೋದರು. ಆಗ ಎಲ್ಲಾ ಸೈನಿಕರೂ ತಮ್ಮಲ್ಲಿ ಒಬ್ಬರಿಗೊಬ್ಬರು "ಅಯ್ಯೋ! ಆ ಪಾಂಡವರಿಗಾಗಿಯೇ ದೇವತೆಗಳು ನಮ್ಮನ್ನೆಲ್ಲ ಈವಿಧವಾದ ಸ್ಥಿತಿಗೆ ತಂದಂತಿದೆ. ನಮ್ಮ ಸೈನ್ಯವೆಲ್ಲಾ ನಾಶವಾಗುತ್ತಿದೆ" ಎಂದು ಕೂಗಿಡುತ್ತ ಕರ್ಣನ ಬಾಣಗಳು ಬೀಳುವ ಸ್ಥಳವನ್ನು ಬಿಟ್ಟು ದೂರಕ್ಕೆ ಹೋಗಿ ನಿಂತು ಸುಮ್ಮನೆ ನೋಡುತ್ತಿದ್ದರು. ರಣರಂಗದಲ್ಲಿ ಆನೆ ಕುದುರೆ ಕಾಲಾಳುಗಳ ದೇಹದಿಂದ ಹೊರಟ ರಕ್ತನದಿಗಳು ಭೀರುಗಳಿಗೆ ಭಯವನ್ನೂ, ಶೂರರಿಗೆ ಯುದ್ಧೋತ್ಸಾಹವನ್ನೂ ಹೆಚ್ಚಿಸುವಂತೆ ಪ್ರವಹಿಸಲಾರಂಭಿಸಿತು. ಮೃತಶರೀರಗಳಿಂದ ರಣಾಂಗಣವೆಲ್ಲ ಆಚ್ಛಾದಿತವಾಯಿತು. ರಥದ ಹಿಂದಿನ ಸಣ್ಣ ಬಂಡಿಗಳು, ಧ್ವಜಗಳು, ಚಕ್ರಗಳು, ಅಚ್ಚು, ಮೂಕಿ, ಆನೆಕುದುರೆಗಳ ಆಭರಣಗಳು, ಚಿನ್ನದ ಕಟ್ಟುಳ್ಳ ಬಿಲ್ಲುಗಳು, ಬಾಣಗಳು, ನಾರಾಚಗಳು, ಇವೆಲ್ಲವೂ ಸಾವಿರಾರು ಸಂಖ್ಯೆಯಿಂದ ಮುರಿದುಬಿದ್ದಿದ್ದುವು. ಭೀಮಕರ್ಣರ ಬಾಣಗಳಿಂದ ಮುರಿದ ಪ್ರಾಸ, ತೋಮರ, ಕತ್ತಿ, ಕೊಡಲಿ, ಗದೆ, ಒನಕೆ, ಪಟ್ಟಸ, ವಜ್ರ, ಶಕ್ತಿ, ಪರಿಘ, ಶತಘ್ನಿ, ಮುಂತಾದ ಆಯುಧಗಳಿಂದ ಭೂಮಿಯೆಲ್ಲ ಆವೃತವಾಯಿತು. ರಾಜರು ಧರಿಸಿದ್ದ ಕೈಬಳೆ, ತೋಳ್ಬಳೆ, ಕಿರೀಟ ಕುಂಡಲಗಳು, ಹಾರಗಳು, ಕೈಚೀಲಗಳು, ಚೂಡಾಮಣಿಗಳು, ತಲೆಪಾಗುಗಳು, ಚಿನ್ನದ ದಾರಗಳು, ಕವಚಗಳು, ಚಿನ್ನದ ಕಂಠಾಭರಣಗಳು, ಇವೆಲ್ಲವೂ ಅಪರಿಮಿತವಾಗಿ ಚೆಲ್ಲಾಡಿದ್ದುವು. ಛತ್ರ ಚಾಮರ ವ್ಯಜನಗಳೂ, ರಾಜರ ಉಡುಗಗಳೂ ಛಿನ್ನಭಿನ್ನವಾಗಿ ಬಿದ್ದಿದ್ದುವು. ಇದರಿಂದ ರಣಭೂಮಿಯು ಗ್ರಹಗಣಗಳಿಂದ ತುಂಬಿದ ಆಕಾಶದಂತೆ ಕಾಣಿಸಿತು. ಅಚಿಂತ್ಯವೂ, ಅದ್ಭುತವೂ, ಅತಿಮಾನುಷವೂ ಆದ ಆ ಭೀಮಕರ್ಣರ ವೀರಕಾರ್ಯಗಳು ಆಕಾಶದಲ್ಲಿ ನೆರೆದು ನೋಡುತಿದ್ದ ಸಿದ್ಧಚಾರಣರಿಗೆಲ್ಲ ಅತ್ಯಾಶ್ಚರ್ಯವನ್ನುಂಟುಮಾಡಿತು. ಅಗ್ನಿವಾಯುಗಳೆರಡೂ ಸೇರಿ ಒಣಗಿದ ಪೊದೆಯನ್ನು ದಹಿಸುವಂತೆ ಕರ್ಣಭೀಮರ ಸೇರುವೆಯು ಸೈನ್ಯವನ್ನೆಲ್ಲ ದಹಿಸುತ್ತಿದ್ದಿತು. ಕೋಪದಿಂದ ಕೈಕಲೆತ ಎರಡು ಆನೆಗಳು ಹೊಡಕೆಯ ತೋಟಕ್ಕೆ ನುಗ್ಗಿದಂತೆ, ಈ ಭೀಮಕರ್ಣರ ಹೋರಾಟದಲ್ಲಿ ರಣಕ್ಷೇತ್ರವೆಲ್ಲ ಕ್ಷುಭಿತವಾಯಿತು.

ಹೀಗೆ ಕರ್ಣಭೀಮರಿಗೆ ನಡೆದ ಭಯಂಕರಯುದ್ಧದಲ್ಲಿ ನಿನ್ನ ಸೈನ್ಯವೆಲ್ಲ ಮಹಾನರ್ಥಕ್ಕೆ ಈಡಾಯಿತು" ಎಂದನು.

ಇದು ನೂರ ಮೂವತ್ತೆಂಟನೆಯ ಅಧ್ಯಾಯವು.

---

ಭೀಮಕರ್ಣರ ಯುದ್ಧವು.

ಓ ಮಹಾರಾಜಾ! ಆಮೇಲೆ ಕರ್ಣನು ಭೀಮನನ್ನು ಮೂರು ಬಾಣಗಳಿಂದ ಹೊಡೆದು, ತಿರುಗಿ ಅವನಮೇಲೆ ಆರು ತೀವ್ರಬಾಣಗಳನ್ನು ಬಿಟ್ಟನು. ಇನ್ನೂ ಮೇಲೆಮೇಲೆ ವಿಚಿತ್ರಶರವರ್ಷಗಳನ್ನು ಕರೆಯುತ್ತಿದ್ದನು. ಬೆಟ್ಟದಮೇಲೆ ಕಲ್ಲನ್ನೆಸೆದಂತೆ ಭೀಮನಿಗೆ ಅದು ಲಕ್ಷ್ಯವಿಲ್ಲದಂತಾಗಿ ಅವನು ನಿಶ್ಚಲನಾಗಿದ್ದನು. ಆಮೇಲೆ ಭೀಮನು ಎಣ್ಣೆಹಾಕಿ ತೀಡಿ ತೀಕ್ಷ್ಣವಾದ ಒಂದು ಬಾಣವನ್ನು ಕರ್ಣನ ಕಿವಿಗೆ ಗುರಿಯಿಟ್ಟು ಹೊಡೆದನು. ಆ ಬಾಣದಿಂದ ಕರ್ಣನ ಕಿವಿಯಲ್ಲಿದ್ದ ಸುವರ್ಣಕುಂಡಲವು ಹರಿದು ಆಕಾಶದಿಂದ ಗ್ರಹವು ಬೀಳುವಂತೆ ಅತಿಪ್ರಕಾಶದೊಡನೆ ಕೆಳಗೆಬಿದ್ದಿತು. ಆಮೇಲೆ ಭೀಮನು ಮತ್ತೊಂದು ಬಾಣವನ್ನು ಕರ್ಣನ ಎದೆಗೆ ಹೊಡೆದನು. ಆಮೇಲೆ ಪರೆಯುರ್ಚಿದ ಸರ್ಪದಂತಿರುವ ಹತ್ತು ನಾರಾಚಗಳನ್ನು ಕರ್ಣನ ಎದೆಗೆ ಗುರಿಯಿಟ್ಟು ಹೊಡೆದನು. ಆ ಬಾಣಗಳು ಕರ್ಣನ ಹಣೆಯಲ್ಲಿ ಸಾಲಾಗಿ ನಾಟಿ, ಅವನ ತಲೆಯಲ್ಲಿ ಅದು ಕರೀನೈದಿಲೆಯ ಮಾಲೆಯಂತೆ ಕಾಣಿಸಿತು. ಈ ಬಾಣಗಳಿಂದ ಕರ್ಣನಿಗೆ ಮೂರ್ಛೆ ಬಂದಂತಾಗಿ, ಅವನ ಕಣ್ಣುಗಳು ಮುಚ್ಚಿಹೋದುವು. ರಥದ ಮೂಕಿಯನ್ನು ಹಿಡಿದುಕೊಂಡು ಹಾಗೆಯೇ ಮಲಗಿಬಿಟ್ಟನು. ಅವನ ದೇಹವೆಲ್ಲ ರಕ್ತಮಯವಾಯಿತು. ಆದರೇನು? ತಿರುಗಿ ಒಂದು ಮುಹೂರ್ತಕಾಲದಲ್ಲಿ ಅವನು ಚೇತರಿಸಿಕೊಂಡು, ಮೊದಲಿಗಿಂತಲೂ ಹೆಚ್ಚಾದ ಕೋಪಾವೇಶದಿಂದ ಭೀಮನ ರಥಕ್ಕೆದಿರಾಗಿ ನಿಂತು, ನೂರು ಬಾಣಗಳನ್ನು ಪ್ರಯೋಗಿಸಿದನು. ಭೀಮನ ಎದೆಗೆ ಗುರಿಯಿಟ್ಟು ಒಂಭತ್ತು ಬಾಣಗಳನ್ನು ಹೊಡೆದನು. ಕೋರೆಹಲ್ಲುಗಳಿಂದ ಕಚ್ಚಾಡುವ ಹೆಬ್ಬುಲಿಗಳಂತೆ ಭೀಮಕರ್ಣರಿಬ್ಬರೂ ಹೊಡೆದಾಡುತ್ತ, ಮಹಾಮೇಘಗಳು ಮಳೆಸುರಿಸುವಂತೆ ಬಾಣವರ್ಷವನ್ನು

ಕರೆಯುತ್ತಿದ್ದರು. ನಾಣುಗಳನ್ನು ತಟ್ಟುವುದರಿಂದಲೂ, ಬಾಣಪ್ರಯೋಗದಿಂದಲೂ ಒಬ್ಬರನ್ನೊಬ್ಬರು ಹೆದರಿಸುವರು! ಒಬ್ಬರು ಮಾಡಿದುದಕ್ಕೆ ಮತ್ತೊಬ್ಬರು ಪ್ರತಿಮಾಡುವರು! ಈ ನಡುವೆ ಭೀಮನು ಒಂದು ಕ್ಷುರಪ್ರದಿಂದ ಕರ್ಣನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿಬಿಟ್ಟನು. ಒಡನೆಯೇ ಕರ್ಣನು ಇನ್ನೂ ದೃಢವಾದ ಬೇರೊಂದು ಬಿಲ್ಲನ್ನು ಕೈಗೆತ್ತಿಕೊಳ್ಳಲು, ಅದನ್ನೂ ಭೀಮನು ಅರ್ಧನಿಮಿಷದಲ್ಲಿ ತುಂಡುಮಾಡಿಬಿಟ್ಟನು. ಆಮೇಲೆ ಕರ್ಣನು ಮೂರನೆಯ ಬಿಲ್ಲನ್ನು ತೆಗೆದುಕೊಳ್ಳಲು ಅದನ್ನೂ ಭೀಮನು ತುಂಡುಮಾಡಿದನು. ಹೀಗೆ ಭೀಮನು ಕರ್ಣನ ಹದಿನೆಂಟು ಬಿಲ್ಲುಗಳನ್ನೂ ಕತ್ತರಿಸಿಬಿಟ್ಟನು. ಕರ್ಣನು ಬೇರೆಬೇರೆ ಹೊಸಬಿಲ್ಲುಗಳನ್ನು ತರಿಸಿಕೊಂಡಾಗಲೆಲ್ಲಾ, ಭೀಮನು ನಿಮಿಷಾರ್ಧದಲ್ಲಿ ಅವುಗಳನ್ನು ಕತ್ತರಿಸುತ್ತಬಂದನು. ಅಲ್ಲದೆ ಕರ್ಣನು ಧನುರ್ಧಾರಿಯಾಗಿ ನಿಂತಿರುವಾಗಲೇ, ಕೌರವರು, ಸೌವೀರರು, ಸಿಂಧುದೇಶದವರು, ಮುಂತಾದ ವೀರಸೈನಿಕರೆಲ್ಲ ಭೀಮನಿಂದ ಹತರಾಗುತ್ತಿದ್ದರು. ಕೌರವಸೈನಿಕರ ಕವಚಗಳು, ಧ್ವಜಗಳು, ಶಸ್ತ್ರಗಳು, ರಥ ಗಜ ತುರಗ ಪದಾತಿಗಳು, ಇವೆಲ್ಲಾ ಬಹಳವಾಗಿ ರಣಾಂಗಣದಲ್ಲಿ ಛಿನ್ನಭಿನ್ನವಾಗಿ ಬಿದ್ದಿದ್ದುವು. ಅನೇಕವೀರರು ಜೀವಕಳೆಯಿಲ್ಲದೆ ನೆಲದಲ್ಲಿ ಬಿದ್ದು, ಕೊಳೆಮುಚ್ಚಿದ ಮೈಯಿಂದ ಮಲಗಿದ್ದರು. ಎಷ್ಟೋ ವಾಹನಗಳು ಸತ್ತುಬಿದ್ದುವು. ಇದನ್ನೆಲ್ಲ ನೋಡಿ ಕರ್ಣನಿಗೆ ಮೈಯುರಿದಂತಾಯಿತು. ತನ್ನ ಮಹಾಧನುಸ್ಸನ್ನು ಟಂಕಾರಮಾಡುತ್ತ ಭಯಂಕರದೃಷ್ಟಿಯಿಂದ ಭೀಮನನ್ನು ದುರದುರನೆ ನೋಡಿದನು. ಶರತ್ಕಾಲದ ಮಧ್ಯಾಹ್ನ ಸೂರ್ಯನಿಂದ ಕಿರಣಗಳು ಹೊರಡುವಂತೆ ಅವನ ಕೈಯಿಂದ ಬಾಣಗಳು ಹೊರಡುತ್ತಿದ್ದುವು. ಕರ್ಣನ ಆಕೃತಿಯು ಆಗ ಉರಿಯುವ ಸೂರ್ಯನಂತೆ ಕಾಣುತ್ತಿದ್ದಿತು ಕರ್ಣನ ಮೈಯಲ್ಲಿಯೂ ಭೀಮನ ನೂರಾರು ಬಾಣಗಳು ನಾಟಿಕೊಂಡುವು. ಧನುಸ್ಸನ್ನೆಳೆಯುವುದು, ಬಾಣಗಳನ್ನು ಬಿಡುವುದು, ಇವುಗಳೊಂದೂ ತಿಳಿಯದಂತೆ, ಆಗ ಕರ್ಣನು ತನ್ನ ಹಸ್ತವೇಗವನ್ನು ತೋರಿಸುತ್ತಿದ್ದನು. ಎಡಬಲಪಾರ್ಶ್ವಗಳೆರಡಕ್ಕೂ ಎಡೆಬಿಡದೆ ಬಾಣಗಳನ್ನು ಸುರಿಸುತ್ತಿದ್ದ ಆ ಕರ್ಣನ ಕೈಯಲ್ಲಿದ್ದ ಧನುಸ್ಸು ಅಗ್ನಿಚಕ್ರದಂತೆ ತೋರುತ್ತಿದ್ದಿತು. ಕರ್ಣನ ಬಾಣಗಳು ದಿಕ್ಕುಗಳನ್ನೆಲ್ಲ ಮುಚ್ಚಿ

ದುವು. ಚಿನ್ನದ ಹಿಡಿಗಳುಳ್ಳ ಕರ್ಣನ ಬಾಣಗಳು ಉದ್ದಕ್ಕೂ ಆಕಾಶದಲ್ಲಿ ವ್ಯಾಪಿಸಿದುವು. ಅವನ ಬಿಲ್ಲನಿಂದ ಆರಂಭಿಸಿ, ಆಕಾಶದ ಉದ್ದಕ್ಕೂ ಅವನ ಬಾಣಗಳು ಗುಂಪಾಗಿ ಹಾರುವ ಕ್ರೌಂಚಶ್ರೇಣಿಗಳಂತೆ ಕಾಣಿಸುತ್ತ, ಭೀಮನ ರಥದಮೇಲೆ ಅವಿಚ್ಛಿನ್ನವಾಗಿ ಬೀಳುತ್ತಿದ್ದುವು. ಮಿಡಿತೆಗಳ ಹಿಂಡಿನಂತೆ ಆಕಾಶವನ್ನೆಲ್ಲ ಆವರಿಸಿಕೊಂಡುವು. ಸಾವಿರಲೆಕ್ಕದ ಬಾಣಗಳು ಸಾಲಾಗಿ ಉದ್ದವಾದ ಒಂದೇ ಬಾಣದಂತೆ ಕಾಣಿಸುತ್ತಿದ್ದುವು. ಮೇಘವು ವರ್ಷಧಾರೆಯಿಂದ ಪರ್ವತವನ್ನು ಮುಚ್ಚುವಂತೆ ಕರ್ಣನು ಭೀಮನ ಸುಳಿವೇ ಕಾಣದಂತೆ ಮರೆಸಿಬಿಟ್ಟನು. ಧೃತರಾಷ್ಟ್ರಮಹಾರಾಜಾ! ಎಷ್ಟಾದರೇನು? ಆಗ ಭೀಮನ ಬಲವೀರ್ಯಪರಾಕ್ರಮಗಳನ್ನೂ, ಅವನ ದೃಢಪ್ರಯತ್ನವನ್ನೂ ಕಂಡುಕೊಳ್ಳಲು, ನಿಮ್ಮವರಿಗೆ ಒಳ್ಳೇ ಅವಕಾಶವು ಸಿಕ್ಕಿತು. ಏಕೆಂದರೆ, ಅಷ್ಟೊಂದು ಪ್ರಬಲವಾದ ಬಾಣವರ್ಷವನ್ನೂ ಲಕ್ಷ್ಯಮಾಡದೆ ಭೀಮನು ಕರ್ಣನನ್ನಿದಿರಿಸಿದನು. ಇಂದ್ರಚಾಪದಂತೆ ಭೀಮನ ಕೈಯಲ್ಲಿ ಮಂಡಲಾಕಾರವಾದ ಮಹಾಧನುಸ್ಸು ಆಡುತ್ತಿದ್ದಿತು. ಅದರಿಂದ ಪರಂಪರೆಯಾಗಿ ಬಾಣಗಳು ಹೊರಡಲಾರಂಭಿಸಿ, ಆಕಾಶಕ್ಕೆ ಒಂದು ಸುವರ್ಣಮಾಲೆಯನ್ನಿಟ್ಟಂತೆ ತೋರಿತು. ಭೀಮನ ಬಾಣಗಳಿಂದ ಕರ್ಣನ ಬಾಣಗಳೆಲ್ಲ ಭೇದಿಸಲ್ಪಟ್ಟು ತುಂಡುತುಂಡಾಗಿ ಕೆಳಗೆ ಬಿದ್ದುವು. ಅವರಿಬ್ಬರ ಬಾಣಗಳೂ ಬೆಂಕಿಯ ಕಿಡಿಗಳಂತೆ ಹಾರಾಡುತ್ತಿದ್ದುವು. ಆ ಬಾಣಗಳ ಮರೆಯಲ್ಲಿ ಸೂರ್ಯನೇ ಕಣ್ಣಿಗೆ ಕಾಣದಂತಾದನು. ಗಾಳಿಯ ಸಂಚಾರಕ್ಕೂ ಅವಕಾಶವಿಲ್ಲದೆಹೋಯಿತು. ಆಕಾಶದಲ್ಲಿ ಬಾಣಗಳುಹೊರತು ಬೇರೊಂದೂ ಕಾಣಿಸಲಿಲ್ಲ. ಇವರಿಬ್ಬರ ಸಂಘಟ್ಟನದಿಂದ ದೊಡ್ಡ ಬೆಂಕಿಯುಂಟಾಯಿತು ಭೀಮನನ್ನು ಕೊಂದೇಬಿಡಬೇಕೆಂದು ಕರ್ಣನು ಹಲವು ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿದನು. ಆ ಒಂದೊಂದು ಬಾಣವನ್ನೂ ಭೀಮನು ಮೂರು ಮೂರು ತುಂಡಾಗಿ ಕತ್ತರಿಸಿದನು. ಆಗ ಭೀಮನು ಬಾಣಪ್ರಯೋಗದಲ್ಲಿ ಕರ್ಣನಿಗಿಂತಲೂ ತಾನೇ ಮೇಲೆಂಬುದನ್ನು ತೋರಿಸುತ್ತ "ನಿಲ್ಲು! ನಿಲ್ಲೆಂದು" ಆರ್ಭಟಿಸುತ್ತಿದ್ದನು. ಮೇಲೆಮೇಲೆ ಕರ್ಣನಿಗೆ ಗುರಿಯಿಟ್ಟು ಅಗ್ನಿಸಮಾನಗಳಾದ ಬಾಣಗಳನ್ನೂ ಬಿಡುತ್ತಿದ್ದನು. ಆಗ ಅವರಿಬ್ಬರೂ ಉಡುವಿನ ಚರ್ಮದ ಕೈಚೀಲದಮೇಲೆ ನಾಣನ್ನು ಹೊಡೆಯುವ ಧ್ವನಿ, ಅವರಿ

ಬ್ಬರ ಸಿಂಹನಾದಗಳು, ರಥಘೋಷಗಳು, ಧನುಷ್ಟಂಕಾರಗಳು, ಇವೆಲ್ಲಾ ಅತಿಭಯಂಕರವಾಗಿ ಕೇಳಿಸುತ್ತಿತ್ತು. ಭೀಮಕರ್ಣರ ಪರಾಕ್ರಮವನ್ನು ತಿಳಿಯಬೇಕೆಂಬ ಕುತೂಹಲದಿಂದ ಇತರಯೋಧರೆಲ್ಲರೂ ತಮ್ಮ ಯುದ್ಧವನ್ನು ನಿಲ್ಲಿಸಿ ಸುಮ್ಮನೆ ನಿಂತು ನೋಡುತ್ತಿದ್ದರು. ಆಕಾಶದಲ್ಲಿ ನೆರೆದ ದೇವರ್ಷಿ ಸಿದ್ಧಗಂಧರ್ವಾದಿಗಳೆಲ್ಲರೂ "ಭಲೆ! ಭಲೆ!" ಎಂದು ಕೊಂಡಾಡುತ್ತ ಪುಷ್ಪವರ್ಷವನ್ನು ಸುರಿಸಿದರು. ಭೀಮನು ಕರ್ಣನ ವಿವಿಧಾಸ್ತ್ರಗಳನ್ನು ತನ್ನ ಬಾಣಗಳಿಂದ ನಿಗ್ರಹಿಸಿ, ಕರ್ಣನನ್ನು ಬಲವಾಗಿ ಹೊಡೆದನು. ಕರ್ಣನೂ ಅದಕ್ಕೆ ಪ್ರತಿಯಾಗಿ ಭೀಮನಮೇಲೆ ಒಂಭತ್ತು ನಾರಾಚಗಳನ್ನು ಬಿಟ್ಟು ಭೀಮನ ಬಾಣಗಳನ್ನೆಲ್ಲ ತುಂಡುಮಾಡಿದನು. ಭೀಮನು ಕರ್ಣನ ನಾರಾಚಗಳನ್ನು ಅಷ್ಟೇ ಬಾಣಗಳಿಂದ ಕತ್ತರಿಸಿಕೆಡಹಿದನು. ಅಲ್ಲದೆ ಯಮದಂಡಕ್ಕೆ ಸಮಾನವಾದ ತೀವ್ರಬಾಣವೊಂದನ್ನು ಕರ್ಣನಮೇಲೆ ಪ್ರಯೋಗಿಸಿದನು. ಕರ್ಣನು ಮೂರು ಬಾಣಗಳಿಂದ ಅದನ್ನು ನಡುದಾರಿಯಲ್ಲಿಯೇ ತುಂಡುಮಾಡಿದನು. ಕರ್ಣನು ತನ್ನ ಅಸ್ತ್ರಬಲದಿಂದ ಭೀಮನ ಕೈಯಲ್ಲಿದ್ದ ಬಿಲ್ಲು, ಬತ್ತಳಿಕೆ, ಬಿಲ್ಲಿನ ನಾಣು, ಕುದುರೆಯ ಹಗ್ಗಗಳು, ಚಾಟಿಗಳು, ಕಡಿವಾಣಗಳು, ಇವನ್ನೆಲ್ಲ ಕಡಿದು, ಭೀಮನ ನಾಲ್ಕು ರಥಾಶ್ವಗಳನ್ನೂ ಕೊಂದುಬಿಟ್ಟನು. ಭೀಮನ ಸಾರಥಿಯನ್ನು ಐದು ಬಾಣಗಳಿಂದ ಬಲವಾಗಿ ನೋಯಿಸಿದನು. ಒಡನೆಯೇ ಸಾರಥಿಯು ಆ ರಥವನ್ನಿಳಿದು, ಯುಧಾಮನ್ಯುವಿನ ರಥವನ್ನು ಸೇರಿದನು. ಇಷ್ಟರಲ್ಲಿ ಕರ್ಣನು ಹೆಮ್ಮೆಯಿಂದ ನಗುತ್ತ, ಭೀಮನ ಧ್ವಜಪತಾಕೆಗಳೆರಡನ್ನೂ ಮುರಿದು ಕೆಡಹಿದನು. ಆಗ ಭೀಮನು ತನ್ನ ಧನಸ್ಸು ಮುರಿದುಹೋದುದರಿಂದ, ಒಂದು ಶಕ್ತ್ಯಾಯುಧವನ್ನು ಕರ್ಣನ ರಥದಮೇಲೆ ಬೀಸಿದನು. ಚಿನ್ನದ ಕಟ್ಟುಗಳಿಂದ ಅಲಂಕೃತವಾಗಿ ಆಕಾಶದ ಕೊಳ್ಳಿಯಂತೆ ತನ್ನ ಕಡೆಗೆ ಬರುತ್ತಿದ್ದ ಆ ಶಕ್ತಿಯನ್ನು ಕರ್ಣನು ಹತ್ತುಬಾಣಗಳಿಂದ ಹತ್ತು ತುಂಡುಗಳಾಗಿ ಭೇದಿಸಿಕೆಡಹಿದನು. ಇದನ್ನು ನೋಡಿ ಭೀಮನಿಗೆ ಮತ್ತಷ್ಟು ಕೋಪಾವೇಶವು ಹುಟ್ಟಿತು. "ಈಗಿನ ಯುದ್ಧದಲ್ಲಿ ತಾನು ಜಯಿಸಬೇಕು! ಇಲ್ಲವೇ ಸಾಯಬೇಕು!" ಎಂಬ ದೃಢನಿಶ್ಚಯದಿಂದ ಕತ್ತಿಗುರಾಣಿಗಳನ್ನು ಕೈಗೆತ್ತಿಕೊಂಡು, ಕರ್ಣನನ್ನು ಕೊಲ್ಲುವುದಕ್ಕಾಗಿ ಮುಂದುವರಿ

ದನು. ಒಡನೆಯೇ ಕರ್ಣನು ಆ ಗುರಾಣಿಯನ್ನು ತನ್ನ ಬಾಣಸಮೂಹ ಗಳಿಂದ ಭೇದಿಸಿಬಿಟ್ಟನು. ಭೀಮನು ಕೈಯಲ್ಲಿದ್ದ ಕತ್ತಿಯನ್ನು ಕರ್ಣನ ರಥದಮೇಲೆ ಬೀಸಲು, ಅದು ಕರ್ಣನ ಧನುಸ್ಸನ್ನು ತುಂಡುಮಾಡಿ, ದೊಡ್ಡ ಸರ್ಪದಂತೆ ಕೆಳಗೆ ಬಿದ್ದಿತು. ಆಗಲೂ ಕರ್ಣನು ನಗುತ್ತ, ಬೇರೊಂದು ದೃಢವಾದ ಬಿಲ್ಲನ್ನು ಕೈಗೆತ್ತಿಕೊಂಡು ಸಾವಿರಾರು ಸಂಖ್ಯೆ ಯಿಂದ ಭೀಮನಮೇಲೆ ಬಾಣಗಳನ್ನು ಬಿಟ್ಟನು. ಕರ್ಣನ ಬಾಣಗ ಳಿಂದ ಬಹಳವಾಗಿ ಪ್ರಹರಿಸಲ್ಪಡುತ್ತಿದ್ದ ಭೀಮನು, ಕೋಪದಿಂದ ಒಂದೇ ನೆಗೆತಕ್ಕೆ ಹಾರಿ, ಕರ್ಣನ ರಥದೊಳಗೆ ಪ್ರವೇಶಿಸಿದನು. ಭೀಮನ ಈ ಪ್ರಯತ್ನವನ್ನು ನೋಡಿ ಕರ್ಣನು ಭೀಮನ ಕಣ್ಣಿಗೆ ಕಾಣದಂತೆ, ಆ ರಥದ ಮೇಲೆ ಧ್ವಜವನ್ನು ನಿಲ್ಲಿಸಿದ ಸ್ಥಳದಲ್ಲಿ ಮರೆಯಾಗಿದ್ದು, ಅವನನ್ನು ವಂಚಿ ಸಿದನು. ಹೀಗೆ ಭಯದಿಂದ ತಲೆತಪ್ಪಿಸಿಕೊಂಡ ಕರ್ಣನನ್ನು ಕಾಣದೆ ಭೀಮನು, ಅವನನ್ನು ಕಂಡುಹಿಡಿಯುವ ಆತುರದಿಂದ ಆ ಧ್ವಜದ ಕಂಭವ ನ್ನೇರಿ ಕುಳಿತನು. ಹಾವನ್ನು ಹಿಡಿಯಲು ಹೊಂಚುಹಾಕುವ ಗರುಡ ನಂತೆ, ಕರ್ಣನನ್ನು ಹಿಡಿದು ಕೊಲ್ಲುವುದಕ್ಕಾಗಿ ನಡೆಸುವ ಭೀಮನ ಪ್ರಯತ್ನವನ್ನು ನೋಡಿ, ಎಲ್ಲಾ ಕುರುಗಳೂ, ಚಾರಣರೂ ಭೀಮನ ಸಾಹ ಸವನ್ನು ಕೊಂಡಾಡಿದರು. ಧನುಸ್ಸೂ, ರಥವೂ ಇಲ್ಲದ ಆ ಭೀಮನು, ತನ್ನ ಕ್ಷತ್ರಿಯಧರ್ಮವನ್ನು ಬಿಡದೆ ತಿರುಗಿ ರಣರಂಗಕ್ಕೆ ಬಂದು, ಯುದ್ಧಕ್ಕಾಗಿ ಕರ್ಣನನ್ನು ನಿರೀಕ್ಷಿಸುತ್ತ, ತನ್ನ ರಥವನ್ನು ಹಿಂಭಾಗಕ್ಕೆ ಬಿಟ್ಟು ಅದರ ಮುಂದೆ ನಿಂತನು. ಕರ್ಣನೂ ಯುದ್ಧಕ್ಕೆ ಸಿದ್ಧನಾದನು. ಗರ್ಜಿಸುವ ಮೇಘಗಳಂತೆ ಇಬ್ಬರೂ ಸಿಂಹನಾದಮಾಡುತ್ತ ಇದಿರಾದರು. ದೇವಾಸುರ ಯುದ್ಧದಂತೆ ಇಬ್ಬರಿಗೂ ಪ್ರಬಲಯುದ್ಧವಾಯಿತು. ಕರ್ಣನ ಅಟ್ಟುಳಿ ಯಿಂದ ಶಸ್ತ್ರಗಳೆಲ್ಲವನ್ನೂ ಕಳೆದುಕೊಂಡ ಭೀಮನು, ತನಗೆ ಆಯುಧಸಹಾ ಯವಿಲ್ಲದುದರಿಂದ ಮುಂದೇನುಮಾಡಬೇಕೆಂದು ಯೋಚಿಸಿ, ಅಲ್ಲಲ್ಲಿ ಅರ್ಜು ನನ ಬಾಣಗಳಿಂದ ಹತವಾಗಿ ಪರ್ವತಾಕಾರದಿಂದ ಬಿದ್ದಿದ್ದ ಆನೆಗಳ ಮತ್ತು ರಥಗಳ ರಾಶಿಗಳನ್ನು ಕಂಡನು. ಅವುಗಳ ಮರೆಯಲ್ಲಿ ಅಡಗಿ ತತ್ಕಾಲಕ್ಕೆ ತನ್ನ ಜೀವರಕ್ಷಣೆಗಾಗಿ ಕರ್ಣನನ್ನು ಇದಿರಿಸದೆ ಸ್ವಲ್ಪಹೊತ್ತು ಸುಮ್ಮನಿ ದ್ದನು. ಆಮೇಲೆ ಅವನು ಹಿಂದೆ ಹನುಮಂತನು ಸಂಜೀವನೌಷಧಿಯ

ಪರ್ವತವನ್ನು ಎತ್ತಿ ನಿಂತಂತೆ, ಸತ್ತ ಆನೆಯೊಂದನ್ನು ಕರ್ಣನಮೇಲೆ ಬೀಸಿ ಬಡಿಯುವುದಕ್ಕಾಗಿ ಮೇಲಕ್ಕೆತ್ತಿದನು. ಇದನ್ನು ನೋಡಿ ಕರ್ಣನು ಅವನ ಕೈಯಲ್ಲಿದ್ದ ಆನೆಯನ್ನು ಬಾಣಗಳಿಂದ ಕತ್ತರಿಸಿಕೆಡಹಿದನು. ಆಗ ಭೀಮನು ಮತ್ತಷ್ಟು ಕೋಪೋದ್ರೇಕದಿಂದ ಅಲ್ಲಲ್ಲಿ ತನ್ನ ಕಣ್ಣಿಗೆ ಕಂಡ ರಥಚಕ್ರಗಳು, ಅನೇಕಕುದುರೆಗಳ ಮೃತದೇಹಗಳು, ಮೊದಲಾದುವನ್ನೆಲ್ಲ ಎತ್ತಿಎತ್ತಿ ಕರ್ಣನಮೇಲೆ ಎಸೆಯುವುದಕ್ಕಾರಂಭಿಸಿದನು. ಆದರೇನು? ಕರ್ಣನು ಅವೊಂದೊಂದನ್ನೂ ತನ್ನ ಬಾಣಗಳಿಂದ ತುಂಡುಮಾಡುತ್ತ ಬಂದನು. ಕೊನೆಗೆ ಕೋಪವನ್ನು ಸಹಿಸಲಾರದೆ ಭೀಮನು ವಜ್ರಮುಷ್ಟಿಯನ್ನು ಎತ್ತಿ ಹಿಡಿದು, ಒಂದೇ ಪ್ರಹಾರಕ್ಕೆ ಕರ್ಣನನ್ನು ಕೊಂದು ತೀರಿಸಿಬಿಡಬೇಕೆಂದು ಆತುರದಿಂದ ಹೊರಟನು. ಇಷ್ಟರಲ್ಲಿ ಅವನಿಗೆ ಕರ್ಣನವಿಷಯವಾಗಿ ಅರ್ಜುನನು ಮಾಡಿದ ಪ್ರತಿಜ್ಞೆಯು ನೆನಪಿಗೆ ಬಂದಿತು. ಅದರಮೇಲೆ ಅವನು ತನಗೆ ಶಕ್ತಿಯಿದ್ದರೂಕೂಡ ಕರ್ಣನನ್ನು ಕೊಲ್ಲದೆ, ಉತ್ಸಾಹಭಂಗದಿಂದ ಸುಮ್ಮನಾಗಿಬಿಟ್ಟನು. ಈ ಸಂಚನ್ನು ನೋಡಿ ಕರ್ಣನು ಭೀಮನಮೇಲೆ ಎಡೆಬಿಡದೆ ಬಾಣಗಳನ್ನು ಸುರಿದು, ಅವನಿಗೆ ಮೂರ್ಛೆಬರುವಂತೆ ಮಾಡಿದನು. ಆದರೆ, ಆ ಸ್ಥಿತಿಯಲ್ಲಿ ಅವನು ಭೀಮನನ್ನು ಸುಲಭವಾಗಿ ಕೊಂದುಬಿಡಬಹುದಾಗಿದ್ದರೂ, ತನ್ನ ತಾಯಿಯಾದ ಕುಂತಿಗೆ ತಾನು ಕೊಟ್ಟ ಭಾಷೆಯನ್ನು ಸ್ಮರಿಸಿಕೊಂಡು, ನಿರಾಯುಧನಾದ ಅವನನ್ನು ಕೊಲ್ಲುವುದಕ್ಕೆ ಇಷ್ಟಪಡಲಿಲ್ಲ. ಅಲ್ಲಿಂದ ಮುಂದೆ ಬಂದು ತನ್ನ ಕೈಯಲ್ಲಿದ್ದ ಧನುಸ್ಸಿನ ತುದಿಯಿಂದ ಭೀಮನ ಮೈಯನ್ನು ಚುಚ್ಚಿದನು. ಇದರಿಂದ ಭೀಮನಿಗೆ ಥಟ್ಟನೆ ಎಚ್ಚರವಾಯಿತು. ಒಡನೆಯೇ ಅವನು ಕರ್ಣನ ಕೈಯಲ್ಲಿದ್ದ ಬಿಲ್ಲನ್ನು ಕಿತ್ತುಕೊಂಡು, ಅದರಿಂದಲೇ ಅವನ ತಲೆಯಮೇಲೆ ಬಲವಾಗಿ ಅಪ್ಪಳಿಸಿದನು. ಇದರಿಂದ ಕರ್ಣನು ಬಹಳವಾಗಿ ಕೋಪಗೊಂಡು, ಭೀಮನನ್ನು ನೋಡಿ ನಗುತ್ತ "ಎಲಾ ಮೀಸೆಯಿಲ್ಲದ ಹುಡುಗಾ! ಎಲೆ ಹೊಟ್ಟೆಬಾಕನೇ! ಬುದ್ಧಿಯಿಲ್ಲದೆ, ನೀನು ಈ ಯುದ್ಧಕ್ಕೆ ಏತಕ್ಕಾಗಿ ಬಂದೆ? ಅಸ್ತ್ರಗಳಲ್ಲಿ ಪರಿಚಯವಿಲ್ಲದೆ ಯುದ್ಧಕ್ಕೂ ಹೆದರತಕ್ಕ ನೀನು, ಇನ್ನುಮೇಲಾದರೂ ಯುದ್ಧವನ್ನು ಬಿಟ್ಟುಹೋಗು. ಭಕ್ಷ್ಯ, ಭೋಜ್ಯ, ಪಾನೀಯ ಮೊದಲಾದುವು ಎಲ್ಲಿ ಸಮೃದ್ಧವಾಗಿ ಸಿಕ್ಕುವುವೋ, ಅಲ್ಲಿರುವುದಕ್ಕೆ ನೀನು ಯೋಗ್ಯನೇ

ಹೊರತು ಇಂತಹ ಯುದ್ಧರಂಗಗಳಿಗೆ ನೀನು ಅರ್ಹನಲ್ಲ. ವ್ರತನಿಯಮಗಳನ್ನು ಹಿಡಿದು, ಕಾಡಿನಲ್ಲಿ ಗಡ್ಡೆಗೆಣಸುಗಳಿಂದ ಹೊಟ್ಟೆಹೊರೆಯುವುದಕ್ಕೆ ನೀನು ಯೋಗ್ಯನೇ ಹೊರತು, ಇಂತಹ ಯುದ್ಧಕ್ಕೆ ನೀನು ಯೋಗ್ಯನಲ್ಲ. ಓ ವೃಕೋದರಾ! ಆ ನಿನ್ನ ಮುನಿವೃತ್ತಿಯೆಲ್ಲಿ? ಈ ಯುದ್ಧವೆಲ್ಲಿ? ನಿನಗೆ ವನವಾಸವೇ ಗತಿ! ತಿರುಗಿ ಕಾಡಿಗೆ ಹೋಗು. ಮನೆಯಲ್ಲಿ ಅಡಿಗೆಯುವರನ್ನೂ, ಆಳುಗಳನ್ನೂ, ದಾಸದಾಸಿಯರನ್ನೂ ಹೆದರಿಸಿ, ಹೊಡೆದು, ಹೊಟ್ಟೆ ಹೊರೆಯುವುದು ನಿನ್ನ ಯೋಗ್ಯತೆಯೇಹೊರತು, ಈ ಯುದ್ಧವು ನಿನಗೆ ಯೋಗ್ಯವಲ್ಲ. ನೀನು ಮೊದಲಿನಂತೆ ಮುನಿಯಾಗಿ ಕಾಡುಹಣ್ಣುಗಳನ್ನು ತಿನ್ನುವುದಕ್ಕೆ ಹೋಗು. ಇಲ್ಲವೇ ಅಡಿಗೆಮನೆಗೆ ಹೋಗಿ ಸೇರು. ನಿನಗೆ ಯುದ್ಧಮಾರ್ಗವು ತಿಳಿಯದು. ಹಣ್ಣುಗಡ್ಡೆಗಳನ್ನು ತಿನ್ನುತ್ತ ಅತಿಥಿಗಳನ್ನು ಪೂಜಿಸುವುದರಲ್ಲಿ ನೀನು ಸಮರ್ಥನೇಹೊರತು ಶಸ್ತ್ರವಿದ್ಯೆಯಲ್ಲಿ ನಿನಗೆ ಯೋಗ್ಯತೆಯುಂಟೆಂದು ನನಗೆ ತಿಳಿಯಲಿಲ್ಲ" ಎಂದನು. ಧೃತರಾಷ್ಟ್ರ ಮಹಾರಾಜಾ! ಹೀಗೆ ಕರ್ಣನು ವಿರಥನಾಗಿಯೂ, ನಿರಾಯುಧನಾಗಿಯೂ ಇದ್ದ ಭೀಮನನ್ನು ಕುರಿತು ಕಠಿನವಾಕ್ಯಗಳನ್ನಾಡಿದುದಲ್ಲದೆ, ಹಿಂದೆ ಬಾಲ್ಯದಿಂದಲೂ ತಾನು ಕೌರವರೊಡನೆ ಸೇರಿಕೊಂಡು ಅವನಿಗೆ ಮಾಡಿದ ಕೆಡುಕುಗಳನ್ನೆಲ್ಲ ಒಂದೊಂದಾಗಿ ಅವನ ಮುಂದೆ ಹೇಳುತ್ತಬಂದನು. ಮೈಯ್ಯುಡುಗಿ ಕುಳಿತಿದ್ದ ಭೀಮನನ್ನು ಮತ್ತೊಮ್ಮೆ ತನ್ನ ಬಿಲ್ಲಿನ ಕೊನೆಯಿಂದ ಚುಚ್ಚಿ ಹೆಮ್ಮೆಯಿಂದ ನಗುತ್ತ ತಿರುಗಿ ಹೀಗೆಂದನು. "ಎಲೆ ಬಾಲಕಾ! ನೀನು ಬೇರೆಯವರೊಡನೆ ಯುದ್ಧಕ್ಕೆ ನಿಲ್ಲಬಹುದಾಗಿದ್ದಿತು. ನನ್ನಂತವರೊಡನೆ ಯುದ್ಧಮಾಡತಕ್ಕವರಿಗೆಲ್ಲ ಇದೇ ಗತಿ! ಇದಕ್ಕಿಂತಲೂ ಪ್ರಬಲವಾದ ಬೇರೆ ಅಪಾಯವೂ ವುಂಟು. ಅದರಿಂದ ಬೇಗನೆ ನೀನು ಆ ಕೃಷ್ಣಾರ್ಜುನರಿರತಕ್ಕ ಸ್ಥಳಕ್ಕೆ ಹೋಗು. ಅವರು ನಿನ್ನನ್ನು ರಕ್ಷಿಸುವರು. ಇಲ್ಲವೇ ನಿನ್ನ ಮನೆಗಾದರೂ ಹೋಗಿ ಸೇರು. ಈ ಯುದ್ಧದಿಂದ ನಿನಗೇನು?" ಎಂದನು. ಕರ್ಣನ ಈ ಕ್ರೂರವಾಕ್ಯಗಳನ್ನು ಕೇಳಿ ನಗುತ್ತ ಭೀಮನು ಎಲ್ಲರೂ ಕೇಳುತ್ತಿರುವಹಾಗೆಯೇ ಅವನನ್ನು ಕುರಿತು "ಎಲ ದುಷ್ಟಾ! ಹಿಂದೆ ಇದುವರೆಗೆ ಎಷ್ಟೋಸಾರಿ ಪರಾಜಿತನಾಗಿ ಓಡಿಹೋದ ನೀನು, ಈಗ ಸುಮ್ಮನೆ ಹೆಮ್ಮೆಯನ್ನು ಕೊಚ್ಚಿಕೊಳ್ಳುವೆ? ಲೋಕದಲ್ಲಿ ಇಂದ್ರನಿಗಾದರೂ ಜಯಾಪಜಯ

ಗಳೆರಡೂ ಉಂಟು. ಈಗಲೂ ನನ್ನೊಡನೆ ಮಲ್ಲಯುದ್ಧಕ್ಕೆ ನಿಲ್ಲು. ಹಿಂದೆ ಮಹಾಬಲಾಢ್ಯನಾದ ಕೀಚಕನನ್ನು ಕೊಂದಂತೆ ಈ ಎಲ್ಲಾ ರಾಜರಮುಂದೆ ನಿನ್ನನ್ನು ಕೊಲ್ಲುವೆನು" ಎಂದನು. ಭೀಮನ ಈ ಮಾತನ್ನು ಕೇಳಿ ಕರ್ಣನು ಆ ಯುದ್ಧವನ್ನು ಅಷ್ಟಕ್ಕೇ ನಿಲ್ಲಿಸಿ, ಎಲ್ಲಾ ಧನುರ್ಧಾರಿಗಳೂ ನೋಡುತ್ತಿರುವಹಾಗೆಯೇ ಹಿಂತಿರುಗಿಬಿಟ್ಟನು. ರಾಜಾ! ಹೀಗೆ ಕರ್ಣನು ಭೀಮನನ್ನು ವಿರಥನನ್ನಾಗಿ ಮಾಡಿ, ಅವನ ಮುಂದೆ ತನ್ನ ಹೆಮ್ಮೆಯನ್ನು ಹೇಳಿಕೊಂಡನು. ಈ ಕಾರ್ಯಗಳು ಕೃಷ್ಣಾರ್ಜುನರಿಗೂ ತಿಳಿಯಿತು. ಕರ್ಣನು ಇಷ್ಟು ಕಠಿನವಾಕ್ಯಗಳನ್ನಾಡಿದರೂ ಅರ್ಜುನನ ಕೈಯಿಂದ ಸಾಯಬೇಕಾದ ಆ ಕರ್ಣನನ್ನು ಭೀಮನು ಕೊಲ್ಲದೆಬಿಟ್ಟನು. ಥಟ್ಟನೆ ಮುಂದೆ ಹೋಗಿ ಕರ್ಣನ ಕೈಯಲ್ಲಿದ್ದ ಬಿಲ್ಲನ್ನು ಕಿತ್ತು ಕೊಂಡು ಮುರಿದುಬಿಸುಟನು. ಇದನ್ನೆಲ್ಲ ದೂರದಿಂದ ನೋಡುತ್ತಿದ್ದ ಕೃಷ್ಣನು "ಅರ್ಜುನಾ! ಅರ್ಜುನಾ! ಅದೋ! ನೋಡು! ಭೀಮನು ಕರ್ಣನಿಂದ ಬಹಳವಾಗಿ ಬಾಧಿಸಲ್ಪಡುತ್ತಿರುವನು" ಎಂದನು. ಈ ಮಾತನ್ನು ಕೇಳಿ ಅರ್ಜುನನಿಗೆ ಕೋಪದಿಂದ ಕಣ್ಣುಗಳು ಕೆಂಪೇರಿದುವು. ಕಣ್ಣಿಂದಲೇ ಸುಟ್ಟುಬಿಡುವಂತೆ ನೋಡುತ್ತ ಕರ್ಣನಕಡೆಗೆ ಬಾಣಗಳನ್ನು ಬಿಡಲಾರಂಭಿಸಿದನು. ಆ ಬಾಣಗಳು ಕ್ರೌಂಚಪರ್ವತದೊಳಗೆ ಪ್ರವೇಶಿಸುವ ಹಂಸಶ್ರೇಣಿಯಂತೆ ಕರ್ಣನ ರಥದಲ್ಲಿ ಪ್ರವೇಶಿಸಿ ವಿಷಸರ್ಪಗಳಂತೆ ಮುತ್ತಿದುವು. ಮೊದಲೇ ಭೀಮನಿಂದ ಮುರಿಯಲ್ಪಟ್ಟ ಧನುಸ್ಸುಳ್ಳ ಆ ಕರ್ಣನು, ಅರ್ಜುನನ ಬಾಣಗಳಿಂದ ಬಹಳವಾಗಿ ನೊಂದವನಾಗಿ ಆ ಭೀಮನನ್ನು ಬಿಟ್ಟು ಓಡಿಹೋದನು. ಭೀಮನೂಕೂಡ ಇತ್ತಲಾಗಿ ಸಾತ್ಯಕಿಯ ರಥವನ್ನೇರಿ ಅರ್ಜುನನಕಡೆಗೆ ಹೊರಟನು. ಅರ್ಜುನನು ಕರ್ಣನ ರಥದಕಡೆಗೆ ಬಾಣಗಳನ್ನು ಪ್ರಯೋಗಿಸುತ್ತಲೇ ಇದ್ದನು. ಹಾವಿಗಾಗಿ ಎರಗುತ್ತಿರುವ ಗರುಡನಂತೆ ಗಾಂಡೀವಪ್ರೇರಿತವಾದ ಬಾಣಗಳು ವೇಗದಿಂದ ಬರುತ್ತಿದ್ದುವು. ಇಷ್ಟರಲ್ಲಿ ಅಶ್ವತ್ಥಾಮನು ಅರ್ಜುನನಿಂದ ಕರ್ಣನಿಗುಂಟಾಗುವ ಅಪಾಯವನ್ನು ತಪ್ಪಿಸಬೇಕೆಂದು ಅರ್ಜುನನ ಬಾಣಗಳನ್ನೆಲ್ಲ ತನ್ನ ಬಾಣಗಳಿಂದ ಭೇದಿಸುತ್ತಬಂದನು. ಅದನ್ನು ನೋಡಿ ಅರ್ಜುನನು ಕೋಪದಿಂದ "ಅಶ್ವತ್ಥಾಮಾ! ನಿಲ್ಲು! ನಿಲ್ಲು!" ಎಂದು ಆರ್ಭಟಿಸಿ, ಅವನಮೇಲೆ

ಅರುವತ್ತುನಾಲ್ಕು ತೀವ್ರಬಾಣಗಳನ್ನು ಬಿಟ್ಟನು. ಈ ಪ್ರಹಾರವನ್ನು ತಡೆಯಲಾರದೆ ಅಶ್ವತ್ಥಾಮನು ಸಮೀಪದಲ್ಲಿದ್ದ ರಥಸೈನ್ಯದ ಮತ್ತು ಗಜಸೈನ್ಯದ ನಡುವೆ ಹುದುಗಿಕೊಂಡನು. ಅರ್ಜುನನು ಗಾಂಡೀವಘೋಷದೊಡನೆ ಅಶ್ವತ್ಥಾಮನನ್ನು ಬಿಡದೆ ಬೆಂಬತ್ತಿಹೋಗುತ್ತ, ದಾರಿಯಲ್ಲಿ ಉದ್ದಕ್ಕೂ ಅನೇಕ ಚತುರಂಗಗಳನ್ನು ಧ್ವಂಸಮಾಡಿಬಿಟ್ಟನು.

ಇದು ಮೂವತ್ತೊಂಭತ್ತನೆಯ ಅಧ್ಯಾಯವು.



## ಸಾತ್ಯಕಿಯು ಅಲಂಬುಸನನ್ನು ಕೊಂದುದು.

ಧೃತರಾಷ್ಟ್ರನು ಸಂಜಯನನ್ನು ಕುರಿತು “ಸಂಜಯಾ! ಪಾಂಡವರ ಸ್ವತ್ತನ್ನು ಅವರಿಗೆ ಕೊಟ್ಟುಬಿಡಬೇಕಾಗಿತ್ತೆಂದೇ ನನಗೆ ತೋರುವುದು. ಬಲಾಢ್ಯರೊಡನೆ ವಿರೋಧಿಸುವುದು ಎಂದಿಗೂ ಶ್ರೇಯಸ್ಕರವಲ್ಲ. ಶತ್ರುವಿನ ಕಾಲಿಗೆಬಿದ್ದಾಗಲಿ, ಅವನ ಎಂಜಲನ್ನು ತಿಂದಾಗಲಿ, ಇನ್ನೂ ಬೇರೆ ಯಾವನೀಚಕಾರ್ಯವನ್ನು ಮಾಡಿಯೇಆಗಲಿ, ಮನುಷ್ಯನು ಲೋಕದಲ್ಲಿ ಬದುಕಬೇಕು. ಮನುಷ್ಯನು ಬದುಕಿದ್ದರೆ ಹೇಗೋ ಶ್ರೇಯಸ್ಸನ್ನು ಸಂಪಾದಿಸಿಕೊಳ್ಳಬಹುದು. ಪರಲೊಕವನ್ನೂ ಸಾಧಿಸಬಹುದು. ಸತ್ತವನಿಗೆ ಅವೆರಡೂ ಇಲ್ಲ! ಅವನಿಗೆ ಸುಖವೂ ಇಲ್ಲ. ಪರಗತಿಯೂ ಇಲ್ಲ. ಎಷ್ಟೇವಿಪತ್ತು ಬಂದರೂ ಅರಿಯದ ಬಾಲನಿಗೆ ಪ್ರತಿಕ್ರಿಯೆಯೇನೆಂದು ತಿಳಿಯಲಾರದು. ಅದರಂತೆಯೇ ಬರೀಹೆಮ್ಮೆಯಿಂದ ಬೆರೆತವನು ಕೃತ್ಯಾಕೃತ್ಯಗಳನ್ನು ಅರಿಯಲಾರನು. ಸಂಜಯಾ! ಅತ್ಯಂತ ಪ್ರಕಾಶಮಾನವಾಗಿದ್ದ ನನ್ನ ಕೀರ್ತಿಯು ದಿನದಿನಕ್ಕೂ ಮಾಸುತ್ತ ಬಂದಿತು. ನನ್ನ ಕಡೆಯ ಅನೇಕಯೋಧರು ಸತ್ತರು. ಇವೆಲ್ಲವೂ ಕಾಲವ್ಯತ್ಯಾಸವೆಂದೇ ತೋರುವುದು. ಕರ್ಣಾಶ್ವತ್ಥಾಮರಿಂದ ರಕ್ಷಿತವಾಗಿ, ದೇವತೆಗಳಿಗೂ ಪ್ರವೇಶಿಸಲು ಸಾಧ್ಯವಲ್ಲದ ನನ್ನ ಸೇನಾಮಧ್ಯಕ್ಕೆ ಆ ಧನಂಜಯನು ಪ್ರವೇಶಿಸಿಬಿಟ್ಟನು. ಇದಲ್ಲದೆ ಮಹಾಪರಾಕ್ರಮಿಗಳೆನಿಸಿಕೊಂಡ ಭೀಮಸಾತ್ಯಕಿಗಳೂ ಅವನೊಡನೆ ಸೇರಿಕೊಂಡರು. ಇದರಿಂದ ಅವನ ಪರಾಕ್ರಮವು ಮತ್ತಷ್ಟು ಉತ್ತೇಜಿತವಾಯಿತು. ಅದನ್ನು

ಕೇಳಿದುದುಮೊದಲು, ನನ್ನ ದುಃಖವು ಬೆಂಕಿಯಂತೆ ನನ್ನ ಹೃದಯುವನ್ನು ಸುಡುತ್ತಿದೆ. ಸೈಂಧವನೊಡನೆ ಸೇರಿ ನಮ್ಮ ಕಡೆಯ ರಾಜರೆಲ್ಲರೂ ಅರ್ಜುನನ ಪರಾಕ್ರಮದಿಂದ ದಗ್ಧರಾದಂತೆಯೇ ನನಗೆ ತೋರುವುದು. ನನ್ನ ಅಳಿಯನಾದ ಆ ಸೈಂಧವನೋ, ಇಂದ್ರಸಮಾನನಾದ ಆ ಅರ್ಜುನನ ವಿಷಯದಲ್ಲಿ ಮಹತ್ತಾದ ಅಪ್ರಿಯುವನ್ನು ಮಾಡಿರುವನು. ಅರ್ಜುನನ ಕಣ್ಣಿಗೆ ಬಿದ್ದಮೇಲೆ ಆ ನನ್ನ ಅಳಿಯನು ಬದುಕುವುದೆಲ್ಲಿ? ಈಗಾಗಲೇ ಆ ಸೈಂಧವನು ಬದುಕಿಲ್ಲವೆಂದೇ ನನ್ನ ಭಾವನೆ. ಹೋದುದು ಹೋಗಲಿ. ಸಂಜಯಾ! ಮುಂದಿನ ಯುದ್ಧವು ಹೇಗೆ ನಡೆಯಿತೆಂಬುದನ್ನು ತಿಳಿಸು. ಮುಖ್ಯವಾಗಿ ಆನೆಯು ಕಮಲಸರೋವರಕ್ಕೆ ನುಗ್ಗಿದಂತೆ, ವೃಷ್ಣಿವೀರನಾದ ಆ ಸಾತ್ಯಕಿಯೊಬ್ಬನೇ ನಮ್ಮ ಸೈನ್ಯವನ್ನೆಲ್ಲ ಕದಲಿಸಿ ಧ್ವಂಸಮಾಡಿ, ಏಕಾಕಿಯಾಗಿ ಅರ್ಜುನನ ಬಳಿಗೆ ಹೋದನಲ್ಲವೆ? ಅವನು ಆಗ ನಡೆಸಿದ ಯುದ್ಧಕ್ರಮವೇನೆಂಬುದನ್ನು ನನಗೆ ತಿಳಿಸು" ಎಂದನು.

ಆಗ ಸಂಜಯನು "ಮಹಾರಾಜಾ! ಕರ್ಣನ ಬಾಣಗಳಿಂದ ಬಹಳವಾಗಿ ನೊಂದ ಭೀಮನು ಅಲ್ಲಿಂದ ಹಿಂತಿರುಗುವಷ್ಟರಲ್ಲಿ, ಅರ್ಜುನನ ಪ್ರೇರಣೆಯಿಂದ ಸಾತ್ಯಕಿಯು ಭೀಮನ ಬೆಂಬಲಕ್ಕಾಗಿ ಓಡಿಬಂದನು. ಮಳೆಗಾಲದ ಮೇಘದಂತೆ ಗರ್ಜಿಸುತ್ತ, ಶರತ್ಕಾಲದ ಸೂರ್ಯನಂತೆ ತೇಜಸ್ಸಿನಿಂದ ಜ್ವಲಿಸುತ್ತ ಆ ಸಾತ್ಯಕಿಯು ಬರುವಾಗಲೇ ಅನೇಕರನ್ನು ಕೊಂದು, ನನ್ನ ಮಗನ ಸೈನ್ಯವನ್ನು ನಡುಗಿಸಿಬಿಟ್ಟನು. ಸಾತ್ಯಕಿಯನ್ನು ತಡೆಯಲು ನಿನ್ನ ಕಡೆಯ ರಥಿಕರಾರೂ ಸಮರ್ಥರಾಗಲಿಲ್ಲ. ಆಗ ಅಲಂಬುಸನೆಂಬ ರಾಜನು ಧೃಢವಾದ ಕವಚವನ್ನೂ ಧನುಸ್ಸನ್ನೂ ಕೈಯಲ್ಲಿ ಹಿಡಿದು ಬಂದು, ಆ ಸಾತ್ಯಕಿಯನ್ನು ತಡೆದನು. ಆ ಅಲಂಬುಸನೋ ಯುದ್ಧದಲ್ಲಿ ಜಯಿಸದೆ ಹಿಂತಿರುಗತಕ್ಕವನಲ್ಲ. ಹಿಂದೆ ಯಾವಾಗಲೂ, ನಾವು ಕಂಡುಕೇಳಿಲ್ಲದ ಪ್ರಬಲಯುದ್ಧವು ಅವರಿಬ್ಬರಿಗೂ, ಈಗ ನಡೆಯಿತು. ನಿನ್ನ ಮತ್ತು ಪಾಂಡವರ ಕಡೆಯ ಯೋಧರೆಲ್ಲರೂ ಅವರಿಬ್ಬರ ಯುದ್ಧವನ್ನೇ ವಿಸ್ಮಯದಿಂದ ನೋಡುತ್ತ ನಿಂತುಬಿಟ್ಟರು. ಅಲಂಬುಸನು ಬರುತ್ತಿರುವಾಗಲೇ ಸಾತ್ಯಕಿಯಮೇಲೆ ಹತ್ತು ಬಾಣಗಳನ್ನು ಹೊಡೆದನು.

ಸಾತ್ಯಕಿಯು ಆ ಬಾಣಗಳನ್ನು ನಡುದಾರಿಯಲ್ಲಿಯೇ ತುಂಡುಮಾಡಿದನು. ತಿರುಗಿ ಸಾತ್ಯಕಿಯು ಅತಿ ತೀವ್ರವಾದ ಮೂರುಬಾಣಗಳನ್ನು ಹೊಡೆದನು. ಅವು ಸಾತ್ಯಕಿಯ ಕವಚದೊಳಗೆ ಹಾದು, ಅವನ ಶರೀರಕ್ಕೆ ಗಾಯವನ್ನುಂಟುಮಾಡಿದುವು. ಹೀಗೆ ಅಲಂಬುಸನು ಸಾತ್ಯಕಿಯ ದೇಹವನ್ನು ತೀಕ್ಷ್ಣಬಾಣಗಳಿಂದ ಗಾಯಪಡಿಸಿದುದಲ್ಲದೆ, ಬೇರೆ ನಾಲ್ಕು ಬಾಣಗಳಿಂದ ರಜತವರ್ಣವುಳ್ಳ ಸಾತ್ಯಕಿಯ ನಾಲ್ಕು ರಥಾಶ್ವಗಳನ್ನೂ ಕೊಂದುಬಿಟ್ಟನು. ಇದಕ್ಕೆ ಪ್ರತಿಯಾಗಿ ಸಾತ್ಯಕಿಯು ತನ್ನ ಬಾಣಗಳಿಂದ ಅಲಂಬುಸನ ರಥಾಶ್ವಗಳನ್ನು ಕೊಂದು, ಕಾಲಾಗ್ನಿಗೆ ಸಮಾನವಾದ ಒಂದು ಭಲ್ಲದಿಂದ ಸಾರಥಿಯ ತಲೆಯನ್ನು ಕಡಿದನು. ಆಮೇಲೆ ಕುಂಡಲಾಲಂಕೃತವಾದ ಆ ಅಲಂಬುಸನ ಶಿರಸ್ಸನ್ನೂ ಒಂದೇ ಬಾಣದಿಂದ ಹಾರಿಸಿಬಿಟ್ಟನು. ಹೀಗೆ ಸಾತ್ಯಕಿಯು ಉತ್ತಮ ರಾಜವಂಶದವನಾದ ಆ ಅಲಂಬುಸನನ್ನು ಕೊಂದು, ದಾರಿಯಲ್ಲಿ ಅಡ್ಡೈಸಿದ ನಿನ್ನ ಸೈನ್ಯಗಳನ್ನೆಲ್ಲ ಚದರಿಸುತ್ತ, ಅರ್ಜುನನ ಕಡೆಗೆ ಹೊರಟನು. ಗಾಳಿಯು ಮೇಘಗಳನ್ನು ಹೇಗೋ ಹಾಗೆ, ದಾರಿಯಲ್ಲಿ ಅವನು ಕುರುಸೈನ್ಯಗಳನ್ನೆಲ್ಲ ತೂರಿಸುತ್ತ ಬಂದನು. ಹಾಲಿನಂತೆಯೂ, ಚಂದ್ರನಂತೆಯೂ ಪ್ರಕಾಶಿಸುವ ಆ ಸಾತ್ಯಕಿಯ ರಥಾಶ್ವಗಳು ಅವನ ಮನಸ್ಸಿನಲ್ಲಿ ಬಯಸಿದ ಕಡೆಗೆ ಆಯಾ ಕ್ಷಣವೇ ತಂದು ಸೇರಿಸುತ್ತಿದ್ದುವು. ಇದನ್ನು ನೋಡಿ, ಸತ್ತುಳಿದ ನಿನ್ನ ಮಕ್ಕಳೆಲ್ಲರೂ, ದುಶ್ಶಾಸನನನ್ನು ಮುಂದಿಟ್ಟು ಕೊಂಡು, ಇತರ ಯೋಧರನ್ನೂ ಸಹಾಯಕ್ಕೆ ಕರೆದುಕೊಂಡುಬಂದು ಸಾತ್ಯಕಿಯನ್ನು ಇದಿರಿಸಿ ತಡೆದು ಅವನನ್ನು ಸುತ್ತಲೂ ಆವರಿಸಿಕೊಂಡರು. ಸಾತ್ಯಕಿಯು ತನ್ನ ಬಾಣಗಳಿಂದ ಅವರನ್ನೆಲ್ಲ ಚೆದರಿಸುತ್ತ ಮನೋವೇಗದಿಂದ ಬರುತ್ತಿದ್ದ ದುಶ್ಶಾಸನನ ರಥಾಶ್ವಗಳನ್ನು ಕೊಂದುಬಿಟ್ಟನು. ಕೃಷ್ಣಾರ್ಜುನರಿಬ್ಬರೂ, ಈ ಸಾತ್ಯಕಿಯ ಪರಾಕ್ರಮವನ್ನು ನೋಡಿ ಹರ್ಷಿತರಾದರು.

ಇದು ನೂರನಾಲ್ವತ್ತನೆಯ ಅಧ್ಯಾಯವು.



— { ಸಾತ್ಯಕಿಯು ಅರ್ಜುನನನ್ನು ಸಂಧಿಸಿದುದು. ಭೂರಿಶ್ರವಸ್ಸಿನೊಡನೆ ಸಾತ್ಯಕಿಯು ಯುದ್ಧಕ್ಕೆ ನಿಂತುದು. } —

ರಾಜಾ! ಸಾತ್ಯಕಿಯು ದುಶ್ಶಾಸನನ ರಥಕ್ಕೆ ಇದಿರಾದುದನ್ನೂ ಕೌರವಸೈನ್ಯದನಡುವೆ ಅವನು ತೋರಿಸಿದ ಪರಾಕ್ರಮವನ್ನೂ ನೋಡಿ, ತ್ರಿಗರ್ತದೇಶದ ಧನುರ್ಧಾರಿಗಳು ಕೆಲವರು ರಥಾರೂಢರಾಗಿ ಬಂದು, ಅವನನ್ನು ತಡೆದರು. ಅವನಮೇಲೆ ಎಡೆಬಿಡದೆ ಬಾಣಗಳನ್ನು ಕರೆದರು. ಆದರೇನು? ತನ್ನನ್ನಿದಿರಿಸಿಬಂದ ಆ ಐವತ್ತುಮಂದಿ ರಥಿಕರನ್ನೂ ಸಾತ್ಯಕಿಯು ತಾನೊಬ್ಬನೇ ಜಯಿಸಿ ಓಡಿಸಿದನು. ಕತ್ತಿ, ಗದೆ, ಶಕ್ತಿ ಮುಂತಾದ ಸರ್ವಾಯುಧಗಳಿಂದ ಪೂರ್ಣವಾಗಿ, ಜಯಘೋಷದಿಂದ ತುಂಬಿ, ದುಸ್ತರವಾದ ಸಮುದ್ರದಂತಿರುವ ಕೌರವಸೈನ್ಯದೊಳಗೆ ಆ ಸಾತ್ಯಕಿಯು, ನಿರಂಕುಶವಾಗಿ ಹೋಗುತ್ತಿರುವುದನ್ನು ನೋಡಿ, ಸಹಿಸಲಾರದೆ ತಿರುಗಿ ಕೆಲವುಮಂದಿ ತ್ರಿಗರ್ತರಥಿಕರು ಅವನನ್ನು ಸುತ್ತಿಕೊಂಡರು. ಎಲ್ಲರೂ ದೊಡ್ಡ ಧನುಸ್ಸನ್ನು ಹಿಡಿದು, ಎಡೆಬಿಡದೆ ಬಾಣಗಳನ್ನು ಬಿಡುತ್ತಿದ್ದರು. ರಾಜಾ! ಆ ಸಾತ್ಯಕಿಯ ಆಶ್ಚರ್ಯಕಾರ್ಯವನ್ನು ಆಗ ನಾವು ನೋಡಿದೆವು. ಅಲ್ಲಿ ಸಾತ್ಯಕಿಯು ನಾವು ಪಶ್ಚಿಮದಿಕ್ಕಿನಲ್ಲಿ ನೋಡುತ್ತಿದ್ದಾಗಲೇ ಪೂರ್ವದಿಕ್ಕಿನಲ್ಲಿ ಕಾಣುವನು. ಉತ್ತರದಿಕ್ಕಿನಲ್ಲಿ ನಾವು ನೋಡುತ್ತಿರುವಾಗಲೇ ದಕ್ಷಿಣದಿಕ್ಕಿನಲ್ಲಿ ಕಾಣುವನು. ಹೀಗೆ ಮಹಾವೇಗದಿಂದ ಎಲ್ಲಾ ದಿಕ್ಕುಗಳಲ್ಲಿಯೂ ತಾನೇ ಕಾಣುತ್ತ, ಕೌರವಸೇನಾಮಧ್ಯದಲ್ಲಿ ತಾನೊಬ್ಬನೇ ಅನೇಕ ಸಾತ್ಯಕಿಗಳಂತೆ ಕಾಣಿಸುತ್ತಿದ್ದನು. ಅವನ ಒಂದೇ ರಥವು ನೂರು ರಥಗಳಾಗಿ ಕಾಣುತ್ತಿದ್ದುವು. ಈ ಆಶ್ಚರ್ಯಪರಾಕ್ರಮವನ್ನು ನೋಡಿ ತ್ರಿಗರ್ತರು ಭಯದಿಂದ ತಿರುಗಿಬಿಟ್ಟರು. ಆಮೇಲೆ ಕೆಲವುಮಂದಿ ಶೂರಸೇನರು ಸಾತ್ಯಕಿಯನ್ನಿದಿರಿಸಿಬಂದು ಮದದಾನೆಯನ್ನು ಅಂಕುಶದಿಂದ ಚುಚ್ಚುವಂತೆ ಸಾತ್ಯಕಿಯನ್ನು ಬಾಣಗಳಿಂದ ಹೊಡೆದು ರೇಗಿಸಿದರು. ಅವರನ್ನು ಸಾತ್ಯಕಿಯು ಮುಹೂರ್ತಮಾತ್ರದಲ್ಲಿಯೇ ಹೊಡೆದೋಡಿಸಿದನು. ಆಮೇಲೆ ಕಳಿಂಗರು ಬಂದು ಅಡ್ಡೈಸಿದರು. ಅವರನ್ನೂ ಸಾತ್ಯಕಿಯು ಜಯಿಸಿಕೊಂಡು ಮುಂದುವರಿದನು. ಕೊನೆಗೆ ಆ ವೃಷ್ಣಿವೀರನು, ನೀರಿನಲ್ಲಿ ಈಜಿ ಬಂದು ಬಳಲಿದವನು ತೀರವನ್ನು ಸೇರುವಂತೆ, ಅರ್ಜುನನ ಬಳಿಗೆ ಬಂದು ಸೇರಿ

ದನು. ಆಗಲೇ ಸಾತ್ಯಕಿಯ ಮನಸ್ಸಿಗೆ ನೆಮ್ಮದಿಯುಂಟಾಯಿತು. ಆಗ ಕೃಷ್ಣನು ಅರ್ಜುನನನ್ನು ಕುರಿತು, "ಅರ್ಜುನಾ! ಇದೋ! ನಿನಗೆ ಅನುಚರನಾದ ಸಾತ್ಯಕಿಯು ಬಂದನು ನೋಡು. ಇವನು ನಿನಗೆ ಶಿಷ್ಯನೂ, ಮಿತ್ರನೂ ಆಗಿರುವನು. ಶತ್ರುವೀರರನ್ನೆಲ್ಲ ಹುಲಿಗಿಂತಲೂ ಕಡೆಮಾಡಿ, ಜಯಶೀಲನಾಗಿ ಬಂದಿರುವನು. ಅನೇಕ ಯೋಧರನ್ನು ವಿಪತ್ತಿಗೆ ಗುರಿಮಾಡಿದನು. ನಿನಗೆ ಪ್ರಾಣಕ್ಕಿಂತಲೂ ಪ್ರಿಯನಾದ ಆ ಸಾತ್ಯಕಿಯು ಬಂದನು ನೋಡು. ಮಹಾವೀರರೆನಿಸಿದ ದ್ರೋಣಕೃತವರ್ಮಾದಿಗಳನ್ನೆಲ್ಲ ಜಯಿಸಿದ ಸಾತ್ಯಕಿಯು ಬರುವನು ನೋಡು. ಧರ್ಮರಾಜನ ಪ್ರಿಯಕ್ಕಾಗಿ ತಾನೊಬ್ಬನೇ ಶತ್ರುಸೈನ್ಯದಲ್ಲಿ ಪ್ರವೇಶಿಸಿ, ಪ್ರಬಲವೀರರನ್ನೆಲ್ಲ ಹುಡುಕಿಹುಡುಕಿ ಕೊಂದ ಮಹಾಶೂರನೂ, ಶಸ್ತ್ರಾಸ್ತ್ರಗಳಲ್ಲಿ ಸುಶಿಕ್ಷಿತನೂ, ಆದ ಸಾತ್ಯಕಿಯು ಬರುವನು ನೋಡು. ಕೌರವಸೈನ್ಯದ ನಡುವೆ ಬೇರೊಬ್ಬರಿಗೆ ದುಷ್ಕರವಾದ ಕಾರ್ಯವನ್ನು ಮಾಡಿ, ನಿನ್ನ ದರ್ಶನಕ್ಕಾಗಿ ಆತುರದಿಂದ ಬರುತ್ತಿರುವ ಆ ಸಾತ್ಯಕಿಯನ್ನು ನೋಡು. ತಾನು ಏಕರಥನಾಗಿದ್ದು ಶಸ್ತ್ರಾಚಾರ್ಯನೇ ಮೊದಲಾದ ಮಹಾವೀರರನ್ನೆಲ್ಲ ಜಯಿಸಿದ ಸಾತ್ಯಕಿಯು ಬರುವನು ನೋಡು. ತನ್ನ ಬಾಹುಬಲದಿಂದಲೇ ಕೌರವಸೈನ್ಯಗಳನ್ನು ಭೇದಿಸಿಕೊಂಡು, ಧರ್ಮರಾಜನ ಮಾತಿಗಾಗಿ ನಿನ್ನಲ್ಲಿಗೆ ಬರುತ್ತಿರುವ ಆ ಸಾತ್ಯಕಿಯನ್ನು ನೋಡು. ಪಾರ್ಥಾ! ಅವನು ನಿನಗೆ ಅತ್ಯಂತಪ್ರಿಯನು! ನಿನ್ನ ಶಿಷ್ಯನು! ಪರಾಕ್ರಮದಲ್ಲಿ ನಿನಗೆ ಸಮಾನನು! ಇವನಿಗೆ ಸಮಾನರಾದ ಬೇರೆ ಯೋಧರಿಲ್ಲ. ಅಂತಹ ಸಾತ್ಯಕಿಯು ಬರುವನು ನೋಡು. ಹಸುಗಳ ಮಂದೆಯಿಂದ ಸಿಂಹವು ಹೇಗೋ ಹಾಗೆ ಕೌರವಸೈನ್ಯದಲ್ಲಿ ನಿರ್ಭಯವಾಗಿ ಪ್ರವೇಶಿಸಿ ಬಂದ ಆ ಸಾತ್ಯಕಿಯನ್ನು ನೋಡು. ತಾವರೆಹೂಗಳನ್ನು ಹರಡಿದಂತೆ ಅನೇಕರಾಜರ ತಲೆಗಳನ್ನು ರಣರಂಗಕ್ಕೆಲ್ಲ ಹರಡಿಬಂದಿರುವ ಆ ಸಾತ್ಯಕಿಯನ್ನು ನೋಡು. ದಾರಿಯಲ್ಲಿ ದುರ್ಯೋಧನನನ್ನು ಅವನ ತಮ್ಮಂದಿರೊಡನೆ ಜಯಿಸಿ, ಜಲಸಂಧನನ್ನು ಕೊಂದು, ರಣಭೂಮಿಯಲ್ಲಿ ರಕ್ತಪ್ರವಾಹವನ್ನು ಹೊರಡಿಸಿ, ಕೌರವರನ್ನೆಲ್ಲ ಹುಲ್ಲಿಗಿಂತಲೂ ಕಡೆಮಾಡಿ ಬಂದ ಸಾತ್ಯಕಿಯು, ಅದೋ! ಇಲ್ಲಿರುವನು ನೋಡು" ಎಂದನು. ಆಗ ಅರ್ಜುನನು ಕೃಷ್ಣನನ್ನು ನೋಡಿ, "ವಾಸುದೇವಾ! ಸಾತ್ಯಕಿ

ಯು ನನ್ನಲ್ಲಿಗೆ ಬಂದನೆಂಬುದಕ್ಕಾಗಿ ನಾನೇನೂ ಅಷ್ಟು ಸಂತೋಷಪಡು ವಹಾಗಿಲ್ಲ. ಅವನು ಬಂದುದು ನನಗೆ ಪ್ರಿಯವೂ ಅಲ್ಲ. ಈಗ ನನಗೆ ಧರ್ಮ ರಾಜನ ಚಿಂತೆಯು ಪ್ರಬಲವಾಯಿತು. ಸಾತ್ಯಕಿಯು ಅವನನ್ನು ಬಿಟ್ಟುಬಂ ದಮೇಲೆ, ಈಗಾಗಲೇ ಅಣ್ಣನು ಬದುಕಿರುವನೋ ಇಲ್ಲವೋ ಎಂದು ಸಂದೇ ಹವು ಹುಟ್ಟುತ್ತಿದೆ. ಆ ಧರ್ಮರಾಜನ ರಕ್ಷಣೆಗಾಗಿ ನಾನು ಸಾತ್ಯಕಿಯನ್ನು ನಿಯಮಿಸಿ ಬಂದಿದ್ದೆನು. ಅವನನ್ನು ಬಿಟ್ಟು ಈ ಸಾತ್ಯಕಿಯು ಹೇಗೆ ಬಂದ ನೋ ತಿಳಿಯದು! ಅಯ್ಯೋ! ಈಗ ನಮಗೆ ಅನರ್ಥದಮೇಲೆ ಅನರ್ಥಗಳು ಬಂದೊದಗಿದುವು. ಅಣ್ಣನು ಅತ್ತಲಾಗಿ ದ್ರೋಣನ ಕೈಗೆ ಸಿಕ್ಕಿಸಲ್ಪಟ್ಟನು. ಇಲ್ಲಿ ನಾನೂ ಸೈಂಧವನನ್ನು ಕೊಲ್ಲಲಿಲ್ಲ. ಅದೋ! ಅತ್ತಲಾಗಿ ಮಹಾ ವೀರನಾದ ಭೂರಿಶ್ರವಸ್ಸು ಸಾತ್ಯಕಿಯನ್ನು ಇದಿರಿಸಲು ಹೋಗುತ್ತಿರುವನು. ಸೈಂಧವವಧವೆಂಬುದು ಈಗ ನನ್ನಮೇಲೆ ಬಿದ್ದ ದೊಡ್ಡ ಭಾರವಾಗಿದೆ. ಅತ್ತ ಲಾಗಿ ಧರ್ಮರಾಜನ ಕ್ಷೇಮವನ್ನು ತಿಳಿಯಬೇಕು! ಸಾತ್ಯಕಿಯನ್ನು ರಕ್ಷಿ ಸಿಕೊಳ್ಳಬೇಕು! ಇಲ್ಲಿ ಸೈಂಧವನನ್ನು ಕೊಲ್ಲಬೇಕು! ಸೂರ್ಯನೋ ಅಸ್ತಂಗತನಾಗುತ್ತಿರುವನು. ಸಾತ್ಯಕಿಯು ಈಗಲೇ ಯುದ್ಧಮಾಡಿ ಬಹಳ ವಾಗಿ ಬಳಲಿ ಬಂದಿರುವನು. ಅವನ ಶಕ್ತಿಯೂ ತಗ್ಗಿರುವುದು. ಅವನ ಕುದುರೆಗಳೂ ಬಹಳವಾಗಿ ಬಳಲಿಹೋಗಿವೆ. ಸಾರಥಿಯೂ ಸೋತುಹೋಗಿ ರುವನು. ಅವನಿಗೆ ವೈರಿಯಾದ ಭೂರಿಶ್ರವಸ್ಸಾದರೋ ಯುದ್ಧೋತ್ಸಾಹದಿಂದ ಇದಿರಿಸಿ ಬರುತ್ತಿರುವನು. ಅವನಿಗೆ ಬೇಕಾದಷ್ಟು ಸೈನ್ಯಗಳೂ ಇರುವುವು. ಕೃಷ್ಣಾ! ಈ ಯುದ್ಧದಲ್ಲಿ ಸಾತ್ಯಕಿಗೆ ಕ್ಷೇಮವುಂಟಾಗುವುದೆ? ಅಂತಹ ದೊಡ್ಡ ಸಮುದ್ರದಂತಿರುವ ಸೇನೆಯನ್ನೆಲ್ಲ ಸುಲಭವಾಗಿ ದಾಟಿಬಂದ ಆ ಸಾತ್ಯಕಿಯು, ಗೋಷ್ಪದದಂತಿರುವ ಈ ಭೂರಿಶ್ರವಸ್ಸಿನ ಯುದ್ಧದಲ್ಲಿ ಆಪತ್ತಿ ಗೊಳಗಾಗದೆ ಕ್ಷೇಮದಿಂದ ಬರುವನೇ? ಸರ್ವಾಸ್ತ್ರಸುಶಿಕ್ಷಿತನೂ, ಕೌರವ ಕುಲಕ್ಕೆ ಪ್ರಧಾನವೀರನೂ ಆದ ಭೂರಿಶ್ರವಸ್ಸಿನೊಡನೆ ಕೈಕಲೆತಮೇಲೆ ಸಾತ್ಯಕಿಯು ಕ್ಷೇಮದಿಂದಿರುವನೇ?" ಕೃಷ್ಣಾ! ನನ್ನಣ್ಣನು ಮಾಡಿದುದು ಬಹಳ ತಪ್ಪು. ದ್ರೋಣನಿಂದ ತನಗುಂಟಾಗಿರುವ ಭಯವನ್ನೆಣಿಸದೆ, ಸಾತ್ಯಕಿಯನ್ನು ಇಲ್ಲಿಗೆ ಕಳುಹಿಸಿದನಲ್ಲಾ! ಗಿಡುಗವು ಮಾಂಸಕ್ಕೆ ಆತುರ

ಗೊಳ್ಳುವಂತೆ ದ್ರೋಣನು ಧರ್ಮರಾಜನನ್ನು ಹಿಡಿಯಲು ಆತುರದಿಂದಿರುವನು. ಇನ್ನು ಅವನು ಕ್ಷೇಮದಿಂದಿರುವನೇ ?" ಎಂದನು.

ಇದು ನೂರ ನಾಲ್ವತ್ತೊಂದನೆಯ ಅಧ್ಯಾಯವು.

{ಸಾತ್ಯಕಿ ಭೂರಿಶ್ರವಸ್ಸುಗಳ ಯುದ್ಧವು. ಭೂರಿಶ್ರವಸ್ಸು ಸಾತ್ಯಕಿಯ ತಲೆಯನ್ನು ಕಡಿಯಲು ಕತ್ತಿಯನ್ನೆತ್ತಿದಾಗ, ಅರ್ಜುನನು ಅವನ ತೋಳುಗಳನ್ನು ಕತ್ತರಿಸಿದುದು.}

ರಾಜಾ ! ಸಾತ್ಯಕಿಯು ಅರ್ಜುನನ ಬಳಿಗೆ ವೇಗದಿಂದ ಹೋಗುತ್ತಿರುವುದನ್ನು ನೋಡಿ, ಭೂರಿಶ್ರವಸ್ಸು ಥಟ್ಟನೆ ಬಂದು ಅವನನ್ನು ತಡೆದು, "ಎಲ ಸಾತ್ಯಕೀ ! ಈಗ ನೀನು ದೈವವಶದಿಂದ ನನ್ನ ಕಣ್ಣಿಗೆ ಗೋಚರಿಸಿದೆ. ಈಗ ನಿನ್ನಮೇಲೆ ನನ್ನ ಹಗೆಯನ್ನು ತೀರಿಸಿಕೊಳ್ಳುವುದಕ್ಕೆ ಒಳ್ಳೇ ಅವಕಾಶವು ಸಿಕ್ಕಿತು. ಈಗಲೇ ನೀನು ಓಡಿಹೋಗದಿದ್ದರೆ, ನನ್ನ ಕೈಯಿಂದ ಸಾಯುವೆ! ನಾನೇ ಶೂರನೆಂದು ಹೆಮ್ಮೆಗೊಂಡಿರುವ ನಿನ್ನನ್ನು ಕೊಂದು, ನಾನು ಕೌರವರಾಜನನ್ನು ಸಂತೋಷಗೊಳಿಸುವೆನು. ನನ್ನ ಬಾಣದಿಂದ ಮೈಮುರಿದು ಬಿದ್ದ ನಿನ್ನ ಮೃತದೇಹವನ್ನು ಕೃಷ್ಣಾರ್ಜುನರಿಬ್ಬರೂ ಈಗಲೇ ನೋಡುವರು. ಧರ್ಮರಾಜನು ನಿನ್ನ ಸಾವನ್ನು ಕೇಳಿ, ನಿನ್ನನ್ನು ತಾನು ಇಲ್ಲಿಗೆ ಕಳುಹಿಸಿಕೊಟ್ಟುದಕ್ಕಾಗಿ ನಾಚಿಕೆಪಟ್ಟು ಪಶ್ಚಾತ್ತಾಪಪಡುವನು. ನಿನ್ನನ್ನು ಕೊಂದುಕೆಡಹಿದಾಗ, ಅರ್ಜುನನು ನನ್ನ ಪರಾಕ್ರಮವೆಂತಹದೆಂಬುದನ್ನು ತಿಳಿಯುವನು. ನಾನು ಬಹುಕಾಲದಿಂದ ಬಯಸುತಿದ್ದ ಕೋರಿಕೆಯು ಈಗ ನನಗೆ ಕೈಗೂಡಿತು. ನಿನ್ನನ್ನೇ ನಾನು ಬಯಸುತ್ತಿದ್ದೆನು. ನಿನ್ನೊಡನೆ ಈಗ ನಾನು ನಡೆಸತಕ್ಕ ಭಯಂಕರಯುದ್ಧವನ್ನು ನೋಡಿದಮೇಲೆ, ನನ್ನ ಪೌರುಷವೆಂತಹದೆಂದು ನೀನೂ ತಿಳಿಯುವೆ. ಹಿಂದೆ ಲಕ್ಷ್ಮಣನು ಇಂದ್ರಜಿತ್ತನ್ನು ಹೇಗೋ ಹಾಗೆ, ನಿನ್ನನ್ನು ನಾನು ಯಮಪುರಿಗೆ ಕಳುಹಿಸುವೆನು. ನಿನ್ನ ಸಾವನ್ನು ನೋಡಿದಮೇಲೆ ಧರ್ಮರಾಜನೂ, ಕೃಷ್ಣನೂ, ಅರ್ಜುನನೂ ಮುಂದಿನ ಯುದ್ಧದಲ್ಲಿ ಉತ್ಸಾಹವಿಲ್ಲದೆ, ರಣರಂಗವನ್ನು ಬಿಟ್ಟುಹೋ

ಗುವರು. ಈಗ ನಾನು ನಿನ್ನನ್ನು ಕೊಂದು, ನಿನ್ನಿಂದ ಹತರಾದ ಶತ್ರುಗಳ ಹೆಂಡತಿಯರ ಮನಸ್ಸಿಗೆ ಆಪ್ಯಾಯನವನ್ನುಂಟುಮಾಡುವೆನು. ಸಾತ್ಯಕೀ! ನನ್ನ ಕಣ್ಣಿಗೆ ಬಿದ್ದಮೇಲೆ ನೀನು ಸಿಂಹದ ಕಣ್ಣಿಗೆ ಬಿದ್ದ ಕ್ಷುದ್ರಮೃಗದಂತೆ ಬದುಕಿಹೋಗಲಾರೆ" ಎಂದನು. ಈ ಮಾತನ್ನು ಕೇಳಿ ಸಾತ್ಯಕಿಯು ನಗುತ್ತಾ, "ಎಲ ಕೌರವೇಯಾ! ಈ ನಿನ್ನ ಮಾತಿನ /ಬೆದರಿಕೆಗೆಲ್ಲಾ ನಾನು ಹೆದರುವವನಲ್ಲ. ನಾನು ಯುದ್ಧದಲ್ಲಿ ಭಯವೆಂಬುದನ್ನೇ ಕಂಡವನಲ್ಲ. ನನ್ನನ್ನು ನಿರಾಯುಧನನ್ನಾಗಿ ಮಾಡಿದವನೇ ನನ್ನನ್ನು ಕೊಲ್ಲುವನು. ಅಲ್ಲದೆ ನನ್ನನ್ನು ಹಾಗೆ ಯುದ್ಧದಲ್ಲಿ ಯಾವನು ಕೊಲ್ಲಬಲ್ಲನೋ, ಅಂತವನು ಶತ್ರುಗಳಿಂದ ಹತನಾಗದೆ ಎಂದೆಂದಿಗೂ ವೈರಿಗಳನ್ನು ಕೊಲ್ಲುತ್ತಲೇ ಇರುವನು. ನಿನ್ನ ಈ ವ್ಯರ್ಥಪ್ರಲಾಪಗಳಿಂದೇನು? ಕಾರ್ಯದಿಂದ ನಿನ್ನ ಹೆಮ್ಮೆಯನ್ನು ತೋರಿಸು. ಶರತ್ಕಾಲದ ಮೇಘದ ಗರ್ಜನೆಯಂತೆ, ಈ ನಿನ್ನ ಗರ್ಜನೆಗೆ ಏನೂ ಬೆಲೆಯಿಲ್ಲ. ನಿನ್ನ ಗರ್ಜನೆಯನ್ನು ನೋಡಿ ನನಗೆ ನಗೆ ಬರುವುದು. ನೀನು ಹೇಳಿದಂತೆ ಬಹುಕಾಲದಿಂದ ನಾವು ಬಯಸುತ್ತಿದ್ದ ಯುದ್ಧವು ಈಗ ಒದಗಿಬಂದಿದೆ. ನಿನ್ನೊಡನೆ ಯುದ್ಧಮಾಡಬೇಕೆಂಬ ಆತುರವು ನನಗೂ ಹೆಚ್ಚಾಗಿದೆ. ಕೌರವಾ! ನಿನ್ನನ್ನು ಕೊಲ್ಲದೆ ನಾನೂ ಹಿಂತಿರುಗುವುದಿಲ್ಲವೆಂದು ತಿಳಿ" ಎಂದನು. ಹೀಗೆ ಅವರಿಬ್ಬರೂ ಒಬ್ಬರನ್ನೊಬ್ಬರು ಮೂದಲಿಸುತ್ತಾ, ಒಬ್ಬರನ್ನೊಬ್ಬರು ಕೋಪದಿಂದ ಹೊಡೆಯಲಾರಂಭಿಸಿದರು. ಒಂದು ಹೆಣ್ಣಾನೆಗಾಗಿ ಹೋರಾಡುವ ಮದದಾನೆಗಳಂತೆ ಇಬ್ಬರೂ ಹಟದಿಂದ ಹೋರಾಡಿದರು. ಒಬ್ಬರಮೇಲೊಬ್ಬರು ಬಾಣವರ್ಷಗಳನ್ನು ಕರೆದರು. ಸೋಮದತ್ತಪುತ್ರನಾದ ಆ ಭೂರಿಶ್ರವಸ್ಸು ಸಾತ್ಯಕಿಯನ್ನು ಕೊಲ್ಲಬೇಕೆಂದು ಹತ್ತು ತೀವ್ರಬಾಣಗಳನ್ನು ಬಿಟ್ಟನು. ಅವುಗಳನ್ನೆಲ್ಲಾ ಸಾತ್ಯಕಿಯು ತನ್ನ ಚಾತುರ್ಯದಿಂದ ಅಂತರಿಕ್ಷದಲ್ಲಿಯೇ ಕತ್ತರಿಸಿಕೆಡಹಿದನು. ಹೆಬ್ಬುಲಿಗಳು ತಮ್ಮ ಕೋರೆಹಲ್ಲುಗಳಿಂದಲೂ, ಮದದಾನೆಗಳು ದಂತಗಳಿಂದಲೂ, ತಿವಿದಾಡುವಂತೆ ಒಬ್ಬರನ್ನೊಬ್ಬರು ಬಾಣಗಳಿಂದ ಭೇದಿಸುತ್ತಿದ್ದರು. ಇಬ್ಬರ ದೇಹದಿಂದಲೂ ರಕ್ತವು ಸುರಿಯುತ್ತಿದ್ದಿತು. ಇಬ್ಬರೂ ತಮ್ಮ ಪ್ರಾಣಗಳನ್ನೇ ಒತ್ತೆಯಾಗಿಟ್ಟು ಯುದ್ಧದ್ಯೂತವನ್ನು ನಡೆಸಿದರು. ಇಬ್ಬರೂ ಆ ಯುದ್ಧದಿಂದ ತಮಗಾಗಲಿ, ತಮ್ಮ ಶತ್ರುವಿಗಾಗಲಿ ಸದ್ಗತಿ

ಯುಂಟಾಗಬೇಕೆಂಬ ಸಂಕಲ್ಪದಿಂದ ಕೌರವರೆಲ್ಲರಿಗೂ, ವಿಸ್ಮಯವುಂಟಾಗುವಂತೆ ಬಾಣವರ್ಷಗಳನ್ನು ಸುರಿಸುತ್ತಿದ್ದರು. ಜನರೆಲ್ಲರೂ ಎವೆಯಿಕ್ಕದೆ ಅವರ ಯುದ್ಧವನ್ನು ನೋಡುತ್ತಿದ್ದರು. ಇಬ್ಬರೂ ಮರ್ಮಸ್ಥಾನಗಳನ್ನು ಹಿಡಿದು ಬಾಣಗಳನ್ನು ಪ್ರಯೋಗಿಸುತ್ತಾ ಆಗಾಗ ಗರ್ಜಿಸುವರು! ಅನ್ಯೋನ್ಯವಾಗಿ ರಥ ಧ್ವಜ ಪತಾಕೆಗಳನ್ನೆಲ್ಲಾ ಭೇದಿಸಿಕೆಡಹುವರು! ಆಗಾಗ ಬಾಣವರ್ಷಗಳಿಂದ ಒಬ್ಬರನ್ನೊಬ್ಬರು ಮರೆಸುವರು! ಸಾರಥಿಗಳನ್ನೂ, ರಥಾಶ್ವಗಳನ್ನೂ ಕೊಲ್ಲುವರು! ರಥವು ಮುರಿದೊಡನೆ ಕತ್ತಿಯನ್ನು ಹಿಡಿದು ಖಡ್ಗಯುದ್ಧವನ್ನಾರಂಭಿಸುವರು! ಎತ್ತಿನ ಚರ್ಮದಿಂದ ಮಾಡಲ್ಪಟ್ಟ ಗುರಾಣಿಯನ್ನು ಒಡ್ಡುವರು! ವಿಚಿತ್ರ ಮಂಡಲಗತಿಗಳಿಂದ ಸುತ್ತುವರು! ಇಬ್ಬರೂ ಖಡ್ಗಪಾಣಿಗಳಾಗಿ ಭ್ರಾಂತ, ಉದ್ಭ್ರಾಂತ, ಆವಿದ್ಧ, ಅಪ್ಲುತ, ವಿಪ್ಲುತ, ಸೃತ, ಸಂಪಾತ, ಸಮುದೀರ್ಣಗಳೆಂಬ ವಿವಿಧಗತಿಗಳನ್ನು ತೋರಿಸುತ್ತಾ ಕತ್ತಿಗಳಿಂದ ಹೊಡೆದಾಡುವರು. ಒಬ್ಬರ ಸಂಚನ್ನು ಇನ್ನೊಬ್ಬರು ತಿಳಿದು, ಚಿತ್ರಗತಿಯಿಂದ ತಿರುಗುತ್ತಾ, ತಮ್ಮ ಯುದ್ಧಶಿಕ್ಷೆಯನ್ನೂ, ಹಸ್ತಲಾಘವವನ್ನೂ, ಚಮತ್ಕಾರವನ್ನೂ ತೋರಿಸುವರು. ಮುಹೂರ್ತಕಾಲದವರೆಗೆ ಹೋರಾಡಿ, ಇಬ್ಬರು ಸ್ವಲ್ಪಹೊತ್ತು ದಣಿವಾರಿಸಿಕೊಳ್ಳುವರು. ಹೀಗೆ ಖಡ್ಗಯುದ್ಧವು ನಡೆಯುತ್ತಿರುವಾಗ, ಅವರಿಬ್ಬರ ಕತ್ತಿಗುರಾಣಿಗಳು ಭೇದಿಸಲ್ಪಟ್ಟವು. ಆಮೇಲೆ ಇಬ್ಬರೂ ಬಾಹುಯುದ್ಧವನ್ನಾರಂಭಿಸಿದರು. ಉಬ್ಬಿದ ಎದೆಯಿಂದಲೂ, ನೀಡಿದ ತೋಳುಗಳಿಂದಲೂ ಕೂಡಿದ ಮಹಾಬಲಾಢ್ಯರಾದ ಅವರಿಬ್ಬರೂ, ಉಕ್ಕಿನ ಒನಕೆಗಳಂತಿದ್ದ ತಮ್ಮ ತೋಳುಗಳಿಂದಲೇ ಒಬ್ಬರನ್ನೊಬ್ಬರು ಅಪ್ಪಳಿಸುತ್ತಿದ್ದರು. ಅವರ ಮುಷ್ಟಿಘಾತಗಳು, ಅವರ ಎಳೆದಾಟಗಳು, ಅವರ ಹಿಡಿತಗಳು, ಇವೆಲ್ಲವೂ ನೋಡತಕ್ಕ ಯೋಧರಿಗೆಲ್ಲಾ ಸಂತೋಷಕರಗಳಾಗಿ, ಅವರ ಶಿಕ್ಷಾಚಾತುರ್ಯವನ್ನು ಪ್ರಕಟಿಸುತ್ತಿದ್ದುವು. ಈ ನಡುವೆ ಅವರಿಬ್ಬರ ಯುದ್ಧದಲ್ಲಿ ವಜ್ರಾಘಾತದಿಂದ ಪರ್ವತದಲ್ಲಿ ಹುಟ್ಟುವ ಮಹಾಧ್ವನಿಯಂತೆ ಭಯಂಕರಧ್ವನಿಯುಂಟಾಯಿತು. ದಂತಗಳಿಂದ ಆನೆಗಳೂ, ಕೊಂಬುಗಳಿಂದ ಗೂಳಿಗಳೂ ಹೋರಾಡುವಂತೆ ಇಬ್ಬರೂ ತಮ್ಮ ತೋಳುಗಳಿಂದ ಹೊಡೆದಾಡಿದರು. ಒಬ್ಬರಿಗೊಬ್ಬರು ತಲೆಗಳಿಂದ ಘಟ್ಟಿಸುವರು! ಒಬ್ಬರ ಕಾಲನ್ನೊಬ್ಬರು ಹಿಡಿದು ಎಳೆಯು

ವರು! ಕಾಲಿಗೆಕಾಲನ್ನು ತೊಡರಿಸುವರು. ಚುಚ್ಚುವುದು, ಹೊಡೆಯುವುದು, ಹೆಣಗಾಡುವುದು, ಕಾಲುಗಳನ್ನು ಹೊಟ್ಟೆಯಕಡೆಗೆ ಅಮುಕಿ, ಒಬ್ಬರನ್ನೊಬ್ಬರು ಹಿಡಿಯುವುದು! ನೆಲದಮೇಲೆ ಒಬ್ಬರನ್ನೊಬ್ಬರು ಹೊರಳಿಸುವುದು, ಹಿಂದೆ ಸರಿಯುವುದು, ಮುಂದೆ ಬರುವುದು, ಒಬ್ಬರನ್ನೊಬ್ಬರು ಎತ್ತಿಬಿಸುಡುವುದು, ಹಾರುವುದು, ಎದ್ದು ನಿಲ್ಲುವುದು, ಕೆಳಕ್ಕೆ ಕೆಡಹುವುದು, ಹೀಗೆ ಮಹಾಬಲಾಢ್ಯರಾದ ಅವರಿಬ್ಬರೂ, ಅನೇಕ ಮುಷ್ಟಿಯುದ್ಧಕ್ರಮಗಳಿಂದ ಹೊಡೆದಾಡಿದರು. ಬಾಹುಯುದ್ಧಗಳಲ್ಲಿ ತೋರಿಸತಕ್ಕ ಮೂವತ್ತೆರಡು ವರಿಸೆಗಳನ್ನೂ ಅವರು ತಮ್ಮ ಯುದ್ಧದಲ್ಲಿ ಜನಗಳಿಗೆ ತೋರಿಸುತ್ತಿದ್ದರು. ಹೀಗೆ ಸಾತ್ಯಕಿಯು ಆಯುಧರಹಿತನಾಗಿ ಬಾಹುಯುದ್ಧಕ್ಕೆ ನಿಂತಿರುವುದನ್ನು ಕಂಡು, ಕೃಷ್ಣನು ಅರ್ಜುನನನ್ನು ಕುರಿತು, "ಅರ್ಜುನಾ! ಅದೋ! ನೋಡು. ಸಾತ್ಯಕಿಗೆ ಆಯುಧಗಳಿಲ್ಲ! ರಥವಿಲ್ಲ! ಬರೀ ಮೈಯಿಂದಲೇ ಯುದ್ಧಮಾಡುತ್ತಿರುವನು. ಧನುರ್ಧಾರಿಗಳೊಳಗೆ ಮೇಲೆನಿಸಿಕೊಂಡಿರುವ ಆತನು, ಹೀಗೆ ಬಾಹುಯುದ್ಧಕ್ಕೆ ನಿಂತಿರುವುದು ಅಪಾಯಕರವೇ ಅವನು ಬಹಳ ಬಳಲಿರುವನು ನೋಡು. ನೀನು ಹೋಗಿ ಅವನನ್ನು ರಕ್ಷಿಸಬೇಕು. ಇದಲ್ಲದೆ ಆ ಸಾತ್ಯಕಿಯು ಕೌರವಸೈನ್ಯವನ್ನು ಬಹು ಪ್ರಯತ್ನದಿಂದ ಭೇದಿಸಿಕೊಂಡು, ನಿನ್ನ ದಾರಿಯನ್ನು ಹುಡುಕಿಕೊಂಡು ಬಂದಿರುವನು. ಪ್ರಬಲ ವೀರ್ಯವುಳ್ಳ ಅನೇಕ ರಥಿಕರೊಡನೆ ಇದುವರೆಗೆ ಯುದ್ಧಮಾಡಿರುವನು. ಅವನು ಇದುವರೆಗೆ ಅನೇಕ ಧಾರ್ತರಾಷ್ಟ್ರಪ್ರಮುಖರನ್ನೂ ಮಹಾರಥಪ್ರಧಾನರನ್ನೂ ನೂರಾರು ಸಹಸ್ರಸಂಖ್ಯೆಯಿಂದ ವಧಿಸಿರುವನು. ಹೀಗೆ ಮೊದಲೇ ಬಹಳವಾಗಿ ಆಯಾಸಪಟ್ಟು ಬಂದಿರುವ ಆ ಸಾತ್ಯಕಿಯನ್ನು ಭೂರಿಶ್ರವಸ್ಸು ಯುದ್ಧದ ಹೆಮ್ಮೆಯಿಂದ ಬಂದು ಇದಿರಿಸಿರುವನು. ಈ ಯುದ್ಧವೇ ಉಚಿತವೆಂದು ತೋರಲಿಲ್ಲ. ಶ್ರಾಂತನಾದವನು ಆಗಲೇ ಯುದ್ಧೋತ್ಸಾಹದಿಂದ ಬಂದವನನ್ನು ಇದಿರಿಸುವುದರಿಂದ ಅಪಾಯವು ತಪ್ಪದು. ಭೂರಿಶ್ರವಸ್ಸು ಸಾತ್ಯಕಿಯನ್ನು ಬಹಳವಾಗಿ ಭುಜಗಳಿಂದ ಅಪ್ಪಳಿಸುತ್ತಿರುವನು. ಇದಕ್ಕೆ ಅವಕಾಶವನ್ನು ಕೊಡಬಾರದು" ಎಂದನು. ಕೃಷ್ಣನು ಹೇಳುತ್ತಿರುವಾಗಲೇ ಆ ಕಡೆಯಲ್ಲಿ ಭೂರಿಶ್ರವಸ್ಸು ಸಾತ್ಯಕಿಯನ್ನು ಭುಜಗಳಿಂದ ಬಲವಾಗಿ ಅಪ್ಪಳಿಸಿದ ಧ್ವನಿಯು ಕೇಳಿಸಿತು. ಅಲ್ಲಿದ್ದ ಸೈನ್ಯಗಳಲ್ಲಿ

ಹಾಹಾಕಾರವೆದ್ದಿತು. ಈ ಎರಡುಧ್ವನಿಯನ್ನೂ ಕೇಳಿ ತಿರುಗಿ ಕೃಷ್ಣನು "ಅರ್ಜುನಾ! ಅದೋ! ನೋಡು. ಸೋಮದತ್ತಕುಮಾರನಾದ ಭೂರಿಶ್ರವಸ್ಸಿನ ಕೈಗೆ ಸಾತ್ಯಕಿಯು ಸಿಕ್ಕಿಬಿದ್ದನು. ಅಸಾಧ್ಯಕಾರ್ಯಗಳನ್ನು ಮಾಡಿಬಂದು, ಬಹಳ ಆಯಾಸಗೊಂಡ ಸಾತ್ಯಕಿಯನ್ನು ಭೂರಿಶ್ರವಸ್ಸು ಕೆಳಕ್ಕೆ ಕೆಡಹಿರುವನು. ನಿನ್ನ ಶಿಷ್ಯನಾದ ಆ ಸಾತ್ಯಕಿಯನ್ನು ರಕ್ಷಿಸು. ಭೂರಿದಕ್ಷಿಣೆಗಳುಳ್ಳ ಅನೇಕ ಯಾಗಗಳನ್ನು ಮಾಡಿ, ಯಜ್ಞಶೀಲನೆನಿಸಿ, ಪ್ರಖ್ಯಾತಿಗೊಂಡ ಆ ಭೂರಿಶ್ರವಸ್ಸಿನ ಕೈಗೆ ಸಿಕ್ಕ ಸಾತ್ಯಕಿಯು ನಿನ್ನ ದೆಸೆಯಿಂದ ಅಪಾಯಕ್ಕೀಡಾಗಬಾರದು. ಬೇಗನೆ ಅವನನ್ನು ಅಪಾಯದಿಂದ ತಪ್ಪಿಸು. ಹೋಗು" ಎಂದನು. ಧೃತರಾಷ್ಟ್ರಮಹಾರಾಜಾ! ಸಿಂಹವು ಆನೆಯನ್ನು ಹೇಗೋ ಹಾಗೆ ಭೂರಿಶ್ರವಸ್ಸು ಸಾತ್ಯಕಿಯನ್ನು ಹಿಡಿದೆಳೆದಾಡುತ್ತಿದ್ದನು. ಅದನ್ನು ಅರ್ಜುನನು ನೋಡಿ, ಕೃಷ್ಣನನ್ನು ಕುರಿತು "ವಾಸುದೇವಾ! ನೀನು ಹೇಳಿದುದು ವಾಸ್ತವವೇ! ಆ ಕೌರವರಾಜನು ಸಾತ್ಯಕಿಯೊಡನೆ ಯುದ್ಧಕ್ರೀಡೆಯನ್ನಾಡುತ್ತಿರುವನು. ಆನೆಯು ಸಿಂಹವನ್ನು ಹಿಡಿದಂತೆ ಅವನು ಸಾತ್ಯಕಿಯನ್ನು ಹಿಡಿದು ಭಂಗಿಸುತ್ತಿರುವನು. ಕೃಷ್ಣಾ! ಇದೇ ಸಮಯವನ್ನು ನೋಡಿ ಇತ್ತಲಾಗಿ ಅನೇಕಮಹಾರಥರು ನನ್ನನ್ನಿದಿರಿಸಿ ಯುದ್ಧಕ್ಕೆ ಸೆಳೆಯುತ್ತಿರುವರು. ಆದರೇನು? ನಾನು ಇವರನ್ನು ನಿಗ್ರಹಿಸಿ, ಆ ಸಾತ್ಯಕಿಯನ್ನೂ ರಕ್ಷಿಸಿಕೊಳ್ಳುವೆನು. ಈ ರಂಧ್ರವನ್ನೇ ಹುಡುಕಿ ನನ್ನನ್ನಿದಿರಿಸಿಬಂದ ಇವರನ್ನು ಮೊದಲು ಹೊಡೆದೋಡಿಸುವೆನು. ಯುದ್ಧದಲ್ಲಿ ನನಗಿದಿರಾಗಿ ಬಾರದ ಭೂರಿಶ್ರವಸ್ಸನ್ನು ಕೊಲ್ಲುವುದು ಈಗ ನನಗೆ ಯುಕ್ತವಲ್ಲ. ಬೇರೊಬ್ಬರೊಡನೆ ಯುದ್ಧಮಾಡುತ್ತಿರುವಾಗ, ನಾನು ಅವನನ್ನು ಕೊಲ್ಲುವುದಕ್ಕೆ ನನಗೆ ಮನಸ್ಸು ಬಾರದು. ಆದರೆ, ನನಗಾಗಿ ಯುದ್ಧಕ್ಕೆ ಬಂದ ಸಾತ್ಯಕಿಯನ್ನು ನಾನು ನನ್ನ ಪ್ರಾಣಗಳಿಂದಾದರೂ ರಕ್ಷಿಸಬೇಕಾದುದೂ ಆವಶ್ಯವೇ. ಕೃಷ್ಣಾ! ಇದು ಧರ್ಮವಾಗಿರಲಿ, ಅಧರ್ಮವಾಗಿರಲಿ, ನನ್ನಿದಿರಿಗೆ ನನ್ನ ಪ್ರಾಣಪ್ರಿಯನಾದ ಸಾತ್ಯಕಿಯು ಇನ್ನೊಬ್ಬರ ಕೈಗೆ ಸಿಕ್ಕಿ ಸಾಯಲು ಅವಕಾಶವನ್ನು ಕೊಡಲಾರೆನು" ಎಂದು ಹೇಳಿ, ತನಗೆ ಅಡ್ಡಲಾಗಿ ಬಂದ ಸೈನ್ಯಗಳನ್ನೆಲ್ಲಾ ಬಾಣವರ್ಷಗಳಿಂದ ಮುಚ್ಚುತ್ತಿದ್ದನು. ಅವರೂ ಅರ್ಜುನನನ್ನು ಬಾಣಗಳಿಂದ ಮುಚ್ಚಿದರು. ಅರ್ಜುನನು ಇತ್ತ

ಲಾಗಿ ಶತ್ರುಸೈನ್ಯದೊಡನೆ ಯುದ್ಧಮಾಡುತ್ತ! ಅದೇ ಸಮಯದಲ್ಲಿ ಅತ್ತಲಾಗಿ ಯುದ್ಧಮಾಡುತ್ತಿರುವ ಭೂರಿಶ್ರವಸ್ಸನ್ನೂ, ಸಾತ್ಯಕಿಯನ್ನೂ ನೋಡುವನು. ಭೂರಿಶ್ರವಸ್ಸಿನ ಕೈಗೆ ಸಿಕ್ಕಿ ಸಾತ್ಯಕಿಯು ಎಳೆದಾಡಲ್ಪಡುತ್ತಿರುವುದನ್ನು ನೋಡಿ, ಕೃಷ್ಣನು ತಿರುಗಿ ಅರ್ಜುನನನ್ನು ಕುರಿತು, "ಅರ್ಜುನಾ! ನೀನು ಇನ್ನೂ ಸುಮ್ಮನಿರುವೆಯೇಕೆ? ಧನುರ್ವಿದ್ಯೆಯಲ್ಲಿ ನಿನಗೆ ಸಮಾನನೂ, ನಿನ್ನ ಪ್ರಿಯಶಿಷ್ಯನೂ ಆದ ಸಾತ್ಯಕಿಯು ಭೂರಿಶ್ರವಸ್ಸಿನ ಕೈಗೆ ಸಿಕ್ಕಿಬಿದ್ದಿರುವನು. ಪಾರ್ಥಾ! ಭೂರಿಶ್ರವಸ್ಸು ಯುದ್ಧದಲ್ಲಿ ಸಾತ್ಯಕಿಯನ್ನು ಮೇಲೆಮೇಲೆ ಅತಿಶಯಿಸುತ್ತಿರುವನು. ಇದನ್ನು ನೋಡಿದರೆ ಪರಾಕ್ರಮವು ಯಾರಿಗೂ ಸ್ಥಿರವಲ್ಲವೆಂಬುದು ಸ್ಪಷ್ಟವಾಗುವುದು. ಅನೇಕ ಮಹಾರಥರೊಡನೆ ಯುದ್ಧಮಾಡಿ ಅದರಿಂದ ಸಾತ್ಯಕಿಯು ಬಹಳವಾಗಿ ಬಳಲಿರುವನು. ಅಲ್ಲದೆ ವಿರಥನಾಗಿಯೂ, ಶಸ್ತ್ರಹೀನನಾಗಿಯೂ ಇರುವನು. ಮಹಾಪರಾಕ್ರಮಿಯಾದರೂ ಸಾತ್ಯಕಿಯು ಈಗ ಕೌರವರಾಜನ ಕೈಗೆ ಸಿಕ್ಕಿಬಿದ್ದುದೇನೂ ಆಶ್ಚರ್ಯವಲ್ಲ. ಈಗ ನೀನು ಹೇಗಾದರೂ ಅಪಾಯದಿಂದ ಅವನನ್ನು ತಪ್ಪಿಸಬೇಕು" ಎಂದನು. ಕೃಷ್ಣನ ಮಾತನ್ನು ಕೇಳಿ ಅರ್ಜುನನು ಬಾರಿಬಾರಿಗೂ ಅತ್ತಲಾಗಿ ನೋಡುತ್ತಿದ್ದನು. ಮಹಾಧನುರ್ಧರನಾದ ಸಾತ್ಯಕಿಯನ್ನು ಭೂರಿಶ್ರವಸ್ಸು ಯುದ್ಧದಲ್ಲಿ ಹಿಡಿದೆಳೆದಾಡುತ್ತಿರುವುದನ್ನು ನೋಡಿ ತನ್ನಲ್ಲಿ ತಾನೇ ಅವನ ಪರಾಕ್ರಮಕ್ಕೆ ಮೆಚ್ಚಿ, "ವಾಸುದೇವಾ! ನಿಜವಾಗಿಯೂ ಈ ಭೂರಿಶ್ರವಸ್ಸಿನ ಪರಾಕ್ರಮವು ನನ್ನ ಮನಸ್ಸಿಗೆ ಸಂತೋಷವನ್ನುಂಟುಮಾಡುತ್ತಿದೆ. ಅವನು ಮಕ್ಕಳಾಟಿಕೆಯಂತೆ ಸಾತ್ಯಕಿಯೊಡನೆ ಯುದ್ಧಕ್ರೀಡೆಯನ್ನಾಡುತ್ತ, ಸಿಂಹವು ಆನೆಯನ್ನು ಹಿಡಿದೆಳೆಯುವಂತೆ ಅವನನ್ನು ಎಳೆಯುತ್ತಿರುವನು" ಎಂದು ಭೂರಿಶ್ರವಸ್ಸಿನ ಪರಾಕ್ರಮವನ್ನು ಅಭಿನಂದಿಸುತ್ತಿದ್ದನು. ಇಷ್ಟರಲ್ಲಿಯೇ ಅತ್ತಲಾಗಿ ಭೂರಿಶ್ರವಸ್ಸು ಸಾತ್ಯಕಿಯ ತಲೆಕೂದಲನ್ನು ಹಿಡಿದು, ಅವನನ್ನು ಕೆಳಕ್ಕೆ ಕೆಡಹಿ, ಅವನ ಎದೆಯಮೇಲೆ ಕಾಲಿಟ್ಟು ಅಪ್ಪಳಿಸುತ್ತಾ, ಆ ಸಾತ್ಯಕಿಯ ತಲೆಯನ್ನು ಕಡಿಯುವುದಕ್ಕಾಗಿ ಒರೆಯಿಂದ ಕತ್ತಿಯನ್ನೆಳೆದು ತೋಳನ್ನು ಮೇಲಕ್ಕೆತ್ತಿದನು. ಕೇಯೂರಾಂಗದಗಳಿಂದ ಅಲಂಕೃತವಾದ ಅವನ ನೀಡಿದ ತೋಳು ಸೇನಾಮಧ್ಯದಲ್ಲಿ ಇಂದ್ರಧ್ವಜವನ್ನೇರಿಸಿದಂತೆ ಕಾಣಿಸುತ್ತಿದ್ದಿತು. ಇದನ್ನು ನೋಡಿ ಪಾಂಡ

ವಸೈನ್ಯದಲ್ಲಿ ಭಯಂಕರವಾದ ದೊಡ್ಡ ಹಾಹಾಕಾರವೆದ್ದಿತು. ನಿನ್ನವರು ಸಂತೋಷದಿಂದ ಸಿಂಹನಾದವನ್ನು ಮಾಡಿದರು. ಸಾತ್ಯಕಿಯ ಈ ಕ್ರೂರವಾದ ಕೊಲೆಯನ್ನು ಕಣ್ಣಿಂದ ನೋಡಲಾರದೆ, ಜನರೆಲ್ಲರೂ ಕಣ್ಣನ್ನು ಮುಚ್ಚಿಕೊಂಡರು. ಸಾತ್ಯಕಿಯ ಶಕ್ತಿಯೆಲ್ಲವೂ ಅಡಗಿಹೋಯಿತು. ಆಗ ಅರ್ಜುನನು ಕೃಷ್ಣನನ್ನು ನೋಡಿ, "ಕೃಷ್ಣಾ! ನನ್ನ ಕಣ್ಣೆಲ್ಲವೂ, ಇತ್ತಲಾಗಿ ಸೈಂಧವನಮೇಲೆಯೇ ಇದ್ದುದರಿಂದ, ಇದುವರೆಗೆ ನಾನು ಸಾತ್ಯಕಿಯ ಸ್ಥಿತಿಯನ್ನು ಅಷ್ಟಾಗಿ ಗಮನಿಸಲಿಲ್ಲ. ಈಗ ನಾನು ಆ ಸಾತ್ಯಕಿಗಾಗಿ ಮಾಡಬಾರದ ಕೆಲಸವನ್ನು ಮಾಡಬೇಕಾಗಿದೆ. ನನಗಾಗಿ ಯುದ್ಧಮಾಡುತ್ತಿರುವ ಆ ನನ್ನ ಶಿಷ್ಯನನ್ನು ಕಾಡುಗಿಚ್ಚಿನಿಂದ ಸಿಂಹದ ಮರಿಯನ್ನು ತಪ್ಪಿಸಿದಂತೆ ಅಪಾಯದಿಂದ ತಪ್ಪಿಸದೆ ತೀರದು" ಎಂದು ಹೇಳಿ, ಕೃಷ್ಣನ ಅನುಮತಿಯನ್ನು ಪಡೆದು, ಅತಿ ತೀಕ್ಷ್ಣವಾದ ಒಂದು ಕ್ಷುರಪ್ರವನ್ನು ಗಾಂಡೀವದಲ್ಲಿ ಸಂಧಿಸಿ, ಪ್ರಯೋಗಿಸಿಬಿಟ್ಟನು. ಅದು ಆಕಾಶದ ಕೊಳ್ಳಿಯಂತೆ ಹೊರಟು ಬಂದು ಖಡ್ಗವನ್ನು ಎತ್ತಿಹಿಡಿದ ಭೂರಿಶ್ರವಸ್ಸಿನ ಬಲದೋಳಿಗೆ ತಗುಲಿ, ಅದನ್ನು ತುಂಡುಮಾಡಿ ಕೆಡಹಿತು.

ಇದು ನೂರನಾಲ್ವತ್ತೆರಡನೆಯ ಅಧ್ಯಾಯವು.

---

ಭೂರಿಶ್ರವಸ್ಸು ಅರ್ಜುನನ ಕಾರ್ಯಕ್ಕಾಗಿ ಅವನನ್ನು ನಿಂದಿಸಿ ಪ್ರಾಯೋಪವೇಶವನ್ನು ಹಿಡಿದಿದ್ದಾಗ, ಸಾತ್ಯಕಿಯು ಅವನ ತಲೆಯನ್ನು ಕಡಿದುದು.

ರಾಜೇಂದ್ರಾ! ಭೂರಿಶ್ರವಸ್ಸಿನ ತೋಳು ಖಡ್ಗಸಹಿತವಾಗಿ ಮುರಿದು ಕೆಳಗೆ ಬಿದ್ದಿತು. ಅದನ್ನು ನೋಡುತ್ತಿದ್ದ ಪ್ರಾಣಿಗಳಿಗೆಲ್ಲ ಅನಿರ್ವಚನೀಯವಾದ ವ್ಯಸನವುಂಟಾಯಿತು. ಉತ್ಸವಾಂತದಲ್ಲಿ ಇಂದ್ರಧ್ವಜವು ಯಂತ್ರದಿಂದ ಕೆಳಕ್ಕೆ ಕೆಡಹಲ್ಪಟ್ಟಂತೆ, ಅದೃಶ್ಯನಾಗಿದ್ದ ಅರ್ಜುನನಿಂದ ಭೂರಿಶ್ರವಸ್ಸು ಮೇಲೆತ್ತಿದ್ದ ತೋಳು ಕತ್ತರಿಸಲ್ಪಟ್ಟು ಐದುಹೆಡೆಯ ಸರ್ಪದಂತೆ ನೆಲಕ್ಕೆ ಬಿದ್ದಿತು. ಆಗ ಭೂರಿಶ್ರವಸ್ಸು ಸಾತ್ಯಕಿಯನ್ನು ಬಿಟ್ಟು ಅರ್ಜುನನನ್ನು ನಿಂದಿಸತೊಡಗಿದನು. ಒಂದು ಪಾರ್ಶ್ವದ ರೆಕ್ಕೆಯು ಮುರಿದ ಹಕ್ಕಿಯಂತೆ



ಪುಟ ೫೫೦. ಭೂರಿಶ್ರವಸ್ಸು ಸಾತ್ಯಕಿಯ ಕೊರಲನ್ನು ಕಡಿಯಲು ಖಡ್ಗವನ್ನೆತ್ತಿದ್ದಾಗ ಅರ್ಜುನನು ಹಿಂದನಿಂ
ಅವನ ತೋಳನ್ನು ಕಡಿದುದು.

ಯೂ, ಒಂದು ಚಕ್ರವು ಮುರಿದ ರಥದಂತೆಯೂ, ಒಂದು ಕೈ ಮುರಿದ ಆ ಭೂರಿಶ್ರವಸ್ಸು ನೆಲದಮೇಲೆ ಕುಳಿತು, ಎಲ್ಲಾ ಕ್ಷತ್ರಿಯರೂ ಕೇಳುತ್ತಿರುವ ಹಾಗೆ ಅರ್ಜುನನನ್ನು ನೋಡಿ "ಕೌಂತೇಯಾ! ಎಂತಹ ಘಾತುಕಕಾರ್ಯವನ್ನು ನಡೆಸಿದೆ? ನಾನು ಬೇರೆಯವರೊಡನೆ ಯುದ್ಧದಲ್ಲಿರುವಾಗ, ನನ್ನ ಕಣ್ಣಿಗೆ ಬೀಳದಂತೆ ಮರೆಯಾಗಿ, ನನ್ನ ತೋಳನ್ನು ಕತ್ತರಿಸಿದೆ. ಲೋಕದಲ್ಲಿ ಮನುಷ್ಯನು ಯಾರುಯಾರೊಡನೆ ವರ್ತಿಸುವನೋ, ಅವನ ಸ್ವಭಾವವನ್ನೇ ತಾನೂ ಪಡೆಯುವನೆಂಬುದು ಲೋಕದೃಷ್ಟವಾದ ನಡತೆ! ಅದು ಕೃಷ್ಣಸಖನಾದ ನಿನ್ನಲ್ಲಿ ಚೆನ್ನಾಗಿ ಕಾಣಿಸುತ್ತಿದೆ. ನಿನ್ನ ಅಣ್ಣನಾದ ಧರ್ಮರಾಜನು "ಭೂರಿಶ್ರವಸ್ಸು ಯಾವ ಕಾರ್ಯವನ್ನು ನಡೆಸುತ್ತಿದ್ದಾಗ ನೀನು ಹೊಡೆದೆ" ಯೆಂದು ನಿನ್ನನ್ನು ಕೇಳಿದರೆ, ನೀನೇನು ಹೇಳುವೆ? ಇಂತಹ ಅಸ್ತ್ರಪ್ರಯೋಗವು ನಿನಗೆ ಇಂದ್ರನಿಂದ ಬಂದಿತೆ? ಮಹಾತ್ಮನಾದ ರುದ್ರನಿಂದ ಬಂದಿತೆ? ಅಥವಾ ಆಚಾರ್ಯರಾದ ದ್ರೋಣ ಕೃಪರಿಂದ ಇದನ್ನು ಕಲಿತೆಯೋ? ನೀನು ಅಸ್ತ್ರಧರ್ಮಗಳನ್ನು ತಿಳಿದವನು. ಇತರರಿಗಿಂತಲೂ ನೀನು ಅಸ್ತ್ರವಿದ್ಯೆಯಲ್ಲಿ ಮೇಲೆನಿಸಿಕೊಂಡವನು. ನಿನ್ನೊಡನೆ ಯುದ್ಧಕ್ಕೆ ಬಾರದ ನನ್ನನ್ನು ಹೊಡೆಯಲು ನಿನಗೆ ಹೇಗೆ ಮನಸ್ಸು ಬಂದಿತು? ವಿದ್ವಾಂಸರು ಯುದ್ಧದಲ್ಲಿ ಭಯಪಟ್ಟವನನ್ನೂ, ಎಚ್ಚರತಪ್ಪಿದವನನ್ನೂ, ರಥಹೀನನನ್ನೂ, ಬೇಡಿಕೊಳ್ಳತಕ್ಕವನನ್ನೂ, ವ್ಯಸನದಲ್ಲಿರುವವನನ್ನೂ ಹೊಡೆಯಲಾರರು. ಈಗ ನೀನು ಮಾಡಿದ ಕಾರ್ಯವಾದರೋ ನೀಚರಿಗೂ, ಅಸತ್ಪುರುಷರಿಗೂ ಯೋಗ್ಯವಾದುದು. ಯಾರೂ ಮಾಡದ ಇಂತಹ ಪಾಪಕಾರ್ಯವನ್ನು ನೀನು ಹೇಗೆ ಮಾಡಿದೆ? ಸಾಮಾನ್ಯವಾಗಿ ಸಜ್ಜನರು ಸತ್ಕಾರ್ಯವನ್ನು ನಡೆಸುವರು. ನಿನ್ನಂತಹ ಸಜ್ಜನನು ಇಂತಹ ಅನಾರ್ಯಕಾರ್ಯವನ್ನು ನಡೆಸುವುದೆಂದರೆ ಲೋಕಕ್ಕೆಲ್ಲ ಆಶ್ಚರ್ಯಕರವಾಗಿದೆ. ಇದನ್ನು ಯಾರೂ ಮಾಡಲಾರರು. ರಾಜವಂಶದಲ್ಲಿ, ಅದರಲ್ಲಿಯೂ ಪ್ರಖ್ಯಾತವಾದ ಕುರುವಂಶದಲ್ಲಿ, ಹುಟ್ಟಿದ ನೀನು, ಸಚ್ಚರಿತನೆನಿಸಿಕೊಂಡು ಎಷ್ಟೋ ವ್ರತಗಳನ್ನೂ ನಡೆಸಿದವನಾಗಿದ್ದುಕೊಂಡು, ಕ್ಷತ್ರಧರ್ಮವನ್ನು ಹೇಗೆತಾನೇ ಬಿಟ್ಟು ಹೋದೆ? ಅಪ್ಪ ಧನಂಜಯಾ! ಇದರಲ್ಲಿ ನಿನ್ನ ತಪ್ಪೇನೂ ಅಷ್ಟಾಗಿಲ್ಲ. ನಿನ್ನನ್ನು ನಾನು ನಿಂದಿಸಲಾರೆನು. ವೃಷ್ಣಿಕುಲದಲ್ಲಿ ನೀಚನೂ, ಅತಿಕ್ಷು

ದ್ರನೂ ಆದ ಈ ಸಾತ್ಯಕಿಯಮೇಲಿನ ಅಭಿಮಾನದಿಂದ, ನೀನು ಈ ಕಾರ್ಯ ವನ್ನು ನಡೆಸಿದೆ! ಅದರಿ ತನ್ನ ಬಂಧುವಾದ ವಾರ್ಷ್ಣೇಯನನ್ನು ರಕ್ಷಿಸಿ ಕೊಳ್ಳುವುದಕ್ಕಾಗಿ, ಈ ಹೀನಕಾರ್ಯವು ವಾಸುದೇವನಿಗೆ ಸಮ್ಮತವಾಗಿರ ಬಹುದು. ಇದು ನಿನ್ನಂತವನಿಗೆ ಯೋಗ್ಯವಾದ ಕಾರ್ಯವಲ್ಲ. ಮತ್ತೊಬ್ಬ ಶತ್ರುವಿನೊಡನೆ ಯುದ್ಧಾಸಕ್ತನಾಗಿದ್ದವನಮೇಲೆ ಹೀಗೆ ಮರೆಯಾಗಿದ್ದು, ಎಚ್ಚರತಪ್ಪಿದ್ದಕಾಲದಲ್ಲಿ ಇಂತಹ ಕ್ರೂರಕಾರ್ಯವನ್ನು ನಡೆಸುವುದಕ್ಕೆ ಆ ತಂತ್ರಿಯಾದ ಕೃಷ್ಣನ ಸ್ನೇಹಿತನಲ್ಲದ ಯಾವನಿಗೆತಾನೇ ಮನಸ್ಸುಬರು ವುದು? ಉಪನಯನಾದಿ ಸಂಸ್ಕಾರಗಳಿಲ್ಲದವರೂ, ಕೆಟ್ಟಕಾರ್ಯದಲ್ಲಿಯೇ ವರ್ತಿಸತಕ್ಕವರೂ, ಸ್ವಭಾವದಿಂದಲೇ ನಿಂದಿತರೂ ಆದ ವೃಷ್ಣಿಗಳನ್ನೂ, ಅಂಧಕರನ್ನೂ ಹೇಗೆತಾನೆ ನೀನು ಪ್ರಮಾಣವನ್ನಾಗಿ ಗ್ರಹಿಸಿದೆ?" ಎಂದನು. ರಾಜಾ! ಈ ಮಾತನ್ನು ಕೇಳಿ ಅರ್ಜುನನು "ಓ ಕೌರವಾ! ಮನುಷ್ಯನಿಗೆ ದೇಹವು ಜೀರ್ಣವಾದಹಾಗೆಲ್ಲ ಬುದ್ಧಿಯೂ ಜೀರ್ಣವಾಗುವುದು. ಈಗ ನೀನು ಹೇಳಿದುದೆಲ್ಲವೂ ಕೇವಲ ನಿರರ್ಥಕವೇ! ನೀನು ತಿಳಿದುತಿಳಿದೂ ನನ್ನನ್ನೂ, ಕೃಷ್ಣನನ್ನೂ ನಿಂದಿಸುತ್ತಿರುವೆ. ನೀನು ಯುದ್ಧಧರ್ಮವನ್ನು ತಿಳಿದವನು. ಎಲ್ಲಾ ಶಾಸ್ತ್ರಾರ್ಥಗಳಲ್ಲಿ ಪಾರಂಗತನು. ನಾನು ಎಂದಿಗೂ ಅಧರ್ಮವನ್ನು ಮಾಡತಕ್ಕವನಲ್ಲವೆಂಬುದನ್ನು ತಿಳಿದವನಾಗಿದ್ದರೂ ನೀನು. ಏತಕ್ಕೆ ಇಂತಹ ಬುದ್ಧಿಮೋಹಕ್ಕೀಡಾದೆ? ಕ್ಷತ್ರಿಯರು ತಮ್ಮ ಬಾಹುಬಲ ವನ್ನಾಶ್ರಯಿಸಿ ತಮ್ಮತಮ್ಮ ಪುತ್ರಮಿತ್ರಸಹೋದರರಿಗಾಗಿ ಬಾಂಧವರೊಡ ನೆಯೂ, ಮಿತ್ರರೊಡನೆಯೂ ಕಲೆತು, ಶತ್ರುಗಳೊಡನೆ ಯುದ್ಧವನ್ನು ನಡೆ ಸುವರು. ಈ ಸ್ಥಿತಿಯಲ್ಲಿ ಸಾತ್ಯಕಿಯು ನಿನ್ನ ವಧೆಗೆ ಗುರಿಯಾಗುವಾಗ ನೋಡಿಕೊಂಡು ನಾನು ಹೇಗೆತಾನೇ ಸುಮ್ಮನಿರುವೆನು? ಆ ಸಾತ್ಯಕಿಯು ನನಗೆ ಪ್ರಿಯಶಿಷ್ಯನು. ನನಗೆ ಬಂಧುತ್ವಸಂಬಂಧವುಳ್ಳವನು. ತನ್ನ ಪ್ರಾಣ ಗಳನ್ನಾದರೂ ತೊರೆದು ನಮಗಾಗಿ ಯುದ್ಧಮಾಡತಕ್ಕವನು. ನನಗೆ ದಕ್ಷಿಣ ಭುಜದಂತಿರುವನು. ಅಂತವನು ನಿನ್ನೊಡನೆ ಹೆಣಗಾಡಿ, ಬಹಳವಾಗಿ ಬಳಲಿ, ಮುಂದೆ ತಾನೇನೂ ಮಾಡಲಾರದೆ ಹೋಗಿದ್ದಾಗ, ಅವನು ನಿಷ್ಕ ರುಣನಾದ ನಿನ್ನಿಂದ ಎಳೆದಾಡಲ್ಪಡುತ್ತಿರುವುದನ್ನು ನಾನು ಕಣ್ಣಾರೆ ನೋಡಿ ದೆನು. ಆಗ ನಾನು ಹೇಗೆತಾನೇ ಸುಮ್ಮನಿರಬಹುದು? ಯುದ್ಧಕ್ಕಾಗಿ

ಬಂದು ನಿಂತ ನನಗೆ ನೀನೊಬ್ಬನುಮಾತ್ರ ರಕ್ಷಾರ್ಹನಲ್ಲ? ಮುಖ್ಯವಾಗಿ ಯಾವನು ಯಾವನ ಪ್ರಯೋಜನಕ್ಕಾಗಿ ಯುದ್ಧಮಾಡುವನೋ, ಅವನು ಅವನನ್ನು ರಕ್ಷಿಸಬೇಕಾದುದು ಧರ್ಮವು. ಹಾಗೆ ಯುದ್ಧದಲ್ಲಿ ಕಾಪಾಡಲ್ಪಟ್ಟವನೂ ತನ್ನನ್ನು ರಕ್ಷಿಸಿದವನನ್ನು ಅಪಾಯದಿಂದ ರಕ್ಷಿಸಬೇಕು. ಓ ಕೌರವರಾಜಾ! ಈಗ ನಾನು ನಿನ್ನ ಕೊಲೆಗೀಡಾಗುತ್ತಿದ್ದ ಸಾತ್ಯಕಿಯನ್ನು ನೋಡುತ್ತ ಸುಮ್ಮನಿದ್ದಿದ್ದಪಕ್ಷದಲ್ಲಿ, ಅವನನ್ನು ಕಳೆದುಕೊಳ್ಳುವುದಲ್ಲದೆ, ನಾನು ನರಕಕ್ಕೂ ಹೋಗಬೇಕಾಗಿದ್ದಿತು. ನಾನು ಅವನನ್ನು ಕಾಪಾಡಬೇಕಾದ ಆವಶ್ಯಕತೆಯಿದ್ದುದರಿಂದಲೇ ಹಾಗೆ ಪ್ರವರ್ತಿಸಿದೆನು. ಮಿತ್ರನನ್ನು ರಕ್ಷಿಸುವುದರಿಂದ ಕೀರ್ತಿಯುಂಟು! ಸ್ವಪಕ್ಷದವರ ಆದರವುಂಟು. ಮಿತ್ರರಕ್ಷಣದಿಂದ ಅನೇಕ ಫಲಗಳುಂಟು! ಕೃಷ್ಣನ ಸಹವಾಸದಿಂದ ನಾನು ಕೆಟ್ಟುಹೋದೆನೆಂದು ನೀನು ನಿಂದಿಸಿದೆ. ಇದೇ ನಿನ್ನ ಬುದ್ಧಿಭ್ರಮವೆಂದು ತಿಳಿ! ಆ ಕೃಷ್ಣನೊಡನೆ ಸಹವಾಸವನ್ನು ಬಯಸದವನಾವನು? ರಾಜಾ! ಯುದ್ಧಕವಚವನ್ನು ಧರಿಸಿ, ಸರ್ವಾಯುಧಗಳನ್ನೂ ಸಿದ್ಧಪಡಿಸಿಟ್ಟುಕೊಂಡು, ಯುದ್ಧರಥವನ್ನೇರಿ ಕುಳಿತು, ತನಗೆ ಇದಿರಾಗಿ ಬರುವ ವೈರಿಗಳನ್ನೇ ನಿರೀಕ್ಷಿಸುತ್ತ, ತನ್ನ ಮಿತ್ರರಾಜರ ಬಲದೊಡನೆಯೂ ಕೂಡಿದ ಪರಾಕ್ರಮಿಯೊಡನೆ ಯುದ್ಧಮಾಡುವುದು ನಿನಗೆ ಯೋಗ್ಯವೇಹೊರತು, ಏಕಾಕಿಯಾದ ಮತ್ತು ಅಸಹಾಯನಾದ ಆ ಸಾತ್ಯಕಿಯೊಡನೆ, ಸರ್ವಸನ್ನಾಹದಿಂದ ಕೂಡಿದ ನೀನು ಯುದ್ಧಕ್ಕೆ ಬಂದುದು ನಿನಗೆ ಯೋಗ್ಯವೇ ಅಲ್ಲ! ಆ ಸಾತ್ಯಕಿಯಾದರೋ ಇದುವರೆಗೆ ಅನೇಕ ಶತ್ರುಗಳೊಡನೆ ಯುದ್ಧಕ್ಕೆ ನಿಂತು, ಅನೇಕ ಮಹಾರಥರನ್ನು ಜಯಿಸಿ, ಆಯಾಸಪಟ್ಟವನು. ಅವನ ಕುದುರೆಗಳೂ ಬಹಳವಾಗಿ ಬಳಲಿದ್ದುವು. ಅವನಲ್ಲಿದ್ದ ಆಯುಧಗಳೆಲ್ಲವೂ ತೀರಿಹೋದುವು. ಅವನನ್ನು ನೀನು ಯುದ್ಧಕ್ಕಾಗಿ ಇದಿರಿಸಿ, ನಿರಾಯುಧನಾದ ಅವನನ್ನು ಜಯಿಸಿದಮಾತ್ರಕ್ಕೆ ಅದರಿಂದ ನಿನಗೆ ಹೆಮ್ಮೆಯೇನು? ಇದರಿಂದಲೇ ನೀನು ಬಹಳ ಪರಾಕ್ರಮಿಯೆಂದು ತಿಳಿದುಕೊಂಡಿರುವೆಯೇನು? ನಿಸ್ಸಹಾಯನಾಗಿ ನಿನ್ನ ಕೈಗೆ ಸಿಕ್ಕಿಬಿದ್ದ ಅವನ ತಲೆಯನ್ನು ಕಡಿಯಬೇಕೆಂದು ನೀನು ಕತ್ತಿಯನ್ನೆತ್ತಿದೆಯಲ್ಲವೆ? ಅಂತಹ ವಿಪತ್ತಿನಲ್ಲಿ ಸಿಕ್ಕಿಬಿದ್ದವನನ್ನು ನೋಡಿ ಯಾವನುತಾನೇ ಸಹಿಸಿಕೊಂಡಿರಬಲ್ಲನು?

ಓ ಕೌರವಾ! ಒಬ್ಬನಿಗೆ ಒಬ್ಬನೊಡನೆಮಾತ್ರ ಯುದ್ಧವೃತಾನೇ ಹೇಗೆ ಸಂಭವಿಸುವುದು? ನೀನೇ ಸ್ವಧರ್ಮವನ್ನು ರಕ್ಷಿಸದವನು. ನಿನ್ನನ್ನೇ ನೀನು ನಿಂದಿಸಿಕೊಳ್ಳಬೇಕು. ಇಂತಹ ಕಠಿನಬುದ್ಧಿಯುಳ್ಳ ನೀನು ನಿನ್ನ ಆಶ್ರಿತರನ್ನು ಹೇಗೆತಾನೇ ಕಾಪಾಡಬಲ್ಲೆ? ಕೈಯಲ್ಲಿ ಖಡ್ಗವನ್ನೆತ್ತಿ, ನನ್ನ ಮಿತ್ರನಾದ ಸಾತ್ಯಕಿಯನ್ನು ಕೊಲ್ಲಬೇಕೆಂದು ನಿಂತಿದ್ದ ನಿನ್ನ ತೋಳನ್ನು ನಾನು ಕತ್ತರಿಸಿದುದೇನೂ ನಿಂದಾಸ್ಪದವಲ್ಲ. ಇದು ಹೀಗಿರಲಿ. ಶಸ್ತ್ರವೂ ಇಲ್ಲದೆ, ಯುದ್ಧಕವಚವೂ ಇಲ್ಲದೆ, ಸರ್ವವನ್ನೂ ಕಳೆದುಕೊಂಡು, ಶತ್ರುಗಳ ನಡುವೆ ಸಿಕ್ಕಿ, ಹಿಂದುಮುಂದು ತೋರದೆ ಕಳವಳಿಸುತ್ತಿದ್ದ ಬಾಲನಾದ ಅಭಿಮನ್ಯುವನ್ನು ನಿಮ್ಮವರು ಕೊಂದರಲ್ಲವೆ? ಆ ವಿಧವಾದ ವಧವನ್ನು ಲೋಕದಲ್ಲಿ ಯಾವನುತಾನೇ ಅಭಿನಂದಿಸುವನು?" ಎಂದನು. ಅರ್ಜುನನ ಈ ಮಾತನ್ನು ಕೇಳಿ ಯೂಪಧ್ವಜನೆಂದು ಪ್ರಸಿದ್ಧನಾದ ಭೂರಿಶ್ರವಸ್ಸು, ಇನ್ನುಮೇಲೆ ಈ ಯುದ್ಧದಿಂದ ಪ್ರಯೋಜನವಿಲ್ಲವೆಂದು ಜಿಹಾಸೆಗೊಂಡು, ಸಾತ್ಯಕಿಯನ್ನು ಬಿಟ್ಟುಹೋಗಿ, ಆ ರಣರಂಗದಲ್ಲಿಯೇ ಮರಣಾಂತದವರೆಗೆ ತಾನು ಆಹಾರವನ್ನು ತೆಗೆದುಕೊಳ್ಳುವುದಿಲ್ಲವೆಂಬ ಸಂಕಲ್ಪದಿಂದ ಪ್ರಾಯೋಪವೇಶವನ್ನು ಆರಂಭಿಸಿದನು. ತನಗೆ ಉಳಿದಿದ್ದ ಎಡಗೈಯಿಂದಲೇ ಬಾಣಗಳನ್ನು ಹರಡಿದನು. ಬ್ರಹ್ಮಲೋಕಪ್ರಾಪ್ತಿಯನ್ನುದ್ದೇಶಿಸಿ ತನ್ನ ಪ್ರಾಣಗಳನ್ನು ವಾಯುಗಳಲ್ಲಿ ಅಡಗಿಸಿಟ್ಟನು. ಸೂರ್ಯನಲ್ಲಿ ದೃಷ್ಟಿಯನ್ನಿಟ್ಟನು. ಮನಸ್ಸನ್ನು ಜಲದಲ್ಲಿ ಸೇರಿಸಿದನು. ಯೋಗಾರೂಢನಾಗಿ ಮಹೋಪನಿಷತ್ತನ್ನು ಮನನಮಾಡುತ್ತ ಕುಳಿತನು. ಎಲ್ಲರೂ ಕೃಷ್ಣಾರ್ಜುನರನ್ನು ನಿಂದಿಸುತ್ತಿದ್ದರು. ಅನೇಕ ಯಾಗಗಳನ್ನು ಮಾಡಿ ಭೂರಿದಕ್ಷಿಣೆಗಳನ್ನು ಕೊಟ್ಟು ಯೂಪವನ್ನೇ ತನ್ನ ಧ್ವಜಚಿಹ್ನವಾಗಿಟ್ಟುಕೊಂಡು, ಯಜ್ಞಶೀಲನೆಂದೂ, ಭೂರಿದಕ್ಷಿಣನೆಂದೂ ಪ್ರಸಿದ್ಧಿಗೊಂಡ ಆ ಭೂರಿಶ್ರವಸ್ಸನ್ನು ಪ್ರತಿಯೊಬ್ಬರೂ ಪ್ರಶಂಸೆಮಾಡುತ್ತಿದ್ದರು. ಜನಗಳು ತಮ್ಮನ್ನು ಕುರಿತು ಹೇಳಿದ ನಿಂದಾವಾಕ್ಯವನ್ನು ಕೇಳಿಯೂ ಕೃಷ್ಣಾರ್ಜುನರು, ಪ್ರತಿಯಾಗಿ ಬಾಯೆತ್ತದೆ, ನಿಂದಿಸಿದವರನ್ನು ನಿಂದಿಸದೆ ಸುಮ್ಮನಿದ್ದರು. ಅದರಂತೆಯೇ ಭೂರಿಶ್ರವಸ್ಸೂಕೂಡ ತನ್ನನ್ನುಕುರಿತು ಜನಗಳು ಹೇಳಿದ ಪ್ರಶಂಸಾವಾಕ್ಯಗಳನ್ನು ಕೇಳಿ ಸಂತೋಷಿಸಲಿಲ್ಲ. ಮಹಾರಾಜಾ! ಪ್ರಾಯಿ

ಕವಾಗಿ ನಿನ್ನ ಮಕ್ಕಳೇ ಕೃಷ್ಣಾರ್ಜುನರನ್ನು ಬಹಳವಾಗಿ ನಿಂದಿ
ತ್ತಿದ್ದರು. ಅರ್ಜುನನಿಗೆ ಆ ನಿಂದಾವಾಕ್ಯಗಳು ದುಸ್ಸಹವಾಯಿತು. ಮ
ನಲ್ಲಿಮಾತ್ರ ಅವನಿಗೆ ಕೋಪವು ಉಕ್ಕುತ್ತಿದ್ದಿತು. ಕೋಪವನ್ನು ತೋ
ಕೊಳ್ಳದೆ ಆವರ ಚರ್ಯೆಗಳನ್ನೇ ಅವರಿಗೆ ಜ್ಞಾಪಿಸುವಂತೆ ಹೀಗೆಂದ
"ಎಲೈ! ನನ್ನ ಮಹಾವ್ರತವನ್ನು ಎಲ್ಲಾ ರಾಜರೂ ತಿಳಿದೇ ಇರುವ
ನನ್ನ ಬಾಣವು ಬೀಳುವಷ್ಟು ದೂರದಲ್ಲಿ, ನನ್ನ ಕಡೆಯವನು ಯಾ
ದ್ದರೂ, ಅವನನ್ನು ಕೊಲ್ಲಲು ಬೇರೊಬ್ಬನಿಗೆ ಸಾಧ್ಯವಲ್ಲ. ಈ ಯು
ಧ್ವಜನ ದುಸ್ಥಿತಿಯನ್ನು ನೋಡಿ ಕನಿಕರಗೊಂಡ ನೀವು ನನ್ನನ್ನು ಹ
ನಿಂದಿಸುವುದು ಉಚಿತವಲ್ಲ. ಧರ್ಮವನ್ನು ತಿಳಿಯದೆ ಇತರರನ್ನು ದ
ಸಬಾರದು. ಶಸ್ತ್ರಹೀನನಾಗಿ, ವಿರಥನಾಗಿ, ಕವಚವು ಹರಿದುಹೋ
ಬಾಲನಾದ ಅಭಿಮನ್ಯುವನ್ನು ಕೌರವರು ಅನ್ಯಾಯದಿಂದ ಕೊಂದ
ಅವರನ್ನು ಕುರಿತು ನೀವೇಕೆ ನಿಂದಿಸಲಿಲ್ಲ? ಕ್ಷುದ್ರನೂ, ನ್ಯಾಯದಲ್ಲಿ
ದವನೂ ಆದ ದುಷ್ಟ ದುರ್ಯೋಧನನಿಗೆ ಸರ್ವವಿಧದಲ್ಲಿಯೂ ಸಾಹಾ
ಮಾಡಬೇಕೆಂದು ಬಂದ ಈ ಭೂರಿಶ್ರವಸ್ಸಿನ ವಿಷಯದಲ್ಲಿ ನಾನು ನ
ದುದೇನೂ ತಪ್ಪಲ್ಲ. ಪ್ರಾಣಾಪಾಯವೊದಗಿದ ನಮ್ಮವರನ್ನು ನಾವು ರ
ಬೇಕಾದುದೇ ಧರ್ಮವು. ಅದರಲ್ಲಿಯೂ ನನ್ನ ಕಣ್ಣೆದಿರಾಗಿ ನಡೆ
ತ್ತಿದ್ದ ಆ ಕೊಲೆಯನ್ನು ನಾನು ಸಹಿಸಲಾರೆನು. ಇದು ನನ್ನ ದೃಢವ
ನಿಶ್ಚಯವು. ಸಾತ್ಯಕಿಯು ವಿವಶನಾಗಿ ಈ ಭೂರಿಶ್ರವಸ್ಸಿನ ಕೈಗೆ
ಬಿದ್ದನು. ಅದನ್ನು ನೋಡಿ ನಾನು ಸ್ವಜನರಕ್ಷಣವೆಂಬ ಪ್ರತಿಜ್ಞೆಯ
ಪಾಲಿಸುವುದಕ್ಕಾಗಿ ಈ ಕಾರ್ಯವನ್ನು ನಡೆಸಬೇಕಾಯಿತು" ಎಂದನು.

ಧೃತರಾಷ್ಟ್ರಮಹಾರಾಜಾ! ಹೀಗೆ ಅರ್ಜುನನು ತನ್ನ ಕಾಯ
ಯುಕ್ತವೆಂದು ವಾದಿಸಿದರೂ, ಭೂರಿಶ್ರವಸ್ಸಿನ ವಿಷಯದಲ್ಲಿ ತಾನು ಮಾ
ಕಾರ್ಯಕ್ಕಾಗಿ ಅವನ ಮನಸ್ಸಿನಲ್ಲಿಯೂ ಪಶ್ಚಾತ್ತಾಪವು ಹೆಚ್ಚು
ದ್ದಿತು. ಆಗ ಮಹಾವ್ಯಸನದಿಂದ ಅವನು ಆ ಭೂರಿಶ್ರವಸ್ಸನ್ನು ನೋ
"ಓ ಪುರುಷಶ್ರೇಷ್ಠಾ! ಈ ನಮ್ಮ ಕ್ಷತ್ರಧರ್ಮವೆಂಬುದನ್ನು ಸುಡಬೇ
ಅನೇಕರನ್ನು ರಕ್ಷಿಸತಕ್ಕವನೂ, ಅನೇಕರಿಗೆ ಅಭಯಪ್ರದನೂ ಆದ ನಿ

ಈ ಅವಸ್ಥೆಗೆ ಗುರಿಯಾದೆಯಲ್ಲವೆ? ಯಮನಿಗೆ ಮಾಡಬಾರದ ಕಾರ್ಯವೊಂದೂ ಇಲ್ಲ. ಕುರುಕುಲಶ್ರೇಷ್ಠನಾದ ನೀನೇ ಇಂತಹ ಸ್ಥಿತಿಗೆ ಬಂದ ಮೇಲೆ ನಿನ್ನ ಪುಣ್ಯಕ್ಕೇನೂ ಫಲವಿಲ್ಲದಂತಾಯಿತು. ಯಾವನ ದೆಸೆಯಿಂದ ಪುರುಷಸಿಂಹನೆನಿಸಿದ ನೀನು ಈ ದುರ್ದಶೆಗೆ ಈಡಾದೆಯೋ, ಅಂತಹ ದುರ್ಯೋಧನನಿಗೆ ರೌರವವೆಂಬ ಭಯಂಕರವಾದ ನರಕವೇ ಗತಿಯೆಂಬುದು ನಿಶ್ಚಯವು. ಓ ಪುರುಷೋತ್ತಮಾ! ಸ್ವಜನರಕ್ಷಣವೆಂಬ ಪ್ರತಿಜ್ಞೆಗೆ ಮಾತ್ರ ಬದ್ಧನಾಗದಿದ್ದರೆ, ನನ್ನಂತವನಿಗೆ ನಿನ್ನಂತಹ ಮಹಾಪುರುಷನನ್ನು ಕೊಲ್ಲಲು ಎಂದಿಗಾದರೂ ಮನಸ್ಸು ಬರುತ್ತಿದ್ದಿತೆ?" ಎಂದನು. ಅರ್ಜುನನ ಈ ಕನಿಕರದ ಮಾತನ್ನು ಕೇಳಿ ಭೂರಿಶ್ರವಸ್ಸು ತನ್ನ ತಲೆಯನ್ನು ಭೂಮಿಗೆ ಸೋಕಿಸಿದನು. ಮುರಿದುಬಿದ್ದಿದ್ದ ತನ್ನ ಬಲದೋಳನ್ನು ತನ್ನ ಎಡಗೈಯಿಂದ ಎತ್ತಿ ಅರ್ಜುನನ ಕಡೆಗೆ ಬಿಸುಟನು. ಅರ್ಜುನನ ಮಾತುಗಳನ್ನೆಲ್ಲ ಕೇಳಿ ತಲೆಯನ್ನು ತಗ್ಗಿಸಿ ಸುಮ್ಮನಿದ್ದನು. ಆಗ ತಿರುಗಿ ಅರ್ಜುನನು ಭೂರಿಶ್ರವಸ್ಸನ್ನು ಕುರಿತು "ಶಲಾಗ್ರಜಾ! ಓ ಯೂಪಧ್ವಜಾ! ಧರ್ಮರಾಜನಲ್ಲಿಯೂ, ಭೀಮನಲ್ಲಿಯೂ, ನಕುಲಸಹದೇವರಲ್ಲಿಯೂ ನನಗೆ ಎಂತಹ ಪ್ರೀತಿಯುಂಟೋ, ಅದೇ ಸಹೋದರಪ್ರೀತಿಯು ನಿನ್ನಲ್ಲಿಯೂ ಇರುವುದು. ಶ್ರೀಕೃಷ್ಣನೊಡನೆ ನಾನೂ ಈಗ ನಿನಗೆ ಅನುಮತಿಯನ್ನು ಕೊಟ್ಟಿರುವೆನು. ಉಶೀನರಪುತ್ರನಾದ ಶಿಬಿಯು ಹೇಗೋ ಹಾಗೆ ನೀನು ಉತ್ತಮ ಪುಣ್ಯಶಾಲಿಗಳ ಲೋಕವನ್ನು ಹೊಂದುವವನಾಗು" ಎಂದನು. ಆಗ ಕೃಷ್ಣನು ಮುಂದೆ ಬಂದು ಭೂರಿಶ್ರವಸ್ಸನ್ನು ನೋಡಿ "ಓ ಮಹಾತ್ಮಾ! ನೀನು ಎಡೆಬಿಡದೆ ಯಾವಾಗಲೂ ಅಗ್ನಿಹೋತ್ರವನ್ನು ನಡೆಸುತ್ತಿದ್ದವನು. ಆದುದರಿಂದ ಬ್ರಹ್ಮನೇ ಮೊದಲಾದ ದೇವತೆಗಳೂ ಆಶಿಸತಕ್ಕವುಗಳಾಗಿ, ಪ್ರಕಾಶವಿಶಿಷ್ಟಗಳಾಗಿ, ಶುದ್ಧವಾಗಿರುವ ನನ್ನ ಲೋಕಗಳು ಯಾವುವುಂಟೋ ಅವುಗಳನ್ನು ನೀನು ಬೇಗನೆ ಸೇರುವವನಾಗು. ಅಲ್ಲಿ ನನಗೆ ಸಮಾನನಾಗಿ, ನನ್ನ ವಾಹನವಾದ ಗರುಡನ ಬೆನ್ನಿನಮೇಲೆ ಸಂಚರಿಸತಕ್ಕವನಾಗಿ, ನೀನು ಸುಖದಿಂದಿರು" ಎಂದನು. ಹೀಗೆ ಕೃಷ್ಣಧನಂಜಯರಿಬ್ಬರೂ ಭೂರಿಶ್ರವಸ್ಸಿನಲ್ಲಿ ಕನಿಕರದಿಂದ ಮಾತಾಡುವುದನ್ನು ಕೇಳಿ, ಎಲ್ಲಾ ಸೈನಿಕರೂ ತಲೆಯನ್ನು ತಗ್ಗಿಸಿ ನಿಂತಿದ್ದರು. ಆಗ ಗಲಿಯೇ ಸಾತ್ಯಕಿಗೆ ಕೋಪ

ದಿಂದ ವ್ಯತಿಳಿಯದಂತಾಯಿತು. ಒಂದು ಮುಹೂರ್ತಕಾಲದವರೆಗೆ ಸುಮ್ಮ ನಿದ್ದು, ಆ ಭೂರಿಶ್ರವಸ್ಸು ತನಗೆ ಮಾಡಿದ ಭಂಗವನ್ನು ನೆನೆಸಿಕೊಂಡು ವ್ಯತಿಳಿಯದ ಕ್ರೋಧಾವೇಶದಿಂದ ಮೇಲಕ್ಕೆದ್ದು, ಆ ಭೂರಿಶ್ರವಸ್ಸಿನ ತಲೆ ಯನ್ನು ಕತ್ತರಿಸುವುದಕ್ಕಾಗಿ ಕತ್ತಿಯನ್ನೆತ್ತಿಕೊಂಡನು. ಮೊದಲೇ ಅರ್ಜು ನನಿಂದ ಹತಪ್ರಾಯನಾಗಿ ಪ್ರಾಯೋಪವೇಶವನ್ನು ಹಿಡಿದು ಮಲಗಿದ್ದ ನಿರ ಪರಾಧಿಯೂ, ಯಜ್ಞಶೀಲನೂ ಆದ ಆ ಭೂರಿಶ್ರವಸ್ಸನ್ನು ಕೊಂದುಬಿಡ ಬೇಕೆಂಬ ಪಾಪಬುದ್ಧಿಯು ಸಾತ್ಯಕಿಯ ಮನಸ್ಸಿಗೆ ಹುಟ್ಟಿತು. ಈ ಸಾತ್ಯ ಕಿಯ ಪ್ರಯತ್ನವನ್ನು ನೋಡಿ ಎಲ್ಲಾ ಸೈನಿಕರೂ ಬೇಡಬೇಡವೆಂದು ಕೂಗಿ ಕೊಂಡರು. ಎಲ್ಲರೂ ಸಾತ್ಯಕಿಯನ್ನು ನಿಂದಿಸತೊಡಗಿದರು. ಕೃಷ್ಣಾರ್ಜು ನರಿಬ್ಬರೂ ಬೇಡಬೇಡವೆಂದು ಸಾತ್ಯಕಿಯನ್ನು ತಡೆಯುತ್ತಿದ್ದರು. ಭೀಮ ನೂ, ಸಾತ್ಯಕಿಯ ಚಕ್ರರಕ್ಷಕರೂ, ಅಶ್ವತ್ಥಾಮನೂ, ಕೃಪನೂ, ಕರ್ಣನೂ, ವೃಷಸೇನನೂ, ಸೈಂಧವನೂ ಬೇಡಬೇಡವೆಂದು ಕೂಗಿಕೊಳ್ಳುತ್ತಿದ್ದರು. ಸೈನ್ಯಗಳಲ್ಲಿ ಹಾಹಾಕಾರವೆದ್ದಿತು. ಹೀಗಿದ್ದರೂಕೂಡ, ಸಾತ್ಯಕಿಯು ಕ್ರೂರ ಬುದ್ಧಿಯಿಂದ ತೋಳು ಮುರಿದು ಪ್ರಾಯೋಪವೇಶವ್ರತವನ್ನು ಹಿಡಿದು ಕುಳಿತಿದ್ದ ಭೂರಿಶ್ರವಸ್ಸಿನ ಕಂಠವನ್ನು ತನ್ನ ಕತ್ತಿಯಿಂದ ಕಡಿದು, ಅವನ ತಲೆಯನ್ನು ಹಾರಿಸಿಬಿಟ್ಟನು. ಸಾತ್ಯಕಿಯು ನಡೆಸಿದ ಈ ಕ್ರೂರಕಾರ್ಯವು ಸೈನ್ಯಗಳಲ್ಲಿ ಯಾರ ಮನಸ್ಸಿಗೂ ಸಮ್ಮತವಾಗಲಿಲ್ಲ. ಆ ಭೂರಿಶ್ರ ವಸ್ಸೇನೂ ಸಾಮಾನ್ಯನಲ್ಲ. ಕುರುಕುಲಶ್ರೇಷ್ಠನು. ಇಂದ್ರನಿಗೆ ಸಾಟಿ ಯಾದವನು. ರಣಾಂಗಣದಲ್ಲಿ ಪ್ರಾಯೋಪವೇಶವ್ರತವನ್ನು ಹಿಡಿದಿದ್ದ ವನು. ಅಂತವನ ಈ ಸ್ಥಿತಿಯನ್ನು ನೋಡಿ ದೇವ ಮಾನವ ಸಿದ್ಧಚಾರಣ ರೆಲ್ಲರೂ ಕನಿಕರದಿಂದ ಅವನನ್ನು ಪ್ರಶಂಸಿಸಿದರು. ಎಲ್ಲರೂ ಅವನ ಯಜ್ಞ ಶೀಲತೆಯನ್ನೂ, ಅವನ ದಾನಾದಿ ಸತ್ಕಾರ್ಯಗಳನ್ನೂ ಕೊಂಡಾಡಿದರು. ಅವನ ಈ ಕೊಲೆಗಾಗಿ ಎಲ್ಲರೂ ಆಶ್ಚರ್ಯಪಡುತ್ತಿದ್ದರು. ಆಗಲೂ ಕೆಲ ವರು ಸಾತ್ಯಕಿಯ ಪಕ್ಷವನ್ನು ಹಿಡಿದು “ಇದರಲ್ಲಿ ಸಾತ್ಯಕಿಯ ಅಪರಾಧ ವೇನೂ ಇಲ್ಲ. ಅದು ಹಾಗೆ ನಡೆಯಬೇಕಾಗಿದ್ದುದು ನಡೆದುಹೋ ಯಿತು. ಕೋಪವೆಂಬುದು ಎಂತವರಿಗೂ ದುಸ್ಸಹವೇ. ಸಾತ್ಯಕಿಯಮೇಲೆ ಕೋಪಿಸಬಾರದು. ಮುಖ್ಯವಾಗಿ ಸಾತ್ಯಕಿಯ ಕೈಯಿಂದ ಭೂರಿಶ್ರವಸ್ಸು

ಸಾಯಬೇಕಾಗಿದ್ದಿತು. ಬ್ರಹ್ಮನೇ ಸಾತ್ಯಕಿಯನ್ನು ಭೂರಿಶ್ರವಸ್ಸಿಗೆ ಮೃತ್ಯುವಾಗಿ ಸೃಷ್ಟಿಸಿದ್ದನು. ಅಲ್ಲದೆ, ಪ್ರಾಣಿಯು ಲೋಕದಲ್ಲಿ ಹುಟ್ಟಿದಮೇಲೆ ಇಂದೋ, ನಾಳೆಯೋ ಸಾಯಲೇಬೇಕು. ಅದರಂತೆ ಈಗ ಇವನಿಗೆ ಮೃತ್ಯುಕಾಲವೆಂದು ತಿಳಿದು ಸುಮ್ಮನಾಗಿರಿ. ಅಲ್ಪಬುದ್ಧಿಯನ್ನು ತೋರಿಸಬೇಡಿರಿ" ಎಂದು ಕೆಲವರು ಸಮಾಧಾನಹೇಳುತ್ತಿದ್ದರು. ಮಹಾತ್ಮನಾದ ಭೂರಿಶ್ರವಸ್ಸಿನ ಮರಣವನ್ನು ನೋಡಿ ಕ್ಷತ್ರಿಯರೆಲ್ಲರೂ "ಛೀ! ಸಾತ್ಯಕಿಯನ್ನು ಸುಡಬೇಕು" ಎಂದು ಕ್ರೂರವಾಗಿ ನಿಂದಿಸುತ್ತಿದ್ದರು. ಕೆಲವರು "ಈ ಕಾರ್ಯವು ಯುಕ್ತವಲ್ಲ"ವೆಂದರು. ಇನ್ನು ಕೆಲವರು "ಅದು ಹಾಗೆ ನಡೆಯಬೇಕಾದುದು ನಡೆದುಹೋಯಿತು" ಎಂದರು. ಕೆಲವರು ಮಹಾವ್ಯಸನದಿಂದ ಬುದ್ಧಿಗೆಟ್ಟಂತಿದ್ದರು. ಇನ್ನು ಕೆಲವರು ವ್ಯಸನದಿಂದ ಕಣ್ಣೀರನ್ನು ಬಿಟ್ಟರು. ಮಹಾರಾಜಾ! ಅಲ್ಲಿದ್ದ ಸೈನಿಕರ ನಿಂದಾವಾಕ್ಯಗಳನ್ನು ಕೇಳಿ ಸಾತ್ಯಕಿಗೆ ಸಹಿಸಲಾರದ ಕೋಪವುಂಟಾಯಿತು. ಆಗ ಅವನು ಸುತ್ತಲಿದ್ದವರನ್ನು ನೋಡಿ "ಎಲೈ ಮೂಢರೇ! ಇವನನ್ನು ನಾನು ಕೊಲ್ಲುವ ಪ್ರಯತ್ನದಲ್ಲಿರುವಾಗ ಬೇಡಬೇಡವೆಂದು ನೀವೇಕೆ ಅರಚಿಕೊಳ್ಳುವಿರಿ!. ಅಧರ್ಮನಿರತರಾದ ನೀವು ಮೇಲೆಮಾತ್ರ ಧರ್ಮಕಂಚುಕವನ್ನು ಹೊಡೆದವರಂತೆ ನನ್ನ ಮುಂದೆ ಈ ಧರ್ಮವಾದಗಳನ್ನು ಹೇಳುವಿರಿ. ಇನ್ನೂ ಬಾಲನಾದ ಸುಭದ್ರಾಕುಮಾರನನ್ನು ನೀವೆಲ್ಲರೂ ಸೇರಿ ಶಸ್ತ್ರಹೀನನನ್ನಾಗಿ ಮಾಡಿ, ನಿರಾಯುಧನಾಗಿದ್ದಾಗ ಅವನನ್ನು ಕೊಂದವರಲ್ಲವೆ? ಆಗ ನಿಮಗೆ ಈ ಧರ್ಮಬುದ್ಧಿಯೆಲ್ಲಿ ಹೋಗಿದ್ದಿತು? ಹಿಂದೆ ನನ್ನನ್ನು ನಿಂದಿಸಿದಾಗ ಒಂದಾನೊಂದು ಕಾಲದಲ್ಲಿ ನಾನು ಇದೇ ಪ್ರತಿಜ್ಞೆಯನ್ನು ಮಾಡಿದ್ದೆನು. ನೀವು ಇದನ್ನು ಮನಸ್ಸಿಟ್ಟು ಕೇಳಿದಪಕ್ಷದಲ್ಲಿ ಅರ್ಜುನನ ಕಾರ್ಯಕ್ಕಾಗಿ ನೀವು ಅವನನ್ನು ನಿಂದಿಸಲಾರಿರಿ. ಎಲೈ ಮನುಷ್ಯರೇ! ಅವೆಲ್ಲವನ್ನೂ ಈಗ ಹೇಳುವೆನು ಕೇಳಿರಿ. ಅದನ್ನು ಕೇಳಿದಮೇಲೆ ಬೇಕಾದರೆ ನಿಮ್ಮ ಮನಸ್ಸಿಗೆ ಬಂದಹಾಗೆ ನಿಂದಿಸಿರಿ. ಯುದ್ಧರಂಗದಲ್ಲಿ ಜೀವಿತನಾಗಿರುವ ನನ್ನನ್ನು ಯಾವನು ಕೋಪವಶನಾಗಿ ಕಾಲಿನಿಂದ ಮೆಟ್ಟಿ ತುಳಿಯುವನೋ, ಅಂತವನು ಮುನಿವ್ರತವನ್ನು ಹಿಡಿದಿದ್ದವನಾಗಿದ್ದರೂ ಕೂಡ ನನಗೆ ವಧಾರ್ಹನೇ. ಎಂತವನಾಗಿದ್ದರೂ ಅವನನ್ನು ಕೊಂದೇಕೊಲ್ಲುವೆನೆಂದು ನಾನು ಮೊದಲೇ ಪ್ರತಿಜ್ಞೆಮಾಡಿರುವೆನು. ನಾನು

ಕೈ ಕಾಲು ಮೊದಲಾದ ಅವಯವಗಳೊಡನೆ ಇದ್ದುಕೊಂಡು, ನನ್ನಿಂದಾದಷ್ಟು ಹೆಣಗಾಡುತ್ತಿರುವಾಗಲೇ ಕಣ್ಣಿಂದ ನೋಡುತ್ತಿದ್ದ ನೀವು ಸಾತ್ಯಕಿಯು ಸತ್ತನೆಂದು ಕೂಗಿಕೊಂಡಿರಿ! ಇದೇ ನಿಮ್ಮ ಅಲ್ಪಬುದ್ಧಿಯನ್ನು ತೋರಿಸುವುದು. ನನ್ನಿಂದ ಇವನು ಹತನಾದುದು ಯುಕ್ತವೇ. ಅದು ಹಾಗೆಯೇ ನಡೆಯಬೇಕು. ಆಗ ನನ್ನ ಸ್ಥಿತಿಯನ್ನು ನೋಡಿ ಅರ್ಜುನನೂಕೂಡ ಸ್ವಜನರಕ್ಷಣವೆಂಬ ತನ್ನ ಪ್ರತಿಜ್ಞೆಯನ್ನು ರಕ್ಷಿಸುವುದಕ್ಕಾಗಿ ಖಡ್ಗಸಹಿತವಾದ ಈ ಭೂರಿಶ್ರವಸ್ಸಿನ ತೋಳನ್ನು ಕತ್ತರಿಸಿದನು. ಆದರಿಂದ ನಾನು ವಂಚಿತನಾದೆನು. ಹೇಗೆ ನಡೆಯಬೇಕೋ ಅದು ನಡೆದೇ ತೀರಬೇಕು. ದೈವವೇ ಅದನ್ನು ಹಾಗೆ ನಡೆಸುವುದು. ಅದರಂತೆ ಇವನು ಹತನಾದನು. ಇಲ್ಲಿ ಅಧರ್ಮವೇನಿದೆ? ಇದಲ್ಲದೆ ಹಿಂದೆ ವಾಲ್ಮೀಕಿ ಮುನಿಯು ಒಂದು ಗಾದೆಯನ್ನು ಹೇಳಿರುವನು. ಆ ಗೂಢಾರ್ಥವೇನೆಂದರೆ "ಓ ವಾನರಾ! ನೀನು ಸ್ತ್ರೀಯರನ್ನು ಕೊಲ್ಲಬಾರದೆಂದು ಹೇಳುವೆಯಲ್ಲವೆ? ವ್ಯವಸಾಯಪರನಾದ ಮನುಷ್ಯನು, ಶತ್ರುಗಳಿಗೆ ಬಾಧೆಯನ್ನುಂಟುಮಾಡತಕ್ಕ ಕಾರ್ಯವನ್ನು ಯಾವಾಗಲೂ ಮಾಡಬೇಕು! ಅದೇ ಅವನ ಕರ್ತವ್ಯವು" ಎಂದು ಆ ಗಾದೆಯ ಅರ್ಥವು. ನಾನು ಈಗ ಅದೇ ಕಾರ್ಯವನ್ನು ನಡೆಸಿದೆನು. ನೀನು ಮೂಢನಂತೆ ನನ್ನನ್ನೇಕೆ ನಿಂದಿಸುವೆ? ಎಂದನು. ಈ ಮಾತನ್ನು ಕೇಳಿ ಕೌರವರೆಲ್ಲರೂ ಯಾವ ಮಾತನ್ನೂ ಆಡದೆ ಮೌನದಿಂದಿದ್ದರು. ಮನಸ್ಸಿನಲ್ಲಿಮಾತ್ರ ಭೂರಿಶ್ರವಸ್ಸನ್ನು ಅಭಿನಂದಿಸುತ್ತಿದ್ದರು. ಅವನುಮಹಾಯಾಗಗಳಿಂದ ಶುದ್ಧನಾದವನು! ಮಹಾಯಶಸ್ವಿ! ಸಹಸ್ರ ಭೂರಿದಕ್ಷಿಣೆಗಳನ್ನು ಕೊಟ್ಟವನು! ರಾಜನಾದರೂ ವನವಾಸಿಯಾದ ಋಷಿಯಂತಿದ್ದವನು! ಆ ಭೂರಿಶ್ರವಸ್ಸಿನ ಕೊಲೆಯನ್ನು ಅಲ್ಲಿ ಯಾರೂ ಅಭಿನಂದಿಸಲಿಲ್ಲ. ಕಪ್ಪಾದ ಕೂದಲುಗಳಿಂದಲೂ, ಪಾರಿವಾಳದ ಕಣ್ಣುಗಳಂತೆ ಕೆಂಪಾದ ಕಣ್ಣುಗಳಿಂದಲೂ ಕೂಡಿದ ಆ ಭೂರಿಶ್ರವಸ್ಸಿನ ತಲೆಯು ಹವಿಶ್ಶಾಲೆಯ ನಡುವೆ ಅಶ್ವಮೇಧದಲ್ಲಿ ವಧಿಸಲ್ಪಟ್ಟ ಕುದುರೆಯ ಪವಿತ್ರವಾದ ತಲೆಯಂತೆ ಕಾಣಿಸುತ್ತಿದ್ದಿತು. ಯುದ್ಧದಲ್ಲಿ ತನ್ನ ಶಕ್ತಿಯನ್ನು ತೋರಿಸಿ, ಅದೇ ಯುದ್ಧದಲ್ಲಿ ಶಸ್ತ್ರಪ್ರಹಾರದಿಂದ ಪರಿಶುದ್ಧನಾದ ಆ

ಭೂರಿಶ್ರವಸ್ಸು ದೇಹವನ್ನು ಬಿಟ್ಟರೂ ತನ್ನ ಧರ್ಮಕೀರ್ತಿಯನ್ನು ಲೋಕಕ್ಕೆಲ್ಲ ಹರಡಿ, ಉತ್ತಮವಾದ ಪರಗತಿಯನ್ನು ಹೊಂದಿದನು.

ಇದು ನೂರ ನಾಲ್ವತ್ತುಮೂರನೆಯ ಅಧ್ಯಾಯವು.



## ಭೂರಿಶ್ರವಸ್ಸಿನಿಂದ ಸಾತ್ಯಕಿಗೆ ಉಂಟಾದ ಪರಿಭವಕ್ಕೆ ಕಾರಣವು. ಯಾದವರ ಪ್ರಶಂಸೆ.

ಆಗ ಧೃತರಾಷ್ಟ್ರನು "ಸಂಜಯಾ! ಇದೇನು ಆಶ್ಚರ್ಯವು? ಆ ಸಾತ್ಯಕಿಯೋ ಮಹಾವೀರನು! ದ್ರೋಣ, ಕರ್ಣ, ವಿಕರ್ಣ, ಕೃತವರ್ಮಾದಿ ಮಹಾರಥರಿಂದಲೇ ಅವನನ್ನು ಜಯಿಸಲು ಸಾಧ್ಯವಾಗಲಿಲ್ಲ. ನನ್ನ ಸಮಸ್ತ ಸೈನ್ಯವನ್ನೂ ಅವನೊಬ್ಬನೇ ಜಯಿಸಬಲ್ಲವನು. ಅವನು ಧರ್ಮರಾಜನಿಗೆ ಮಾತುಕೊಟ್ಟು ಬಂದಂತೆ, ನಮ್ಮ ಸೇನಾಸಮುದ್ರವನ್ನು ಸುಲಭವಾಗಿ ದಾಟಿಬಂದನು. ಅಂಥವನು ಭೂರಿಶ್ರವಸ್ಸಿನಿಂದ ಅಷ್ಟು ಪರಾಭವಕ್ಕೆ ಗುರಿಯಾದುದು ಹೇಗೆ? ಭೂರಿಶ್ರವಸ್ಸು ಅವನನ್ನು ಬಲಾತ್ಕಾರದಿಂದ ಹಿಡಿದೆಳೆದು ನೆಲಕ್ಕೆ ಕೆಡಹಿದುದು ಹೇಗೆ?" ಎನಲು, ಸಂಜಯನು "ರಾಜೇಂದ್ರಾ! ನಿನ್ನ ಸಂಶಯಕ್ಕೆ ಕಾರಣವುಂಟು. ಆ ಸಾತ್ಯಕಿಯ ಮತ್ತು ಭೂರಿಶ್ರವಸ್ಸಿನ ಉತ್ಪತ್ತಿವೃತ್ತಾಂತವನ್ನು ನೀನು ಕೇಳಿದರೆ, ಆಗ ನಿನ್ನ ಸಂಶಯವು ನೀಗುವುದು. ಬ್ರಹ್ಮನಿಗೆ ಮೊದಲು ಅತ್ರಿಯೆಂಬವನು ಮಾನಸಪುತ್ರನಾಗಿ ಹುಟ್ಟಿದನು. ಮಹಾತಪಸ್ವಿಯಾದ ಆ ಅತ್ರಿಯ ಮಗನು ಸೋಮನು. ಸೋಮನ ಮಗನು ಬುಧನು. ಬುಧನಿಗೆ ಇಳೆಯೆಂಬವಳಲ್ಲಿ ಪುರೂರವನು ಹುಟ್ಟಿದನು. ಅವನಿಗೆ ಆಯುವೆಂಬವನೂ. ಆ ಆಯುವಿಗೆ ನಹುಷನೂ, ನಹುಷನಿಗೆ ಯಯಾತಿಯೂ ಕ್ರಮವಾಗಿ ಹುಟ್ಟಿದರು. ಯಯಾತಿಗೆ ದೇವಯಾನಿಯಲ್ಲಿ ಯದುವೆಂಬ ಜ್ಯೇಷ್ಠಪುತ್ರನು ಹುಟ್ಟಿದನು. ಯದುವಿನ ವಂಶದಲ್ಲಿ ಅಜಮೀಢನೆಂಬವನು ಜನಿಸಿದನು. ಅವನ ಮಗನು ಶೂರನು. ಶೂರನ ಮಗನು ವಸುದೇವನು. ಆ ಶೂರನೆಂಬವನು, ಧನುಸ್ಸಿನಲ್ಲಿ ಕಾರ್ತವೀರ್ಯನಿಗೆ ಸಮಾನನು. ಅದೇ ವಂಶದಲ್ಲಿ ಆ ಶೂರನಿಗೆ

ಸಮಾನವೀರ್ಯವುಳ್ಳ ಶಿನಿಯೆಂಬವನು ಹುಟ್ಟಿದನು. ಈ ಕಾಲದಲ್ಲಿ ದೇವಕನ ಮಗಳಿಗೆ ಸ್ವಯಂವರವು ಏರ್ಪಟ್ಟಿತು. ಎಲ್ಲಾ ಕ್ಷತ್ರಿಯರೂ ಸೇರಿದ್ದರು. ಆ ಸ್ವಯಂವರಕಾಲದಲ್ಲಿ ದೇವಕಿಯನ್ನು ವಸುದೇವನಿಗೇ ಕೊಟ್ಟು ವಿವಾಹಮಾಡಬೇಕೆಂದು ಶಿನಿಯು ಅವನನ್ನು ಸ್ಪರ್ಧಿಸುವುದಕ್ಕಾಗಿ ಬಂದ ಎಲ್ಲಾ ರಾಜರನ್ನೂ ತಾನೇ ಜಯಿಸಿದನು. ದೇವಕಿಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೋಗುವಾಗ, ಅದನ್ನು ನೋಡಿ ಸೋಮದತ್ತನೆಂಬವನು ಸಹಿಸಲಾರದೆ, ಶಿನಿಯನ್ನು ಇದಿರಿಸಿದನು. ಅವರಿಬ್ಬರಿಗೂ ಅರ್ಧದಿನದವರೆಗೆ ಅದ್ಭುತವೂ, ವಿಚಿತ್ರವೂ ಆದ ಯುದ್ಧವು ನಡೆಯಿತು. ಇಬ್ಬರೂ ಬಾಹುಯುದ್ಧವನ್ನಾರಂಭಿಸಿದರು. ಆಗ ಶಿನಿಯು ಸೋಮದತ್ತನ ತಲೆಕೂದಲನ್ನು ಹಿಡಿದು ನೆಲಕ್ಕೆ ಕೆಡಹಿ, ಅವನನ್ನು ಕಾಲಿನಿಂದ ತಿಕ್ಕಿ ಕತ್ತಿಯನ್ನೆತ್ತಿದನು. ಅನೇಕ ರಾಜರು ನೋಡುತ್ತಿರುವಾಗಲೇ ಸೋಮದತ್ತನಿಗೆ ಇಷ್ಟು ಅವಮಾನವನ್ನು ಮಾಡಿದಮೇಲೆ, ಶಿನಿಗೆ ಅವನಲ್ಲಿ ಕನಿಕರವು ಹುಟ್ಟಿತು. “ಎಲ್ಲಿಯಾದರೂ ಬದುಕು ಹೋಗು” ಎಂದು ಹೇಳಿ ಅವನನ್ನು ಕೊಲ್ಲದೆ ಕಳುಹಿಸಿಬಿಟ್ಟನು. ಇಷ್ಟು ಮಾನಭಂಗವಾದುದಕ್ಕಾಗಿ ಸೋಮದತ್ತನು ಸಹಿಸಲಾರದೆ, ರುದ್ರನನ್ನು ಕುರಿತು ತಪಸ್ಸು ಮಾಡಿದನು. ರುದ್ರನು ಅವನಿಗೆ ಪ್ರಸನ್ನನಾಗಿ ತನ್ನಿಂದ ವರವನ್ನು ಕೇಳಿಕೊಳ್ಳುವಂತೆ ಹೇಳಲು, ಸೋಮದತ್ತನು “ಮಹಾದೇವಾ! ನನ್ನ ಶತ್ರುವಾದ ಶಿನಿಯ ಮಗನನ್ನು ಅನೇಕರಾಜರ ಮುಂದೆ ನೆಲಕ್ಕೆ ಕೆಡಹಿ, ಕಾಲಿಂದೊದೆಯುತಕ್ಕ ವೀರನಾದ ಪುತ್ರನೊಬ್ಬನನ್ನು ನನಗೆ ಕರುಣಿಸಬೇಕು” ಎಂದನು. ರುದ್ರನು “ತಥಾಸ್ತು” ಎಂದು ಹೇಳಿ ಕಣ್ಮರೆಯಾದನು. ಆ ವರಬಲದಿಂದ ಹುಟ್ಟಿದ ಮಗನೇ ಈ ಭೂರಿಶ್ರವಸ್ಸು! ಆ ವರಬಲದಿಂದಲೇ ಅವನು ಈಗ ಸಾತ್ಯಕಿಯನ್ನು ಅಷ್ಟು ಭಂಗಪಡಿಸಬಲ್ಲವನಾದನು. ರಾಜಾ! ನೀನು ಹೇಳಿದಂತೆ ಆ ಸಾತ್ಯಕಿಯನ್ನು ಬೇರೆ ಯಾರಿಂದಲೂ ಜಯಿಸಲು ಸಾಧ್ಯವಿಲ್ಲ. ಸಾತ್ಯಕಿಯು ಮಾತ್ರವೇಕೆ? ವೃಷ್ಣಿಕುಲದಲ್ಲಿ ಹುಟ್ಟಿದವರೆಲ್ಲರೂ ಯುದ್ಧದಲ್ಲಿ ಗುರಿತಪ್ಪುವವರಲ್ಲ. ವಿಚಿತ್ರವಾಗಿ ಯುದ್ಧಮಾಡತಕ್ಕವರು. ದೇವ ದಾನವ ಗಂಧರ್ವರನ್ನೆಲ್ಲಾ ಜಯಿಸಬಲ್ಲವರು. ಇಷ್ಟಾದರೂ ಗರ್ವಹೀನರು. ಯುದ್ಧದಲ್ಲಿ ಪರರ ಸಹಾಯವನ್ನು ಕೋರತಕ್ಕವರಲ್ಲ. ಪರರಿಗೆ ವಶರಾಗತ

ಕ್ಕವರಲ್ಲ. ಬಲದಲ್ಲಿ ಆ ವೃಷ್ಣಿವೀರರಿಗೆ ಸಮಾನರು ಹಿಂದೆಯೂ ಇಲ್ಲ. ಈಗಲೂ ಇಲ್ಲ. ಮುಂದೆಯೂ ಇರಲಾರದು. ಅವರು ಬಂಧುಗಳನ್ನು ಅವಮಾನಿಸುವವರಲ್ಲ. ನಿನ್ನ ಮಕ್ಕಳಂತಲ್ಲದೆ ಅವರು ವೃದ್ಧರ ಆಜ್ಞೆಗೆ ಅಡಗಿ ನಡೆಯತಕ್ಕವರು. ದೇವ, ಗಂಧರ್ವ, ಯಕ್ಷ, ರಾಕ್ಷಸರಲ್ಲಿ ಯಾರೂ ಅವರನ್ನು ಜಯಿಸಲಾರರು. ಇನ್ನು ಮನುಷ್ಯರ ಪಾಡೇನು? ಬ್ರಹ್ಮಸ್ವತ್ತು, ಆಚಾರ್ಯಸ್ವತ್ತು, ಜ್ಞಾತಿಗಳ ಸ್ವತ್ತು, ಇವುಗಳಿಗೆ ಆಸೆಪಡತಕ್ಕವರಲ್ಲ. ಯಾರನ್ನೂ ಹಿಂಸಿಸತಕ್ಕವರಲ್ಲ. ಅವರಿಗೆ ವೃಷ್ಣಿಗಳೆಲ್ಲ ಆಪತ್ತಿನಲ್ಲಿ ರಕ್ಷಕರಾಗಿರುವರು. ಅವರೆಲ್ಲರೂ ಸಂಪತ್ಸಮೃದ್ಧಿಯುಳ್ಳವರಾದರೂ ಗರ್ವಿಷ್ಠರಲ್ಲ. ಬ್ರಾಹ್ಮಣಪ್ರಿಯರು! ಸತ್ಯವಾದಿಗಳು! ಸಮರ್ಥರಾದವರನ್ನು ಅವಮತಿಸುವುದಿಲ್ಲ. ದೀನರನ್ನು ಉದ್ಧರಿಸುವರು. ಯಾವಾಗಲೂ ದೈವಭಕ್ತಿಯುಳ್ಳವರು! ಇಂದ್ರಿಯಗಳನ್ನಡಗಿಸಿದವರು! ವಿಪನ್ನರನ್ನು ರಕ್ಷಿಸುವವರು. ಆತ್ಮಸ್ತುತಿಯನ್ನು ಮಾಡಿಕೊಳ್ಳತಕ್ಕವರಲ್ಲ. ಯಾವಾಗಲೂ ಅವರು ದೈವತೋಪಾಸಕರು! ಇದರಿಂದಲೇ ಅವರ ಪ್ರತಾಪಕ್ಕೆ ಎಲ್ಲಿಯೂ ಪ್ರತಿಹತಿಯಿಲ್ಲ. ಒಬ್ಬನು ಮೇರುವನ್ನಾದರೂ ಎತ್ತಬಹುದು! ಮಹಾ ಸಮುದ್ರವನ್ನಾದರೂ ದಾಟಬಹುದು! ಆ ವೃಷ್ಣಿವೀರರೊಡನೆ ಯುದ್ಧಕ್ಕೆ ನಿಂತಮೇಲೆ ಚೇತರಿಸಿಕೊಂಡು ಬರಲಾರನು. ನಿನ್ನ ಸಂಶಯನಿವೃತ್ತಿಗೆ ತಕ್ಕ ಆಧಾರವನ್ನು ಕೊಟ್ಟೆನು. ಮಹಾರಾಜಾ! ಇದೆಲ್ಲವೂ ಮುಖ್ಯವಾಗಿ ನಿನ್ನ ದುರ್ನಯದ ಫಲವೇ" ಎಂದನು.

ಇದು ನೂರ ನಾಲ್ವತ್ತುನಾಲ್ಕನೆಯ ಅಧ್ಯಾಯವು.

---

## { ಕೃಷ್ಣಾರ್ಜುನರ ಸಂವಾದಗಳು. ಕರ್ಣಸಾತ್ಯಕಿಗಳ ಯುದ್ಧವು. }

ಸಂಜಯಾ! ಭೂರಿಶ್ರವಸ್ಸು ಅಂತಹ ಕ್ರೂರವಾದ ಕೊಲೆಗೀಡಾದ ಮೇಲೆ, ಮುಂದೆ ನಡೆದ ಯುದ್ಧಕ್ರಮವೇನು? ಎನಲು, ಸಂಜಯನು "ರಾಜಾ! ಕೇಳು, ಭೂರಿಶ್ರವಸ್ಸು ಲೋಕಾಂತರವನ್ನೈದಿದಮೇಲೆ

ಅರ್ಜುನನು ಸಾರಥಿಯಾದ ಕೃಷ್ಣನನ್ನು ಕುರಿತು "ವಾಸುದೇವಾ! ಜಯದ್ರಥನಿರುವಸ್ಥಳಕ್ಕೆ ಬೇಗನೆ ಕುದುರೆಗಳನ್ನು ಬಿಡು. ಓ ಪುಂಡರೀಕಾಕ್ಷಾ! ಅವನಿಗೆ ಈಗ ಮೂರು ಧರ್ಮಗಳುಂಟು. ಯುದ್ಧಕ್ಕೆ ಇದಿರಾಗಿ ನಿಂತು ಯುದ್ಧಮಾಡುತ್ತಿರುವಾಗಲೇ ಹತನಾಗುವುದೊಂದು. ಹೆದರಿ ರಣರಂಗದಿಂದ ಓಡಿಹೋಗುವಾಗ ನನ್ನ ಪ್ರತಿಜ್ಞಾಪಾಲನಕ್ಕಾಗಿ ಕೊಲೆಗೀಡಾಗುವುದು ಎರಡನೆಯದು. ನನ್ನ ಕಣ್ಣಿಗೆ ಬೀಳದಂತೆ ತಲೆತಪ್ಪಿಸಿಕೊಳ್ಳುವುದೊಂದು. ಈ ಮೂರು ದಾರಿಗಳಿರುವುವು. ಅವುಗಳಲ್ಲಿ ಕೊನೆಯದಕ್ಕೆ ಮಾತ್ರ ಅವಕಾಶಕೊಡಬಾರದು. ನನ್ನ ಪ್ರತಿಜ್ಞೆಯು ಸಫಲವಾಗುವಂತೆ ನೀನು ಮಾಡಬೇಕು. ಓ ಮಹಾಬಾಹೂ! ಸೂರ್ಯನು ಈಗಾಗಲೇ ಆತುರದಿಂದ ಅಸ್ತಂಗತನಾಗುತ್ತಿರುವನು. ನಾನೇನೋ ಈಗ ಮಹತ್ತಾದ ಕಾರ್ಯಭಾರವನ್ನು ತಲೆಯಮೇಲೆ ಹೊತ್ತುಕೊಂಡಿರುವೆನು. ಅದನ್ನು ತಪ್ಪಿಸುವುದಕ್ಕಾಗಿ ಪ್ರತಿಪಕ್ಷದ ಮಹಾರಥರು ಕಣ್ಣಿಟ್ಟು ಕಾದಿರುವರು. ಆದುದರಿಂದ ಕೃಷ್ಣಾ! ಸೂರ್ಯನು ಅಸ್ತಂಗತನಾಗುವಮೊದಲೇ ನನ್ನ ಪ್ರತಿಜ್ಞೆಯು ನೆರವೇರುವಹಾಗೆ ನೀನು ಮಾಡಬೇಕು. ಆ ಜಯದ್ರಥನನ್ನು ನಾನು ಕೊಲ್ಲುವ ಸ್ಥಳಕ್ಕೆ ಬೇಗನೆ ರಥವನ್ನು ಬಿಡಬೇಕು" ಎಂದನು. ಒಡನೆಯೇ ಕೃಷ್ಣನು ಕುದುರೆಗಳನ್ನು ತಟ್ಟಿ ಮುಂದೆ ಬಿಡಲು ವಾಯುವೇಗದಿಂದ ಅವು ಓಡಿದುವು. ಅದನ್ನು ನೋಡಿ ಕೌರವಸೇನೆಯ ಪ್ರಧಾನರಾದ ದುರ್ಯೋಧನ, ಕರ್ಣ, ವೃಷಸೇನ, ಶಲ್ಯ, ಅಶ್ವತ್ಥಾಮ, ಕೃಪಾದಿಗಳೂ, ಸ್ವತಃ ಸೈಂಧವನೂ ತಡೆಯುವುದಕ್ಕಾಗಿ ಬಂದರು. ಇದಿರಾಗಿ ಸೈಂಧವನನ್ನು ಕಂಡೊಡನೆ ಅರ್ಜುನನಿಗೆ ಕೋಪದಿಂದ ಕಣ್ಣುಗಳು ಉರಿಯುವಂತಾಯಿತು. ತನ್ನ ಕಣ್ಣಿನಿಂದಲೇ ಅವನನ್ನು ದಹಿಸಿಬಿಡುವಂತೆ ದುರುದುರನೆ ಅವನನ್ನು ನೋಡಿದನು. ಇಷ್ಟರಲ್ಲಿ ಕರ್ಣನು ಆ ಸೈಂಧವನ ಮುಂಭಾಗವನ್ನು ಬಿಟ್ಟು, ಸಾತ್ಯಕಿಯನ್ನಿದಿರಿಸಿ ಹೋದನು. ಹೀಗೆ ಬರುತ್ತಿರುವ ಕರ್ಣನನ್ನು ನೋಡಿ, ಅರ್ಜುನನು ನಗುತ್ತಾ ಕೃಷ್ಣನನ್ನು ಕುರಿತು "ವಾಸುದೇವಾ! ಇದೋ! ನೋಡು. ಕರ್ಣನು ಸಾತ್ಯಕಿಯ ರಥಕ್ಕಿದಿರಾಗಿ ಹೋಗುವನು. ಭೂರಿಶ್ರವಸ್ಸಿನ ವಧವನ್ನು ನೋಡಿ ಸಹಿಸಲಾರದೆ ಇವನು ಬರುವಂತಿದೆ. ಅವನ ರಥಕ್ಕೆ ಇದಿರಾಗಿ ನಮ್ಮ ರಥವನ್ನು ಬಿಡು.

ಇವನ ಕೈಯಿಂದ ಸಾತ್ಯಕಿಗೆ ಭೂರಿಶ್ರವಸ್ಸಿನ ಗತಿಯು ಉಂಟಾಗಬಾರದು" ಎಂದನು.

ಇದನ್ನು ಕೇಳಿ ಕೃಷ್ಣನು ಅರ್ಜುನನನ್ನು ಕುರಿತು ಕಾಲೋಚಿತವಾದ ಮಾತಿನಿಂದ ಹೀಗೆಂದನು. "ಅರ್ಜುನಾ! ನೀನೇಕೆ ಹೆದರುವೆ? ಕರ್ಣನಿಗೆ ಆ ಸಾತ್ಯಕಿಯೊಬ್ಬನೇ ಸಾಕು! ಸಾತ್ಯಕಿಯು ಅಸಹಾಯನಾಗಿಯೇ ಅವನನ್ನು ಜಯಿಸಬಲ್ಲನು. ಇದರಮೇಲೆ ಉಪಪಾಂಡವರ ಸಹಾಯವೂ ಅವನಿಗಿರುವಾಗ ಇನ್ನು ಹೇಳಬೇಕಾದುದೇನು? ಅರ್ಜುನಾ! ಈಗ ನಿನಗೆ ಕರ್ಣನೊಡನೆ ಯುದ್ಧಕ್ಕೆ ನಿಲ್ಲುವುದೇ ಉಚಿತವಲ್ಲ. ಇವನಲ್ಲಿ ಈಗ ಇಂದ್ರದತ್ತವಾದ ಪ್ರಬಲಶಕ್ತ್ಯಾಯುಧವೊಂದಿರುವುದು. ಕರ್ಣನು ನಿನ್ನ ವಧಕ್ಕಾಗಿಯೇ ಅದನ್ನು ಪೂಜಿಸಿಟ್ಟಿರುವನು. ಧನಂಜಯಾ! ಕರ್ಣನು ಸಾಮಾನ್ಯಮನುಷ್ಯನೆಂದು ನನಗೆ ತೋರುವುದಿಲ್ಲ. ಅವನೊಡನೆ ನೀನು ಯುದ್ಧಕ್ಕೆ ಹೋಗುವುದು ಈಗ ಯುಕ್ತವಲ್ಲ. ಕರ್ಣನೇನೋ ನಿನಗಿಂತಲೂ ಬಲಾಢ್ಯನೇ! ನಮ್ಮನ್ನು ಬಹು ಸುಲಭವಾಗಿ ಜಯಿಸಿಬಿಡಬಲ್ಲನು. ಆದರೆ ಆ ಕರ್ಣನಲ್ಲಿ ಒಂದು ದೊಡ್ಡ ದೋಷವುಂಟು. ಅವನು ಆಗಾಗ ಚಿಂತಾಕುಲನಾಗುವನು. ಎಚ್ಚರ ತಪ್ಪಿಹೋಗುವನು. ಅವನು ಸಹಜವಾಗಿ ದಯಾಶೀಲನಾದುದರಿಂದ ಆಗಾಗ ಶತ್ರುವಿನಲ್ಲಿ ಕನಿಕರದಿಂದ ಹಿಂಜರಿಯುವನು. ಆದರಿಂದ ನನ್ನ ಮನಸ್ಸು ಅವನ ವಿಷಯದಲ್ಲಿ ವ್ಯಸನಗೊಳ್ಳುವುದು. ಪಾರ್ಥಾ! ಅದು ಹೇಗಾದರೂ ಇರಲಿ! ತತ್ಕಾಲಕ್ಕೆ ಕರ್ಣನು ಸಾತ್ಯಕಿಯೊಡನೆ ಹೇಗೆ ಬೇಕೋ ಹಾಗೆ ಯುದ್ಧಮಾಡಲಿ! ಅವನಿಗೆ ಕೊನೆಗಾಲವೇನೆಂಬುದನ್ನು ನಾನು ತಿಳಿದು ನಿನಗೆ ಹೇಳುವೆನು. ಆಗ ನೀನು ಇವನೊಡನೆ ಯುದ್ಧಕ್ಕೆ ನಿಂತು ನಿನ್ನ ತೀಕ್ಷ್ಣಬಾಣಗಳಿಂದ ಅವನನ್ನು ಸುಲಭವಾಗಿ ಕೆಡಹಬಹುದು" ಎಂದನು. ಈ ನಡುವೆ ಧೃತರಾಷ್ಟ್ರನು "ಸಂಜಯಾ! ಅದು ಹಾಗಿರಲಿ! ಭೂರಿಶ್ರವಸ್ಸು ಸತ್ತಮೇಲೆ ಸಾತ್ಯಕಿಯು ಕರ್ಣನೊಡನೆ ಹೇಗೆ ಯುದ್ಧಮಾಡಿದನೆಂದು ತಿಳಿಸು. ರಥವನ್ನು ಕಳೆದುಕೊಂಡ ಸಾತ್ಯಕಿಗೆ ಬೇರೆ ರಥವೆಲ್ಲಿಯದು? ಅವನ ಚಕ್ರರಕ್ಷಕರಾದ ಪಾಂಚಾಲರ ಕುಮಾರರಿಗೆ ರಥವೆಲ್ಲಿಯದು? ಅದನ್ನೆಲ್ಲಾ ನನಗೆ ತಿಳಿಸು" ಎಂದನು.

ಅದಕ್ಕಾ ಸಂಜಯನು "ರಾಜೇಂದ್ರಾ! ಎಲ್ಲಾ ಸೈನ್ಯಗಳೂ, ಕೃಷ್ಣಾರ್ಜುನರೂ ನೋಡುತ್ತಿರುವಹಾಗೆಯೇ ಕರ್ಣನಿಗೂ, ಸಾತ್ಯಕಿಗೂ ನಡೆದ ಯುದ್ಧವೇನೆಂಬುದನ್ನು ತಿಳಿಸುವೆನು. ನಿನ್ನ ದುರಾಚಾರಕ್ಕೆ ಫಲರೂಪವಾದ ಆ ಅನರ್ಥವನ್ನೆಲ್ಲಾ ಸ್ಥಿರಮನಸ್ಸಿನಿಂದ ಕೇಳು. ಕೃಷ್ಣನಿಗೆ ಯಾವಯಾವದು ಹೇಗೆ ನಡೆಯಬೇಕೆಂಬುದು ಮೊದಲೇ ತಿಳಿದಿದ್ದಿತು. ಭೂರಿಶ್ರವಸ್ಸಿನಿಂದ ಸಾತ್ಯಕಿಗೆ ಪರಾಜಯವುಂಟಾಗುವುದನ್ನೂ ಅವನು ತಿಳಿದಿದ್ದನು. ಮಹಾತ್ಮನಾದ ಕೃಷ್ಣನು ಹಿಂದುಮುಂದಿನದನ್ನೆಲ್ಲಾ ಚೆನ್ನಾಗಿ ಬಲ್ಲನು. ಸರ್ವಜ್ಞನಾದ ಆ ಕೃಷ್ಣನು ದಾರುಕನನ್ನು ಕರೆದು ತನ್ನ ರಥವನ್ನು ಬೆಳಗಾಗುವಷ್ಟರಲ್ಲಿಯೇ ಸಿದ್ಧಪಡಿಸಬೇಕೆಂದು ಮೊದಲೇ ತಿಳಿಸಿದ್ದನು. ರಾಜಾ! ದೇವ ಗಂಧರ್ವ ಯಕ್ಷ ರಾಕ್ಷಸ ಪನ್ನಗಾದಿಗಳಲ್ಲಿ ಯಾರೂ ಆ ಕೃಷ್ಣಾರ್ಜುನರನ್ನು ಜಯಿಸಬಲ್ಲವರಿಲ್ಲ. ಬ್ರಹ್ಮಾದಿದೇವತೆಗಳೆಲ್ಲಾ ಆ ಕೃಷ್ಣನ ಪ್ರಭಾವವನ್ನು ಬಲ್ಲರು. ಇನ್ನು ಯುದ್ಧವೃತ್ತಾಂತವನ್ನು ತಿಳಿಸುವೆನು ಕೇಳು. ಅತ್ತಲಾಗಿ ಸಾತ್ಯಕಿಯು ವಿರಥನಾದುದನ್ನೂ, ಕರ್ಣನ ಕೈಮೇಲಾಗುತ್ತಿರುವುದನ್ನೂ ನೋಡುತ್ತಿದ್ದ ಕೃಷ್ಣನು ತನ್ನ ಶಂಖವನ್ನೆತ್ತಿ ಋಷಭಸ್ವರದಿಂದ ಗಟ್ಟಿಯಾಗಿ ಧ್ವನಿಮಾಡಿದನು. ಈ ಶಂಖಧ್ವನಿಯನ್ನು ಕೇಳಿದೊಡನೆಯೇ ದಾರುಕನು ಕೃಷ್ಣನ ಅಭಿಪ್ರಾಯವನ್ನು ತಿಳಿದುಕೊಂಡು ಗರುಡಚಿಹ್ನವುಳ್ಳ ಆ ಕೃಷ್ಣನ ರಥವನ್ನು ತಂದು ನಿಲ್ಲಿಸಿದನು. ಕೃಷ್ಣನ ಅಭಿಪ್ರಾಯವನ್ನು ತಿಳಿದು ಸಾತ್ಯಕಿಯೂ ಕೂಡ ದಾರುಕನಿಂದ ನಡೆಸಲ್ಪಡುವ ಆ ರಥವನ್ನೇರಿ ಕುಳಿತನು. ಆ ರಥವೇನು ಸಾಮಾನ್ಯವೇ? ಶೈಬ್ಯ, ಸುಗ್ರೀವ, ಮೇಘಪುಷ್ಪ, ಬಲಾಹಕಗಳೆಂದು ಹೆಸರುಗೊಂಡ ಕಾಮಗಮನವುಳ್ಳ ಉತ್ತಮಾಶ್ವಗಳಮೇಲೆ ಹೂಡಿದ ದೇವವಿಮಾನಕ್ಕೆ ಸಮಾನವಾದ ಆ ರಥವನ್ನೇರಿ ಸಾತ್ಯಕಿಯು ಕರ್ಣನಿಗಿದಿರಾಗಿ ಬಾಣಗಳನ್ನು ವರ್ಷಿಸತೊಡಗಿದನು. ಅರ್ಜುನನ ರಥಕ್ಕೆ ಚಕ್ರರಕ್ಷಕರಾಗಿದ್ದ ಯುಧಾಮನ್ಯು, ಉತ್ತಮೌಜಸ್ಸೆಂಬ ಇವರಿಬ್ಬರೂ, ಅರ್ಜುನನನ್ನು ಬಿಟ್ಟು ಸಾತ್ಯಕಿಗೆ ಬೆಂಬಲವಾಗಿ ಕರ್ಣನಿಗಿದಿರಾದರು. ಕರ್ಣನು ಎಡೆಬಿಡದೆ ಸಾತ್ಯಕಿಯಮೇಲೆ ಬಾಣಗಳನ್ನು ಕರೆಯುತ್ತಾ ಇದಿರಾದನು. ಮಹಾರಾಜಾ! ಆಗ ನಡೆದ ಆ ಯುದ್ಧದಂತೆ ಹಿಂದೆ ದೇವ ದಾನವ ಗಂಧರ್ವ ರಾಕ್ಷಸರಲ್ಲಿಯಾದರೂ,

ಯುದ್ಧವು ನಡೆದುದನ್ನು ನಾವು ಕಂಡುದೂ ಇಲ್ಲ! ಕೇಳಿದುದೂ ಇಲ್ಲ. ಭೂಮಿಯಲ್ಲಿಯಾಗಲಿ, ಆಕಾಶದಲ್ಲಿಯಾಗಲಿ ಅಂತಹ ಯುದ್ಧವು ಇದುವರೆಗೆ ನಡೆದುದಿಲ್ಲ. ಇತರ ಸೈನ್ಯಗಳೆಲ್ಲವೂ ಆವರ ಯುದ್ಧವನ್ನು ನೋಡಿ ಸ್ತಬ್ಧರಾಗಿ ನಿಂತುಬಿಟ್ಟರು. ಅತಿಮಾನುಷವಾದ ಅವರಿಬ್ಬರ ಯುದ್ಧವನ್ನೂ, ದಾರುಕನ ಸಾರಥ್ಯವನ್ನೂ ನೋಡಿ ಎಲ್ಲರೂ ಬೆರಗಾದರು. ಮುಂದೆ ಸರಿಯುವುದು! ಹಿಂತಿರುಗುವುದು! ಮಂಡಲಿಗತಿಯಿಂದ ಸುತ್ತಿಬರುವುದು! ಇಂತಹ ವಿಚಿತ್ರಗತಿಗಳಿಂದ ರಥವನ್ನು ನಡೆಸುತ್ತಿರುವ ಆ ದಾರುಕನ ಸಾರಥ್ಯಕಾರ್ಯಕ್ಕೆ ಆಕಾಶದಲ್ಲಿದ್ದ ದೇವಗಂಧರ್ವಾದಿಗಳೆಲ್ಲರೂ ವಿಸ್ಮಿತರಾದರು. ಕರ್ಣಸಾತ್ಯಕಿಗಳಿಬ್ಬರೂ ತಮ್ಮ ತಮ್ಮ ಮಿತ್ರರ ಜಯಕ್ಕಾಗಿ ಸ್ಪರ್ಧೆಯಿಂದ ನಡೆಸುವ ಯುದ್ಧವನ್ನು ಪ್ರತಿಯೊಬ್ಬರೂ ನಟ್ಟ ಕಣ್ಣಿನಿಂದ ನೋಡುತ್ತಿದ್ದರು. ದೇವಸಮಾನರೆನಿಸಿದ ಕರ್ಣಸಾತ್ಯಕಿಗಳಿಬ್ಬರೂ, ಒಬ್ಬರನ್ನೊಬ್ಬರು ಬಾಣವರ್ಷದಿಂದ ಮುರೆಸಿದರು. ಸಾತ್ಯಕಿಯು ಜಲಸಂಧನನ್ನೂ ಭೂರಿಶ್ರವಸ್ಸನ್ನೂ ಕೊಂದನೆಂಬ ಕೋಪವನ್ನು ಸಹಿಸಲಾರದೆ, ಕರ್ಣನು ಸರ್ಪದಂತೆ ಬುಸುಗುಟ್ಟುತ್ತಾ, ತನ್ನ ಕಣ್ಣುಗಳಿಂದಲೇ ದಹಿಸಿಬಿಡುವಂತೆ ಸಾತ್ಯಕಿಯನ್ನು ದುರುದುರನೆ ನೋಡಿ, ಅವನಮೇಲೆ ತೀವ್ರಬಾಣಗಳನ್ನು ಬಿಟ್ಟನು. ಸಾತ್ಯಕಿಯು ಪ್ರತಿಬಾಣಗಳನ್ನು ಬಿಡುತ್ತಾ ಆನೆಯನ್ನು ಆನೆಯು ಇದಿರಿಸುವಹಾಗೆ ಅವನನ್ನು ಇದಿರಿಸಿ ಹೊಡೆದನು. ಹೆಬ್ಬುಲಿಗಳಂತೆ ಇಬ್ಬರೂ ಹೋರಾಡಿದರು. ಸಾತ್ಯಕಿಯು ಪೂರ್ಣವಾಗಿ ಉಕ್ಕಿನಿಂದ ನಿರ್ಮಿತವಾದ ಹಲವು ಬಾಣಗಳನ್ನು ಕರ್ಣನ ಅಂಗಾಂಗಗಳಿಗೆಲ್ಲಾ ನಾಟುವಂತೆ ಹೊಡೆದನು. ಕರ್ಣನ ಸಾರಥಿಯನ್ನು ರಥದಿಂದ ಕೆಡಹಿದನು. ಅವನ ರಥಾಶ್ವಗಳನ್ನು ಕೊಂದನು. ಧ್ವಜವನ್ನು ಮುರಿದನು. ರಥವನ್ನು ಶತಖಂಡವಾಗಿ ಭೇದಿಸಿಬಿಟ್ಟನು. ಕರ್ಣನು ವಿರಥನಾದುದನ್ನು ನೋಡಿ, ನಿನ್ನ ಮಕ್ಕಳು ಎದೆಗೆಟ್ಟರು. ಆಮೇಲೆ ಕರ್ಣನ ಮಗನಾದ ವೃಷಸೇನನೂ, ಶಲ್ಯನೂ, ಅಶ್ವತ್ಥಾಮನೂ, ಕರ್ಣನಿಗೆ ಬೆಂಬಲವಾಗಿ ಬಂದು ಸಾತ್ಯಕಿಯನ್ನು ಸುತ್ತಲೂ ಆವರಿಸಿಕೊಂಡು ಬಾಣಗಳನ್ನು ಕರೆದರು. ಸೈನ್ಯದಲ್ಲಿ ದೊಡ್ಡ ಕ್ಷೋಭವುಂಟಾಯಿತು. ಯಾರಿಗೂ, ಯಾವುದೊಂದೂ ಕಾಣದಂತಾಯಿತು. ಕರ್ಣನ ಸ್ಥಿತಿಯನ್ನು ನೋಡಿ ನಿನ್ನ ಸೈನ್ಯಗಳಲ್ಲಿ ಹಾಹಾಕಾರ

ವೆದ್ದಿತು. ಒಡನೆಯೇ ವಿರಥನಾದ ಕರ್ಣನು ತನ್ನ ಪರಾಜಯಕ್ಕಾಗಿ ನಾಚಿ ನಿಟ್ಟುಸಿರುಬಿಡುತ್ತಾ ಓಡಿಬಂದು, ದುರ್ಯೋಧನನ ರಥದಲ್ಲಿ ಕುಳಿತನು. ರಾಜಾ! ಕರ್ಣನು ಬಾಲ್ಯದಿಂದಲೂ ನಿನ್ನ ಮಗನಲ್ಲಿ ತನಗಿರುವ ಅಸಾಧಾರಣ ಮೈತ್ರಿಯನ್ನೂ, ನಿನ್ನ ಮಗನು ತನಗೆ ಅಂಗರಾಜ್ಯವನ್ನು ಕೊಡಿಸಿದುದಕ್ಕಾಗಿ ಅವನಿಗೆ ತಾನು ಮಾಡಿಕೊಟ್ಟ ಪ್ರತಿಜ್ಞೆಯನ್ನೂ ನೆನೆಸಿಕೊಂಡು, ಆ ಮಾತನ್ನು ನಡೆಸುವುದಕ್ಕಾಗಿ ಅದಷ್ಟು ಪ್ರಯತ್ನಪಟ್ಟನು. ಆದರೇನು? ಅವನ ಆಶೆಗೆ ಭಂಗವುಂಟಾಯಿತು. ಆಗ ಸಾತ್ಯಕಿಯು ವಿರಥನಾದ ಕರ್ಣನನ್ನೂ, ನಿನ್ನ ಮಕ್ಕಳಾದ ದುಶ್ಶಾಸನಾದಿಗಳನ್ನೂ ತಾನೇ ಸುಲಭವಾಗಿ ಕೊಂದುಬಿಡಬಹುದಾಗಿತ್ತು. ಆದರೆ, ಹಿಂದೆ ಭೀಮಾರ್ಜುನರು ಮಾಡಿದ ಪ್ರತಿಜ್ಞೆಯನ್ನು ನೆನೆಸಿಕೊಂಡು, ಅದನ್ನು ತಪ್ಪಿಸಬಾರದೆಂಬುದಕ್ಕಾಗಿ ಸಾತ್ಯಕಿಯು ಅವರನ್ನು ಪ್ರಾಣದಿಂದ ಬಿಟ್ಟು ಕಳುಹಿಸಿದನು. ರಾಜಾ! ಭೀಮನು ನಿನ್ನ ಮಕ್ಕಳನ್ನು ತನ್ನ ಕೈಯಿಂದ ಕೊಲ್ಲುವುದಾಗಿ ಪ್ರತಿಜ್ಞೆಮಾಡಿರುವನು. ಅನುದ್ಯೂತಕಾಲದಲ್ಲಿ ಅರ್ಜುನನು ತಾನು ಕರ್ಣನನ್ನು ವಧಿಸುವುದಾಗಿ ಪ್ರತಿಜ್ಞೆಮಾಡಿದನು. ಈ ಕರ್ಣಾದಿಗಳೆಲ್ಲರೂ ಸಾತ್ಯಕಿಯನ್ನು ಕೊಂದುಬಿಡಬೇಕೆಂದು ಸರ್ವಪ್ರಯತ್ನವನ್ನು ಮಾಡಿದರು. ಅವರಿಂದ ಅದು ಸಾಗಲಿಲ್ಲ. ಅಶ್ವತ್ಥಾಮ ಕೃತವರ್ಮನೇ ಮೊದಲಾದ ಅನೇಕ ಮಹಾರಥರು ಏಕಾಕಿಯಾದ ಸಾತ್ಯಕಿಯಿಂದ ಪರಾಜಿತರಾದರು. ಕೃಷ್ಣಾರ್ಜುನರಿಗೆ ಸಮಾನಪರಾಕ್ರಮವುಳ್ಳ ಸಾತ್ಯಕಿಯು ತನಗೆ ಪರಲೋಕಸಾಧನೆಯನ್ನೂ, ಧರ್ಮರಾಜನಿಗೆ ಪ್ರಿಯವನ್ನೂ ಕೋರಿ, ನಿರಾಯಾಸವಾಗಿ ನಗುತ್ತಿರುವವನಂತೆಯೇ ನಿನ್ನ ಸಮಸ್ತಸೈನ್ಯಗಳನ್ನೂ ಜಯಿಸಿಬಿಟ್ಟನು ರಾಜೇಂದ್ರಾ! ಹೆಚ್ಚೇಕೆ? ಲೋಕದಲ್ಲಿ ಧನುರ್ಧಾರಿಯೆಂದರೆ ಮಹಾತ್ಮನಾದ ಕೃಷ್ಣನೊಬ್ಬನು! ಅರ್ಜುನನೊಬ್ಬನು! ಸಾತ್ಯಕಿಯೊಬ್ಬನು! ನಾಲ್ಕನೆಯವನಾವನೂ ಇಲ್ಲ" ಎಂದನು. ಆಗ ಧೃತರಾಷ್ಟ್ರನು "ಸಂಜಯಾ! ಸಾತ್ಯಕಿಯೇನೋ ಪರಾಕ್ರಮದಲ್ಲಿ ಕೃಷ್ಣನಿಗೆ ಸಮಾನನೇ. ಅವನು ಶ್ರೀಕೃಷ್ಣನ ರಥವನ್ನೇರಿ ದಾರುಕನ ಸಹಾಯದಿಂದ ಕರ್ಣನನ್ನಿದಿರಿಸಿ ಅವನನ್ನು ವಿರಥನನ್ನಾಗಿ ಮಾಡಿದನಲ್ಲವೆ? ಆ ಸಾತ್ಯಕಿಯು ಅದೇ ರಥದಲ್ಲಿ ಕುಳಿತು ಕೊನೆಗೂ ಯುದ್ಧವನ್ನು ನಡೆಸಿದನೆ? ಅದನ್ನು ನನಗೆ ತಿಳಿ

ಸಬೇಕು" ಎಂದನು. ಅದಕ್ಕೆ ಸಂಜಯನು "ರಾಜಾ! ಕೇಳು. ಸಾತ್ಯಕಿಗೆ ಆಮೇಲೆ ಬೇರೊಂದು ರಥವು ಸಿದ್ಧವಾಗಿ ಬಂದಿತು. ದಾರುಕನ ತಮ್ಮನೊಬ್ಬನು ಶಾಸ್ತ್ರೋಕ್ತ ಶಿಲ್ಪವಿದ್ಯೆಯಿಂದ ನಿರ್ಮಿತವಾದ ರಥವೊಂದನ್ನು ಆಗಲೇ ಸಿದ್ಧಪಡಿಸಿ ತಂದನು. ಅದರ ಮೂಕಿಯು ಉಕ್ಕಿನ ಮತ್ತು ಚಿನ್ನದ ಕಟ್ಟುಗಳಿಂದ ಕೂಡಿದ್ದಿತು. ಸಿಂಹದ ಗುರುತುಳ್ಳ ಧ್ವಜಪತಾಕೆಗಳು ಏರಿಸಲ್ಪಟ್ಟಿದ್ದು, ಸಾವಿರಾರು ನಕ್ಷತ್ರಚಿಹ್ನಗಳಿಂದ ಅಲಂಕೃತವಾಗಿದ್ದಿತು. ಸುವರ್ಣಾಲಂಕೃತಗಳಾದ ಸಿಂಧುದೇಶದ ಕುದುರೆಗಳು ಹೂಡಲ್ಪಟ್ಟಿದ್ದುವು. ವಾಯುವೇಗವುಳ್ಳ ಆ ಕುದುರೆಗಳು ಎಂತಹ ಶಬ್ದಕ್ಕೂ ಹೆದರತಕ್ಕವುಗಳಲ್ಲ. ಆ ರಥವು ಅನೇಕಘಂಟಾಜಾಲಗಳ ಗಲ್ಗಲ ಧ್ವನಿಯೊಡನೆ ಕೂಡಿದ್ದಿತು. ಶಕ್ತಿ, ತೋಮರ, ಮೊದಲಾದ ಶಸ್ತ್ರಾಸ್ತ್ರಸಮೂಹಗಳೆಲ್ಲಾ ಅದರಲ್ಲಿದ್ದುವು. ಮೇಘಗಂಭೀರಧ್ವನಿಯುಳ್ಳ ಅಂತಹ ರಥವನ್ನೇರಿ ಸಾತ್ಯಕಿಯು ನಿನ್ನ ಸೈನ್ಯಕ್ಕಿದಿರಾದನು. ಆಮೇಲೆ ದಾರುಕನು ತನ್ನ ರಥದೊಡನೆ ಶ್ರೀಕೃಷ್ಣನ ಬಳಿಗೆ ಬಂದು ಸೇರಿದನು. ಅತ್ತಲಾಗಿ ಕರ್ಣನೂ ಕೂಡ ಶಂಖದಂತೆಯೂ, ಹಾಲಿನಂತೆಯೂ, ಬಿಳುಪಾದ ಉತ್ತಮಾಶ್ವಗಳಿಂದ ಹೂಡಿದ ರಥವನ್ನೇರಿ ಸಾತ್ಯಕಿಗೆ ಇದಿರಾದನು. ಅವನ ಧ್ವಜದಲ್ಲಿ ಆನೆಯ ಹೊರಜೆಯ ಗುರುತು ಶೋಭಿಸುತ್ತಿದ್ದಿತು. ಯಂತ್ರದಿಂದ ಏರಿಸಲ್ಪಡುವ ಧ್ವಜಪತಾಕೆಗಳಿಂದ ಕೂಡಿ, ಸಮಸ್ತ ಶಸ್ತ್ರಾಸ್ತ್ರಸಮೃದ್ಧಿಯುಳ್ಳ ಮತ್ತು ಸಮರ್ಥನಾದ ಸಾರಥಿಯಿಂದ ಕೂಡಿದ ರಥವನ್ನೇರಿ ಕರ್ಣನು ನಮ್ಮ ಶತ್ರುಗಳಿಗೆ ಇದಿರಾದನು. ಅವರಿಬ್ಬರಿಗೂ ಪ್ರಬಲಯುದ್ಧವು ನಡೆಯಿತು. ಮಹಾರಾಜಾ! ನೀನು ಕೇಳಿದುದಕ್ಕಾಗಿ ಇಷ್ಟನ್ನೂ ಹೇಳಿದೆನು. ನಿನ್ನ ದುರ್ನಯದಿಂದುಂಟಾದ ಅನರ್ಥವನ್ನು ಸಂಗ್ರಹಿಸಿ ಹೇಳುವೆನು ಕೇಳು. ದುರ್ಮುಖನನ್ನು ಮುಂದಿಟ್ಟುಕೊಂಡು ಬಂದ ನಿನ್ನ ಮೂವತ್ತೊಂದು ಮಂದಿ ಮಕ್ಕಳೂ ಭೀಮನ ಗದೆಗೆ ಆಹುತಿಯಾದರು. ಭೀಷ್ಮನನ್ನೂ, ಭಗದತ್ತನನ್ನೂ ಮುಂದಿಟ್ಟುಕೊಂಡು ಬಂದ ನಿನ್ನ ಕಡೆಯ ನೂರಾರುಮಂದಿ ಶೂರರು, ಅರ್ಜುನನ ಮತ್ತು ಸಾತ್ಯಕಿಯ ಬಾಣಗಳಿಗೆ ಆಹುತಿಯಾದರು. ಅಷ್ಟೊಂದು ಕ್ಷಯವೂ ನಿನ್ನ ದುರ್ಮಂತ್ರದ ಫಲದಿಂದಲೇ" ಎಂದನು.

ಇದು ನೂರ ನಾಲ್ವತ್ತೈದನೆಯ ಅಧ್ಯಾಯವು.

{ ಅರ್ಜುನನು ಕರ್ಣನನ್ನು ನಿಂದಿಸಿ, ಅವನ ಮಗನನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದುದು. ಕರ್ಣದುರ್ಯೋಧನರ ಸಂವಾದವು. ಸಂಕುಲಯುದ್ಧವು. }

ಧೃತರಾಷ್ಟ್ರನು ಸಂಜಯನನ್ನು ಕುರಿತು, "ಸಂಜಯಾ! ಹೀಗೆ ಅನೇಕ ವೀರರು ಕ್ಷಯವಾದಮೇಲೆ ಭೀಮಾರ್ಜುನರೂ, ಸಾತ್ಯಕಿಯೂ, ಮಾಡಿದ ಕಾರ್ಯಗಳೇನು?" ಎನಲು, ಸಂಜಯನು "ರಾಜಾ! ಕೇಳು. ಭೀಮನು ಕರ್ಣನಿಂದ ವಿರಥನಾಗಿ ಮಾಡಲ್ಪಟ್ಟು ಅವನು ತನ್ನನ್ನು ಬಾಯಿಗೆ ಬಂದಂತೆ ನಿಂದಿಸಿದ ಮಾತುಗಳನ್ನೂ ಕೇಳಿದಮೇಲೆ ಅವನಿಗೆ ಮೈಮರೆಯುವಷ್ಟು ಕೋಪವುಂಟಾಯಿತು. ಆಗ ಅತಿವ್ಯಸನದಿಂದ ಭೀಮನು ಅರ್ಜುನನನ್ನು ಕುರಿತು ಹೀಗೆಂದನು. "ವತ್ಸಾ! ಧನಂಜಯಾ! ಕರ್ಣನು ನನ್ನನ್ನು ಕುರಿತು, ನಿನ್ನೆದಿರಾಗಿಯೇ ಯಾವ ಮಾತುಗಳನ್ನಾಡಿದನೋ ಅವನ್ನೆಲ್ಲಾ ಕೇಳಿದೆಯಲ್ಲವೇ? ಅವನು ಬಾರಿಬಾರಿಗೂ ನನ್ನನ್ನು ಕುರಿತು "ಎಲಾ ಮೀಸೆಯಿಲ್ಲದವನೆ! ಮೂಢಾ! ಹೊಟ್ಟೆಬಾಕಾ! ಶಸ್ತ್ರಾಸ್ತ್ರಗಳಲ್ಲಿ ಪರಿಚಯವಿಲ್ಲದವನೇ! ಯುದ್ಧಕ್ಕೆ ಹೆದರತಕ್ಕ ಎಲಾ ಬಾಲಕಾ!" ಎಂದು ಬಹಳ ಹೀನವಾಗಿ ನನ್ನನ್ನು ಸಂಬೋಧಿಸಿದನು. ಇಂತಹ ಮಾತನ್ನಾಡಿದವನನ್ನು ನನ್ನ ಕೈಯಿಂದಲೇ ಕೊಲ್ಲಬೇಕಾದುದು ಅವಶ್ಯವು. ಆದರೂ ನಿನ್ನೊಡನೆ ನಾನೂ ಶತ್ರುವಧದಲ್ಲಿ ಕೆಲವು ವ್ರತವನ್ನು ಹಿಡಿದಿರುವೆನು. ಅದನ್ನು ನಡೆಸಿ ತೀರಬೇಕು. ನಿನಗೆ ಹೇಗೋ ನನಗೂ ಅದು ಕರ್ತವ್ಯವೇ. ಈಗ ನೀನೇ ಆ ಕರ್ಣನನ್ನು ಕೊಲ್ಲುವುದಕ್ಕೆ ತಕ್ಕ ಪ್ರಯತ್ನವನ್ನು ಮಾಡಬೇಕು. ನೀನು ಮಾಡಿದ ಪ್ರತಿಜ್ಞೆಯು ಸತ್ಯವಾಗುವಂತೆ ಮಾಡು. ಅವನು ಆಡಿದ ಮಾತನ್ನು ದೃಢವಾಗಿ ನೆನಪಿನಲ್ಲಿಡು" ಎಂದನು. ಈ ಮಾತನ್ನು ಕೇಳಿ ಅರ್ಜುನನು ಕರ್ಣನ ಸಮೀಪಕ್ಕೆ ಸರಿದು, "ಕರ್ಣಾ! ಕರ್ಣಾ! ವ್ಯರ್ಥವಾದ ನೋಟವುಳ್ಳ ಓ ಸೂತಪುತ್ರಾ! ನೀನು ಬರೀ ಆತ್ಮಸ್ತುತಿಯಲ್ಲಿಯೇ ಆಶೆಯುಳ್ಳವನು. ಅಧರ್ಮಬುದ್ಧಿಯುಳ್ಳ ನೀನು ಈಗ ನಾನು ಹೇಳುವ ಮಾತನ್ನು ಕೇಳು. ಯುದ್ಧಮಾಡತಕ್ಕ ಶೂರರಿಗೆ ಜಯಾಪಜಯಗಳೆಂಬ ಎರಡರಲ್ಲಿ ಯಾವುದೋ ಒಂದು ಸಿದ್ಧವು. ಅದು ಯಾರಿಗೂ ನಿಶ್ಚಯವಲ್ಲ. ಯುದ್ಧಕ್ಕೆ ನಿಂತಮೇಲೆ ಮಹೇಂದ್ರನಿಗಾದರೂ ಜಯವೆಂ

ಬುದು ನಿಶ್ಚಯವಿಲ್ಲ. ಕರ್ಣಾ? ನೀನಾದರೋ, ಬಾರಿಬಾರಿಗೂ, ಯುದ್ಧ ದಿಂದ ಹೆದರಿ ಪಲಾಯನಮಾಡಿದವನು. ಆದರೂ ನಾಚಿಕೆಯಿಲ್ಲದೆ ನಮ್ಮ ಣ್ಣನನ್ನು ನಿಂದಿಸುತ್ತಿರುವೆ. ನಿಮ್ಮಿಬ್ಬರಿಗಿರುವ ತಾರತಮ್ಯವನ್ನು ಈಗ ನೀನೇ ತಿಳಿದಿರುವೆ. ಆ ಭೀಮನ ಜನ್ಮ ಕರ್ಮ ವಂಶಗಳ ಮೇಲ್ಮೆಯನ್ನೆಲ್ಲಾ ನೀನು ಬಲ್ಲೆ. ಅವನ ನಡತೆಯೂ ಅದಕ್ಕೆ ತಕ್ಕಂತೆಯೇ ಇರುವುದು. ನೀನು ಯುದ್ಧದಲ್ಲಿ ಹೆದರಿ ಓಡಿಹೋಗುತ್ತಿರುವಾಗಲೂ ಅವನು ನಿನ್ನಂತೆ ಪರುಷವಾಕ್ಯವನ್ನಾಡಿದನೇನು? ಇದರಿಂದಲೇ ನೀನು ಅವನ ಮೇಲ್ಮೆಯನ್ನು ತಿಳಿಯಬಹುದು. ಆದರಂತೆಯೇ ನೀನು ಅವನೊಡನೆ ಯುದ್ಧಮಾಡುವಾಗ ಎಷ್ಟೋ ಸಾರಿ ಹೆದರಿ ಓಡಿಹೋಗಿ, ಕೊನೆಗೆ ಯಾದೃಚ್ಛಿಕವಾಗಿ ಅವನನ್ನು ರಥಹೀನನನ್ನಾಗಿ ಮಾಡಿದೆ. ಅಷ್ಟುಮಾತ್ರಕ್ಕೆ ನಿನಗೆ ಗರ್ವವು ತಲೆಗೇರಿದಂತಿದೆ. ಓ ಸೂತಪುತ್ರಾ! ನಿನ್ನ ಹೀನಕುಲಕ್ಕೆ ತಕ್ಕ ಕಾರ್ಯವನ್ನೇ ಮಾಡಿದೆ. ಇಂದ್ರನಿಗಾದರೂ ಯುದ್ಧದಲ್ಲಿ ಜಯವಾಗಲಿ, ಅಪಜಯವಾಗಲಿ, ಒಂದೇ ವಿಧವಾಗಿರುವುದಿಲ್ಲ. ನೀನು ಸಾತ್ಯಕಿಯೊಡನೆ ಯುದ್ಧಮಾಡುವ ಸಂದರ್ಭದಲ್ಲಿ, ಆವನಿಗೆ ಪರಾಜಿತನಾಗಿ, ವಿರಥನಾಗಿ ಹಿಂದುಮುಂದುತೋರದೆ, ಸಾಯುವ ಸ್ಥಿತಿಗೆ ಬಂದೆ. ಆಗಲೇ ಸಾತ್ಯಕಿಯು ನಿನ್ನನ್ನು ಕೊಂದುಬಿಡಬಹುದಾಗಿದ್ದರೂ, ನೀನು ನನ್ನ ಕೈಯಿಂದ ಸಾಯಬೇಕಾದವನೆಂದು ತಿಳಿದು ಜೀವದೊಂದಿಗೆ ಬಿಟ್ಟನು. ಹೀಗಿರುವಾಗ ಯಾವಾಗಲೋ ಒಂದಾವರ್ತಿ ನೀನು ಭೀಮನ ರಥವನ್ನು ಮಹಾಪ್ರಯತ್ನದಿಂದ ಮುರಿದುದಕ್ಕಾಗಿ ಅವನನ್ನು ಕುರಿತು ಪರುಷವಾಕ್ಯಗಳನ್ನಾಡಿದೆ. ಕರ್ಣಾ! ಇದು ದೊಡ್ಡ ಅಧರ್ಮವು. ಅಸಜ್ಜನರ ಕಾರ್ಯವು. ಸತ್ಪುರುಷರು ಶತ್ರುವನ್ನು ಜಯಿಸಿದಮಾತ್ರಕ್ಕೆ ಆತ್ಮಸ್ತುತಿಯನ್ನು ಮಾಡಿಕೊಳ್ಳುವುದಿಲ್ಲ. ಕೆಟ್ಟ ಮಾತುಗಳನ್ನಾಡುವುದಿಲ್ಲ. ಬೇರೊಬ್ಬರನ್ನು ನಿಂದಿಸುವುದಿಲ್ಲ! ಶೂರರ ಲಕ್ಷಣವೇ ಇದು. ನೀನಾದರೋ ಕೇವಲ ಪ್ರಾಕೃತಬುದ್ಧಿಯುಳ್ಳವನಾದುದರಿಂದ, ನಿನ್ನ ಬಾಯಿಗೆ ಬಂದಂತೆ ಅಸಂಬದ್ಧವಾದ ಮತ್ತು ಕಿವಿಯಿಂದ ಕೇಳಬಾರದ ಮಾತುಗಳನ್ನು ಆಡುತ್ತಿರುವೆ. ಚಪಲಬುದ್ಧಿಯಿಂದ ಮುಂದಾಲೋಚನೆಯಿಲ್ಲದೆ ಹರಟುತ್ತಿರುವೆ. ನಿನ್ನಮೇಲೆ ಅಸಾಧಾರಣ ಪರಾಕ್ರಮವನ್ನು ತೋರಿಸಿ ಯುದ್ಧಮಾಡುತ್ತ, ಆರ್ಯವ್ರತದಲ್ಲಿದ್ದ ಭೀಮನನ್ನು ಕುರಿತು,

ನೀನು ಹೇಳಿದ ಯಾವ ಮಾತೂ ನಿಜವಲ್ಲ! ನಾನೂ, ಶ್ರೀಕೃಷ್ಣನೂ, ಎಲ್ಲಾ ಸೈನ್ಯಗಳೂ ನೋಡುತ್ತಿರುವಾಗಲೇ ಭೀಮನು ಎಷ್ಟೋಸಾರಿ ನಿನ್ನ ನ್ನು ಕುರಿತು ಒಂದು ಪರುಷವಾಕ್ಯವನ್ನಾದರೂ ನುಡಿಯಲಿಲ್ಲ. ಕರ್ಣಾ! ನೀನು ನನ್ನ ಅಣ್ಣನನ್ನು ಕುರಿತು ಅಂತಹ ಕಠಿಣವಾಕ್ಯಗಳನ್ನಾಡಿದುದೊಂ ದು! ನನ್ನ ಪರೋಕ್ಷದಲ್ಲಿ ನೀವೆಲ್ಲರೂ ಸೇರಿ ನನ್ನ ಮಗನಾದ ಅಭಿಮನ್ಯು ವನ್ನು ಕೊಂದುದೊಂದು! ಈ ನಿಮ್ಮ ದುಷ್ಕರಿತೆಗಳಿಗೂ, ನಿಮ್ಮ ಗರ್ವಕ್ಕೂ, ತಕ್ಕ ಫಲವನ್ನು ನನ್ನಿಂದ ಶೀಘ್ರದಲ್ಲಿಯೇ ಹೊಂದುವಿರಿ. ಕರ್ಣಾ! ನೀನು ಅಭಿಮನ್ಯುಕುಮಾರನ ಕೈಯಲ್ಲಿದ್ದ ಧನುಸ್ಸನ್ನು ಕತ್ತರಿಸಿದುದು ನಿನ್ನ ನಾಶಕ್ಕಾಗಿಯೇ ಎಂದು ತಿಳಿ. ನಿನ್ನ ಪುತ್ರ ಭೃತ್ಯ ಬಂಧುಗಳೊಡನೆ ನೀನು ನನ್ನ ಕೈಯಿಂದ ಸಾಯತಕ್ಕವನು. ಈಗಲೇ ನಿನ್ನ ಕಾರ್ಯಗಳ ನ್ನೆಲ್ಲಾ ಮಾಡಿ ಮುಗಿಸಿಬಿಡು. ನಿನಗೆ ಪ್ರಾಣಭಯವು ಸಮೀಪಿಸಿರುವುದು. ನಿನ್ನ ಕಣ್ಣೆದಿರಾಗಿಯೇ ನಿನ್ನ ಮಗನಾದ ವೃಷಸೇನನನ್ನು ನಾನು ಕೊಲ್ಲು ವೆನು. ಇನ್ನು ನಿನ್ನ ಬೆಂಬಲಕ್ಕಾಗಿ ಬುದ್ಧಿಗೆಟ್ಟು ನನ್ನನ್ನು ಇದಿರಿಸಿ ಬಂದ ವರನ್ನೆಲ್ಲಾ ನಾನು ಕೊಲ್ಲುವೆನು. ಇದೋ! ಆಯುಧವನ್ನು ಹಿಡಿದು ಶಪ ಥಮಾಡುವೆನು. ಬುದ್ಧಿಹೀನನೂ, ಗರ್ವಿಯೂ, ಆದ ನೀನು ನನ್ನಿಂದ ಹತನಾದುದನ್ನು ನೋಡಿ, ನಿನ್ನ ರಾಜನು ಬಹಳವಾಗಿ ಪಶ್ಚಾತ್ತಾಪಪಡು ವನು" ಎಂದನು. ಅರ್ಜುನನ ಈ ಪ್ರತಿಜ್ಞೆಯನ್ನು ಕೇಳಿ ಸೈನ್ಯದೊಳ ಗೆಲ್ಲಾ ದೊಡ್ಡ ಕೋಲಾಹಲವೆದ್ದಿತು. ಹೀಗೆ ಭಯಂಕರವಾದ ಕ್ಷೋಭವು ನಡೆಯುತ್ತಿದ್ದಾಗಲೇ ಸೂರ್ಯನು ಮಂದಕಿರಣವುಳ್ಳವನಾಗಿ, ಮೆಲ್ಲಮೆಲ್ಲಗೆ ಅಸ್ತಗಿರಿಯನ್ನು ಸೇರುತ್ತಿದ್ದನು. ಆಗ ದುರ್ಯೋಧನನು ಸೈಂಧವವಧಕ್ಕಾಗಿ ಆತುರಗೊಂಡು ಬರುತ್ತಿರುವ ಅರ್ಜುನನನ್ನು ನೋಡಿ ಕರ್ಣನನ್ನು ಕುರಿತು ಹೀಗೆಂದನು. "ಮಿತ್ರ ಕರ್ಣಾ! ಅದೋ! ಸಾತ್ಯಕಿಯೂ, ಭೀಮಸೇ ನನೂ ಅಮಾನುಷವಾದ ಕಾರ್ಯವನ್ನು ನಡೆಸಿಬಿಟ್ಟರು. ಅರ್ಜುನನು ಜಯದ್ರಥವಧಕ್ಕಾಗಿ ಆತುರಗೊಂಡು ಬರುತ್ತಿರುವನು. ಅದು ನಡೆಯ ದಂತೆ ನೀನು ತಕ್ಕ ಪ್ರಯತ್ನವನ್ನು ಈಗಲೇ ಮಾಡಬೇಕು. ನಿನ್ನ ಯು ದ್ಧಕ್ಕೆ ಇದು ಒಳ್ಳೆಯ ಕಾಲವು. ಈಗ ನಿನ್ನ ಬಲವನ್ನು ತೋರಿಸಬೇಕು. ಹಗಲು ಮುಗಿಯುವುದಕ್ಕೆ ಸ್ವಲ್ಪವೇ ಹೊತ್ತುಳಿದಿರುವುದು. ಅಷ್ಟರವರೆಗೆ

ನೀನು ನಮ್ಮ ಶತ್ರುವಾದ ಆ ಅರ್ಜುನನನ್ನು ನಿನ್ನ ಬಾಣಗಳಿಂದ ನಿವಾರಿಸು. ಈ ಹಗಲು ಕಳೆದುಬಿಟ್ಟರೆ, ನಮಗೆ ಜಯವು ಸಿದ್ಧವು. ಈಗಿನ ಸೂರ್ಯಾಸ್ತದವರೆಗೆ ನಾವು ಸೈಂಧವನನ್ನು ಕಾಪಾಡಿಕೊಂಡರೆ, ಅರ್ಜುನನ ಪ್ರತಿಜ್ಞೆಗೆ ಭಂಗವುಂಟಾಗುವುದರಿಂದ, ಅವನು ಅಗ್ನಿಪ್ರವೇಶಮಾಡಿಬಿಡುವನು. ಅರ್ಜುನನು ಸತ್ತಮೇಲೆ, ಅವನ ಸಹೋದರರು ಕ್ಷಣಮಾತ್ರವೂ ಭೂಮಿಯಲ್ಲಿ ಜೀವಿಸಲಾರರು. ಎಲ್ಲರೂ ಆಗ ತಮ್ಮ ತಮ್ಮ ಅನುಜೀವಿಗಳೊಡನೆ ಪ್ರಾಣವನ್ನು ಕಳೆದುಕೊಳ್ಳುವರು. ಹೀಗೆ ಪಾಂಡವರೆಲ್ಲರೂ ಸತ್ತಮೇಲೆ ಪರ್ವತಾರಣ್ಯಗಳೊಡಗೂಡಿದ ಈ ಸಮಸ್ತ ಭೂಮಿಯನ್ನೂ ನಿಷ್ಕಂಟಕವಾಗಿ ನಾವೇ ಅನುಭವಿಸಬಹುದು. ಕರ್ಣಾ! ಮುಖ್ಯವಾಗಿ ಅರ್ಜುನನನ್ನು ದೈವವೇ ಕೆಡಿಸಿದಂತಿದೆ. ಅವನ ವಿನಾಶಕಾಲಕ್ಕೆ ತಕ್ಕಂತೆ ವಿಪರೀತಬುದ್ಧಿಯೂ ಹೆಚ್ಚಿದಂತಿದೆ. ಕಾರ್ಯಾಕಾರ್ಯಗಳನ್ನು ತಿಳಿಯದೆ ಅವನು ಸಾಗದ ಪ್ರತಿಜ್ಞೆಯನ್ನು ಮಾಡಿಬಿಟ್ಟನು. ಅವನು ಮಾಡಿದ ಪ್ರತಿಜ್ಞೆಯು ಆತ್ಮನಾಶಕ್ಕಲ್ಲದೆ ಬೇರೆಯಲ್ಲ. ಜಯದ್ರಥನನ್ನು ಕೊಲ್ಲುವ ವಿಷಯದಲ್ಲಿ ಅವನು ಮಾಡಿದ ಪ್ರತಿಜ್ಞೆಯು ಎಂದಿಗೂ ನೆರವೇರದು. ಕರ್ಣಾ! ನೀನು ಬದುಕಿರುವಾಗ ಈ ಸೂರ್ಯಾಸ್ತಮಯದೊಳಗಾಗಿ ಅರ್ಜುನನು ಸೈಂಧವನನ್ನು ಹೇಗೆತಾನೇ ಕೊಲ್ಲಬಲ್ಲನು? ಇದಲ್ಲದೆ ಅಶ್ವತ್ಥಾಮನೂ, ಶಲ್ಯನು, ಕೃಪನು, ದುಶ್ಶಾಸನನು, ಇವರೆಲ್ಲರ ರಕ್ಷಣೆಯಲ್ಲಿರುವ ಸೈಂಧವನನ್ನು ಆ ಅರ್ಜುನನು ಹೇಗೆತಾನೇ ಕೊಲ್ಲಬಲ್ಲನು? ಕಾಲಪ್ರೇರಿತನಾಗಿ ಬಂದ ಆ ಅರ್ಜುನನು ನಮ್ಮನ್ನೆಲ್ಲಾ ದಾಟಿ, ಸೈಂಧವನ ಬಳಿಗೆ ಹೋಗುವುದು ತಾನೇ ಹೇಗೆ? ನಮ್ಮಕಡೆಯ ಬಹುಮಂದಿ ಶೂರರು ಯುದ್ಧಮಾಡುತ್ತಿರುವರು. ಸೂರ್ಯನು ಆಗಲೇ ಇಳಿಯುತ್ತಾ ಬಂದಿರುವನು. ಅರ್ಜುನನು ಈ ಸಾಯಂಕಾಲದೊಳಗಾಗಿ ಸೈಂಧವನ ಸಮೀಪಕ್ಕೆ ಹೋಗಲಾರನೆಂದು ನನಗೆ ತೋರಿದೆ. ಆದುದರಿಂದ ಕರ್ಣಾ! ಮೇಲೆಹೇಳಿದ ನಮ್ಮೆಲ್ಲರ ಬೆಂಬಲದಿಂದ ನೀನು ಈ ಅಸ್ತಮಾನದವರೆಗೆ ಅರ್ಜುನನೊಡನೆ ಸರ್ವಪ್ರಯತ್ನದಿಂದ ಯುದ್ಧಮಾಡಬೇಕು" ಎಂದನು. ಆಗ ಕರ್ಣನು ನಿನ್ನ ಮಗನನ್ನು ಕುರಿತು ರಾಜಕುಮಾರಾ! ಈಗ ನನ್ನ ಅವಸ್ಥೆಯೇನೆಂಬುದನ್ನು ನೀನು ಕಾಣೆ. ವೀರನೂ, ಮಹಾ ಧನುರ್ಧಾರಿಯೂ, ಧೃಢವಾಗಿ ಗುರಿಹಿಡಿದು ಹೊಡೆಯು

ತಕ್ಕವನೂ ಆದ ಆ ಭೀಮನ ಬಾಣಗಳಿಂದ ನನ್ನ ಮೈಯೆಲ್ಲಾ ಜರ್ಝರಿತ ವಾಗಿದೆ. ಈಗ ನಾನು ಯುದ್ಧದಲ್ಲಿ ನಿಂತಿರಬೇಕೆಂಬುದಕ್ಕಾಗಿ ಎಷ್ಟೋ ಕಷ್ಟದಿಂದ ಇಲ್ಲಿರುವೆನೇ ಹೊರತು, ಬಾಣಬಾಧೆಗಳಿಂದ ನನ್ನ ದೇಹವು ಸ್ವಲ್ಪಮಾತ್ರವೂ ಕೆಲಸಮಾಡುವಹಾಗಿಲ್ಲ. ಆದರೂ, ನಾನು ನನ್ನ ಶಕ್ತಿ ಮೀರಿ ಯುದ್ಧಮಾಡುವೆನು. ಮಿತ್ರಾ! ನಿನಗಾಗಿಯೇ ನನ್ನ ಪ್ರಾಣ ವೆಂದು ತಿಳಿ. ಅರ್ಜುನನು ಸೈಂಧವನನ್ನು ಕೊಲ್ಲದಹಾಗೆ ನನ್ನಿಂದಾದಷ್ಟು ಪ್ರಯತ್ನಮಾಡುವೆನು. ನಾನು ಯುದ್ಧಕ್ಕೆ ನಿಂತು ಬಾಣಗಳನ್ನು ಬಿಡುತ್ತಿ ದ್ದರೆ, ಆ ಅರ್ಜುನನು ಸೈಂಧವನನ್ನು ಎಂದಿಗೂ ಸಮೀಪಿಸಲು ಶಕ್ತನಲ್ಲ. ರಾಜಾ! ಹಿತೈಷಿಯೂ, ಭಕ್ತನೂ ಆದವನು ತನ್ನ ಪ್ರಭುವಿಗಾಗಿ ಹೇಗೆ ಕಾರ್ಯವನ್ನು ನಡೆಸಬೇಕೋ, ಅದರಂತೆ ನಾನು ನಿಷ್ಕಲ್ಮಷಬುದ್ಧಿಯಿಂದ ಪ್ರಯತ್ನಿಸುವೆನು. ಇದರಮೇಲೆ ಜಯವೆಂಬುದು ದೈವಾಯತ್ತವು. ಸೈಂಧ ವನ ರಕ್ಷಣೆಗಾಗಿಯೂ, ನಿನ್ನ ಹಿತಕ್ಕಾಗಿಯೂ, ನಾನು ಮಾಡಬೇಕಾದ ಯತ್ನವನ್ನೆಲ್ಲಾ ಮಾಡುವೆನು. ಅದರಮೇಲೆ ಜಯವು ದೈವಾಧೀನವು. ನಾನು ಈಗ ಇಷ್ಟು ನೊಂದವನಾಗಿದ್ದರೂ, ನನ್ನ ಪೌರುಷವನ್ನು ಹಿಡಿದು ನಿನಗಾಗಿ ಅರ್ಜುನನೊಡನೆ ಯುದ್ಧಮಾಡುವೆನು. ಅದರಮೇಲೆ ಜಯವು ದೈವಾಯತ್ತವಾದುದು! ಓ ಕೌರವೇಂದ್ರಾ! ಈಗ ನನಗೂ, ಅರ್ಜುನ ನಿಗೂ, ನಡೆಯುವ ದಾರುಣಯುದ್ಧವನ್ನು ಉಭಯಸೈನ್ಯಗಳೂ ನೋಡಲಿ" ಎಂದನು. ಧೃತರಾಷ್ಟ್ರಮಹಾರಾಜಾ! ಕರ್ಣದುರ್ಯೋಧನರಿಬ್ಬರಿಗೂ, ಹೀಗೆ ಸಂಭಾಷಣೆ ನಡೆಯುತ್ತಿರುವಾಗಲೇ ಅತ್ತಲಾಗಿ ಅರ್ಜುನನು ನಿನ್ನ ಸೈನ್ಯಗಳನ್ನು ವಧಿಸುತ್ತಿದ್ದನು. ಅನೇಕಶೂರರ ತೋಳು, ತಲೆ, ಆನೆಗಳ ಸೊಂಡಿಲು, ರಥದ ಅಚ್ಚುಗಳು, ಇವನ್ನೆಲ್ಲ ತುಂಡುಮಾಡಿದನು. ಕುದು ರೆಗಳನ್ನೂ, ಅದರಮೇಲಿನ ಸವಾರರನ್ನೂ, ರಕ್ತದಿಗ್ಧರನ್ನಾಗಿಮಾಡಿ, ಅವರು ಹಿಡಿದಿದ್ದ ಪ್ರಾಸ ತೋಮರಾದಿಗಳನ್ನೆಲ್ಲಾ ಎರಡು ಮೂರುತುಂ ಡುಗಳಾಗಿ ಭೇದಿಸಿದನು. ಕಾಲಾಳುಗಳನ್ನು ಕೊಂದನು. ಧ್ವಜಗಳು, ಛತ್ರಚಾಮರಗಳು, ಬಿಲ್ಲುಗಳು ಇವನ್ನೆಲ್ಲಾ ಭೇದಿಸಿದನು. ಎಷ್ಟೋ ತಲೆ ಗಳನ್ನು ಹಾರಿಸಿದನು. ಒಣಗಿದ ಪೊದರಿನಲ್ಲಿ ಹತ್ತಿದ ಬೆಂಕಿಯಂತೆ ಅರ್ಜು ನನ ಬಾಣಜ್ವಾಲೆಯು ನಿನ್ನ ಸೈನ್ಯವನ್ನೆಲ್ಲಾ ದಹಿಸುತ್ತಿದ್ದಿತು. ನೆಲದ

ಮೇಲೆ ರಕ್ತನದಿಗಳು ಹರಿದುವು. ಹೀಗೆ ನಿನ್ನ ಸೈನ್ಯವನ್ನೆಲ್ಲಾ ಬಹಳವು ಟ್ಟಿಗೆ ನಿಶ್ಶೇಷವಾಗಿ ಕೊಂದು ಸೈಂಧವನ ಸಮೀಪಕ್ಕೆ ಸೇರಿದನು. ಭೀಮ ಸಾತ್ಯಕಿಗಳೊಡನೆ ಜಯಶೀಲನಾಗಿ ಬಂದ ಆ ಅರ್ಜುನನು ಆಗ ಉರಿಯುವ ಬೆಂಕಿಯಂತೆ ಜ್ವಲಿಸುತ್ತಿದ್ದನು. ಇದನ್ನು ನೋಡಿ ನಿನ್ನ ಕಡೆಯ ಪ್ರಧಾನ ವೀರರಿಗೆ ಸಹಿಸದಂತಾಯಿತು. ದುರ್ಯೋಧನನು, ಕರ್ಣನು, ವೃಷಸೇನನು, ಶಲ್ಯನು, ಕೃಪಾಶ್ವತ್ಥಾಮರು, ಇವರೆಲ್ಲರ ರಕ್ಷಣೆಗೆ ಪಾತ್ರನಾಗಿದ್ದ ಸೈಂಧವನು, ಇವರೆಲ್ಲರೂ ಒಂದಾಗಸೇರಿ ಶಸ್ತ್ರಸನ್ನಾಹಗಳೊಡನೆ ಅರ್ಜುನನನ್ನು ಮುತ್ತಿಕೊಂಡು ನಾಲ್ಕು ಕಡೆಗಳಿಂದ ಬಾಣವರ್ಷಗಳನ್ನು ಕರೆದರು. ರಥಮಾರ್ಗಗಳಲ್ಲಿ ನರ್ತಿಸುವಂತೆ ಬರುತ್ತಿರುವ ಅರ್ಜುನನನ್ನು ಅವರೆಲ್ಲರೂ ನಿರ್ಭಯವಾಗಿ ಬಂದು ತಡೆದರು. ಸೈಂಧವನನ್ನು ತನ್ನ ಹಿಂದೆ ಬಿಟ್ಟುಕೊಂಡು, ತಾವು ಮುಂದಾಗ ನಿಂತು, ಲೋಕವನ್ನು ನುಂಗುವುದಕ್ಕಾಗಿ ಬಾಯಿತೆರೆದುಕೊಂಡ ಕಾಲಯಮನಂತಿದ್ದ ಆ ಅರ್ಜುನನನ್ನು ಕೊಂದೇ ಬಿಡಬೇಕೆಂಬ ಧೃಢಸಂಕಲ್ಪದಲ್ಲಿದ್ದರು. ಸೂರ್ಯಾಸ್ತಮಯವಾದರೆ, ನಾಕೆಂದು ನಿರೀಕ್ಷಿಸುತ್ತಿದ್ದರು. ಸೂರ್ಯನೂ ಮೆಲ್ಲಮೆಲ್ಲಗೆ ಕೆಂಪುಬಣ್ಣಕ್ಕೆ ತಿರುಗುತ್ತಾ ಬಂದನು. ಎಲ್ಲರೂ ಮಹಾಧನುಸ್ಸುಗಳನ್ನು ಬಗ್ಗಿಸಿ ನಾಣೆಳೆದು, ಅರ್ಜುನನ ಮೇಲೆ ಸೂರ್ಯರಶ್ಮಿಗಳಂತಿರುವ ಬಾಣಗಳನ್ನು ವರ್ಷಿಸುತ್ತಿದ್ದರು. ಅರ್ಜುನನೂ ಅವರ ಬಾಣಗಳನ್ನೆಲ್ಲಾ ತನ್ನಬಾಣಗಳಿಂದ ತುಂಡುತುಂಡಾಗಿ ಸುತ್ತಾ ಅವರನ್ನು ಬಲವಾಗಿ ನೋಯಿಸುತ್ತಿದ್ದನು. ಸಿಂಹದ ಬಾಲದ ಗುರುತಿನ ಧ್ವಜವುಳ್ಳ, ಅಶ್ವತ್ಥಾಮನು ತನ್ನ ಪರಾಕ್ರಮವನ್ನು ತೋರಿಸುತ್ತ ಅರ್ಜುನನನ್ನು ತಡೆದು ಹತ್ತುಬಾಣಗಳಿಂದ ಅವನನ್ನೂ, ಏಳುಬಾಣಗಳಿಂದ ಕೃಷ್ಣನನ್ನೂ ಹೊಡೆದನು. ಇತರ ಮಹಾರಥರೂ ಅರ್ಜುನನಮೇಲೆ ಬಾಣಗಳನ್ನು ಬಿಡುತ್ತಾ ಸೈಂಧವನನ್ನು ಎಚ್ಚರದಿಂದ ರಕ್ಷಿಸುತ್ತಿದ್ದರು. ದುರ್ಯೋಧನನ ಆಜ್ಞೆಯಿಂದ ಇಷ್ಟುಮಂದಿಯೂ ಸೇರಿ ತಡೆಯುತ್ತಿರುವಾಗಲೂ, ಅರ್ಜುನನು ಲಕ್ಷ್ಯವಿಲ್ಲದೆ ಅವರನ್ನಿದಿರಿಸುತ್ತಿದ್ದನು. ಅರ್ಜುನನ ಬಾಹುಬಲವೂ, ಅವನ ಬಾಣಗಳು ಅಕ್ಷಯವೆಂಬುದೂ, ಅವನ ಗಾಂಡೀವಧನುಸ್ಸಿನ ಪ್ರಭಾವವೂ, ಎಲ್ಲರಿಗೂ ಆಗ ಚೆನ್ನಾಗಿ ತಿಳಿಯಿತು. ಅವನು ಕೃಪಾಶ್ವತ್ಥಾಮರ ಅಸ್ತ್ರಗಳನ್ನೆಲ್ಲಾ ಪ್ರತ್ಯಸ್ತ್ರಗಳಿಂದ ತಡೆದು, ತನಗಿದಿರಾದ ಒಬ್ಬೊಬ್ಬ

ರನ್ನೂ, ಹತ್ತುಹತ್ತು ಬಾಣಗಳಿಂದ ಹೊಡೆದನು. ಇತ್ತಲಾಗಿ ನಿನ್ನವರಲ್ಲಿ ಕೂಡ, ಅಶ್ವತ್ಥಾಮನು ಇಪ್ಪತ್ತೈದು, ವೃಷಸೇನನು ಏಳು, ದುರ್ಯೋಧನನು ಇಪ್ಪತ್ತು, ಕರ್ಣಶಲ್ಯರಲ್ಲಿ ಒಬ್ಬೊಬ್ಬರು ಮೂರು ಮೂರು, ಹೀಗೆ ಏಕಕಾಲದಲ್ಲಿ ಅರ್ಜುನನ ಮೇಲೆ ಬಾಣಗಳನ್ನು ಬಿಟ್ಟು ತಡೆಯುತ್ತಿದ್ದರು. ಇವರೆಲ್ಲರೂ ಸೂರ್ಯಾಸ್ತಮಯವನ್ನೇ ನಿರೀಕ್ಷಿಸುತ್ತಾ, ಆತುರದಿಂದ ಮೇಲೆ ಮೇಲೆ ಬಾಣಗಳನ್ನು ಬಿಡುವರು! ಆಗಾಗ ಗರ್ಜಿಸುವರು! ನಾಣನ್ನು ತಟ್ಟುವರು! ಮೇಘಗಳು ಮಳೆಯನ್ನು ಕರೆದಂತೆ ಶಸ್ತ್ರವರ್ಷವನ್ನು ಕರೆಯುವರು! ದಿವ್ಯಾಸ್ತ್ರಚಾತುರ್ಯಗಳನ್ನೆಲ್ಲಾ ತೋರಿಸುತ್ತ ಧನಂಜಯನ ಅಂಗಾಂಗಗಳಲ್ಲಿಯೂ ಬಾಣಗಳು ನಾಟುವಂತೆ ಮಾಡಿದರು. ಆದರೇನು? ಅವರ ಶಸ್ತ್ರಾಸ್ತ್ರಗಳನ್ನೆಲ್ಲ ಅರ್ಜುನನು ತನ್ನ ಬಾಣಗಳಿಂದ ನಿವಾರಿಸುತ್ತಾ, ಅನೇಕರನ್ನು ಕೆಡಹಿ, ಸೈಂಧವನ ಕಡೆಗೆ ಹೋಗುತ್ತಿದ್ದನು. ಆಗ ಕರ್ಣನು ಮುಂದೆ ಬಂದು, ಭೀಮಸಾತ್ಯಕಿಗಳೊಡಗೂಡಿದ ಅರ್ಜುನನನ್ನು ಬಾಣಗಳಿಂದ ತಡೆದನು. ಅರ್ಜುನನು ಹತ್ತು ಪ್ರತಿಬಾಣಗಳಿಂದ ಕರ್ಣನನ್ನು ಪ್ರಹರಿಸಿದನು. ಭೀಮಸಾತ್ಯಕಿಗಳು ಮೂರುಮೂರು ಬಾಣಗಳಿಂದ ಕರ್ಣನನ್ನು ಹೊಡೆದರು. ತಿರುಗಿ ಅರ್ಜುನನು ಏಳುಬಾಣಗಳನ್ನು ಕರ್ಣನಮೇಲೆ ಬಿಟ್ಟನು. ಅವುಗಳಲ್ಲಿ ಒಂದೊಂದನ್ನೂ ಕರ್ಣನು ಅರುವತ್ತರುವತ್ತು ಬಾಣಗಳಿಂದ ಕತ್ತರಿಸಿದನು. ಕರ್ಣನೊಬ್ಬನೇ ಆ ಮೂವರನ್ನೂ ಇದಿರಿಸಿ ಮಾಡಿದ ಯುದ್ಧವು ನೋಡುವವರಿಗೆ ಆಶ್ಚರ್ಯಕರವಾಯಿತು. ಆಮೇಲೆ ಅರ್ಜುನನು ಕರ್ಣನ ದೇಹಮರ್ಮಗಳಿಗೆಲ್ಲಾ ನಾಟುವಂತೆ ನೂರುಬಾಣಗಳನ್ನು ಹೊಡೆದನು. ಕರ್ಣನ ಸರ್ವಾಂಗಗಳಲ್ಲಿಯೂ ರಕ್ತವು ಕಿತ್ತುಕೊಂಡಿತು. ಆ ಸ್ಥಿತಿಯಲ್ಲಿಯೂ ಕರ್ಣನು ಹಿಂಜರಿಯದೆ, ಐವತ್ತುಬಾಣಗಳಿಂದ ಅರ್ಜುನನನ್ನು ಹೊಡೆದನು. ಕರ್ಣನ ಈ ಹಸ್ತಲಾಘವವನ್ನು ಸಹಿಸಲಾರದೆ ಅರ್ಜುನನು ಒಂಭತ್ತು ಬಾಣಗಳಿಂದ ಕರ್ಣನ ಧನುಸ್ಸನ್ನು ಕತ್ತರಿಸಿ, ಅವನ ಎದೆಗೆ ಗುರಿಯಿಟ್ಟು ಬಾಣಗಳನ್ನು ಹೊಡೆದನು. ಒಡನೆಯೇ ಕರ್ಣನು ಬೇರೆ ಬಿಲ್ಲನ್ನೆತ್ತಿಕೊಂಡು, ಎಡೆಬಿಡದೆ ಎಂಟುಸಾವಿರ ಬಾಣಗಳನ್ನು ಪ್ರಯೋಗಿಸಿ, ಅರ್ಜುನನನ್ನು ಬಾಣಗಳಿಂದ ಮರೆಸಿಬಿಟ್ಟನು. ಆದರೇನು? ಗಾಳಿಯು ಮಿಡಿತೆಗಳನ್ನು ಹೇಗೋ ಹಾಗೆ ಅರ್ಜುನನು ತನ್ನ ಬಾಣಗಳಿಂದ

ಕರ್ಣನ ಬಾಣವರ್ಷಗಳನ್ನೆಲ್ಲಾ ತೂರಿ, ಕರ್ಣನ ರಥವನ್ನು ತನ್ನ ಬಾ
ಳಿಂದ ಮರೆಸಿದನು. ಆಗಲೇ ಕರ್ಣನನ್ನು ವಧಿಸುವ ಉದ್ದೇಶದಿಂದ
ವರ್ಚಸ್ಸುಳ್ಳ ಒಂದು ಬಾಣವನ್ನು ಬಿಟ್ಟನು. ಅಶ್ವತ್ಥಾಮನು ಒಂದು
ಚಂದ್ರಬಾಣದಿಂದ ಅದನ್ನು ನಡುದಾರಿಯಲ್ಲಿಯೇ ಕತ್ತರಿಸಿ ಕೆಡಹಿ
ತಿರುಗಿ ಕರ್ಣನು ಅರ್ಜುನನನ್ನು ಅನೇಕಸಹಸ್ರಬಾಣಗಳಿಂದ ವ
ದನು. ಕರ್ಣಾರ್ಜುನರಿಬ್ಬರೂ ಗೂಳಿಗಳಂತೆ ಕೋಪದಿಂದ
ಸುತ್ತ, ಒಬ್ಬರನ್ನೊಬ್ಬರು ಬಾಣಗಳಿಂದ ಮರೆಸಿದರು. ಬಾಣಸ
ಹದಲ್ಲಿ ಅದೃಶ್ಯರಾಗಿದ್ದಂತೆಯೇ ಅವರು ಒಬ್ಬರನ್ನೊಬ್ಬರು "ಕರ್ಣ
ನಿಲ್ಲು! ಪಾರ್ಥನಾದ ನಾನು ಇಲ್ಲಿರುವೆನು" ಎಂದು ಅರ್ಜುನ
"ಅರ್ಜುನಾ! ನಿಲ್ಲು! ಇದೋ! ನಾನು ಕರ್ಣನು" ಎಂದು ಕರ್ಣ
ಮೂದಲಿಸುತ್ತಾ, ವಿಚಿತ್ರವಾಗಿಯೂ, ಲಘುವಾಗಿಯೂ, ನಿರಾ
ವಾಗಿಯೂ, ಒಬ್ಬರನ್ನೊಬ್ಬರು ಹೊಡೆಯುತ್ತಿದ್ದರು. ಅವರ ಯುದ್ಧ
ರ್ಯವು ನೋಡುವವರೆಲ್ಲರಿಗೂ ಆಸೆಯನ್ನು ಹುಟ್ಟಿಸುವಂತಿದ್ದಿತು.
ಚಾರಣರೆಲ್ಲರೂ ಅವರಿಬ್ಬರನ್ನೂ ಸ್ತೋತ್ರಮಾಡುತ್ತಿದ್ದರು. ಆಗ ದು
ಧನನು ತನ್ನ ಸೈನ್ಯಗಳನ್ನು ಕುರಿತು "ಎಲೈ ಯೋಧರೇ! ಕರ್ಣ
ಮಾತ್ರ ಎಚ್ಚರದಿಂದ ರಕ್ಷಿಸಿಕೊಳ್ಳಿರಿ! ಅರ್ಜುನನನ್ನು ಈ ಯು
ಕೊಲ್ಲದೆ, ಅಥವಾ ಜಯಿಸದೆ, ಕರ್ಣನು ಹಿಂತಿರುಗುವವನಲ್ಲ. ಅ
ನೀವು ಬೆಂಬಲವಾಗಿದ್ದು ರಕ್ಷಿಸಿರಿ" ಎಂದನು. ಇದೇ ಸಮಯದಲ್ಲಿ
ನನು ನಾಲ್ಕುಬಾಣಗಳಿಂದ ಕರ್ಣನ ನಾಲ್ಕು ರಥಾಶ್ವಗಳನ್ನು ಕೊ
ಒಂದು ಭಲ್ಲದಿಂದ ಅವನ ಸಾರಥಿಯನ್ನು ರಥದಿಂದ ಕೆಳಕ್ಕೆ ಕೆಡಹಿ
ಕರ್ಣನನ್ನು ಬಾಣಗಳಿಂದ ಮುಚ್ಚಿದನು. ಆ ಬಾಣಗಳ ಬಲೆಯಲ್ಲಿ
ಬಿದ್ದ ಕರ್ಣನಿಗೆ ಹಿಂದುಮುಂದು ತೋರದಂತಾಯಿತು. ಕರ್ಣನ ಅ
ಯನ್ನು ನೋಡಿ ಅಶ್ವತ್ಥಾಮನು ಥಟ್ಟನೆ ಬಂದು ಕರ್ಣನನ್ನು ತನ್ನ ರ
ರಿಸಿಕೊಂಡು ತಿರುಗಿ ಅರ್ಜುನನೊಡನೆ ಯುದ್ಧಕ್ಕೆ ಸಿದ್ಧನಾದನು. ಶ
ಅದೇ ಸಮಯದಲ್ಲಿ ಮೂವತ್ತುಬಾಣಗಳನ್ನು ಅರ್ಜುನನ ಮೇಲೆ ಬಿ
ಕೃಪನೂ ಒಂದು ಬಾಣದಿಂದ ಅರ್ಜುನನ ಮಾರ್ಗವನ್ನು ತಡೆದು, ಇ
ಬಾಣಗಳಿಂದ ಕೃಷ್ಣನನ್ನೂ, ಹನ್ನೆರಡು ಬಾಣಗಳಿಂದ ಅರ್ಜುನನನ್ನೂ

ವಾಗಿ ಹೊಡೆದನು. ಇವರೆಲ್ಲರ ಹಿಂದೆ ಅವಿತುಕೊಂಡಿದ್ದ ಜಯದ್ರಥನೂ ಅರ್ಜುನನ ಮೇಲೆ ನಾಲ್ಕುಬಾಣಗಳನ್ನು ಹೊಡೆದನು. ವೃಷಸೇನನು ಏಳುಬಾಣಗಳನ್ನು ಹೊಡೆದನು. ಆದರೇನು? ಅರ್ಜುನನು ತನ್ನ ಹಸ್ತಲಾಘವದಿಂದ ಅಶ್ವತ್ಥಾಮ, ಶಲ್ಯ, ಸೈಂಧವ, ವೃಷಸೇನ, ಕೃಪಾಚಾರ್ಯರೆಂಬ ಇಷ್ಟುಮಂದಿಯನ್ನೂ ಕ್ರಮವಾಗಿ ಅರುವತ್ತುನಾಲ್ಕು, ನೂರು, ಹತ್ತು, ಮೂರು, ಇಪ್ಪತ್ತು, ಹೀಗೆ ಬೇರೆಬೇರೆ ಸಂಖ್ಯೆಯ ಬಾಣಗಳಿಂದ ಹೊಡೆದು ಸಿಂಹನಾದಮಾಡಿದನು. ನಿನ್ನವರೆಲ್ಲರೂ ಅರ್ಜುನನ ಪ್ರತಿಜ್ಞೆಗೆ ಹೇಗಾದರೂ ಭಂಗವನ್ನುಂಟುಮಾಡಬೇಕೆಂಬ ದೃಢಸಂಕಲ್ಪದಿಂದ ಒಂದಾಗಿ ಸೇರಿ, ಜೀವದಾಸೆಯನ್ನು ಬಿಟ್ಟು, ಅರ್ಜುನನನ್ನು ಎಡೆಬಿಡದೆ ಹೊಡೆಯುತ್ತಿದ್ದರು. ಆಮೇಲೆ ಅರ್ಜುನನು ನಿನ್ನ ಮಕ್ಕಳನ್ನೆಲ್ಲಾ ಭಯಗೊಳಿಸುವಂತೆ ವಾರುಣಾಸ್ತ್ರವನ್ನು ಬಿಟ್ಟನು. ನಿನ್ನವರು ಅನೇಕರಥಗಳೊಡನೆ ಅರ್ಜುನನನ್ನಿದಿರಿಸಿ ಬಾಣವರ್ಷವನ್ನು ಸುರಿಸುತ್ತಿದ್ದರು. ಭಯಂಕರಯುದ್ಧವು ನಡೆಯಿತು. ನಿನ್ನವರು ಬಹುಮಂದಿ ಗುಂಪುಗೂಡಿ, ಸುತ್ತಲೂ ಬಾಣಗಳಿಂದ ಮುಚ್ಚಿದರೂ, ಅರ್ಜುನನು ಧೈರ್ಯಗೆಡಲಿಲ್ಲ. ಆಗ ಅರ್ಜುನನು ಹಿಂದಿನ ಹನ್ನೆರಡುವರ್ಷಗಳಿಂದ ಕೌರವರು ತಮಗೆ ಕೊಟ್ಟ ಕಷ್ಟಗಳನ್ನು ನೆನೆಸಿಕೊಂಡು, ಮೇಲೆಮೇಲೆ ಕೋಪಾವಿಷ್ಟನಾಗಿ, ಆ ಕೌರವರನ್ನೆಲ್ಲಾ ಆಗಲೇ ತೀರಿಸಿಬಿಡಬೇಕೆಂದು ಗಾಂಡೀವದಿಂದ ಪರಂಪರೆಯಾಗಿ ಬಾಣಗಳನ್ನು ಹೊರಡಿಸಿದನು. ದಿಕ್ಕುಗಳೆಲ್ಲಾ ಅವನ ಬಾಣಗಳಿಂದ ಮರೆಯಾಯಿತು. ಅಂತರಿಕ್ಷವೆಲ್ಲಾ ಉರಿಯುವ ಕೊಳ್ಳಿಗಳಿಂದ ಆವರಿಸಿದಂತೆ ಬಾಣಜ್ವಾಲೆಗಳಿಂದ ಆವೃತವಾಯಿತು. ಮೃತಶರೀರಗಳ ಮೇಲೆ ಹದ್ದು, ಕಾಗೆ, ಮೊದಲಾದ ಪಕ್ಷಿಗಳು ಎರಗುತ್ತಿದ್ದುವು. ಹೊಂಬಣ್ಣದ ನಾಣಿನಿಂದ ಕೂಡಿದ ಧನುಸ್ಸನ್ನು ಬಾಗಿಸಿ, ವಿಚ್ಛಿತ್ತಿಯಿಲ್ಲದೆ ಬಾಣಗಳನ್ನೆಸೆಯುತ್ತಾ, ಆನೆ ಕುದುರೆಗಳಿಂದ ತುಂಬಿದ ಕುರುಸೈನ್ಯಗಳನ್ನು ಸಾವಿರಾರು ಸಂಖ್ಯೆಯಿಂದ ಕೆಡಹುತ್ತಾ ಬಂದನು. ನಿನ್ನವರೂಕೂಡ ದೊಡ್ಡ ಗದೆಗಳು, ಉಕ್ಕಿನ ಪರಿಘಗಳು, ಕತ್ತಿ, ಶಕ್ತಿ, ಪ್ರಬಲಶಸ್ತ್ರಗಳು, ಇವನ್ನೆಲ್ಲಾ ಎತ್ತಿಕೊಂಡು ಅರ್ಜುನನನ್ನು ನಾನಾಕಡೆಗಳಿಂದ ಇದಿರಿಸಿ ತಡೆಯುತ್ತಿದ್ದರು. ಅರ್ಜುನನು ಪ್ರಳಯಮೇಘಧ್ವನಿಯಂತೆ ಘೋಷವುಳ್ಳುದೂ, ಇಂದ್ರಚಾಪಕ್ಕೆ ಸಮಾನವೂ,

ಆದ ತನ್ನ ಗಾಂಡೀವವನ್ನು ಎಳೆದೆಳೆದು, ನಗುಮುಖದಿಂದಲೇ ಬಾಣಗಳನ್ನು ಬಿಡುತ್ತ, ನಿನ್ನವರನ್ನೆಲ್ಲಾ ಬಾಣದುರಿಗೆ ಆಹುತಿಮಾಡಿ ಯಮರಾಷ್ಟ್ರವನ್ನು ಹೆಚ್ಚಿಸುತ್ತಿದ್ದನು. ಅರ್ಜುನನು ನಿನ್ನಕಡೆಯ ರಥ, ಗಜ, ತುರಗ, ಪದಾತಿಗಳಲ್ಲಿ ಹಲವನ್ನು ಕೊಂದು, ನಿನ್ನವರ ಆಯುಧಗಳನ್ನೆಲ್ಲಾ ಮುರಿದು, ನಿರಂಕುಶವಾಗಿ ಸಂಚರಿಸುತ್ತಿದ್ದನು.

ಇದು ನೂರ ನಾಲ್ವತ್ತಾರನೆಯ ಅಧ್ಯಾಯವು.



ಸಂಜೆಗೆ ಸ್ವಲ್ಪಹೊತ್ತಿರುವಾಗ ಸೈಂಧವನು ಕಣ್ಮರೆಯಾದುದನ್ನು ನೋಡಿ, ಕೃಷ್ಣನು ತಂತ್ರದಿಂದ ಸೂರ್ಯಬಿಂಬವನ್ನು ಮರೆಸಿ ಕತ್ತಲೆಕವಿಯುವಂತೆ ಮಾಡಿದುದು. ರಾತ್ರಿಯಾಯಿತೆಂಬ ಸಂತೋಷದಿಂದ ಜಯದ್ರಥನು ನಿರ್ಭಯನಾಗಿ ಮುಂದೆ ಬಂದಾಗ, ಅರ್ಜುನನು ಅವನ ತಲೆಯನ್ನು ಕಡಿದುದು. ಆ ತಲೆಯನ್ನು ನೆಲಕ್ಕೆ ಕೆಡಹಬಾರದೆಂದು ಕೃಷ್ಣನು ಎಚ್ಚರಿಸಿದುದು

ಧೃತರಾಷ್ಟ್ರಮಹಾರಾಜಾ! ಕಾಲಾಂತಕನ ಕೂಗಿನಂತೆಯೂ, ಸಿಡಿಲಿನ ಧ್ವನಿಯಂತೆಯೂ ಭಯಂಕರವಾದ ಅರ್ಜುನನ ಗಾಂಡೀವಧ್ವನಿಯನ್ನು ಕೇಳಿ ನಿನ್ನ ಸೈನ್ಯವೆಲ್ಲ ಭಯಾಕುಲವಾಯಿತು. ಪ್ರಳಯಕಾಲದ ಗಾಳಿಯಿಂದ ಕ್ಷುಭಿತವಾದ ಮಹಾಸಮುದ್ರದಲ್ಲಿ, ಮೀನು ಮೊದಲಾದ ಜಲಚರಪ್ರಾಣಿಗಳೆಲ್ಲ ಮೇಲೆ ತಲೆಯೆತ್ತದೆ, ಭಯದಿಂದ ಒಳಗೇ ಅಡಗಿರುವಂತೆ, ನಿನ್ನ ಸೈನ್ಯವೆಲ್ಲಾ ಅಲ್ಲಲ್ಲಿ ಮರೆಯಾಗಿ ಅಡಗಿಕೊಂಡಿತು. ಆಗಿನ ಅರ್ಜುನನ ತೇಜಸ್ಸು ಮಧ್ಯಾಹ್ನಸೂರ್ಯನ ತೀವ್ರಕಾಂತಿಯಂತೆ ನಮ್ಮವರಿಗೆ ಕಣ್ಣಿಂದ ನೋಡಲಸಾಧ್ಯವಾಯಿತು. ಅರ್ಜುನನು ತನ್ನ ಅಸ್ತ್ರಪ್ರಯೋಗಚಾತುರ್ಯವನ್ನು ತೋರಿಸುತ್ತ, ಎಲ್ಲಾ ಕಡೆಯೂ ನಿರಂಕುಶವಾಗಿ ಸಂಚರಿಸುತ್ತಿದ್ದನು. ಅವನು ಬಾಣಗಳನ್ನು ತೆಗೆಯುವುದು, ಬಿಲ್ಲಿನಲ್ಲಿ ಸೇರಿಸುವುದು, ಎಳೆಯುವುದು, ಬಿಡುವುದು, ಇದೊಂದೂ ಜನರಿಗೆ ತಿಳಿಯದಷ್ಟು ಹಸ್ತಲಾಘವವನ್ನು ತೋರಿಸುತ್ತಿದ್ದು, ಆಮೇಲೆ ಐಂದ್ರಾಸ್ತ್ರವನ್ನು ಪ್ರಯೋ

ಗಿಸಿದನು. ಆ ಮಂತ್ರಶಕ್ತಿಯಿಂದ ಬೆಂಕಿಯನ್ನು ಕಕ್ಕುವ ಬಾಣಗಳು ನೂರು ಸಾವಿರ ಸಂಖ್ಯೆಯಿಂದ ಪರಂಪರೆಯಾಗಿ ಹೊರಡುತ್ತಿದ್ದುವು. ಅವುಗಳಿಂದ ಆಕಾಶವೆಲ್ಲಾ ಉಲ್ಕಾಮಯವಾದಂತೆ ಕಾಣಿಸಿತು. ನಿನ್ನ ಕಡೆಯವರಿಂದ ಉಂಟುಮಾಡಲ್ಪಟ್ಟಿದ್ದ ಶಸ್ತ್ರಾಂಧಕಾರವೂ ಅರ್ಜುನನ ದಿವ್ಯಾಸ್ತ್ರದಿಂದ ನಿಗ್ರಹಿಸಲ್ಪಟ್ಟಿತು. ಉದಿಸುವ ಸೂರ್ಯನಿಂದ ಕತ್ತಲೆಯು ಹೇಗೋ ಹಾಗೆ ಅರ್ಜುನನ ಆ ಅಸ್ತ್ರಪ್ರಭಾವದಿಂದ ಅಂಧಕಾರವು ಅಡಗಿ, ಬೆಳಕಾಯಿತು. ಬೇಸಗೆಯ ಸೂರ್ಯನು ಸಣ್ಣ ಕುಂಟೆಗಳ ನೀರನ್ನು ಶೋಷಿಸುವಂತೆ, ಅರ್ಜುನನ ಬಾಣಜ್ವಾಲೆಯು ನಿನ್ನ ಸೈನ್ಯಗಳನ್ನೆಲ್ಲ ಶೋಷಿಸುತ್ತ ಬಂದಿತು. ನಿನ್ನ ಸೈನ್ಯವೆಲ್ಲ ಆ ಬಾಣದುರಿಯಲ್ಲಿ ಸಿಕ್ಕಿ ತಪಿಸುತ್ತಿದ್ದಿತು. ಅರ್ಜುನನ ಅನೇಕ ಬಾಣಗಳು ನಿನ್ನ ಕಡೆಯ ಶೂರರ ಹೃದಯದಲ್ಲಿ ನಾಟಿದುವು. ಅರ್ಜುನನನ್ನು ಇದಿರಿಸಿಹೋದ ಕೌರವಯೋಧರೆಲ್ಲಾ ಬೆಂಕಿಗಿದಿರಾದ ಶಲಭಗಳಂತೆ ದಗ್ಧರಾದರು. ಹೀಗೆ ಅರ್ಜುನನು ನಿನ್ನವರ ಪ್ರಾಣಗಳನ್ನೂ, ಕೀರ್ತಿಯನ್ನೂ ಕಂದಿಸಿ, ಸಾಕ್ಷಾನ್ಮೃತ್ಯುದೇವತೆಯಂತೆ ಯುದ್ಧದಲ್ಲಿ ಚರಿಸುತ್ತಿದ್ದನು. ಕಿರೀಟಕುಂಡಲಗಳೊಡನೆ ನಿನ್ನವರ ತಲೆಗಳನ್ನೂ, ಕೇಯೂರಾಂಗದಗಳೊಡನೆ ತೋಳುಗಳನ್ನೂ ತನ್ನ ಬಾಣಗಳಿಂದ ಕತ್ತರಿಸಿ ಕೆಡಹುತ್ತಿದ್ದನು. ಗಜಯೋಧರ ತೋಮರಗಳು, ಅಶ್ವಯೋಧರ ಪ್ರಾಸಗಳು, ಕಾಲಾಳುಗಳ ಕತ್ತಿಗುರಾಣಿಗಳು, ರಥಿಕರ ಧನುಸ್ಸುಗಳು, ಕೈಯಲ್ಲಿ ಹಿಡಿದ ಚಾಟಿಗಳೊಡನೆ ಸಾರಥಿಗಳ ತೋಳುಗಳು, ಇವನ್ನೆಲ್ಲ ಛಿನ್ನಭಿನ್ನವಾಗಿ ಭೇದಿಸಿದನು. ಅಲ್ಲಿ ಧನಂಜಯನು, ಬಾಣಗಳೆಂಬ ಮಹಾಜ್ವಾಲೆಗಳಿಂದ ಕೂಡಿದ ಪ್ರಳಯಾಗ್ನಿಯಂತೆ ತೋರಿದನು. ಅರ್ಜುನನೊಬ್ಬನೇ ರಣಾಂಗಣದೊಳಗೆ ಎಲ್ಲೆಲ್ಲಿಯೂ ಕಾಣುತ್ತಿದ್ದನು. ರಥಮಾರ್ಗಗಳಲ್ಲಿ ನರ್ತಿಸುವಂತೆ ಸಂಚರಿಸುತ್ತ, ಆಗಾಗ ಧನುಷ್ಟಂಕಾರದೊಡನೆ ಶಸ್ತ್ರಾಸ್ತ್ರಗಳನ್ನೆರಚುತ್ತ ಬರುವ ಆ ಅರ್ಜುನನನ್ನು, ಮಧ್ಯಾಹ್ನಸೂರ್ಯನನ್ನು ಹೇಗೋ ಹಾಗೆ ನಿನ್ನವರಿಗೆ ನೋಡುವುದಕ್ಕೂ ಅಸಾಧ್ಯವಾಯಿತು. ವರ್ಷಾಕಾಲದಲ್ಲಿ ಇಂದ್ರಧನುಸ್ಸಿನಿಂದ ಕೂಡಿದ ಜಲಪೂರ್ಣವಾದ ಮೇಘದಂತೆ ಅರ್ಜುನನು ಧನುರ್ಧಾರಿಯಾಗಿ ರಣರಂಗದಲ್ಲಿ ಕಾಣಿಸುತ್ತಿದ್ದನು. ಆ ಅರ್ಜುನನ ಅಸ್ತ್ರಪರಂಪರೆಗಳೆಂಬ ಸಮುದ್ರಪ್ರವಾಹದಲ್ಲಿ

ನಮ್ಮವರೆಲ್ಲರೂ ಮುಳುಗಿದಂತಾದರು. ತಲೆಯಿಲ್ಲದ ಮುಂಡಗಳು, ತೋಳಿಲ್ಲದ ಶರೀರಗಳು, ಕೈಯಿಲ್ಲದ ತೋಳುಗಳು, ಬೆರಳಿಲ್ಲದ ಕೈಗಳು, ಇವೆಲ್ಲಾ ರಣಾಂಗಣದಲ್ಲಿ ಎರಚಾಡಿದ್ದುವು. ಸುಂಡಿಲು ಕತ್ತರಿಸಿದ ದಂತಗಳು, ಮುರಿದುಬಿದ್ದ ಆನೆಗಳು, ಕತ್ತುಮುರಿದ ಕುದುರೆಗಳು, ಚೂರ್ಣೀಕೃತವಾದ ರಥಗಳು, ಮೈ ನರಗಳೆಲ್ಲ ಕಿತ್ತು, ಕೀಲು ಮುರಿದು ಕಾಲು ಕತ್ತರಿಸಿ ಬಿದ್ದ ಮನುಷ್ಯದೇಹಗಳು, ಇವೆಲ್ಲ ಅಲ್ಲಿ ನೂರುಸಾವಿರ ಸಂಖ್ಯೆಯಿಂದ ಬಿದ್ದಿದ್ದುವು. ಮಹಾರಾಜಾ! ಆಗಿನ ಅರ್ಜುನನ ಯುದ್ಧವು ಮೃತ್ಯುದೇವತೆಯ ಸಂಹಾರ ಕ್ರೀಡೆಯಂತೆ ಭೀರುಗಳಿಗೆ ಮಹಾಭಯವನ್ನು ಹೆಚ್ಚಿಸುವಂತಿದ್ದಿತು. ಆಗಿನ ರಣಾಂಗಣವು ಪೂರ್ವದಲ್ಲಿ ಪ್ರಾಣಿಸಂಹಾರಕಾಲದಲ್ಲಿ ರುದ್ರನ ಕ್ರೀಡಾಸ್ಥಾನದಂತೆ ಕಾಣಿಸಿತು. ಕತ್ತರಿಸಿಬಿದ್ದ ಆನೆಯ ಸುಂಡಿಲುಗಳಿಂದ ಭೂಮಿಯೆಲ್ಲ ಹೆಬ್ಬಾವುಗಳಿಂದ ಕೂಡಿದಂತೆಯೂ, ಇನ್ನುಕೆಲವುಕಡೆ ವೀರರ ಕಮಲದಂತಿರುವ ಮುಖಗಳಿಂದ ಕಮಲಮಾಲಿಕೆಯನ್ನು ಧರಿಸಿದಂತೆಯೂ ಕಾಣಿಸುತ್ತಿದ್ದಿತು. ಅಲ್ಲಲ್ಲಿ ವಿಚಿತ್ರವರ್ಣದ ತಲೆಪಾಗುಗಳು, ಕಿರೀಟಗಳು, ಕೈಬಳೆಗಳು, ಕುಂಡಲಗಳು, ಚಿನ್ನದ ಕುಸುರಿಗಳಿಂದ ಚಿತ್ರಿತವಾದ ಕವಚಗಳು, ಆನೆಕುದುರೆಗಳ ಆಭರಣಗಳು, ಇವೆಲ್ಲಾ ಎರಚಾಡಿ ಬಿದ್ದಿದ್ದಾಗ, ಆ ರಣಭೂಮಿಯು ಆಭರಣಾಲಂಕೃತೆಯಾದ ನವಯುವತಿಯಂತೆ ಕಾಣುತ್ತಿದ್ದಿತು. ಮತ್ತು ಆಗಿನ ರಣಭೂಮಿಯು ರಕ್ತಪ್ರವಾಹಗಳಿಂದ ಭಯಂಕರವಾದ ವೈತರಣೀನದಿಯೊಡಗೂಡಿದಂತೆ ಕಾಣಿಸಿತು. ಮಜ್ಜೆ, ಮೇದಸ್ಸು, ಇವುಗಳೇ ಕೆಸರು, ರಕ್ತವೇ ಜಲಪ್ರವಾಹವು, ಕೂದಲೇ ಪಾಚಿಗಳು ಮತ್ತು ತೀರದ ಗರಿಕೆಗಳು, ಅಸ್ಥಿಗಳೇ ನೊರೆಗಳು, ತೋಳು ತಲೆ ಮುಂತಾದ ಅವಯವಗಳೇ ಕಲ್ಲುಬಂಡೆಗಳು, ಛತ್ರಧ್ವಜ ಪತಾಕೆಗಳೊಡನೆ ಗತಪ್ರಾಣವಾಗಿ ಕೆಳಗೆ ಬಿದ್ದ ಆನೆಯ ದೇಹಗಳೂ, ರಥಗಳೂ ಅಲ್ಲಿನ ನೂರಾರು ಹಡಗುಗಳು, ಕುದುರೆಗಳೇ ಅದರ ಸೋಪಾನಗಳು; ಹೀಗೆ ಚಕ್ರ, ನೊಗ, ಮೂಕಿ, ಇರಚಿ, ಶಕ್ತಿ, ಪ್ರಾಸ, ಕತ್ತಿ, ಕೊಡಲಿ, ಬಾಣಗಳು, ಇವುಗಳ ಸಮೂಹದಿಂದ ದುರ್ಗಮವಾದ ಆ ನದಿಯಲ್ಲಿ ಹದ್ದು, ರಣಹದ್ದು, ನರಿ, ಮುಂತಾದುವುಗಳು ಮೊಸಳೆಗಳಂತೆಯೂ, ನರಿಗಳ ಕೂಗು ಪ್ರವಾಹಘೋಷದಂತೆಯೂ ತೋರುತ್ತಿದ್ದುವು. ಸಾವಿರಾರುಕಡೆಯಲ್ಲಿ ಭೂತ ಪ್ರೇತ ಪಿಶಾಚಗಳು

ಸಂತೋಷದಿಂದ ನಲಿಯುತ್ತಿರುವುವು! ಅನೇಕ ಯೋಧರ ಮೃತಶರೀರಗಳು ರಕ್ತಪ್ರವಾಹದಲ್ಲಿ ಕೊಚ್ಚಿಕೊಂಡುಹೋಗುತ್ತಿರುವುವು! ಹೀಗೆ ಅರ್ಜುನನು ನಡೆಸಿದ ಭಯಂಕರಕಾರ್ಯವನ್ನು ನೋಡಿ ನಿನ್ನವರಿಗೆ ಹಿಂದೆ ಯಾವಾಗಲೂ ಕಂಡುಕೇಳಿಲ್ಲದ ಭೀತಿಯುಂಟಾಯಿತು. ಅಲ್ಲಿ ಅರ್ಜುನನು ಕೌರವವೀರರ ಅಸ್ತ್ರಗಳನ್ನೆಲ್ಲ ತನ್ನ ಅಸ್ತ್ರಗಳಿಂದ ತುಂಡಾಗಿಸಿ, ಭಯಂಕರರೂಪದಿಂದ ಕಾಣುತ್ತ, ಅನೇಕ ರಥಿಕರನ್ನು ದಾಟಿ ಮುಂದೆ ಹೋದನು. ಮಧ್ಯಾಹ್ನಸೂರ್ಯನ ತೇಜಸ್ಸಿನಂತೆ ಅವನ ತೇಜಸ್ಸು ನೋಡುವುದಕ್ಕೂ ಅಸಾಧ್ಯವಾಯಿತು. ಅವನ ಧನುಸ್ಸಿನಿಂದ ಹೊರಡುವ ಬಾಣಗಳು ಆಕಾಶದಲ್ಲಿ ಹಂಸಶ್ರೇಣಿಗಳಂತೆ ಸಾಲಾಗಿ ಕಾಣುತ್ತಿದ್ದುವು. ತನ್ನ ಬಾಣಗಳಿಂದ ಶತ್ರುಗಳನ್ನು ಮೋಹಗೊಳಿಸುವಂತೆ ಸುತ್ತುಮುತ್ತಲೂ ಎಡೆಬಿಡದೆ ಶಸ್ತ್ರಗಳನ್ನು ಪ್ರಯೋಗಿಸುತ್ತ, ಜಯದ್ರಥನನ್ನು ಕೊಲ್ಲುವ ಆತುರದಿಂದ ನಿರಂಕುಶವಾಗಿ ರಥವನ್ನು ಬಿಟ್ಟುಕೊಂಡುಹೋದನು. ಅವನ ಬಾಣಗಳು ನೂರುಸಾವಿರಸಂಖ್ಯೆಯಿಂದ ಅಂತರಿಕ್ಷದಲ್ಲಿ ಮಂಡಲಗತಿಯಿಂದ ತಿರುಗುವಂತೆ ತೋರಿತು. ಆಗ ಅರ್ಜುನನು ಬಾಣಗಳನ್ನು ತೆಗೆಯುವುದು, ಬಿಲ್ಲಿನಲ್ಲಿ ಸಂಧಿಸುವುದು, ಪ್ರಯೋಗಿಸುವುದು, ಇವೊಂದೂ ನಮ್ಮ ಕಣ್ಣಿಗೆ ಕಾಣಲಿಲ್ಲ. ಅವನು ಬಿಟ್ಟ ಬಾಣಗಳುಮಾತ್ರ ದಿಕ್ಕುಗಳನ್ನೆಲ್ಲ ಮರೆಸುತ್ತಿದ್ದುವು. ರಥಿಕರೆಲ್ಲ ತತ್ತಳಿಸುತಿದ್ದರು. ಕ್ರಮಕ್ರಮವಾಗಿ ಅವನು ಸೈಂಧವನನ್ನು ಸಮೀಪಿಸಿ, ಅರುವತ್ತುನಾಲ್ಕುಬಾಣಗಳನ್ನು ಪ್ರಯೋಗಿಸಿದನು. ಅರ್ಜುನನ ಆರ್ಭಟವನ್ನು ನೋಡಿ ಭಯಪಟ್ಟು ನಿನ್ನಕಡೆಯ ಯೋಧರು ಸೈಂಧವನ ಬದುಕಿನಲ್ಲಿ ನಿರಾಶರಾಗಿ ಹಿಂತಿರುಗಿಬಿಟ್ಟರು. ಮಹಾರಾಜಾ! ಆ ಯುದ್ಧದಲ್ಲಿ ಯಾರುಯಾರು ಹೆಮ್ಮೆಯಿಂದ ಅರ್ಜುನನ್ನು ಇದಿರಿಸುವುದಕ್ಕೆ ಬಂದರೋ, ಅವರ ಮೈಯಲ್ಲಿ ಅಗಾಗಲೇ ಪ್ರಾಣಾಂತಕರಗಳಾದ ಬಾಣಗಳು ನಾಟಿ, ಒಂದೇ ಪ್ರಹಾರಕ್ಕೆ ಸತ್ತುಬೀಳುತ್ತಿದ್ದರು. ಅರ್ಜುನನು ಆಗಿನ ರಣಭೂಮಿಗೆಲ್ಲ ತಲೆಯಿಲ್ಲದ ಮುಂಡಗಳನ್ನೇ ಹರಡಿಬಿಟ್ಟನು. ಅರ್ಜುನನು ಹೀಗೆ ನಮ್ಮಕಡೆಯ ಚತುರಂಗಸೈನ್ಯವನ್ನೂ ಉಲ್ಲೋಲಕಲ್ಲೋಲಮಾಡಿ, ಮುಂದೆ ಹೋಗಿ ಐವತ್ತು ಬಾಣಗಳಿಂದ ಅಶ್ವತ್ಥಾಮನನ್ನೂ, ನೂರು ಬಾಣಗಳಿಂದ ವೃಷಸೇನನನ್ನೂ

ಹೊಡೆದನು ಕೃಪನಮೇಲೆ ಒಂಭತ್ತು ಬಾಣಗಳನ್ನೂ, ಶಲ್ಯನಮೇಲೆ ಹದಿನಾರು ಬಾಣಗಳನ್ನೂ, ಕರ್ಣನಮೇಲೆ ಮೂವತ್ತು ಬಾಣಗಳನ್ನೂ ಬಿಟ್ಟು, ಸೈಂಧವನನ್ನು ಅರುವತ್ತುನಾಲ್ಕು ತೀಕ್ಷ್ಣಬಾಣಗಳಿಂದ ನೋಯಿಸಿ, ದೊಡ್ಡ ಸಿಂಹನಾದಮಾಡಿದನು. ಅರ್ಜುನನ ಬಾಣಗಳಿಂದ ನೊಂದ ಸೈಂಧವನು ಅಂಕುಶದಿಂದ ತಿವಿಯಲ್ಪಟ್ಟ ಆನೆಯಂತೆ ಅತ್ಯಾಕ್ರೋಶಗೊಂಡು, ವಿಷಸರ್ಪಗಳಿಗೆ ಸಮಾನಗಳಾಗಿ, ಚೆನ್ನಾಗಿ ಹದಕೊಟ್ಟ ತೀಕ್ಷ್ಣಬಾಣಗಳನ್ನು ಕೃಷ್ಣಾರ್ಜುನರಮೇಲೆ ಪ್ರಯೋಗಿಸತೊಡಗಿದನು. ವರಾಹಧ್ವಜವುಳ್ಳ ಆ ಜಯದ್ರಥನು, ಮೂರು ಬಾಣಗಳನ್ನು ಕೃಷ್ಣನಿಗೂ, ಆರು ಬಾಣಗಳನ್ನು ಅರ್ಜುನನಿಗೂ ಹೊಡೆದು, ಎಂಟು ಬಾಣಗಳಿಂದ ಅರ್ಜುನನ ನಾಲ್ಕು ಕುದುರೆಗಳನ್ನೂ ಬಲವಾಗಿ ನೋಯಿಸಿದನು. ಒಂದು ಬಾಣದಿಂದ ಧ್ವಜವನ್ನು ಭೇದಿಸಿದನು. ಅರ್ಜುನನ ರಥವನ್ನು ಮೇಲೆಮೇಲೆ ಬಾಣವರ್ಷದಿಂದ ಮುಚ್ಚುತ್ತಲೇ ಇದ್ದನು. ಆದರೇನು? ಅರ್ಜುನನು ಸೈಂಧವನ ಬಾಣಗಳನ್ನೆಲ್ಲ ತನ್ನ ಬಾಣಗಳಿಂದ ಕತ್ತರಿಸಿ, ಎರಡು ಬಾಣಗಳಿಂದ ಸೈಂಧವನ ಸಾರಥಿಯ ತಲೆಯನ್ನು ಹಾರಿಸಿಬಿಟ್ಟನು. ಅವನ ಧ್ವಜವನ್ನು ಮುರಿದನು. ಸೈಂಧವನ ವರಾಹಚಿಹ್ನವುಳ್ಳ ಧ್ವಜವು ಮುರಿದು ಕೆಳಗೆ ಬಿದ್ದಿತು. ಅರ್ಜುನನು ಆಗಾಗ ತಲೆಯೆತ್ತಿ ಸೂರ್ಯನನ್ನು ನೋಡುತ್ತಿರುವನು! ಸುತ್ತಲೂ ದೃಢವಾದ ರಕ್ಷಣೆಯುಳ್ಳ ಆ ಸೈಂಧವನನ್ನು ಕೊಲ್ಲುವುದಕ್ಕೆ ತನಗೆ ತಕ್ಕ ಅವಕಾಶವು ಸಿಕ್ಕಲಿಲ್ಲವೆಂದು ಆಗಾಗ ಹಲ್ಲುಗಳನ್ನು ಕಚ್ಚುವನು! ಆಗಾಗ ಕಡೆಬಾಯಿಗಳನ್ನು ನೆಕ್ಕುವನು! ಕೋಪದಿಂದ ಅವನ ಕಣ್ಣುಗಳು ಕೆಂಪೇರಿದುವು. ಈಸ್ಥಿತಿಯಲ್ಲಿ ಕೃಷ್ಣನು ಧನಂಜಯನನ್ನು ನೋಡಿ *" ಅರ್ಜುನಾ!

* ಇಲ್ಲಿನ ಕಥೆಯು ಕೆಲವು ಮಾತೃಕೆಗಳಲ್ಲಿ ಬೇರೆ ವಿಧವಾಗಿದೆ. ಸೂರ್ಯಾಸ್ತಮಯವು ಸಮೀಪಸ್ಥವಾಗಿರುವುದನ್ನು ತಿಳಿದು ಕೃಷ್ಣನು, ಸೂರ್ಯನು ಮುಳುಗುವುದರೊಳಗಾಗಿ ಅರ್ಜುನನಿಗೆ ಆ ಮಹಾರಥರನ್ನೆಲ್ಲ ಜಯಿಸಿಕೊಂಡುಹೋಗಿ ಸೈಂಧವನನ್ನು ಕೊಲ್ಲುವುದು ಸಾಧ್ಯವಿಲ್ಲವೆಂದು ತಿಳಿದು, ತನ್ನ ಸುದರ್ಶನಚಕ್ರವನ್ನು ಸ್ಮರಿಸಿಕೊಂಡನೆಂದೂ, ಒಡನೆಯೇ ಆ ಚಕ್ರವು ಅವನ ಮುಂದೆ ಕಾಣಿಸಲು ಸೂರ್ಯನು ಅಸ್ತಂಗತನಾದಂತೆ ಕಾಣಿಸಿ ಲೋಕಕ್ಕೆ ಅಂಧಕಾರವನ್ನು ಹರಡುವಂತೆ ಅದಕ್ಕೆ ನಿಯಮಿಸಿದನೆಂದೂ, ಅದರಿಂದ ಅದು ಸೂರ್ಯನನ್ನು ಮರೆಸಿತೆಂದೂ ಪಾಠಭೇದವು.



ಪುಟ ೫೮೨. ನಿರಾಶನಾಗಿ ಅಗ್ನಿಪ್ರವೇಶಕ್ಕೆ ಸಿದ್ಧನಾಗಿದ್ದ ಅರ್ಜುನನು ಕೃಷ್ಣನ ಚಕ್ರಪ್ರಭಾವದಿಂದುಂಟಾದ ಅಕಾಲ ಸಂಧ್ಯೆಯನ್ನು ನಿಜವೆಂದು ಭ್ರಮಿಸಿ ಮುಂದೆ ಬಂದ ಸೈಂಧವನ ತಲೆಯನ್ನು ಕಡಿದು ಅಂತರಿಕ್ಷಕ್ಕೆ ಹಾರಿಸುವುದು

ಏನಾದರೂ ತಂತ್ರವನ್ನು ಹಿಡಿದಲ್ಲದೆ, ಈ ಸೈಂಧವನನ್ನು ಕೊಲ್ಲುವುದು ನಿನಗೆ ಸಾಧ್ಯವಲ್ಲ. ಆದಕ್ಕಾಗಿ ಈಗ ನಾನೊಂದು ಉಪಾಯವನ್ನು ಮಾಡದೆ ತೀರದು! ಸೂರ್ಯನು ಜನರ ಕಣ್ಣಿಗೆ ಮರೆಯಾಗುವಂತೆ ತಂತ್ರ ವನ್ನು ನಡೆಸುವೆನು. ಆಗ ಸಿಂಧುರಾಜನು ಸೂರ್ಯಾಸ್ತವಾದುದಾಗಿ ತಿಳಿ ದುಕೊಳ್ಳುವನು. ತಾನು ಇನ್ನುಮೇಲೆ ಬದುಕಿದೆನೆಂಬ ಸಂತೋಷವೂ, ಆಶ್ಚರ್ಯವೂ ಅವನಿಗೆ ವ್ಯತಿಳಿಯದಂತೆ ಮಾಡುವುದು. ನಿನ್ನ ಪ್ರತಿಜ್ಞೆಗೆ ಭಂಗವುಂಟಾಯಿತೆಂಬ ಸಂತೋಷದಿಂದ ಅವನು ತಾನಾಗಿಯೇ ನಿನ್ನ ಮುಂದೆ ಬರುವನು. ಆಗಿನ ಅವನ ಸಂತೋಷದಲ್ಲಿ ಆತ್ಮರಕ್ಷಣೆಯ ಪ್ರಯ ತ್ನವೂಕೂಡ ಅವನಿಗೆ ಮರೆತುಹೋಗುವುದು. ಸೂರ್ಯಾಸ್ತವನ್ನು ನೋಡ ಬೇಕೆಂಬ ಆತುರದಿಂದ ಬರುವ ಆ ಜಯದ್ರಥನನ್ನು ಆಗಲೇ ನೀನು ತೀರಿಸಿ ಬಿಡಬೇಕು" ಎಂದನು. ಮಹಾರಾಜಾ! ಈ ಮಾತನ್ನು ಹೇಳಿ ಮುಗಿಸಿ ದೊಡನೆ, ಕೃಷ್ಣನು, ಸೂರ್ಯನ ಕಾಂತಿಯು ಮರೆಸಿಹೋಗುವಂತೆ ಮಾಯೆ ಯನ್ನು ಮಾಡಿದನು. ಕೃಷ್ಣನಿಂದ ಕಲ್ಪಿತವಾದ ಆ ಮಾಯಾಂಧಕಾರವನ್ನು ನೋಡಿ ಪಾಂಡವಸೈನ್ಯವೆಲ್ಲಾ ನಿಜಸ್ಥಿತಿಯನ್ನು ತಿಳಿಯದೆ, ಬಹಳ ದುಃಖ ಕ್ಕೀಡಾಯಿತು. ನಿನ್ನವರೆಲ್ಲರೂ ಬಹಳ ಸಂತೋಷದಿಂದ ನಲಿಯುತ್ತಿದ್ದರು. ಎಲ್ಲರೂ ತಲೆಯೆತ್ತಿ ಸೂರ್ಯನಿದ್ದ ಕಡೆಯನ್ನೇ ನೋಡುತ್ತಿದ್ದರು. ಜಯ ದ್ರಥನೂ ಅತ್ಯಂತಹರ್ಷದಿಂದ ಸೂರ್ಯನಕಡೆಗೆ ದೃಷ್ಟಿಯಿಟ್ಟು ನೋಡು ತ್ತಿದ್ದನು. ಈ ಸಮಯದಲ್ಲಿ ಕೃಷ್ಣನು "ಅರ್ಜುನಾ! ಈಗಲೇ ನೀನು ಸೈಂಧವನ ತಲೆಯನ್ನು ಬಾಣದಿಂದ ಹಾರಿಸಿಬಿಡು. ಇದೇ ತಕ್ಕ ಸಮ ಯವು!" ಎಂದನು. ಕೃಷ್ಣನ ಈ ಮಾತನ್ನು ಕೇಳಿದೊಡನೆ ಅರ್ಜು ನನು ಕೋಪದಿಂದ ಕೆಂಪೇರಿದ ಕಣ್ಣುಳ್ಳವನಾಗಿ, ತನ್ನ ಬತ್ತಳಿಕೆಯಿಂದ ವಜ್ರಸಮಾನವಾದ ಒಂದು ತೀಕ್ಷ್ಣಬಾಣವನ್ನು ಕೈಗೆತ್ತಿಕೊಂಡನು. ದೇವ ತೆಗಳಿಗೂ ತಡೆಯಲಸಾಧ್ಯವಾದ ಮರ್ಮಭೇದಕವಾದ ಆ ಬಾಣವನ್ನು ಬಿಲ್ಲಿನಲ್ಲಿ ಸಂಧಿಸಿ, ಸೈಂಧವನಿಗೆ ಗುರಿಯಿಟ್ಟು ಪ್ರಯೋಗಿಸಿದನು. ಗಾಂಡೀವ ದಿಂದ ಹೊರಟ ಆ ಬಾಣವು, ಗಿಡುಗನು ಸಣ್ಣ ಪಕ್ಷಿಯಮೇಲೆ ಬಂದೆರಗು ವಂತೆ, ವೇಗದಿಂದ ಬಂದು, ಸೈಂಧವನ ತಲೆಯನ್ನು ಅವನ ಶರೀರದಿಂದ ಬೇರ್ಪಡಿಸಿತು. ಆ ತಲೆಯು ಕೆಳಗೆ ಬೀಳುವಷ್ಟರಲ್ಲಿಯೇ ಕೃಷ್ಣನು ಅತ್ಯಾ

ತುರದಿಂದ ಅರ್ಜುನನನ್ನು ಕುರಿತು "ಪಾರ್ಥಾ! ಪಾರ್ಥಾ! ಆ ಸೈಂಧವನ ಶಿರಸ್ಸು ಭೂಮಿಯಮೇಲೆ ಬೀಳದಂತೆ ಬಾಣದಿಂದ ಅದನ್ನು ಮೇಲಕ್ಕೆ ಹಾರಿಸಿಬಿಡು. ಅದರ ಕಾರಣವೇನೆಂಬುದನ್ನು ಆಮೇಲೆ ತಿಳಿಸುವೆನು" ಎಂದನು. ಅಪರಂತೆಯೇ ಅರ್ಜುನನು ಆ ತಲೆಯು ಕೆಳಗೆ ಬೀಳದಂತೆ ತನ್ನ ಬಾಣಗಳಿಂದ ಅದನ್ನು ಮೇಲಕ್ಕೆ ಹಾರಿಸಿದನು. ಆಗ ಧನಂಜಯನು, ತನ್ನ ಅಸ್ತ್ರಚಾತುರ್ಯದಿಂದ ಆ ರುಂಡವು ಮೇಲಕ್ಕೂ, ಕೆಳಕ್ಕೂ, ಅಡ್ಡಲಾಗಿಯೂ ತಿರುಗಿ ಮೇಲಕ್ಕೂ, ಹಾರಾಡುತ್ತಿರುವಂತೆ ವಿಧವಿಧವಾಗಿ ಬಾಣಗಳನ್ನು ಪ್ರಯೋಗಿಸಿ, ಅದನ್ನು ಬಹುದೀರ್ಘಕಾಲದವರೆಗೆ ಅಂತರಿಕ್ಷದಲ್ಲಿಯೇ ಹಾರಾಡಿಸುತ್ತ ಅದರಿಂದ ಆಟವಾಡುವಂತೆ ಕಾಣುತ್ತಿದ್ದನು. ಸಮಸ್ತಸೈನ್ಯವೂ ಆಶ್ಚರ್ಯದಿಂದ ಇದನ್ನು ನೋಡುತ್ತಿದ್ದಿತು. ಧನಂಜಯನು ಆ ರುಂಡವನ್ನು ತನ್ನ ಬಾಣಗಳಿಂದ ಆಕಾಶದಲ್ಲಿಯೇ ಚಂಡಿನಂತೆ ಪುಟಹಾರಿಸುತ್ತ, ಅದೇ ಸಮಯದಲ್ಲಿ ತನ್ನನ್ನು ಸುತ್ತಲೂ ಇದಿರಿಸಿನಿಂತ ರಾಜರನ್ನು ತಡೆಯಲು ಯುದ್ಧಮಾಡುತ್ತಿದ್ದನು. ಹೀಗೆ ಸ್ವಲ್ಪ ಹೊತ್ತು ಚಂಡಾಡುವಂತೆ ಆ ತಲೆಯನ್ನಾಡಿಸುತಿದ್ದು, ಕೊನೆಗೆ ಅದನ್ನು ತನ್ನ ಬಾಣದಿಂದ ಸ್ಯಮಂತಪಂಚಕದ ಹೊರಭಾಗದಲ್ಲಿ ಬೀಳುವಂತೆ ತೂರಿಸಿದನು. ಅರ್ಜುನನ ಬಾಣದಲ್ಲಿ ಪೋಣಿಸಲ್ಪಟ್ಟು, ರಕ್ತದಿಗ್ಧವಾಗಿ ಆಕಾಶದಲ್ಲಿ ಹಾರುತ್ತಿದ್ದ ಆ ಸೈಂಧವನ ತಲೆಯು, ನೋಡತಕ್ಕವರೆಲ್ಲರ ಕಣ್ಣಿಗೆ, ವಿದ್ಯಾಧರರು ಎಸೆದಾಡುತ್ತಿರುವ ನಾಳಸಹಿತವಾದ ತಾವರೆಹೂವಿನಂತೆ ತೋರುತ್ತಿದ್ದಿತು. ಮಹಾರಾಜಾ! ಹೀಗೆ ಅರ್ಜುನನು ಶತ್ರುಗಳನ್ನೆಲ್ಲ ಜಯಿಸಿ, ತನ್ನ ಪ್ರತಿಜ್ಞೆಯನ್ನು ಪೂರೈಸಿ, ಅಂಧಕಾರವನ್ನು ನಿಗ್ರಹಿಸಿಕೊಂಡು ಬಂದ ಉದಯಸೂರ್ಯನಂತೆ ಕಾಣುತ್ತಿದ್ದನು. ಆಮೇಲೆ ಅರ್ಜುನನು ಕೃಷ್ಣನನ್ನು ನೋಡಿ "ಕೃಷ್ಣಾ! ಆ ಸೈಂಧವನ ತಲೆಯನ್ನು ಇನ್ನೂ ಎಷ್ಟು ದೂರಕ್ಕೆ ಹಾರಿಸಬೇಕು? ಅದನ್ನು ಏತಕ್ಕೆ ನೆಲದಮೇಲೆ ಬೀಳಿಸಬಾರದು? ಅದನ್ನು ಎಲ್ಲಿ ಇಳಿಸಬೇಕು? ನೀನು ಹೇಳಿದ ಕಡೆಯಲ್ಲಿ ಅದನ್ನು ನಾನು ಬೀಳಿಸಬಲ್ಲೆನು. ಆ ಸ್ಥಳವನ್ನು ತಿಳಿಸು" ಎಂದನು.

ಇದು ನೂರ ನಾಲ್ವತ್ತೇಳನೆಯ ಅಧ್ಯಾಯವು.

ಕೃಷ್ಣನು ಅರ್ಜುನನಿಗೆ ಸೈಂಧವನ ತಲೆಯನ್ನು ಭೂಮಿಯಲ್ಲಿ ಕೆಡಹಬಾರದೆಂಬುದಕ್ಕೆ ಕಾರಣವನ್ನು ತಿಳಿಸಿದುದು. ಕೃಷ್ಣನ ಮಾತಿನಮೇಲೆ ಅರ್ಜುನನು ಸ್ಯಮಂತಪಂಚಕದಲ್ಲಿ ಸಂಧ್ಯೋಪಾಸನೆಯನ್ನು ಮಾಡುತ್ತಿದ್ದ ವೃದ್ಧಕ್ಷತ್ರನ ತೊಡೆಯಮೇಲೆ ಆ ತಲೆಯನ್ನು ಕೆಡಹಿದುದು. ವೃದ್ಧಕ್ಷತ್ರನು ಮೇಲೆದ್ದುನಿಂತಾಗ, ಅವನ ತೊಡೆಯಿಂದ ಆ ರುಂಡವು ನೆಲಕ್ಕೆ ಬಿದ್ದೊಡನೆ, ಆ ವೃದ್ಧಕ್ಷತ್ರನ ಶಿರಸ್ಸು ಭೇದಿಸಿಹೋದುದು.

ಮಹಾರಾಜಾ! ಇಷ್ಟರಲ್ಲಿ ಸೂರ್ಯನು ಅಸ್ತಗಿರಿಗೆ ಬೇಗಬೇಗನೆ ಸಾಗುತ್ತಿದ್ದನು. ಆಗ ಕೃಷ್ಣನು ಸಂದೇಹಗ್ರಸ್ತನಾದ ಅರ್ಜುನನನ್ನು ಕುರಿತು ಅರ್ಜುನಾ! ಈ ಸೈಂಧವನ ತಲೆಯನ್ನು ನೆಲಕ್ಕೆ ಕೆಡಹಬಾರದೆಂಬುದಕ್ಕೆ ಕಾರಣವನ್ನು ಸೂಕ್ಷ್ಮವಾಗಿ ಹೇಳುವೆನು ಕೇಳು. ಈ ಸೈಂಧವನಿಗೆ ವೃದ್ಧಕ್ಷತ್ರನೆಂಬವನು ಜನಕನು. ಅವನು ಘೋರತಪಸ್ಸನ್ನು ಮಾಡಿ ಈ ಜಯದ್ರಥನನ್ನು ಪಡೆದನು. ಪುತ್ರನನ್ನು ಪಡೆದ ಕಾಲದಲ್ಲಿ ಅವನಿಗೆ ಒಂದು ಅಶರೀರವಾಕ್ಕು ಕೇಳಿಸಿತು. "ಓ ರಾಜೇಂದ್ರಾ! ಈ ನಿನ್ನ ಮಗನು ಕುಲ ಶೀಲ ದಮಾದಿಗಳಿಂದ ಉಭಯಕುಲಕ್ಕೂ ಸಮ್ಮತನಾಗಿ, ಲೋಕದಲ್ಲಿ ಪ್ರಸಿದ್ಧನಾಗುವನು. ಆದರೆ, ಕ್ಷತ್ರಿಯಶ್ರೇಷ್ಠನೂ, ಯಾವಾಗಲೂ ಶೂರರಿಂದ ಸತ್ಕೃತನೂ ಆದ ವೀರನೊಬ್ಬನು, ಇವನ ತಲೆಯನ್ನು ಕಡಿಯುವನು" ಎಂದಿತು.

ಈ ಮಾತನ್ನು ಕೇಳಿ ಆ ಸಿಂಧುರಾಜನು ತನ್ನ ಪುತ್ರನಲ್ಲಿರುವ ಸ್ನೇಹದಿಂದ ಮನಸ್ಸಿನಲ್ಲಿ ಕೊರಗುತ್ತ, ತನ್ನನ್ನು ಸುತ್ತಿದ್ದ ಎಲ್ಲಾ ಬಂಧುಗಳನ್ನೂ ನೋಡಿ "ಎಲೈ! ಭಯಂಕರವಾದ ಈ ಅಶರೀರವಾಕ್ಕನ್ನು ಕೇಳಿದಿರಲ್ಲವೆ? ಇರಲಿ! ನನ್ನ ಮಗನ ತಲೆಯನ್ನು ಯಾವನು ನೆಲದಮೇಲೆ ಕೆಡಹುವನೋ, ಆಗಲೇ ಅವನ ತಲೆಯೂ ಶತಖಂಡವಾಗಿ ಭೇದಿಸಿಹೋಗಬೇಕು. ನಾನು ಇದುವರೆಗೆ ಸಾಧಿಸಿದ ಇಂದ್ರಿಯಜಯಕ್ಕಾಗಲಿ, ತಪಸ್ಸಿಗಾಗಲಿ ಏನಾದರೂ ಫಲವಿದ್ದಪಕ್ಷದಲ್ಲಿ, ಇದು ಹೀಗೆಯೇ ತಪ್ಪದೆ ನಡೆಯಲಿ" ಎಂದನು. ಹೀಗೆಂದು ಶಾಪವನ್ನು ಕೊಟ್ಟು, ವೃದ್ಧಕ್ಷತ್ರನು ತನ್ನ ಮಗನಾದ

ಜಯದ್ರಥನನ್ನು ರಾಜ್ಯದಲ್ಲಿರಿಸಿ, ಕಾಡಿಗೆ ಹೋಗಿ ತಪಸ್ಸನ್ನು ಮಾಡುತ್ತಿರುವನು. ಈಗ ಅವನು ಸ್ಯಮಂತಪಂಚಕದಿಂದ ಹೊರಗೆ ಇತರರಿಗೆ ದುಸ್ತರವಾದ ತಪಸ್ಸಿನಲ್ಲಿರುವನು. ಆದುದರಿಂದ ಈಗಲೇ ನೀನು ಆ ಜಯದ್ರಥನ ತಲೆಯನ್ನು ನಿನ್ನ ಅದ್ಭುತಶಕ್ತಿಯುಳ್ಳ ದಿವ್ಯಾಸ್ತ್ರಪ್ರಭಾವದಿಂದ, ತಪಸ್ಸಿನಲ್ಲಿರುವ ಆ ವೃದ್ಧಕ್ಷತ್ರನ ತೊಡೆಯಮೇಲೆ ಕೆಡಹು. ಹಾಗಿಲ್ಲದೆ ಈ ತಲೆಯನ್ನು ನೀನಾಗಿ ಭೂಮಿಯಮೇಲೆ ಕೆಡಹಿದರೆ, ಆ ವೃದ್ಧಕ್ಷತ್ರನ ಶಾಪದಂತೆ ನಿನ್ನ ತಲೆಯು ಆಕ್ಷಣವೇ ಶತಚೂರ್ಣವಾಗಿ ಭೇದಿಸುವುದು. ಇದರಲ್ಲಿ ಸಂದೇಹವಿಲ್ಲ. ಆದುದರಿಂದ ಅರ್ಜುನಾ! ತಪಸ್ಸಿನಲ್ಲಿರುವ ವೃದ್ಧಕ್ಷತ್ರನಿಗೆ ತಿಳಿಯದಂತೆಯೇ, ನಿನ್ನ ಅಸ್ತ್ರಪ್ರಭಾವದಿಂದ ಆ ತಲೆಯು ಅವನ ಮಡಿಲಲ್ಲಿ ಬೀಳುವಂತೆ ಮಾಡು. ಓ ಇಂದ್ರಕುಮಾರಾ! ನಿನಗೆ ಈ ತ್ರೈಲೋಕ್ಯದಲ್ಲಿಯೂ ಅಸಾಧ್ಯವಾದ, ಅಥವಾ ಮಾಡಬಾರದ ಕಾರ್ಯವೊಂದಿಲ್ಲ. ಆದುದರಿಂದ ನಾನು ಹೇಳಿದಂತೆ ಬೇಗನೆ ನಡೆಸು" ಎಂದನು. ಮಹಾರಾಜಾ! ಕೃಷ್ಣನ ಬಾಯಿಂದ ಈ ಮಾತು ಹೊರಟೊಡನೆ, ಅಲ್ಲಿ ಅತ್ಯಾಶ್ಚರ್ಯಕರವಾದ ಸಂಗತಿಯು ನಡೆಯಿತು. ಆ ತಲೆಯು ಅರ್ಜುನನ ಅಸ್ತ್ರಪ್ರಭಾವದಿಂದ ಸ್ಯಮಂತಪಂಚಕದ ಹೊರಗೆ ಸಂಧ್ಯೋಪಾಸನೆಯನ್ನು ಮಾಡುತ್ತಿದ್ದ ನಿನ್ನ ಬೀಗನಾದ ವೃದ್ಧಕ್ಷತ್ರನ ಮಡಿಲಿಗೆ ಸರಿಯಾಗಿ ಬಂದುಬಿದ್ದಿತು. ಕಪ್ಪಾದ ಮುಂಗುರುಳುಗಳಿಂದಲೂ, ಕಿರೀಟಕುಂಡಲಗಳಿಂದಲೂ ಅಲಂಕೃತವಾಗಿದ್ದ ಅಷ್ಟು ದೊಡ್ಡ ತಲೆಯು, ಅರ್ಜುನನ ಅಸ್ತ್ರಪ್ರಯೋಗಚಾತುರ್ಯದಿಂದ ಆ ವೃದ್ಧಕ್ಷತ್ರನಿಗೆ ತಿಳಿಯದಹಾಗೆಯೇ ಅವನ ತೊಡೆಯಮೇಲೆ ಬಿದ್ದಿತು. ಆ ರಾಜನು ಸಂಧ್ಯಾಜಪವನ್ನು ಮುಗಿಸಿಕೊಂಡು ಮೇಲಕ್ಕೆದ್ದಾಗ, ಆ ತಲೆಯು ಅವನ ತೊಡೆಯಿಂದ ಕೆಳಕ್ಕೆ ಬಿದ್ದಿತು. ಅದು ನೆಲಕ್ಕೆ ಸೋಕಿದೊಡನೆ, ಆ ವೃದ್ಧಕ್ಷತ್ರನ ತಲೆಯು ಶತಖಂಡವಾಗಿ ಭೇದಿಸಿಹೋಯಿತು. ಇದನ್ನು ನೋಡುತ್ತಿದ್ದ ಸೈನ್ಯಗಳೆಲ್ಲ ಆಶ್ಚರ್ಯದಿಂದ ಬೆರಗಾದುವು. ಶ್ರೀಕೃಷ್ಣನೂಕೂಡ ಅರ್ಜುನನ ಬಾಣಚಾತುರ್ಯಕ್ಕಾಗಿ ಅವನನ್ನು ಕೊಂಡಾಡಿದನು. ಅರ್ಜುನನ ಕಾರ್ಯಕ್ಕಾಗಿ ದೇವತೆಗಳೆಲ್ಲರೂ ಸಂತೋಷಪಟ್ಟರು. ಆಗ ಸಮಸ್ತಭೂತಗಳೂ "ಯಾವನಿಗೆ ಸಾಕ್ಷಾಜ್ಜನಾರ್ದನನೇ ಸರ್ವದಾ ರಕ್ಷಕನೆನಿಸಿರುವನೋ, ಅಂತವನಿಗೆ ಜಯವಲ್ಲದೆ ಅಪಜಯವೆಲ್ಲಿಯದು"

ಎಂದು ತಿಳಿದುಕೊಂಡರು. ಮಹಾರಾಜಾ! ಸೈಂಧವನ ತಲೆಯನ್ನು ಅರ್ಜುನನು ಸ್ಯಮಂತಪಂಚಕದಿಂದ ಹೊರಕ್ಕೆ ಹಾರಿಸಿ, ತಾನು ಪ್ರಯೋಗಿಸಿದ ಪಾಶುಪತಾಸ್ತ್ರವನ್ನು ಉಪಸಂಹರಿಸಲು ಯತ್ನಿಸಿದನು. ಅವನು ಉಪಸಂಹಾರಮಾಡಿಕೊಳ್ಳುವಾಗ ಲೋಕವನ್ನೆಲ್ಲ ಆಹ್ಲಾದಗೊಳಿಸುವಂತೆ ಸುಗಂಧ ಶೀತಲವಾದ ಗಾಳಿಯು ಬೀಸಿತು. ಅರ್ಜುನನು ಮಾಡಿದ ಈ ಉಪಸಂಹಾರ ಮೋಕ್ಷಗಳನ್ನು ನೋಡಿ ದೇವತೆಗಳು ವಿಸ್ಮಿತರಾಗಿ ಅವನನ್ನು ಕೊಂಡಾಡಿದರು. ಅರ್ಜುನನು ಹೀಗೆ ನಿನ್ನ ಸೈನ್ಯದಲ್ಲಿ ಅನೇಕ ವೀರರನ್ನು ಧ್ವಂಸಮಾಡಿ, ಸೈಂಧವನ ತಲೆಯನ್ನು ಕೆಡಹಿ, ತನ್ನ ಪ್ರತಿಜ್ಞೆಯನ್ನು ಪೂರೈಸಿಕೊಂಡನು. ಇತ್ತಲಾಗಿ ತಲೆಯಿಲ್ಲದ ಸೈಂಧವನ ಮುಂಡವು ಬುಡ ಕಡಿದ ಮರದಂತೆ ಕೆಳಕ್ಕೆ ಬಿದ್ದಿತು. ರಾಜರೆಲ್ಲರೂ ಅದನ್ನು ನೋಡಿ ವ್ಯಸನಪಟ್ಟರು. ಮಹಾರಥನಾದ ಸಿಂಧುರಾಜನ ಮರಣಕ್ಕಾಗಿ ನಿನ್ನ ಮಕ್ಕಳೆಲ್ಲರೂ ಕಣ್ಣೀರನ್ನು ಸುರಿಸಿದರು. ಸೈಂಧವನ ತಲೆಯು ಕೆಳಗೆ ಬಿದ್ದೊಡನೆ ಕೃಷ್ಣನು ಮಾಯೆಯಿಂದ ಕಲ್ಪಿಸಿದ್ದ ಕತ್ತಲೆಯನ್ನು ಉಪಸಂಹರಿಸಿಕೊಂಡನು. ಆಗಲೇ ನಿನ್ನವರಿಗೆ ಇನ್ನೂ ಸೂರ್ಯಾಸ್ತಮಯವಾಗಿಲ್ಲವೆಂದೂ, ಇದು ಕೃಷ್ಣನ ಮಾಯೆಯೆಂದೂ ತಿಳಿಯಿತು. ಓ ಧೃತರಾಷ್ಟ್ರಮಹಾರಾಜಾ! ಹೀಗೆ ಅರ್ಜುನನು ನಿನ್ನ ಅಳಿಯನಾದ ಸೈಂಧವನನ್ನು ಕೊಲ್ಲುವ ಪ್ರಯತ್ನದಲ್ಲಿ ಎಂಟು ಅಕ್ಷೌಹಿಣೀಸೈನ್ಯಗಳನ್ನು ಸಂಹರಿಸಿ, ಕೊನೆಗೆ ಆ ಜಯದ್ರಥನ ತಲೆಯನ್ನೂ ಕಡಿದುಬಿಟ್ಟನು. ಸೈಂಧವನ ಮರಣದಿಂದ ನಿನ್ನ ಮಕ್ಕಳಿಗೆ ತಮ್ಮ ಜಯದಲ್ಲಿ ಆಸೆಯೇ ತಪ್ಪಿಹೋಯಿತು. ಜಯದ್ರಥವಧವಾದೊಡನೆ ಕೃಷ್ಣಾರ್ಜುನರಿಬ್ಬರೂ ಶಂಖಧ್ವನಿಯನ್ನು ಮಾಡಿದರು. ಅದರಂತೆಯೇ ಭೀಮನು, ಸಾತ್ಯಕಿ, ಯುಧಾಮನ್ಯು, ಉತ್ತಮೌಜಸ್ಸು, ಇವರೆಲ್ಲರೂ ಬೇರೆಬೇರೆಯಾಗಿ ತಮ್ಮತಮ್ಮ ಶಂಖಗಳನ್ನು ಧ್ವನಿಮಾಡಿದರು. ಪ್ರಬಲವಾದ ಈ ಶಂಖಧ್ವನಿಯು ಅತ್ತಲಾಗಿ ಧರ್ಮರಾಜನ ಕಿವಿಗೆ ಬಿದ್ದಾಗ, ಅರ್ಜುನನಿಂದ ಸೈಂಧವನು ಹತನಾಗಿರಬೇಕೆಂದು ಅವನು ನಿಶ್ಚಯಿಸಿದನು. ಒಡನೆಯೇ ಅತ್ತಲಾಗಿ ತನ್ನ ಸೈನ್ಯದಲ್ಲಿಯೂ ಜಯವಾದ್ಯಗಳನ್ನು ನುಡಿಸಿದರು. ಆಮೇಲೆ ತಿರುಗಿ ತಾನು ದ್ರೋಣಾಚಾರ್ಯನೊಡನೆ ಯುದ್ಧಕ್ಕೆ ಸಿದ್ಧನಾದನು. ಸೂರ್ಯಾಸ್ತಮಯವಾಗುತ್ತಿರುವ ಕಾಲ

ದಲ್ಲಿ ದ್ರೋಣನಿಗೆ ಸೋಮಕರೊಡನೆ ಪ್ರಬಲಯುದ್ಧವಾಯಿತು. ಸೈಂಧವನು ಹತನಾದನೆಂಬ ಸಂತೋಷದಿಂದ ಸೋಮಕರೆಲ್ಲರೂ ತಾವೂ ಇತ್ತಲಾಗಿ ದ್ರೋಣನನ್ನು ಕೊಲ್ಲಬೇಕೆಂದು ಸರ್ವಪ್ರಯತ್ನದಿಂದ ಹೋರಾಡಿದರು. ಪಾಂಡವಸೈನಿಕರೂ ಉತ್ಸಾಹದಿಂದ ದ್ರೋಣನೊಡನೆ ಯುದ್ಧಮಾಡುತ್ತಿದ್ದರು. ಅತ್ತಲಾಗಿ ಅರ್ಜುನನೂ, ಸೈಂಧವನಿಗೆ ರಕ್ಷಕರಾಗಿ ಬಂದ ಕೃಪಾಶ್ವತ್ಥಾಮಾದಿಗಳೊಡನೆ ಯುದ್ಧವನ್ನು ನಡೆಸುತ್ತಿದ್ದನು.

ಇದು ನೂರ ನಾಲ್ವತ್ತೆಂಟನೆಯ ಅಧ್ಯಾಯವು.



ತನ್ನ ಬಾಣದಿಂದ ಮೂರ್ಛಿತನಾದ ಕೃಪನನ್ನು ನೋಡಿ ಅರ್ಜುನನು ಪಶ್ಚಾತ್ತಾಪಪಟ್ಟುದು. ಕೃಷ್ಣಾರ್ಜುನರೂ, ಭೀಮಾದಿಗಳೂ ಯುಧಿಷ್ಠಿರನ ಬಳಿಗೆ ಬಂದುದು.

ಆಗ ಧೃತರಾಷ್ಟ್ರನು “ಸಂಜಯಾ! ಅರ್ಜುನನಿಂದ ಸೈಂಧವನು ಹತನಾದಮೇಲೆ ನಮ್ಮವರೇನು ಮಾಡಿದರು? ನಮ್ಮ ಸಮಸ್ತ ಸೈನ್ಯಗಳ ಕಣ್ಣೆದಿರಾಗಿ ಸೈಂಧವನು ಅರ್ಜುನನಿಂದ ವಧಿಸಲ್ಪಟ್ಟುದು ಹೇಗೆ? ಅಯ್ಯೋ! ಕರ್ಣ ಕೃಪಾಶ್ವತ್ಥಾಮರೇ ಮೊದಲಾದ ಮಹಾವೀರರಿಂದ ರಕ್ಷಿಸಲ್ಪಡುತ್ತಿದ್ದ ನನ್ನ ಅಳಿಯನು, ಆ ಅರ್ಜುನನೆಂಬ ಬೆಂಕಿಯ ಬಾಯಲ್ಲಿ ಹೇಗೆ ಬಿದ್ದನು? ಈ ಅನರ್ಥಕ್ಕೆಲ್ಲ ಮೂಲವೆನಿಸಿದ ಬುದ್ಧಿಹೀನನಾದ ನನ್ನ ಮಗನು ತನ್ನ ತಮ್ಮಂದಿರೊಡನೆ ಸೇರಿ ಮುಂದೆ ನಡೆಸಿದ ಕಾರ್ಯವೇನು?” ಎನಲು, ಸಂಜಯನು “ಮಹಾರಾಜಾ! ಸೈಂಧವನು ಸತ್ತುದನ್ನು ನೋಡಿ ಕೃಪಾಚಾರ್ಯನಿಗೆ ದುಸ್ಸಹವಾದ ಕೋಪವುಂಟಾಯಿತು. ದೊಡ್ಡ ಬಾಣವರ್ಷವನ್ನು ಕರೆಯುತ್ತ ಅರ್ಜುನನನ್ನಿದಿರಿಸಿದನು. ಇನ್ನೊಂದುಕಡೆಯಿಂದ ಅಶ್ವತ್ಥಾಮನೂ ಅರ್ಜುನನಮೇಲೆ ಬಾಣಗಳನ್ನು ಬಿಡುತ್ತಬಂದನು. ಈ ಮಹಾರಥಿಕರಿಬ್ಬರೂ ಎರಡುಕಡೆಗಳಿಂದ ಎಡೆಬಿಡದೆ ಬಾಣವರ್ಷವನ್ನು ಕರೆಯುತ್ತ ಬರುತ್ತಿರಲು, ಅರ್ಜುನನಿಗೆ ಅದು ತಡೆಯಲಸಾಧ್ಯವಾಯಿತು. ಅದರಿಂದ ಅವನು ಬಹಳವಾಗಿ ನೊಂದನು. ತನ್ನನ್ನಿದಿರಿಸಿಬಂದ ಗುರು ಗುರುಪುತ್ರ

ರಿಬ್ಬರನ್ನೂ ಹೊಡೆಯಲು ಇಷ್ಟವಿಲ್ಲದೆ, ಅರ್ಜುನನು ಆ ಯುದ್ಧದಲ್ಲಿಯೂ ಆಚಾರ್ಯಗೌರವವನ್ನು ತೋರಿಸುತ್ತ, ಅವರಮೇಲೆ ಬಿಡತಕ್ಕ ಬಾಣಗಳನ್ನು ಬಹಳ ವೇಗವಿಲ್ಲದಂತೆ ಮೃದುವಾಗಿ ಬಿಡುತ್ತಿದ್ದನು. ಆ ಬಾಣಗಳಿಗಾಗಿ ಅವರು ಹೆದರದಿದ್ದರೂ, ಅವನು ಬಿಟ್ಟ ಬಾಣಗಳು ಅಸಂಖ್ಯಾತವಾದುದರಿಂದ, ಅವರಿಬ್ಬರಿಗೂ ಹಿಂದುಮುಂದು ತೋರದಂತಾಯಿತು. ಕೊನೆಗೆ ಕೃಪನಿಗೆ ಅರ್ಜುನನ ಬಾಣಗಳಿಂದ ಮೂರ್ಛೆಬಂದಂತಾಗಲು, ರಥದ ಗದ್ದುಗೆಯಮೇಲೆಯೇ ಒರಗಿ ಮಲಗಿದನು. ಕೃಪಾಚಾರ್ಯನು ಮೃತನಾದನೆಂದೇ ತಿಳಿದು, ಅವನ ಸಾರಥಿಯು ರಥವನ್ನು ಹಿಂದಕ್ಕೆ ತಿರುಗಿಸಿಕೊಂಡು ಹೊರಟುಹೋದನು. ಕೃಪನ ಸ್ಥಿತಿಯನ್ನು ನೋಡಿ ಅಶ್ವತ್ಥಾಮನೂ ತನ್ನ ರಥವನ್ನು ತಿರುಗಿಸಿಕೊಂಡು ಹೊರಟುಹೋದನು. ತನ್ನ ಬಾಣಗಳಿಂದ ಕೃಪನು ಮೂರ್ಛಿತನಾದುದನ್ನು ನೋಡಿ ಅರ್ಜುನನು ಮಹತ್ತಾದ ಪಶ್ಚಾತ್ತಾಪದಿಂದ "ಛೀ! ಛೀ! ನನ್ನನ್ನು ಸುಡಬೇಕು" ಎಂದು ಕಣ್ಣೀರನ್ನು ಬಿಟ್ಟು ದೈನ್ಯದಿಂದ ರೋದಿಸುತ್ತ ಹೀಗೆಂದನು. "ಆಹಾ! ಹಿಂದೆ ದುರ್ಯೋಧನನ ಜನನಕಾಲದಲ್ಲಿ ವಿದುರನು ಧೃತರಾಷ್ಟ್ರನೊಡನೆ ಹೇಳಿದ ಮಾತು ಸತ್ಯವು! ಇದನ್ನೆಲ್ಲ ತಿಳಿದೇ ಮಹಾಪ್ರಾಜ್ಞನಾದ ವಿದುರನು ಹಾಗೆ ಹೇಳಿದನು. ಕುಲಘಾತುಕನಾದ ದುರ್ಯೋಧನನು ಹುಟ್ಟಿದೊಡನೆ "ಇವನು ಮಹಾಪಾಪಿ! ಇವನಿಂದ ವಂಶಕ್ಕೇ ಹಾನಿಯುಂಟು. ಆದುದರಿಂದ ಇವನನ್ನು ಈಗಲೇ ಕೊಂದುಬಿಡು" ಎಂದು ಧೃತರಾಷ್ಟ್ರನೊಡನೆ ವಿದುರನು ಹೇಳಿದ ಮಾತು ಸತ್ಯವೆಂಬುದು ಈಗ ನಿದರ್ಶನಕ್ಕೆ ಬರುತ್ತಿದೆ. ಆ ದುರ್ಯೋಧನನ ದೆಸೆಯಿಂದಲ್ಲವೇ ನಮ್ಮ ಪಿತಾಮಹನೂ, ಗುರುವೂ ಆದ ಭೀಷ್ಮನು ಶರತಲ್ಪದಲ್ಲಿ ಮಲಗುವುದನ್ನು ನಾವು ನೋಡಬೇಕಾಯಿತು. ಕ್ಷತ್ರಿಯರ ನಡತೆಯನ್ನು ಸುಡಬೇಕು! ಅವರ ಬಲಪೌರುಷಗಳನ್ನು ಸುಡಬೇಕು! ಆಚಾರ್ಯನೂ, ಬ್ರಾಹ್ಮಣೋತ್ತಮನೂ ಆದವನನ್ನು, ನನ್ನಂತವನು ಹೀಗೆ ವಿರೋಧಿಸಿ ನಿಲ್ಲುವುದೆಂದರೇನು? ಆ ಕೃಪನೋ ಋಷಿಪುತ್ರನು. ನನಗೆ ಆಚಾರ್ಯನು. ನನ್ನ ಗುರುವಾದ ದ್ರೋಣನಿಗೆ ಪರಮಮಿತ್ರನು. ಅಂತವನು ನನ್ನ ಬಾಣದಿಂದ ಮೂರ್ಛಿತನಾಗಿ ಮಲಗಿರುವನು. ನಾನು ಇಷ್ಟವಿಲ್ಲದೆ ಅಲಕ್ಷ್ಯವಾಗಿ ಯುದ್ಧ

ಮಾಡಿದರೂ, ಅವನು ಮೂರ್ಛಿತನಾಗಿ ಬಿದ್ದುದು ನನ್ನ ಪ್ರಾಣಗಳನ್ನೇ ಕಿವಿಚುವಂತೆ ಸಂಕಟವನ್ನುಂಟುಮಾಡುತ್ತದೆ. ಮೊದಲೇ ಪುತ್ರಶೋಕದಿಂದ ಪರವಶನಾಗಿದ್ದ ನಾನು ಶತ್ರುಬಾಣಗಳಿಂದಲೂ ಬಹಳವಾಗಿ ನೊಂದು, ದುರವಸ್ಥೆಗೀಡಾಗಿದ್ದೆನು. ಬಾರಿಬಾರಿಗೂ ವೈರಿಗಳ ಪ್ರಹಾರದಿಂದ ನೊಂದಿದ್ದ ನಾನು ಆತ್ಮರಕ್ಷಣೆಗಾಗಿ ಅವನನ್ನು ಇದಿರಿಸಬೇಕಾಯಿತು. ಅಯ್ಯೋ? ವಾಸುದೇವಾ! ಆ ಕೃಪನು ಮೂರ್ಛಿತನಾಗಿ ರಥದಲ್ಲಿ ಮಲಗಿರುವುದು ಪುತ್ರವಧಕ್ಕಿಂತಲೂ ಹೆಚ್ಚಾಗಿ ನನ್ನನ್ನು ಸಂಕಟಗೊಳಿಸುತ್ತಿದೆ. ಆಚಾರ್ಯನಿಂದ ವಿದ್ಯೆಯನ್ನು ಪಡೆದು, ಅದಕ್ಕೆ ಪ್ರತಿಯಾಗಿ ಅವನಿಗೆ ಬೇಕಾದ ಕೋರಿಕೆಗಳನ್ನೆಲ್ಲ ಸಲ್ಲಿಸುವ ಪುರುಷಶ್ರೇಷ್ಠರು ದೇವತ್ವವನ್ನು ಹೊಂದುವರು. ಹಾಗಿಲ್ಲದೆ ಗುರುಗಳಿಂದ ವಿದ್ಯೆಯನ್ನು ಪಡೆದು, ಅವರನ್ನೇ ಕೊಲೆಮಾಡತಕ್ಕ ನನ್ನಂತಹ ದುಶ್ಚರಿತರು ಕ್ರೂರವಾದ ನರಕಕ್ಕೇ ಹೋಗಬೇಕು. ನಾನು ಬಾಣವರ್ಷದಿಂದ ಆಚಾರ್ಯನನ್ನು ನೋಯಿಸಿದುದು ನನ್ನ ನರಕಪ್ರಾಪ್ತಿಗೇ ಅಲ್ಲದೆ ಬೇರೆಯಲ್ಲ. ಹಿಂದೆ ಇದೇ ಕೃಪಾಚಾರ್ಯನು ನನಗೆ ವಿದ್ಯೆಯನ್ನು ಹೇಳಿಕೊಟ್ಟಾಗ ''ಈ ಶಸ್ತ್ರಗಳನ್ನು ನೀನು ಗುರುವಿನಲ್ಲಿ ಹೇಗೂ, ಎಂದೂ ಉಪಯೋಗಿಸಬಾರ"ದೆಂದು ಹೇಳಿದ್ದನು. ಆ ಆಚಾರ್ಯನ ಉಪದೇಶವನ್ನೂ ಲಕ್ಷ್ಯಮಾಡದೆ, ನಾನು ಅವನನ್ನೇ ನನ್ನ ಬಾಣಗಳಿಂದ ಹೊಡೆದೆನು. ಪೂಜ್ಯನಾದ ಆ ಗುರೂತ್ತಮನಿಗೆ ನನ್ನ ನಮಸ್ಕಾರವಿರಲಿ! ಅಂತವನನ್ನು ಬಾಣದಿಂದ ಹೊಡೆದ ನನ್ನ ಜನ್ಮಕ್ಕೆ ಧಿಕ್ಕಾರವಿರಲಿ" ಎಂದನು. ಮಹಾರಾಜಾ! ತನ್ನ ಕಠಿನಪ್ರತಿಜ್ಞೆಯನ್ನು ಪೂರೈಸಿ, ಕೊನೆಗೆ ಕೃಪನ ವಿಷಯದಲ್ಲಿ ತನ್ನ ತಪ್ಪಿಗಾಗಿ ವಿಲಪಿಸುತ್ತಿರುವ ಅರ್ಜುನನನ್ನು ನೋಡಿ ಕೃಷ್ಣನು ಪ್ರೇಮದಿಂದಾಲಿಂಗಿಸಿಕೊಂಡು ಸಮಾಧಾನಪೂರ್ವಕವಾಗಿ ಹೀಗೆಂದನು. ''ಜಯಶೀಲಾ! ನೀನು ಮಾಡಿದ ದಾರುಣವಾದ ಪ್ರತಿಜ್ಞೆಯನ್ನು ಭಾಗ್ಯವಶದಿಂದ ನೀನು ನಿರ್ವಹಿಸಿದೆ. ಪಾಪಿಯಾದ ಸೈಂಧವನೂ, ಅವನ ತಂದೆಯಾದ ವೃದ್ಧಕ್ಷತ್ರನೂ ಭಾಗ್ಯವಶದಿಂದ ಹತರಾದರು! ಈ ಧಾರ್ತರಾಷ್ಟ್ರಸೈನ್ಯವನ್ನು ಇದಿರಿಸಿದಮೇಲೆ, ದೇವಸೈನ್ಯಕ್ಕಾದರೂ ಕಷ್ಟವು ತಪ್ಪಿದುದಲ್ಲ. ನೀನು ಹೀಗೆ ಚಿಂತಿಸಬಾರದು. ಇಂತಹ ದೊಡ್ಡ ಸೈನ್ಯವನ್ನಿದಿರಿಸಿ ಜಯಿಸಿ ಬಂದಮೇಲೆ, ಬೇರೆ ಯಾವನೂ ತನ್ನ

ರ್ಯಕ್ಕಾಗಿ ನಿನ್ನಂತೆ ಚಿಂತಿಸಲಾರನು. ಇಂತಹ ಉತ್ಸಾಹಕಾಲದಲ್ಲಿ
ಸಹೊರತು ಬೇರೆ ಯಾವನೂ, ಎಲ್ಲಿಯೂ ಎದೆಗೆಟ್ಟು ನಿಲ್ಲಲಾರನು.
ಗೆ ಸಮಾನರೂ, ನಿನಗಿಂತಲೂ ಮೇಲಾದವರೂ ಆದ ಮಹಾಮಹಿಮೆ
ಳ್ಳ ಎಷ್ಟೋ ಮಂದಿ ರಾಜರು, ಆ ದುರ್ಯೋಧನನಿಗಾಗಿ ಇಲ್ಲಿ ಬಂದು
ನಿನ್ನನ್ನು ಇದಿರಿಸಿ ನಿಂತರು. ಅವರು ಯಾರೂ ನಿನ್ನಿಂದ ಬದುಕಿ
ತಿರುಗಲಿಲ್ಲ. ಅರ್ಜುನಾ! ನಿನ್ನ ವೀರ್ಯವೂ, ಬಲವೂ, ಇಂದ್ರ ರುದ್ರ
ನುರ ವೀರ್ಯಕ್ಕೆ ಸಮಾನವಾದುದು. ನೀನು ಒಂಟಿಯಾಗಿ ಈಗ
ೀರಿಸಿದ ಪರಾಕ್ರಮವನ್ನು ಬೇರೆ ಯಾವನೂ ತೋರಿಸಲು ಸಮರ್ಥ

ಇದರಂತೆಯೇ ನೀನು ಮುಂದೆ ದುರಾತ್ಮನಾದ ಆ ಕರ್ಣನನ್ನು ಅವನ
ಂಬಂಧಿಗಳೊಡನೆ ಕೊಂದುಬಿಟ್ಟರೆ, ನೀನು ನಿಶ್ಶತ್ರುವಾಗಿ ವೃದ್ಧಿಹೊಂ
ೆ. ನಾನು ನಿನಗೆ ಇನ್ನೂ ಮೇಲೆಮೇಲೆ ಶ್ರೇಯಸ್ಸನ್ನು ಕೂಡಿಸಿ ಉತ್ಸಾ
ಾಳಿಸುವೆನು" ಎಂದನು. ಅದಕ್ಕಾ ಅರ್ಜುನನು "ದೇವಾ! ಇದರಲ್ಲಿ
ನ್ನ ಶಕ್ತಿಯೇನಿದೆ? ನಿನ್ನ ಅನುಗ್ರಹದಿಂದಲ್ಲವೇ ನಾನು ದೇವತೆಗಳಿಗೂ
ಸ್ತರವಾದ ಆ ಪ್ರತಿಜ್ಞೆಯನ್ನು ದಾಟಿದೆನು? ನೀನು ಯಾರಿಗೆ ನಾಥನೆನಿ
ುವೆಯೋ, ಅಂತವರಿಗೆ ಜಯವೆಂಬುದೇನೂ ಆಶ್ಚರ್ಯವಲ್ಲ. ಅಣ್ಣನಾದ
ುಧಿಷ್ಠಿರನು ಮುಂದೆ ನಿನ್ನ ಅನುಗ್ರಹದಿಂದಲೇ ಸಮಸ್ತಭೂಮಿಯನ್ನೂ
ೆಯಬಲ್ಲನು. ಕೃಷ್ಣಾ! ಎಲ್ಲವೂ ನಿನ್ನ ಮೇಲೆ ಬಿದ್ದ ಭಾರವೇ! ಈ ವಿಜ
ವೂ ನಿನಗೆ ಸೇರಿದುದೇ! ನೀನೇ ನಮ್ಮನ್ನು ವೃದ್ಧಿಗೊಳಿಸಬೇಕು.
ವು ನಿನ್ನ ಸೇವಕರು" ಎಂದನು. ಈ ಮಾತನ್ನು ಕೇಳಿದಮೇಲೆ ಕೃಷ್ಣನು
ಲ್ಲಗೆ ಕುದುರೆಯನ್ನು ಮುಂದೆಬಿಟ್ಟು, ಅಲ್ಲಿ ನಡೆಯುತ್ತಿದ್ದ ಕ್ರೂರಯುದ್ಧ
ನ್ನೆಲ್ಲ ತೋರಿಸುತ್ತ "ಅರ್ಜುನಾ! ನೋಡು! ಯುದ್ಧದಲ್ಲಿ ಜಯವನ್ನೂ,
ೀರ್ತಿಯನ್ನೂ ಕೋರಿ ಬಂದು ಅನೇಕಶೂರರಾಜರು ನಿನ್ನ ಬಾಣಗಳಿಂದ
ರಾಗಿ ಬಿದ್ದಿರುವುದನ್ನು ನೋಡು. ಅವರು ಹಿಡಿದಿದ್ದ ಶಸ್ತ್ರಗಳು, ಆಭರ
ಳು, ಅವರ ಕುದುರೆಗಳು, ರಥಗಳು, ಆನೆಗಳು, ಅವರ ಮೈಮೇಲಿನ
ಚಗಳು, ಇವೆಲ್ಲವೂ ಅಲ್ಲಲ್ಲಿ ಛಿನ್ನಭಿನ್ನವಾಗಿ, ಅವರು ಬಿದ್ದಿರುವ ದುರ
ಯನ್ನು ನೋಡು. ಒಳ್ಳೇ ಸತ್ವವುಳ್ಳ ಇವರೆಲ್ಲರೂ ಈಗ ಸತ್ವಹೀನ
ಬಿದ್ದಿದ್ದರೂ, ತಮ್ಮ ತೇಜೋವಿಶೇಷದಿಂದ ಇನ್ನೂ ಜೀವಸಹಿತವಾಗಿ

ರುವಂತೆಯೇ ಕಾಣುತ್ತಿರುವರು ನೋಡು. ಅವರ ಶಸ್ತ್ರಗಳಿಂದಲೂ, ವಾಹನಗಳಿಂದಲೂ ರಣಭೂಮಿಯೆಲ್ಲ ತುಂಬಿರುವುದನ್ನು ನೋಡು. ಅದೋ! ಅಲ್ಲಲ್ಲಿ ಅವರ ಯುದ್ಧಕವಚಗಳು, ಕತ್ತಿ ಗುರಾಣಿಗಳು, ಹಾರ, ಕಿರೀಟ, ಕುಂಡಲಾದ್ಯಾಭರಣಗಳು, ಮಾಲಿಕೆಗಳು, ಶಿರೋವಸ್ತ್ರಗಳು, ಚೂಡಾಮಣಿಗಳು, ಅಮೂಲ್ಯವಸ್ತ್ರಗಳು, ಕೈಬಳೆಗಳು, ಕಂಠಸೂತ್ರಗಳು, ಇವೆಲ್ಲ ಕದಲಿ ಬಿದ್ದು, ಅವುಗಳ ಕಾಂತಿಯಿಂದ ಚಿತ್ರಿತವಾದ ರಣಭೂಮಿಯನ್ನು ನೋಡು. ರಥಗಳು, ರಥದಹಿಂದಿನ ಬಂಡಿಗಳು, ಧ್ವಜಪತಾಕೆಗಳು. ಇನ್ನೂ ಬೇರೆ ರಥೋಪಕರಣಗಳು, ಗದ್ದಿಗೆ, ಮೂಕಿ, ಚಕ್ರಗಳು, ಅಚ್ಚುಗಳು, ನೊಗಗಳು, ಚಾಟಿಗಳು, ಧನುರ್ಬಾಣಗಳು, ರತ್ನಕಂಬಳಗಳು, ಆಸ್ತರಣಗಳು, ಪರಿಘ, ಅಂಕುಶ, ಭಿಂಡಿವಾಲ, ಶಕ್ತಿ, ದಂಡ, ಶೂಲ, ಪರಶು, ಪ್ರಾಸ, ತೋಮರ, ಕುಂತ, ಯಷ್ಟಿ, ಶತಘ್ನಿ, ಭುಸುಂಡಿ, ಕತ್ತಿ, ಮುಸಲ, ಮುದ್ಗರ, ಗದೆ, ಸುವರ್ಣಚಿತ್ರಿತವಾದ ತಲೆಪಾಗುಗಳು, ಆನೆಗಳ ಗಂಟೆ ಮೊದಲಾದ ವಿವಿಧಾಭರಣಗಳು, ವಸ್ತ್ರಾಭರಣಗಳು, ಮಾಲಿಕೆಗಳು, ಇವುಗಳಿಂದ ವ್ಯಾಪ್ತವಾದ ರಣಭೂಮಿಯು ಜ್ಯೋತಿರ್ಮಂಡಲಗಳಿಂದ ವ್ಯಾಪ್ತವಾದ ಶರತ್ಕಾಲದ ಆಕಾಶದಂತೆ ಕಾಣುವುದು ನೋಡು. ಅರ್ಜುನಾ! ಅನೇಕ ಪೃಥ್ವೀಪತಿಗಳು ಈ ಪೃಥ್ವಿಗಾಗಿ ಹೋರಾಡಿ, ಕೊನೆಗೆ ತಮ್ಮ ಪ್ರಿಯಕಾಂತೆಯನ್ನು ಹೇಗೋ ಹಾಗೆ ಆ ಪೃಥ್ವಿಯನ್ನಪ್ಪಿಕೊಂಡು ಮಲಗಿರುವುದನ್ನು ನೋಡು. ಪರ್ವತಗಳಂತೆ ದೊಡ್ಡವಾಗಿ, ಐರಾವತಕ್ಕೆ ಸಮಾನಗಳಾದ ಆನೆಗಳು ಶಸ್ತ್ರದಿಂದುಂಟಾದ ವ್ರಣಗಳಿಂದ ರಕ್ತವನ್ನು ಸ್ರವಿಸುತ್ತ, ಗೈರಿಕಧಾತುಮಿಶ್ರಿತವಾದ ನದಿಗಳಿಂದ ಕೂಡಿದ ಪರ್ವತಗಳಂತೆ ಕಾಣುವುವು ನೋಡು. ಅದರಂತೆಯೇ ನಿನ್ನ ಬಾಣಗಳಿಂದ ಭಿನ್ನಶರೀರಗಳಾದ ಕುದುರೆಗಳೂ ರಥಿಕಶೂನ್ಯವಾಗಿ ಗಂಧರ್ವನಗರದಂತಿರುವ ಮಹಾರಥಗಳು ಅಲ್ಲಲ್ಲಿ ಮುರಿದುಬಿದ್ದಿರುವುದನ್ನು ನೋಡು. ಆ ರಥಗಳಲ್ಲಿ ಹಲವಕ್ಕೆ ಧ್ವಜಗಳಿಲ್ಲ. ಪತಾಕೆಗಳಿಲ್ಲ. ಅಚ್ಚುಗಳಿಲ್ಲ. ಚಕ್ರಗಳಿಲ್ಲ. ಸಾರಥಿಗಳಿಲ್ಲ. ಹೀಗೆ ಶೂನ್ಯರಥಗಳೆಷ್ಟೋ ಬಿದ್ದಿರುವುದನ್ನು ನೋಡು. ಆನೆಗಳೂ, ಕುದುರೆಗಳೂ, ಕಾಲಾಳುಗಳೂ ಇಲ್ಲಿ ನೂರು ಸಾವಿರ ಸಂಖ್ಯೆಯಿಂದ ಬಿದ್ದಿರುವುವು. ಎಷ್ಟೋ ಧನುರ್ಧಾರಿಗಳೂ, ಖಡ್ಗಧಾರಿಗಳೂ ರಕ್ತದಿಂದ ತೊಯ್ದ ಮೈಯುಳ್ಳವರಾಗಿ, ಧೂಳು ಕವಿದ

ತಲೆಕೂದಲುಗಳೊಡನೆ ನೆಲದಲ್ಲಿ ಸತ್ತುಬಿದ್ದಿರುವುದನ್ನು ನೋಡು. ಅರ್ಜುನಾ! ಎಲ್ಲಿ ನೋಡಿದರೂ ಇಲ್ಲಿನ ರಣಭೂಮಿಯಲ್ಲಿ ನಿನ್ನ ಬಾಣಗಳಿಂದ ಹತವಾದ ಗಜತುರಗಾದಿ ಸೈನ್ಯಗಳೇ ಬಿದ್ದಿರುವುವು. ರಕ್ತ, ಮಾಂಸ, ಕೆನ್ನೀರು, ಮುಂತಾದುವುಗಳಿಂದ ಈ ನೆಲವೆಲ್ಲ ಕೆಸರುಹಿಡಿದಂತಿರುವುದು. ಮಾಂಸಾಹಾರಿಗಳಾದ ನಾಯಿ, ನರಿ, ರಾಕ್ಷಸ, ಪಿಶಾಚಗಳಗಳು, ಸಂತೋಷದಿಂದ ನಲಿದಾಡುತ್ತಿರುವುವು. ಇಂತಹ ರಣಭೂಮಿಯ ದುರ್ದಶೆಯನ್ನು ನೋಡಿದೆಯಾ? ಅರ್ಜುನಾ! ಯುದ್ಧದಲ್ಲಿ ಇಂತಹ ಅಸಾಧ್ಯಕಾರ್ಯವೆಂಬುದು ಈಗ ನಿನ್ನಲ್ಲಿ, ಮತ್ತು ಹಿಂದೆ ದೇವಾಸುರಯುದ್ಧವು ನಡೆದಾಗ ಮಹೇಂದ್ರನಲ್ಲಿ, ಇವರಿಬ್ಬರಲ್ಲಿಯೇ ಕಾಣುವುದು" ಎಂದನು. ಧೃತರಾಷ್ಟ್ರ ಮಹಾರಾಜಾ! ಹೀಗೆ ಕೃಷ್ಣನು ಯುದ್ಧದಲ್ಲಿ ಜಿಹಾಸೆಯಿಂದ ಖಿನ್ನನಾಗಿದ್ದ ಅರ್ಜುನನಿಗೆ ರಣಭೂಮಿಯನ್ನು ತೋರಿಸಿ, ತಿರುಗಿ ಅವನ ವೀರ್ಯೋತ್ಸಾಹಗಳನ್ನು ವೃದ್ಧಿಗೊಳಿಸುತ್ತ ತನ್ನ ಪಾಂಚಜನ್ಯವನ್ನು ಧ್ವನಿಮಾಡಿದನು. ಇಷ್ಟರಲ್ಲಿ ಸಾತ್ಯಕಿಯೂ, ಭೀಮಸೇನನೂ ಅರ್ಜುನನ ಬಳಿಗೆ ಬಂದರು. ಪಾಂಚಾಲಕುಮಾರನಾದ ಯುಧಾಮನ್ಯು, ಉತ್ತಮೌಜಸ್ಸು, ಎಂಬವರೂ ಅರ್ಜುನನ ಬಳಿಗೆ ಬಂದರು. ಆಮೇಲೆ ಇವರೆಲ್ಲರೂ ತಮಗೆ ನಡುನಡುವೆ ಇದಿರಾದ ಕರ್ಣಾಶ್ವತ್ಥಾಮರನ್ನೂ, ಇತರ ರಥಿಕರನ್ನೂ ಬಾಣಗಳಿಂದೊತ್ತರಿಸುತ್ತ, ಯುಧಿಷ್ಠಿರನಿದ್ದಲ್ಲಿಗೆ ಬಂದರು. ದಾರಿಯುದ್ದಕ್ಕೂ ಕೃಷ್ಣನು ಅರ್ಜುನನಿಗೆ ತಾವು ಬರುವಾಗ ನಡೆಸಿದ ಘೋರಕಾರ್ಯಗಳನ್ನು ತೋರಿಸುತ್ತ ಧರ್ಮರಾಜನ ಬಳಿಗೆ ಬಂದು, ಸೈಂಧವನು ಹತನಾದ ವಿಷಯವನ್ನು ಅವನಿಗೆ ತಿಳಿಸಿದನು.

ಇದು ನೂರ ನಾಲ್ವತ್ತೊಂಭತ್ತನೆಯ ಅಧ್ಯಾಯವು.

---

{ ಯುಧಿಷ್ಠಿರನು ಕೃಷ್ಣಾರ್ಜುನಾದಿಗಳನ್ನೆಲ್ಲಾ ಪ್ರೇಮದಿಂದಾಲಿಂಗಿಸಿದುದು. ಕೃಷ್ಣಯುಧಿಷ್ಠಿರರ ಸಂಭಾಷಣಗಳು. }

ಮಹಾರಾಜಾ! ಅಲ್ಲಿಂದ ಬಂದೊಡನೆ ಕೃಷ್ಣನು ಸಂತೋಷದಿಂದ ಧರ್ಮರಾಜನಿಗೆ ನಮಸ್ಕರಿಸಿ, "ಧರ್ಮರಾಜಾ! ಭಾಗ್ಯವಶದಿಂದ ನೀನು

ವರ್ಧಿಸುವೆ! ನಿನ್ನ ತಮ್ಮನಾದ ಅರ್ಜುನನು ಭಾಗ್ಯವಶದಿಂದ ಶತ್ರುವನ್ನು ಕೊಂದು, ತನ್ನ ಪ್ರತಿಜ್ಞೆಯನ್ನು ಪೂರೈಸಿದನು" ಎಂದನು. ಈ ಮಾತನ್ನು ಕೇಳಿದೊಡನೆ ಯುಧಿಷ್ಠಿರನು ಅತ್ಯಾನಂದದಿಂದ ತಾನು ಕುಳಿತಿದ್ದ ರಥದಿಂದ ಕೆಳಕ್ಕೆ ಹಾರಿ, ಆನಂದಬಾಷ್ಪದೊಡನೆ ಕೃಷ್ಣಾರ್ಜುನರನ್ನು ಆಲಿಂಗಿಸಿಕೊಂಡನು. ಆಮೇಲೆ ಬಾಷ್ಪಾಕುಲಿತವಾದ ತನ್ನ ಮುಖವನ್ನು ಒರೆಸಿಕೊಂಡು, ಕೃಷ್ಣನನ್ನು ನೋಡಿ, "ಓ ಪುಂಡರೀಕಾಕ್ಷಾ! ನಿನ್ನಿಂದ ಈ ಪ್ರಿಯವೃತ್ತಾಂತವನ್ನು ಕೇಳಿದ, ನನ್ನ ಸಂತೋಷವು ಸಮುದ್ರದ ಹಾಗೆ ಮೇರೆಯನ್ನೇ ಕಾಣದಂತಿದೆ. ಅರ್ಜುನನು ಈಗ ನಡೆಸಿದ ಕಾರ್ಯವು ಅತ್ಯಾಶ್ಚರ್ಯಕರವಾದುದು. ಈಗಿನ ಯುದ್ಧದಲ್ಲಿ ತಮ್ಮ ಪ್ರತಿಜ್ಞಾಭಾರವನ್ನು ದಾಟಿ ಬಂದ ನಿಮ್ಮಿಬ್ಬರನ್ನೂ ನಾನು ಭಾಗ್ಯವಶದಿಂದ ನೋಡುವಂತಾಯಿತು. ನಮ್ಮ ಭಾಗ್ಯವಶದಿಂದ ನೀಚಸೈಂಧವನು ಹತನಾದನು. ಭಾಗ್ಯವಶದಿಂದ ನಮ್ಮ ಶತ್ರುಗಳು ಮಹತ್ತಾದ ಶೋಕಸಾಗರದಲ್ಲಿ ಮುಳುಗುವಂತಾಯಿತು. ದೈವವಶದಿಂದ ನಾವು ಈ ಸಂತೋಷವನ್ನು ಅನುಭವಿಸುವಂತಾಯಿತು. ಕೃಷ್ಣಾ! ಅರ್ಜುನನು ನಿನ್ನ ರಕ್ಷಣೆಯ ಬಲದಿಂದಲೇ ಆ ಜಯದ್ರಥನನ್ನು ಕೊಲ್ಲಬಲ್ಲವನಾದನು. ನಿನ್ನ ಆಶ್ರಯಬಲವಿರತಕ್ಕವರಿಗೆ ಇದೊಂದೂ ಆಶ್ಚರ್ಯವಲ್ಲ. ತ್ರೈಲೋಕ್ಯಗುರುವೆನಿಸಿದ ನೀನು ಯಾರಿಗೆ ನಾಥನೆನಿಸಿರುವೆಯೋ, ಅಂಥವರಿಗೆ ದುಷ್ಕೃತದ ಸಂಬಂಧವೇ ಇರುವುದಿಲ್ಲ. ನಿನ್ನ ಅನುಗ್ರಹದಿಂದ ಇಂದ್ರನು ದೈತ್ಯರನ್ನು ಜಯಿಸಿದಂತೆ, ಈಗ ನಾವೂ ಶತ್ರುಗಳನ್ನು ಜಯಿಸುವೆವು. ನೀನು ಯಾರಲ್ಲಿ ಪ್ರಸನ್ನನಾಗಿರುವೆಯೋ, ಅವರಿಗೆ ಈ ಭೂಮಿಯನ್ನು ಮಾತ್ರವಲ್ಲ ತ್ರೈಲೋಕ್ಯವನ್ನು ಜಯಿಸುವುದೂ ಅಸಾಧ್ಯವಲ್ಲ. ಅವರಿಗೆ ಜಯವೆಂಬುದು ಸ್ಥಿರವು. ನಿನ್ನ ಅನುಗ್ರಹಪಾತ್ರರಿಗೆ ಯುದ್ಧದಲ್ಲಿ ಪರಾಜಯವೆಂಬುದೇ ಇಲ್ಲ. ಇಂದ್ರನಿಗೆ ತ್ರೈಲೋಕ್ಯವಿಜಯವುಂಟಾದುದೂ ನಿನ್ನ ಅನುಗ್ರಹದಿಂದಲೇ! ದೇವತೆಗಳಿಗೆ ಅಮರತ್ವವೂ, ಅವರು ಅನುಭವಿಸುವ ಅಕ್ಷಯಲೋಕಗಳೂ ನಿನ್ನಿಂದಲೇ ಉಂಟಾದುದು. ನೀನು ಯಾವಾಗಲೂ ನಮ್ಮ ಹಿತದಲ್ಲಿಯೇ ಪ್ರವರ್ತಿಸತಕ್ಕವನು. ನಿನ್ನ ಆಶ್ರಯದಿಂದಲೇ ನಾವು ಯುದ್ಧದಲ್ಲಿ ಶಸ್ತ್ರಗಳನ್ನು ಹಿಡಿದೆವು. ಕೃಷ್ಣಾ! ಈಗ ನೀವು ನಡೆಸಿದ ಕಾರ್ಯವು ದೇವತೆಗಳಿಗೂ ಅಸಂಭಾವ್ಯವು. ನಿನ್ನ ಬುದ್ಧಿಬಲವನ್ನಾಶ್ರಯಿ

ಸಿಯೇ ಅರ್ಜುನನು ಈ ಜಯವನ್ನು ಸಾಧಿಸಿರುವನು. ವಾಸುದೇವಾ! ಬಾಲ್ಯದಿಂದಲೂ ನೀನು ನಡೆಸಿದ ಅತಿಮಾನುಷಕೃತ್ಯಗಳನ್ನು ನಾನು ಅನೇಕ ವಾಗಿ ಕೇಳಿರುವೆನು. ಆಗಲೇ ನಿನ್ನ ಅನುಗ್ರಹದಿಂದ ನಾನು ಶತ್ರುಗಳ ನ್ನೆಲ್ಲಾ ಜಯಿಸಿ, ಭೂಮಿಯನ್ನು ನಮ್ಮ ಸ್ವಾಧೀನಮಾಡಿಕೊಂಡಹಾಗೆಯೇ ಮನಸ್ಸಿನಲ್ಲಿ ನಿಶ್ಚಯಿಸಿಬಿಟ್ಟೆನು. ಓ ಹೃಷೀಕೇಶಾ! ನಿನ್ನ ಅನುಗ್ರಹದಿಂ ದಲೇ ಇಂದ್ರನು ದೇವೇಂದ್ರತ್ವವನ್ನು ಪಡೆದನು. ನಿನ್ನ ಅನುಗ್ರಹದಿಂದಲೇ ಸ್ಥಾವರಜಂಗಮಾತ್ಮಕವಾದ ಪ್ರಪಂಚವೆಲ್ಲಾ ತನ್ನ ನೆಲೆಯಲ್ಲಿರುವುದು. ಜಪಹೋಮಾದಿಗಳಿಂದ ಲೋಕವೆಲ್ಲ ನಿನ್ನನ್ನುಪಾಸಿಸುತ್ತಿರುವುದು. ಆರಂ ಭದಲ್ಲಿ ಒಂದೇ ಜಲಮಯವಾಗಿ, ಮತ್ತು ಅಂಧಕಾರಮಯವಾಗಿದ್ದ ಈ ಪ್ರ ಪಂಚವು ಈಗಿನ ಸ್ಥಿತಿಯಲ್ಲಿ ದೃಶ್ಯವಾದುದೂ ನಿನ್ನ ಅನುಗ್ರಹದಿಂದಲೇ. ಸರ್ವಲೋಕ ಸೃಷ್ಟಿಕರ್ತನೂ, ಪರಮಾತ್ಮನೂ, ನಾಶರಹಿತನೂ ಆದ ನಿನ್ನ ನ್ನು ಯಾರು ನೋಡುವರೋ, ಅವರಿಗೆ ಎಂದಿಗೂ ಮೋಹವೆಂಬುದಿಲ್ಲ. ಪುರಾತನನೂ, ದೇವದೇವನೂ, ಪರಮಪುರುಷನೂ ಆದ ನಿನ್ನನ್ನು ಮರೆಹೊ ಕ್ಕವರಿಗೆ ಯಾವ ಕೊರತೆಯೂ ಇಲ್ಲ. ಜನನಮರಣರಹಿತನೂ, ಲೋಕ ಕರ್ತನೂ ಆದ ನಿನ್ನಲ್ಲಿ ಭಕ್ತಿಯಿಟ್ಟವರು ಎಲ್ಲಾ ಕಷ್ಟಗಳನ್ನೂ ದಾಟು ವರು. ಪುರಾಣಪುರುಷನೂ, ಪರಕ್ಕಿಂತಲೂ ಪರನೂ, ಆದ ನಿನ್ನಲ್ಲಿ ಪ್ರಪ ತ್ತಿಯನ್ನು ಮಾಡತಕ್ಕವರಿಗೆ ಪರಮ ಶ್ರೇಯಸ್ಸುಂಟು. ನಾಲ್ಕು ವೇದ ಗಳು ಯಾವನನ್ನು ಗಾನಮಾಡುತ್ತಿವೆಯೋ, ಅಂತಹ ಮಹಾತ್ಮನನ್ನು ಆಶ್ರ ಯಿಸಿದುದರಿಂದಲೇ ನಾನು ಎಣೆಯಿಲ್ಲದ ಈ ಶ್ರೇಯಸ್ಸನ್ನು ಪಡೆಯುವಂತಾ ಯಿತು. ಓ ಪರಮೇಶ್ವರಾ! ದೇವ ಮಾನವ ತಿರ್ಯಕ್ಕುಗಳಿಗೆಲ್ಲಾ ಪ್ರಭುವೆನಿಸಿದ ಓ ಸರ್ವೇಶ್ವರಾ! ಈಶ್ವರರಿಗೂ, ಈಶ್ವರನೆನಿಸಿದ ಓ ಪ್ರಭೂ! ಪುರುಷೋತ್ತಮಾ! ನಿನಗೆ ನಮಸ್ಕಾರವು. ಈಶ್ವರರಿಗೂ ಮೇಲಾದ ಓ ಈಶ್ವರಾ! ಪ್ರಭೂ! ಓ ಮಾಧವಾ! ವರ್ಧಿಸು. ಓ ಉತ್ಪತ್ತಿಲಯಕಾರಣಾ! ಸರ್ವಾತ್ಮಕಾ! ಓ ವಿಶಾಲಲೋಚನಾ! ನಿನಗೆ ನಮಸ್ಕಾರವು. ಧನಂಜ ಯನಿಗೆ ಮಿತ್ರನೂ, ಹಿತನೂ, ರಕ್ಷಕನೂ, ಆದ ನಿನ್ನನ್ನು ಮರೆಹೊಕ್ಕವನು ಸುಖದಿಂದ ವರ್ಧಿಸುವನು. ಮಾರ್ಕಂಡೇಯನೆಂಬ ಪುರಾತನಮಹರ್ಷಿಯು ನಿನ್ನ ಮಹಿಮೆಯನ್ನೂ, ಪ್ರಭಾವವನ್ನೂ ಚೆನ್ನಾಗಿ ತಿಳಿದು, ನಿನ್ನನ್ನು ಕೀರ್ತಿ

ಸಿರುವನು. ಅಸಿತನು, ದೇವಲನು, ಮಹಾತಪಸ್ವಿಯಾದ ನಾರದನು, ನನ್ನ ಪಿತಾಮಹನಾದ ವ್ಯಾಸನು, ಇವರೆಲ್ಲರೂ ನಿನ್ನನ್ನೇ ಉತ್ತಮವಾದ ವಿಧಿಯೆಂದು ಹೇಳುವರು. ನೀನೇ ತೇಜಸ್ಸು! ನೀನೇ ಪರಬ್ರಹ್ಮವು! ನೀನೇ ಸತ್ಯವು! ನೀನೇ ಮಹಾತಪಸ್ಸು! ಶ್ರೇಯಸ್ಸು! ನೀನೇ ಯಶಸ್ಸು! ಜಗತ್ಕಾರಣವೂ ನೀನೇ! ಸ್ಥಾವರಜಂಗಮಾತ್ಮಕವಾದ ಸಮಸ್ತಜಗತ್ತೂ ನಿನ್ನಿಂದ ಸೃಷ್ಟಿಸಲ್ಪಟ್ಟು, ಪ್ರಳಯಕಾಲದಲ್ಲಿ ನಿನ್ನಲ್ಲಿಯೇ ಅಡಗುವುದು. ಆದ್ಯಂತರಹಿತನೂ, ಜಗತ್ಪತಿಯೂ ಆದ ನಿನ್ನನ್ನು ವೇದಜ್ಞರು ಅವ್ಯಕ್ತನೆಂದು ಹೇಳುವರು. ಸರ್ವಭೂತಾತ್ಮಕನೂ, ಮಹಾತ್ಮನೂ, ಅನಂತನೂ, ವಿಶ್ವತೋಮುಖನೂ ಆದ ನಿನ್ನ ನಿಜವನ್ನು ದೇವತೆಗಳೂ ತಿಳಿಯಲಾರರು. ನಾರಾಯಣನೂ, ಪರದೈವವೂ, ಜ್ಞಾನಕ್ಕೆಲ್ಲಾ ಉತ್ಪತ್ತಿಸ್ಥಾನವೂ, ಮುಮುಕ್ಷುಗಳಿಗೆ ಮುಖ್ಯಗತಿಯೂ, ಪುರಾಣಪುರುಷನೂ, ಪುರಾತನಕ್ಕಿಂತಲೂ ಪುರಾತನನೂ ಆದ ನಿನ್ನ ತತ್ವವನ್ನು ತಿಳಿಯಬಲ್ಲವರೊಬ್ಬರೂ ಇಲ್ಲ. ಹಿಂದಿನ, ಮುಂದಿನ ಮತ್ತು ಈಗಿನ ನಿನ್ನ ಗುಣಕರ್ಮಗಳ ಎಲ್ಲೆಯನ್ನು ತಿಳಿಯಬಲ್ಲವನು ಇಹದಲ್ಲಿಯಾಗಲಿ, ಪರದಲ್ಲಿಯಾಗಲಿ ಒಬ್ಬನೂ ಇಲ್ಲ. ಓ ದೇವಾ! ದೈವವು ನಮಗೆ ನಿನ್ನನ್ನು ಮಿತ್ರನನ್ನಾಗಿ ಕಲ್ಪಿಸಿತು. ಇಂದ್ರನು ದೇವತೆಗಳನ್ನು ಹೇಗೋ ಹಾಗೆ ಸರ್ವವಿಧದಿಂದಲೂ ನೀನು ನಮ್ಮನ್ನು ರಕ್ಷಿಸಬೇಕು" ಎಂದನು. ಧರ್ಮರಾಜನ ಈ ಸ್ತುತಿವಾಕ್ಯವನ್ನು ಕೇಳಿ, ಕೃಷ್ಣನು "ಯುಧಿಷ್ಠಿರಾ! ಈ ನಿನ್ನ ಶ್ರೇಯಸ್ಸಿಗೆಲ್ಲಾ ನಿನ್ನ ಉಗ್ರತಪಸ್ಸೂ, ನಿನ್ನ ಉತ್ತಮಧರ್ಮವೂ, ನಿನ್ನ ಸಾಧುತ್ವವೂ, ಋಜುತ್ವವೂ ಕಾರಣವಲ್ಲದೆ ಬೇರೆಯಲ್ಲ. ನಿನ್ನ ವೈರಿಯಾದ ಜಯದ್ರಥನು ಹತನಾದುದೂ ನಿನ್ನ ಪ್ರಭಾವದಿಂದಲೇ. ನಿನ್ನಲ್ಲಿ ಭಕ್ತಿಯುಳ್ಳ ಈ ಧನಂಜಯನು ಸಾವಿರಾರು ಯೋಧರನ್ನು ಕೊಂದು ಕೊನೆಗೆ ಜಯದ್ರಥನನ್ನು ಸಂಹರಿಸಿದುದೂ ನಿನ್ನ ಪ್ರಭಾವದಿಂದಲೇ. ಕಾರ್ಯಶಕ್ತಿ, ಬಾಹುವೀರ್ಯ, ಸ್ಥಿರಮನಸ್ಸು, ಹಸ್ತಲಾಘವ, ಅಸಾಧಾರಣಬುದ್ಧಿ, ಇವುಗಳಲ್ಲಿ ಅರ್ಜುನನಿಗೆ ಸಮನಾದವನು ಬೇರೊಬ್ಬನಿಲ್ಲ. ಅಂತಹ ನಿನ್ನ ಸಹೋದರನು ಅನೇಕ ಶತ್ರುಸೈನ್ಯಗಳನ್ನು ಕೊಂದು, ಸಿಂಧುರಾಜನ ತಲೆಯನ್ನು ಹಾರಿಸಿಬಿಟ್ಟನು" ಎಂದನು. ಆ ಮೇಲೆ ಯುಧಿಷ್ಠಿರನು ಅರ್ಜುನನನ್ನು ಆಲಿಂಗಿಸಿಕೊಂಡು, ಅವನ ಮುಖದ

ಬಿವರನ್ನೊರೆಸಿ, ಸಮಾಧಾನಪೂರ್ವಕವಾಗಿ "ಅರ್ಜುನಾ! ನೀನು ಇಂದ್ರಾದಿದೇವತೆಗಳಿಗೂ ಅಸಾಧ್ಯವಾದ ಮಹಾಕಾರ್ಯವನ್ನು ನಡೆಸಿ ಬಂದೆ. ಭಾಗ್ಯವಶದಿಂದ ನಿನ್ನ ಪ್ರತಿಜ್ಞಾಭಾರವನ್ನು ದಾಟಿದೆ. ನೀನು ಹೊತ್ತ ಮಹಾಭಾರವನ್ನು ಇಳಿಸಿದೆ" ಎಂದನು. ಹೀಗೆಂದು ಹೇಳಿ, ಧರ್ಮ ರಾಜನು ಅರ್ಜುನನ ಬೆನ್ನನ್ನು ಸವರಿದನು. ಆಗ ಕೃಷ್ಣಾರ್ಜುನರಿಬ್ಬರೂ ಧರ್ಮರಾಜನನ್ನು ಕುರಿತು, "ಓ ಮಹಾತ್ಮಾ! ಪಾಪಿಯಾದ ಜಯದ್ರ ಥನು ನಿನ್ನ ಕೋಪಾಗ್ನಿಯಿಂದಲೇ ದಗ್ಧನಾದನಲ್ಲದೆ ಬೇರೆಯಲ್ಲ. ನಿನ್ನಕೋಪ ಕ್ಕೀಡಾಗಿಯೇ ಧಾರ್ತರಾಷ್ಟ್ರಸೈನ್ಯವನೆಲ್ಲಾ ಜಯಿಸಿ, ಅದನ್ನುನಾವು ಸುಲ ಭವಾಗಿ ದಾಟಿಬರಬಹುದಾಯಿತು" ಎಂದನು. ಅದಕ್ಕೆ ಯುಧಿಷ್ಠಿರನು "ಕೃಷ್ಣಾ! ನಿನ್ನಿಂದ ಮೊದಲು ಹತರಾದವರನ್ನೇ ನಾವು ಕೊಂದೆವಲ್ಲದೆ ಮುಂದೆಯೂ, ಅಂಥವರನ್ನೇ ಕೊಲ್ಲುವೆವು. ದೃಷ್ಟಿಮಾತ್ರದಿಂದಲೇ ಕೊಲ್ಲುವ ಶಕ್ತಿಯುಳ್ಳ ನಿನ್ನನ್ನು ಕೋಪಗೊಳಿಸಿದ ಆ ದುರ್ಯೋಧನನ ದೆಸೆಯಿಂದ ಅವನ ಕಡೆಯವರೆಲ್ಲರೂ, ನಿನ್ನ ಕೋಪಕ್ಕೀಡಾಗಿ ಹತರಾದರು. ದುರಾ ತ್ಮನಾದ ಆ ದುರ್ಯೋಧನನು ತನ್ನ ಎಲ್ಲಾ ಮಿತ್ರಬಾಂಧವರೊಡನೆ ಶೀಘ್ರ ದಲ್ಲಿಯೇ ಸಾಯಲು ಸಿದ್ಧನಾಗಿರುವನು. ದೇವತೆಗಳಿಗೂ ದುರ್ಜಯನೆನಿ ಸಿದ ಭೀಷ್ಮನು ಶರತಲ್ಪದಲ್ಲಿ ಮರಣೋನ್ಮುಖನಾಗಿ ಮಲಗಿರುವುದಕ್ಕೂ ನಿನ್ನ ಕೋಪವೇ ಕಾರಣವು. ಓ ಮಾಧವಾ! ನೀನು ಯಾರಲ್ಲಿ ಕೋಪಿಸಿ ಕೊಳ್ಳುವೆಯೋ ಅವರಿಗೆ ಜಯವೆಂಬುದು ದುರ್ಲಭವು. ಅವರು ಮೃತ್ಯು ವಿನ ಬಾಯಿಗೆ ಬಿದ್ದಂತೆಯೇ! ಯಾರು ನಿನ್ನ ಕೋಪಕ್ಕೆ ಪಾತ್ರರಾಗು ವರೋ,ಅವರ ರಾಜ್ಯ, ಸಂಪತ್ತು, ಪುತ್ರಮಿತ್ರಾದಿ ಬಾಂಧವರು, ಅವರ ಪ್ರಾಣಗಳು, ಅವರ ಎಲ್ಲಾ ಸೌಖ್ಯಗಳು, ಎಲ್ಲವೂ ಆ ಕ್ಷಣವೇ ನಾಶ ಹೊಂದುವುವು" ಎಂದನು. ಆಗ ಕೃಷ್ಣನು "ಓ ಪರಂತಪಾ! ರಾಜಧರ್ಮ ದಲ್ಲಿ ನಿರತನಾದ ನಿನ್ನ ಕೋಪದಿಂದಲೇ ಸಮಸ್ತ ಕೌರವರೂ, ಬಂಧುಪುತ್ರ ಪರಿವಾರಗಳೊಡನೆ ಈಗಲೇ ನಾಶಹೊಂದಿದಂತೆ ತಿಳಿ" ಎಂದನು. ಆ ಮೇಲೆ ಭೀಮಸಾತ್ಯಕಿಗಳಿಬ್ಬರೂ ಬಂದು, ಧರ್ಮರಾಜನಿಗೆ ನಮಸ್ಕರಿಸಿ, ಇ ತರ ಪಾಂಚಾಲವೀರರಿಂದ ಪರಿವೃತರಾಗಿ, ಅಲ್ಲಿಯೇ ನೆಲದಮೇಲೆ ಕುಳಿತರು. ಮುಂದೆ ನಿಂತಿದ್ದ ದ್ರೌಪದಿಯು ಅವರನ್ನು ನೋಡಿ ಸಂತುಷ್ಟಳಾದಳು.

ಶತ್ರುಬಾಣಗಳಿಂದ ಗಾಯಪಟ್ಟ ಮೈಯುಳ್ಳ ಅವರಿಬ್ಬರನ್ನೂ ಆದರಿಸಿ, "ಓ ಭೀಮಾ! ಓ ಸಾತ್ಯಕೀ! ಕೌರವಸೈನ್ಯವೆಂಬ ಮಹಾಸಾಗರವನ್ನು ದಾಟಿಬಂದ ನಿಮ್ಮಿಬ್ಬರನ್ನೂ ಭಾಗ್ಯವಶದಿಂದ ನಾನು ನೋಡುವಂತಾಯಿತು. ದ್ರೋಣ ಕೃತವರ್ಮರೆಂಬ ಮಹಾಗ್ರಾಹಗಳಿಂದ ದಾಟಲಸಾಧ್ಯವಾದ ಮಹಾಸಮುದ್ರವನ್ನು ನೀವು ಭಾಗ್ಯವಶದಿಂದ ದಾಟಿದಿರಿ. ಭಾಗ್ಯವಶದಿಂದ ಅನೇಕ ಶತ್ರುರಾಜರು ನಿಮ್ಮಿಂದ ಹತರಾದರು. ಜಯಶಾಲಿಗಳಾಗಿ ಬಂದ ನಿಮ್ಮನ್ನು ತಿರುಗಿ ನೋಡುವಂತಾದುದು ನನ್ನ ಭಾಗ್ಯವೇ. ಮಹಾರಥನೆನಿಸಿದ ಆ ದ್ರೋಣನು, ಕೃತವರ್ಮನು, ಆ ಕರ್ಣನು, ಇವರೆಲ್ಲರೂ ನಿಮ್ಮಿಂದ ಪರಾಜಿತರಾದುದೂ ನನ್ನ ಭಾಗ್ಯವೇ. ವೀರನಾದ ಶಲ್ಯನು ನಿಮಗೆ ಸೋತು ಪರಾಙ್ಮುಖನಾಗಿ ನೀವು ಕ್ಷೇಮದಿಂದ ಬಂದುದೂ ನನ್ನ ಭಾಗ್ಯವೇ. ನೀವಿಬ್ಬರೂ ರಥಿಕಶ್ರೇಷ್ಠರು! ಇಬ್ಬರೂ ಯುದ್ಧವಿಶಾರದರು! ನನ್ನ ಮಾತಿಗೆ ತಪ್ಪದೆ ನಡೆಯತಕ್ಕವರು! ನನ್ನ ಗೌರವಕ್ಕಾಗಿಯೇ ಕಷ್ಟಪಡತಕ್ಕವರು! ಯುದ್ಧನಿಪುಣರು! ಎಂತಹ ಯುದ್ಧದಲ್ಲಿಯೂ ಪರಾಜಯವನ್ನು ಹೊಂದತಕ್ಕವರಲ್ಲ! ಇಂತಹ ನಿಮ್ಮನ್ನು ನಾನು ನೋಡುವಂತಾದುದು ನನ್ನ ಭಾಗ್ಯವೇ" ಎಂದು ಹೇಳಿ ಧರ್ಮರಾಜನು ಅವರಿಬ್ಬರನ್ನೂ ಪ್ರೇಮದಿಂದ ಅಪ್ಪಿಕೊಂಡನು. ಅವನ ಕಣ್ಣಿನಲ್ಲಿ ಆನಂದಬಾಷ್ಪವು ಸುರಿಯುತ್ತಿದ್ದಿತು. ಪಾಂಡವರ ಸೈನ್ಯವೆಲ್ಲವೂ, ಅತ್ಯಂತ ಸಂತೋಷದಿಂದ ತಿರುಗಿ ಯುದ್ಧಕ್ಕಾಗಿ ಉತ್ಸಾಹಗೊಂಡುದು.

ಇದು ನೂರ ಐವತ್ತನೆಯ ಅಧ್ಯಾಯವು.



## { ಸೈಂಧವವಧದಿಂದ ದುಃಖಿತನಾದ ದುರ್ಯೋಧನನು ದ್ರೋಣನ ಬಳಿಗೆ ಬಂದು ವ್ಯಸನಪಟ್ಟುದು. }

ಮಹಾರಾಜಾ! ಸೈಂಧವನು ಹತನಾದಮೇಲೆ ನಿನ್ನ ಮಗನಿಗೆ ಮುಂದಿನ ಯುದ್ಧದಲ್ಲಿ ಉತ್ಸಾಹವೇ ತಪ್ಪಿಹೋಯಿತು. ಮಹಾವ್ಯಸನದಿಂದ ಕಣ್ಣೀರುಬಿಡುತ್ತ ಆಗಾಗ ಕೋಪದಿಂದ ತುಟಿಗಳನ್ನು ಕಚ್ಚುವನು! ಆಗಾಗ

ಸರ್ಪದಂತೆ ನಿಟ್ಟುಸಿರನ್ನು ಬಿಡುವನು! ಲೋಕಕ್ಕೆಲ್ಲಾ ಅಪರಾಧಿಯಾದ ಆ ನಿನ್ನ ಮಗನ ವ್ಯಸನಕ್ಕೆ ಪಾರವೇ ಇರಲಿಲ್ಲ. ಒಂದು ಕಡೆ ಅರ್ಜುನನು, ಇನ್ನೊಂದುಕಡೆ ಭೀಮನು, ಮತ್ತೊಂದುಕಡೆ ಸಾತ್ಯಕಿ, ಈ ಮೂವರಿಂದಲೂ ತನ್ನ ಸೈನ್ಯವು ಘೋರವಾದ ಕೊಲೆಗೀಡಾದುದನ್ನು ನೋಡಿ ಅವನಿಗೆ ಮಹಾವ್ಯಸನದಿಂದ ಎಡೆಬಿಡದೆ ಕಣ್ಣೀರು ಸುರಿಯುತ್ತಿದ್ದಿತು. ಅವನ ಮುಖವು ಬಣ್ಣಗೆಟ್ಟಿತು! ಮೈ ಬಡವಾಯಿತು! ಆಗ ಅವನಿಗೆ ಭೂಮಿಯಲ್ಲಿ ಅರ್ಜುನನಿಗೆ ಸಮಾನನಾದ ಯುದ್ಧವೀರನೇ ಇಲ್ಲವೆಂದು ಮನಸ್ಸಿಗೆ ತೋರಿತು. ದ್ರೋಣನಾಗಲಿ, ಕರ್ಣನಾಗಲಿ, ಕೃಪಾಶ್ವತ್ಥಾಮರಾಗಲಿ ಅರ್ಜುನನೊಡನೆ ಯುದ್ಧಕ್ಕೆ ನಿಲ್ಲಲು ಸಮರ್ಥರೇ ಅಲ್ಲವೆಂಬ ನಿರ್ಧರವೂ ಅವನಿಗುಂಟಾಯಿತು. ಆಗ ಅವನು ತನ್ನಲ್ಲಿ ತಾನು “ಅಯ್ಯೋ! ನನ್ನ ಕಡೆಯ ಮಹಾರಥರನ್ನೆಲ್ಲ ಹೊಡೆದೋಡಿಸಿ ಅರ್ಜುನನು ಸೈಂಧವವಧವೆಂಬ ಪ್ರತಿಜ್ಞೆಯನ್ನು ಪೂರೈಸಿಕೊಂಡನಲ್ಲಾ? ನಮ್ಮಲ್ಲಿ ಅವನನ್ನು ಒಬ್ಬನಾದರೂ ತಡೆಯಲಾರದೆಹೋದನಲ್ಲಾ! ಮುಖ್ಯವಾಗಿ ಕೌರವಪಕ್ಷದ ದೊಡ್ಡ ಸೈನ್ಯವೆಲ್ಲ ಕ್ಷೀಣಿಸಿತು. ಸಾಕ್ಷಾದ್ದೇವೇಂದ್ರನೇ ನಮ್ಮ ಸಹಾಯಕ್ಕೆ ಬಂದರೂ ಅದನ್ನು ರಕ್ಷಿಸಿಕೊಳ್ಳಲಾರನು. ಆಹಾ! ಯಾವನಲ್ಲಿ ಪೂರ್ಣವಾದ ಭರವಸೆಯನ್ನಿಟ್ಟು ನಾನು ಯುದ್ಧಕ್ಕಾಗಿ ನಿಶ್ಚಯಿಸಿದೆನೋ, ಆ ಕರ್ಣನೇ ಪರಾಜಿತನಾದನು! ಸೈಂಧವನು ಸಂಹೃತನಾದನು. ಹಿಂದೆ ಸಭಾಮಧ್ಯದಲ್ಲಿ ತನ್ನ ವೀರ್ಯಮದದಿಂದ ಪಾಂಡವರನ್ನು ಕುರಿತು ಕ್ರೂರವಾಕ್ಯಗಳಿಂದ ಧಿಕ್ಕರಿಸಿದ ಆ ಕರ್ಣನೇ ಯುದ್ಧದಲ್ಲಿ ಸೋತು ಹಿಂತಿರುಗಿದನು. ಹಿಂದೆ ಸಂಧಿಗಾಗಿ ಬಂದ ಕೃಷ್ಣನನ್ನುಕೂಡ ನಾನು ನಿರಾಕರಿಸಿದುದು ಈ ಕರ್ಣನ ಬಲವನ್ನು ನಂಬಿಯೇ! ಕರ್ಣನ ಪರಾಕ್ರಮದಲ್ಲಿ ನಂಬಿಕೆಯಿಂದಲೇ ನಾನು ಆ ವಾಸುದೇವನನ್ನೂಕೂಡ ತೃಣಕ್ಕಿಂತಲೂ ಕಡೆಯಾಗಿ ಎಣಿಸಿದೆನು. ಅಂತಹ ಕರ್ಣನೇ ಯುದ್ಧದಲ್ಲಿ ಜಿತನಾದಮೇಲೆ ನಮಗೆ ರಕ್ಷಕರಾರು?” ಎಂದು ದುರ್ಯೋಧನನು ಮಹಾವ್ಯಸನದಿಂದ ದ್ರೋಣನ ಬಳಿಗೆ ಹೊರಟನು. ಅಲ್ಲಿ ತನ್ನ ಸೈನ್ಯದ ಕ್ಷಯವನ್ನೆಲ್ಲ ಅವನಿಗೆ ತಿಳಿಸಿದನು. ಪಾಂಡವರಿಗುಂಟಾದ ಜಯವನ್ನೂ, ತನ್ನ ತಮ್ಮಂದಿರ ಮರಣವನ್ನೂ ದ್ರೋಣನಿಗೆ ಹೇಳಿಕೊಂಡು ವಿಲಪಿಸುತ್ತ “ಆಚಾರ್ಯಾ! ಮೂರ್ಧಾಭಿಷಿಕ್ತರಾದ ಅನೇಕರಾಜರ

ಮರಣವನ್ನು ನೋಡಿದೆಯಾ? ನಮ್ಮ ಪಿತಾಮಹನಾದ ಭೀಷ್ಮನನ್ನು ಮುಂದಿಟ್ಟುಕೊಂಡು ಬಂದಾಗಲೂ ನಮ್ಮವರು ಅರ್ಜುನನಿಂದ ಹತರಾದರು. ಶಿಖಂಡಿಯು ಆ ಭೀಷ್ಮಾಚಾರ್ಯನನ್ನು ತಾನೇ ಜಯಿಸಿದೆನೆಂಬ ಗರ್ವದಿಂದ ಎಲ್ಲಾ ಪಾಂಚಾಲವೀರರೊಡನೆ ಸೇನೆಯ ಮುಂಭಾಗದಲ್ಲಿರುವನು. ನಿನಗೆ ಪ್ರಿಯಶಿಷ್ಯನಾಗಿ, ಶತ್ರುಗಳಿಗೆ ದುರ್ಜಯನೆನಿಸಿಕೊಂಡ ಜಯದ್ರಥನೂಕೂಡ ಅರ್ಜುನನಿಂದ ಹತನಾದನು. ಜಯದ್ರಥವಧಕ್ಕಾಗಿ ಅರ್ಜುನನು ಮುಂದೆಮುಂದೆ ಬರುವಾಗ, ನಮ್ಮ ಏಳು ಅಕ್ಷೌಹಿಣೀಸೈನ್ಯಗಳನ್ನೂ ಕೊಂದು ತೀರಿಸಿಬಿಟ್ಟನು. ನನಗೆ ವಿಜಯವನ್ನೂ, ಹಿತವನ್ನೂ ಕೋರಿ ಉಪಕಾರಮಾಡುವುದಕ್ಕೆ ಬಂದ ನನ್ನ ಸುಹೃತ್ತುಗಳೆಲ್ಲ ಯಮಪುರಿಗೆ ಕಳುಹಿಸಲ್ಪಟ್ಟರು. ಹೇಗೆತಾನೇ ನಾನು ಅವರ ಋಣವನ್ನು ತೀರಿಸಿ, ಅವರಲ್ಲಿ ಆನೃಣ್ಯವನ್ನು ಹೊಂದುವೆನು? ನನಗಾಗಿ ಭೂಮಿಯನ್ನು ಸಾಧಿಸಿಕೊಡಬೇಕೆಂದು ಬಂದ ಭೂಪತಿಗಳೆಲ್ಲರೂ, ತಮಗಿದ್ದ ಐಶ್ವರ್ಯವನ್ನು ಕಳೆದುಕೊಂಡು ಭೂಮಿಯಮೇಲೆ ಮಲಗುವಂತಾಯಿತು. ಹೀಗೆ ನಾನೇ ನನ್ನ ಮಿತ್ರರೆಲ್ಲರ ನಾಶಕ್ಕೆ ಕಾರಣವೆನಿಸಿದೆನು. ಇಂತಹ ಕುತ್ಸಿತಸ್ವಭಾವದ ನನಗೆ ಇನ್ನು ಸಾವಿರಾರು ಅಶ್ವಮೇಧಗಳಿಂದಲೂ ಪ್ರಾಯಶ್ಚಿತ್ತವಿಲ್ಲ. ಅಷ್ಟು ಯಾಗಗಳೂ ನನ್ನನ್ನು ಶುದ್ಧಿಮಾಡಲಾರವು. ಲೋಭಿಯೂ, ಪಾಪಿಯೂ, ಧರ್ಮಘಾತುಕನೂ ಆದ ನನ್ನ ಸಹಾಯಕ್ಕಾಗಿ ಬಂದವರೆಲ್ಲ ತಮ್ಮ ಪ್ರಾಣವನ್ನೊಪ್ಪಿಸಿ ಯಮಪುರಿಗೆ ಸಾಗಿಬಿಟ್ಟರು. ಮಹಾಪತಿತನೂ, ಮಿತ್ರದ್ರೋಹಿಯೂ ಆದ ನನಗೆ ಈ ಭೂಮಿಯೂ ಕೂಡ ಬಾಯಿತೆರೆದು ದಾರಿಯನ್ನು ಕೊಡಲಾರದು. ಅಯ್ಯೋ! ರಕ್ತದಿಂದ ತೊಯ್ದ ಮೈಯುಳ್ಳವನಾಗಿ, ಅನೇಕ ರಾಜರ ನಡುವೆ ಮಲಗಿರುವ ನಮ್ಮ ಪಿತಾಮಹನನ್ನು ನಾನು ರಕ್ಷಿಸಲಾರದೆಹೋದೆನು. ಅನಾರ್ಯನೂ, ಮಿತ್ರದ್ರೋಹಿಯೂ, ಅಧಾರ್ಮಿಕನೂ ಆದ ನನ್ನನ್ನುಕುರಿತು, ತನ್ನ ಪುಣ್ಯದಿಂದ ಪರಲೋಕವನ್ನು ಜಯಿಸಿದ ಆ ಮಹಾತ್ಮನು ಏನೆಂದು ಹೇಳುವನೋ? ನನ್ನ ಪ್ರಿಯಕ್ಕಾಗಿ ಯುದ್ಧಕ್ಕೆ ಬಂದ ಜಲಸಂಧನು ಸಾತ್ಯಕಿಯಿಂದ ಹತನಾಗಿ ಸತ್ತುಬಿದ್ದಿರುವುದನ್ನು ನೋಡು. ಇದರಂತೆಯೇ ಕಾಂಭೋಜರಾಜನು, ಅಲಂಬುಸನು, ಮೊದಲಾಗಿ ಇನ್ನೂ ಅನೇಕ ಶೂರರು ನನಗಾಗಿ ಪ್ರಾಣವ

ನ್ನೊಪ್ಪಿಸಿದರು. ಇನ್ನು ನಾನು ಈ ಲೋಕದಲ್ಲಿ ಬದುಕಿ ಆಗಬೇಕಾದು ದೇನು? ಅನೇಕರಾಜರು ನನ್ನ ಜಯವನ್ನುದ್ದೇಶಿಸಿ, ತಮ್ಮ ಶಕ್ತಿಮಾರಿ ಯುದ್ಧಮಾಡಿ, ಕೊನೆಗೆ ತಾವೇ ಹತರಾದರು. ಅವರ ಋಣವನ್ನು ತೀರಿಸಿ ಕೊಳ್ಳುವುದಕ್ಕಾಗಿ ಈಗಲೇ ನಾನು ಯಮುನಾನದಿಗೆ ಹೋಗಿ ಅಲ್ಲಿನ ತೀರ್ಥ ದಿಂದ ಅವರಿಗೆ ತರ್ಪಣವನ್ನು ಬಿಡುವೆನು. ಆ ವಿಧದಿಂದಲಾದರೂ ನನ್ನ ಶಕ್ತಿಯಿದ್ದವರೆಗೆ ಋಣದಿಂದ ಮುಕ್ತನಾಗುವೆನು. ಶಸ್ತ್ರಧಾರಿಗಳಲ್ಲಿ ಮೇಲೆ ನಿಸಿದ ಓ ಗುರುವರ್ಯಾ! ನಾನು ನಡೆಸಿದ ಯಾಗಗಳಮೇಲೆಯೂ, ತಟಾ ಕನಿರ್ಮಾಣಾದಿ ಧರ್ಮಕಾರ್ಯಗಳಮೇಲೆಯೂ, ನನ್ನ ಪರಾಕ್ರಮದಮೇ ಲೆಯೂ, ನನ್ನ ಮಕ್ಕಳಮೇಲೆಯೂ ಆಣೆಯಿಟ್ಟು ಹೇಳುವೆನು. ಆ ಎಲ್ಲಾ ಪಾಂಚಾಲರನ್ನೂ, ಪಾಂಡವರನ್ನೂ ಯುದ್ಧದಲ್ಲಿ ಕೊಂದು ನನ್ನ ಮನಸ್ಸಿಗೆ ತೃಪ್ತಿಮಾಡಿಕೊಳ್ಳದೆ ತೀರದು. ಹಾಗಿಲ್ಲವೇ ಯುದ್ಧದಲ್ಲಿ ಅವರ ಕೈಯಿಂದ ಸತ್ತು, ನನ್ನವರು ಸೇರಿದ ಲೋಕಗಳಿಗೆ ನಾನೂ ಹೋಗಿ ಸೇರುವೆನು. ನನಗಾಗಿ ಯುದ್ಧದಲ್ಲಿ ಎದೆಗೊಟ್ಟು, ಅರ್ಜುನನಿಂದ ಹತರಾದ ಪುರುಷಶ್ರೇ ಷ್ಠರು ಎಲ್ಲೆಲ್ಲಿರುವರೋ ಅಲ್ಲಿಗೇ ನಾನೂ ಹೋಗುವೆನು. ಆದರೆ ಯುದ್ಧ ದಲ್ಲಿ ನನ್ನಿಂದ ರಕ್ಷಿಸಲ್ಪಡಲಾರದೆ ಹೋದ ಆ ನನ್ನ ಮಿತ್ರರೆಲ್ಲ ಈಗ ನನ್ನಲ್ಲಿ ಬೇಸರಗೊಂಡು ನನ್ನೊಡನೆ ಸೇರಲು ಇಷ್ಟಪಡಲಾರರು. ಅವರಿಗೂಕೂಡ ಈಗ ಪಾಂಡವರಲ್ಲಿ ಹುಟ್ಟಿರುವ ಗೌರವಬುದ್ಧಿಯು ನನ್ನಲ್ಲಿ ಇರಲಾರದು. ಆಚಾರ್ಯಾ! ಸತ್ಯಸಂಧನಾದ ಆ ಭೀಷ್ಮನು ಯುದ್ಧರಂಗದಲ್ಲಿ ತಾನಾಗಿ ಯೇ ತನ್ನನ್ನು ಮರಣಕ್ಕೆ ಗುರಿಮಾಡಿಕೊಂಡನು. ನಮಗೆ ನಿಜವಾಗಿ ಜಯವನ್ನು ಕೋರತಕ್ಕ ನನ್ನ ಮಿತ್ರರೆಲ್ಲರೂ ಅರ್ಜುನನಿಂದ ಹತರಾದರು. ಅರ್ಜುನನು ನಿನಗೆ ಪ್ರಿಯಶಿಷ್ಯನಾದುದರಿಂದ ನೀನೂ ನಮ್ಮ ವಿಷಯದಲ್ಲಿ ಉಪೇಕ್ಷೆಯನ್ನೇ ತೋರಿಸುತ್ತಿರುವೆ. ನಮ್ಮವರು ಯುದ್ಧದಲ್ಲಿ ಹತರಾಗು ವುದಕ್ಕೆ ಇದೂ ಒಂದು ಕಾರಣವು. ಈಗ ನಿಜವಾಗಿ ನನ್ನ ಜಯವನ್ನು ಕೋರತಕ್ಕವನು ಕರ್ಣನೊಬ್ಬನೆಂದೇ ನನಗೆ ತೋರಿದೆ. ಲೋಕದಲ್ಲಿ ಯಾವನು ನಿಜವಾದ ಮೈತ್ರಿಯನ್ನು ತಿಳಿಯದೆ, ಮೂಢಬುದ್ಧಿಯಿಂದ ಇತರ ರನ್ನು ಮಿತ್ರಕಾರ್ಯಕ್ಕಾಗಿ ನಿಯಮಿಸುವನೋ ಅಂತವನ ಪ್ರಯೋಜನವು ಕೆಡುವುದು ನಿಶ್ಚಯವೇ! ಈಗ ನನಗೆ ಅತ್ಯಂತ ಮಿತ್ರರೆಂದು ನಂಬಿಕೆಯಿದ್ದ

ವರಿಂದಲೇ ಈ ಕಾರ್ಯವು ಹೀಗೆ ವಿಪರೀತವಾಗಿ ಪರಿಣಮಿಸಿತು! ಮೋಹ ವಶನೂ, ಲುಬ್ಧನೂ, ಪಾಪಾತ್ಮನೂ, ಕುಟಿಲನೂ ಆದ ನಾನು ಧನದಾಸೆ ಯಿಂದ ಈ ರೀತಿ ಪ್ರವರ್ತಿಸಿದೆನು. ನನ್ನ ಕಾರ್ಯವೆಲ್ಲವೂ ನನಗೆ ಪರಮ ಮಿತ್ರರೆನಿಸಿದವರಿಂದಲೇ ಈ ರೀತಿಯಾಗಿ ಪರಿಣಮಿಸಿತು. ಕಪಟಾಚಾರ ವುಳ್ಳವರೆಂದು ತಿಳಿಯದೆ, ಅವರೊಡನೆ ಕಲೆತು, ನನಗಾಗಿ ಯುದ್ಧಕ್ಕೆ ತಲೆ ಯೊಡ್ಡಿದ ಜಯದ್ರಥನೂ, ಸೋಮದತ್ತಕುಮಾರನೂ ಕೊನೆಗೆ ಪ್ರಾಣವ ನ್ನೊಪ್ಪಿಸಿಬಿಟ್ಟರು. ಅದರಂತೆಯೇ ಅಭೀಷಾಹರು, ಶೂರಸೇನರು, ಶಿಬಿ ಗಳು, ವಸಾತಿಗಳು, ಇವರೆಲ್ಲರೂ ನನಗಾಗಿ ಪ್ರಾಣವನ್ನೊಪ್ಪಿಸಿದರು. ಇನ್ನು ನಾನೂ ಅವರ ದಾರಿಯನ್ನೇ ಹಿಂಬಾಲಿಸುವೆನು. ಪುರುಷಶ್ರೇಷ್ಠರಾದ ಅವ ರನ್ನು ಬಿಟ್ಟು ನನಗೆ ಇನ್ನು ಈ ಲೋಕದಲ್ಲಿ ಬದುಕಿದ್ದು ಆಗಬೇಕಾದು ದೇನು? ಏನೂ ಇಲ್ಲ. ಪಾಂಡವರಿಗೆ ಆಚಾರ್ಯನೆನಿಸಿದ ಓ ಬ್ರಾಹ್ಮಣೋ ತ್ತಮಾ! ನನಗೆ ಅನುಮತಿಯನ್ನು ಕೊಡು" ಎಂದನು.

ಇದು ನೂರ ಐವತ್ತೊಂದನೆಯ ಅಧ್ಯಾಯವು.

---

ದ್ರೋಣನು ದುರ್ಯೋಧನನ ನೀಚಬುದ್ಧಿಗಾಗಿ ಅವನನ್ನು
ನಿಂದಿಸಿ ಸಮಾಧಾನಹೇಳಿ ಯುದ್ಧಕ್ಕೆ ಹೊರಟುದು.

ಆಗ ಧೃತರಾಷ್ಟ್ರನು ಸಂಜಯನನ್ನು ಕುರಿತು "ಸಂಜಯಾ! ದುರ್ಯೋಧನನು ಆಚಾರ್ಯನೊಡನೆ ಕೌರವರೆಲ್ಲರ ಮುಂದೆ ಮರ್ಮೋ ದ್ಘಾಟಕವಾದ ಅಂತಹ ಕಠಿನೋಕ್ತಿಗಳನ್ನಾಡಿದಮೇಲೆ, ದ್ರೋಣನು ಹೇಳಿ ದುದೇನು? ಯುದ್ಧದಲ್ಲಿ ಭೂರಿಶ್ರವಸ್ಸೂ, ಸೈಂಧವನೂ ಹತನಾದಮೇಲೆ ನನ್ನ ಮಕ್ಕಳ ಮನಸ್ಸು ಹೇಗಿದ್ದಿತು?" ಎನಲು, ಸಂಜಯನು "ಮಹಾ ರಾಜಾ! ಸೈಂಧವನ ಮತ್ತು ಭೂರಿಶ್ರವಸ್ಸಿನ ಮರಣವನ್ನು ನೋಡಿ ನಮ್ಮ ಸೈನ್ಯದೊಳಗೆಲ್ಲ ಮಹತ್ತಾದ ಸಂಕಟದಿಂದ ಹಾಹಾಕಾರವುಂಟಾಯಿತು. ಆಗ ಎಲ್ಲರೂ ನಿನ್ನ ಮಗನ ದುರ್ಬುದ್ಧಿಯನ್ನೇ ನಿಂದಿಸುತ್ತಿದ್ದರು. ಅವನ ದುರಾಲೋಚನೆಯಿಂದಲೇ ನೂರಾರುಮಂದಿ ಕ್ಷತ್ರಿಯರು ಹತರಾದರೆಂದು ಎಲ್ಲರೂ ಹೇಳಿಕೊಳ್ಳುತ್ತಿದ್ದರು. ದ್ರೋಣಾಚಾರ್ಯನು ನಿನ್ನ ಮಗನ

ದುರ್ವಾಕ್ಯಗಳನ್ನು ಕೇಳಿದಮೇಲೆ, ಬಹಳ ಖಿನ್ನನಾಗಿ, ಒಂದು ಮುಹೂರ್ತ ಕಾಲದವರೆಗೆ ವ್ಯಸನದಿಂದ ಮಾತಾಡದೆ ಕೇವಲ ಧ್ಯಾನಪರನಾಗಿದ್ದು ಆಮೇಲೆ ಹೀಗೆಂದನು. “ ದುರ್ಯೋಧನಾ! ನೀನೇಕೆ ನನ್ನನ್ನು ಆಗಾಗ ಇಂತಹ ವಾಗ್ಬಾಣಗಳಿಂದ ಚುಚ್ಚುತ್ತಿರುವೆ? ನಾನು ಮೊದಲಿಂದಲೇ ಆ ಸವ್ಯಸಾಚಿ ಯನ್ನು ಜಯಿಸುವುದು ನಿನಗೆ ಸಾಧ್ಯವಿಲ್ಲವೆಂದು ಹೇಳುತ್ತಿರುವೆನು. ದುರ್ಯೋಧನಾ! ಅಷ್ಟೇಕೆ? ಸಾಮಾನ್ಯನಾದ ಶಿಖಂಡಿಯೇ ಅರ್ಜುನ ನಿಂದ ರಕ್ಷಿತನಾಗಿ, ಆ ಭೀಷ್ಮನನ್ನು ಕೊಂದನೆಂದಮೇಲೆ, ಅದೊಂದೇ ಅರ್ಜುನನ ಮಹಿಮೆಯೆಂತದೆಂಬುದನ್ನು ತಿಳಿಯಲು ಸಾಕಾದ ನಿದರ್ಶನ ವಲ್ಲವೆ? ದೇವ ದಾನವರಿಗೂ ವಧ್ಯನಲ್ಲದ ಆ ಭೀಷ್ಮನು, ಅಷ್ಟು ಸುಲಭ ವಾಗಿ ಯುದ್ಧದಲ್ಲಿ ಹತನಾದಾಗಲೇ ನಾನು ಈ ಯುದ್ಧದಲ್ಲಿ ಕೌರವಸೈ ನ್ಯವು ಹೇಗೂ ಉಳಿಯಲಾರದೆಂದು ತಿಳಿದುಬಿಟ್ಟೆನು. ಲೋಕದಲ್ಲಿ ಎಲ್ಲ ರಿಗಿಂತಲೂ ಮಹಾಶೂರನೆಂದು ಪ್ರಸಿದ್ಧನಾದ ಭೀಷ್ಮನೇ ಯುದ್ಧದಲ್ಲಿ ಹತನಾದನೆಂದಮೇಲೆ, ಇನ್ನುಳಿದ ಯಾರನ್ನು ನಾವು ನಂಬಬಹುದು? ಹಿಂದೆ ಕೌರವಸಭೆಯಲ್ಲಿ ಶಕುನಿಯು ಯಾವ ದಾಳಗಳನ್ನೆಸೆದನೋ, ಅವು ನಿಜ ವಾಗಿ ದಾಳಗಳಲ್ಲ. ಅವು ನಮ್ಮನ್ನು ಕೊಲ್ಲುವ ಬಾಣಗಳೆಂದೇ ತಿಳಿ. ದುರ್ಯೋಧನಾ! ಆಗಿನ ದಾಳಗಳೇ ಈಗ ಅರ್ಜುನನಿಂದ ಪ್ರೇರಿಸಲ್ಪಟ್ಟ ತೀಕ್ಷ್ಣಬಾಣಗಳಾಗಿ ನಮ್ಮನ್ನು ಕೊಲ್ಲುತ್ತಿರುವುವು. ಎಲ ಮೂಢಾ! ಧೀರನೂ, ಧೀಮಂತನೂ, ಮಹಾತ್ಮನೂ ಆದ ವಿದುರನು ನಿನ್ನ ಕ್ಷೇಮವ ನ್ನುದ್ದೇಶಿಸಿ ನಿನಗೆ ಎಷ್ಟೋ ಹಿತವಾದಗಳನ್ನು ಹೇಳಿದನು. ಅವನು ನಿಮ್ಮ ಮುಂದೆ ಗೋಳಾಡಿ, ಸಾರಿಸಾರಿ ಬುದ್ಧಿವಾದಗಳನ್ನು ಹೇಳಿದರೂ ನೀನು ಅದನ್ನು ಮನಸ್ಸಿಗೆ ತಂದುಕೊಳ್ಳಲಿಲ್ಲ. ಆ ನಿನ್ನ ಗರ್ವವೇ ಈಗ, ಈ ಮಹಾ ನರ್ಥರೂಪವಾಗಿ ಪರಿಣಮಿಸಿತು. ಅವನ ಮಾತನ್ನು ನೀನು ಅವಮಾನ ಗೊಳಿಸಿದುದು, ಮತ್ತು ದುಶ್ಶಾಸನನು ನಡೆಸಿದ ದುರಾಗತಗಳು, ಇವೆಲ್ಲವೂ ಇಂತಹ ನಾಶಕ್ಕೆ ಮೂಲಕಾರಣವಾಯಿತು. ಲೋಕದಲ್ಲಿ ಯಾವನು ಮೂಢಬುದ್ಧಿಯಿಂದ ಆಪ್ತರಾದ ಸುಹೃತ್ತುಗಳ ಹಿತವಾದವನ್ನು ನಿರಾಕರಿಸಿ, ತನ್ನ ಸ್ವೇಚ್ಛೆಯಿಂದಲೇ ನಡೆಯುವನೋ, ಅವನು ಶೀಘ್ರದಲ್ಲಿಯೇ ದುಃಖ ಕ್ಕೆಡೆಯಾಗುವನು. ದುರ್ಯೋಧನಾ! ನಾವೆಲ್ಲರೂ ನೋಡುತ್ತಿದ್ದಹಾಗೆ

ಯೇ ನೀನು ಆ ದ್ರೌಪದಿಯನ್ನು ರಾಜಸಭಾಮಧ್ಯಕ್ಕೆ ಎಳೆತರಿಸಿದೆ! ಅವಳೇನು ಸಾಮಾನ್ಯಳೇ? ಸಮಸ್ತಧರ್ಮಗಳನ್ನೂ ತಿಳಿದು ನಡೆಯತಕ್ಕವಳು. ಸತ್ಕುಲದಲ್ಲಿ ಹುಟ್ಟಿದವಳು. ರಾಜಸಭೆಗೆ ಸೆಳೆತರಲು ಯೋಗ್ಯವಲ್ಲದ ಸ್ಥಿತಿಯಲ್ಲಿದ್ದವಳು. ಅಂತವಳನ್ನು ನೀನು ಅವಮಾನಗೊಳಿಸಿದೆ! ಆ ನಿನ್ನ ಅಧರ್ಮಕ್ಕೆ ತಕ್ಕ ಫಲವು ಈಗ ಪ್ರಾಪ್ತವಾಯಿತು. ಇದು ಹೀಗಾಗದಿದ್ದರೆ ನಿನ್ನ ಕಷ್ಟವು ಇಷ್ಟರಲ್ಲಿ ಮುಗಿಯುತ್ತಿರಲಿಲ್ಲ. ಆ ಪಾಪಕ್ಕಾಗಿ ನೀನು ಪರಲೋಕದಲ್ಲಿ ಇನ್ನೂ ಅಧಿಕವಾದ ಸಂಕಟಕ್ಕೊಳಗಾಗುತಿದ್ದೆ. ದುರ್ಯೋಧನಾ! ನೀನು ಆ ಪಾಂಡವರನ್ನು ಮೋಸದಿಂದ ಜೂಜಿನಲ್ಲಿ ಜಯಿಸಿ, ಅವರಿಗೆ ಕೃಷ್ಣಾಜಿನವನ್ನುಡಿಸಿ, ಅರಣ್ಯಕ್ಕೆ ಕಳುಹಿಸಿದೆ. ನಿನಗೆ ಮಕ್ಕಳಂತಿದ್ದು ಸದಾ ಧರ್ಮರತರಾಗಿದ್ದ ಅಂತವರ ವಿಷಯದಲ್ಲಿ ನಾನೊಬ್ಬನುಹೊರತು ಬ್ರಾಹ್ಮಣನೆನಿಸಿಕೊಂಡ ಬೇರೆ ಯಾವನುತಾನೇ ವಿರೋಧಿಸಿನಿಲ್ಲುವನು? ನಿನಗಾಗಿ ನಾನೂ ಅಂತಹ ಧರ್ಮಾತ್ಮರನ್ನು ವಿರೋಧಿಸಬೇಕಾಯಿತು. ನೀನೂ, ಶಕುನಿಯೂ ಸೇರಿಕೊಂಡು ನಿನ್ನ ತಂದೆಯಾದ ಧೃತರಾಷ್ಟ್ರನನ್ನು ಈ ದುಷ್ಕಾರ್ಯಕ್ಕೆ ಒಪ್ಪಿಸಿ, ಆ ಕೌರವಸಭೆಯಲ್ಲಿ ಪಾಂಡವರನ್ನು ಮೋಸಗೊಳಿಸಿ, ಅವರಿಗೆ ಕೋಪವನ್ನುಂಟುಮಾಡಿದೆ. ಆ ಕೋಪಾಗ್ನಿಯನ್ನು ಕರ್ಣದುಶ್ಶಾಸನರಿಬ್ಬರೂ ಸೇರಿ. ಇನ್ನೂ ಹೆಚ್ಚಾಗಿ ವೃದ್ಧಿಗೊಳಿಸಿದರು. ವಿದುರನ ಮಾತನ್ನು ಕೇಳದೆ ನೀನೂ ಆ ಕೋಪಾಗ್ನಿಯನ್ನು ಮೇಲೆ ಮೇಲೆ ಬೆಳೆಸಿದೆ. ಆ ಮಹಾತ್ಮರ ಕೋಪವೆಂಬ ವಿಷವೃಕ್ಷವು ರೂಢಮೂಲವಾಗಿ ಬೆಳೆದು, ಅದರಲ್ಲಿ ಪುಷ್ಪಗಳೂ, ಫಲಗಳೂ ಈಗ ತಲೆದೋರುತ್ತಿವೆ. ಅವುಗಳನ್ನು ನೀನು ಈಗ ಅನುಭವಿಸದೆ ತೀರದು. ದುರ್ಯೋಧನಾ! ಆ ಸೈಂಧವನನ್ನು ರಕ್ಷಿಸುವುದಕ್ಕಾಗಿ ಎಷ್ಟೋಮಂದಿ ಮಹಾರಥರನ್ನು ನೀನು ಕಾವಲಿರಿಸಿದ್ದೆಯಲ್ಲವೆ? ಅವರೆಲ್ಲರೂ ಅಷ್ಟು ಜಾಗರೂಕತೆಯಿಂದಿರುವಾಗಲೂ ಅವನು ಅರ್ಜುನನಿಂದ ಹತನಾದುದು ಹೇಗೆ? ನೀನು, ಕರ್ಣನು, ಕೃಪನು, ಶಲ್ಯನು, ಅಶ್ವತ್ಥಾಮನು, ನೀವೆಲ್ಲರೂ ಬದುಕಿರುವಾಗಲೇ ಆ ಸೈಂಧವನು ಹೇಗೆ ತನ್ನ ಪ್ರಾಣಗಳನ್ನು ಕಳೆದುಕೊಂಡನು? ಮಹಾಬಲಾಢ್ಯರಾದ ಅನೇಕ ರಾಜರು ಆ ಸೈಂಧವನನ್ನು ರಕ್ಷಿಸುವುದಕ್ಕಾಗಿ ತಮ್ಮ ಶಕ್ತಿಮೀರಿ ತಡೆಯುತ್ತಿದ್ದಾಗಲೂ, ಈ ಎಲ್ಲರ ನಡುವೆ ಸೈಂಧವನು ಅರ್ಜುನನ ಕೈಗೆ

ಸಿಕ್ಕಿ ಹತನಾದುದು ಹೇಗೆ? ದುರ್ಯೋಧನಾ! ಆ ಸಿಂಧುರಾಜನು ತನ್ನ ರಕ್ಷಣೆಯ ಭಾರವು ನಿನ್ನಲ್ಲಿಯೂ ಮತ್ತು ವಿಶೇಷವಾಗಿ ನನ್ನಲ್ಲಿಯೂ ಇರುವುದಾಗಿ ನಂಬಿದ್ದನು. ಅವನ ನಂಬಿಕೆಯು ನೆರವೇರದೆಹೋಯಿತು. ನಮ್ಮೆಲ್ಲರ ರಕ್ಷಣೆಯಲ್ಲಿದ್ದ ಆ ಸೈಂಧವನೇ ಹತನಾದಮೇಲೆ, ಇನ್ನು ಮುಂದೆ ನಮ್ಮ ಬದುಕಿಗೂ ಅವಕಾಶವಿಲ್ಲವೆಂದೇ ತೋರುವುದು. ಈಗ ಆ ಶಿಖಂಡಿಯೊಡಗೂಡಿದ ಪಾಂಚಾಲರನ್ನೆಲ್ಲ ಕೊಲ್ಲುವಮೊದಲು ನಾನೇ ಧೃಷ್ಟದ್ಯುಮ್ನನ ಯುದ್ಧದಲ್ಲಿ ಸಾಯುವಂತೆ ತೋರುತ್ತಿದೆ. ಓ ದುರ್ಯೋಧನಾ! ಹೀಗೆ ನನ್ನ ಬದುಕಿನಲ್ಲಿಯೇ ನಾನು ನಿರಾಶನಾಗಿರುವಾಗ, ನೀನು ಮೇಲೆಮೇಲೆ ನನ್ನನ್ನು ನಿನ್ನ ವಾಗ್ಬಾಣಗಳಿಂದಲೂ ಚುಚ್ಚುವೆಯೇಕೆ? ಆ ಸೈಂಧವನ ರಕ್ಷಣೆಯಲ್ಲಿ ನೀನು ಅಶಕ್ತನಾಗಿ, ನನ್ನನ್ನೇಕೆ ಹೀಗೆ ನಿಂದಿಸುತ್ತಿರುವೆ? ಸತ್ಯಸಂಧನೂ, ಮಹಾಸಾಹಸಿಯೂ ಆದ ಆ ಭೀಷ್ಮನೆಂಬ ಸುವರ್ಣಧ್ವಜವನ್ನೇ ಕಳೆದುಕೊಂಡ ನೀನು, ಇನ್ನೂ ಹೇಗೆ ನಿನ್ನ ಜಯದಲ್ಲಿ ಆಸೆಯನ್ನಿಟ್ಟುಕೊಂಡಿರುವೆ? ನಮ್ಮಕಡೆಯ ಅನೇಕ ಮಹಾರಥರ ಮಧ್ಯದಲ್ಲಿಯೇ ಆ ಸೈಂಧವನೂ, ಆ ಭೂರಿಶ್ರವಸ್ಸೂ ಹತರಾದಮೇಲೆ, ಇನ್ನೇನು ತಾನೇ ಉಳಿದಿರುವುದೆಂದು ನೀನು ತಿಳಿಯುವೆ. ಈಗ ಆ ಕೃಪನೊಬ್ಬನು ಮಾತ್ರ ಬದುಕಿರಬಹುದು. ಅವನೂ ಇಷ್ಟರಲ್ಲಿಯೇ ಸೈಂಧವನ ಗತಿಯನ್ನು ಹಿಂಬಾಲಿಸದಿದ್ದುದಕ್ಕಾಗಿ ನಾನು ಅವನನ್ನು ಅಭಿನಂದಿಸುವೆನು. ರಾಜಾ! ನೀನೂ, ನಿನ್ನ ತಮ್ಮನಾದ ದುಶ್ಶಾಸನನೂ ಕಣ್ಣೆದಿರಾಗಿ ನೋಡುತ್ತಿರುವಾಗಲೇ ಇಂದ್ರಾದಿ ದೇವತೆಗಳಿಗೂ ದುರ್ಜಯನೂ, ಯುದ್ಧದಲ್ಲಿ ಅಸಾಧ್ಯಕಾರ್ಯಗಳನ್ನು ನಡೆಸಿದವನೂ ಆದ ಆ ಭೀಷ್ಮನು ಹತನಾದುದನ್ನು ನೋಡಿದ ನನಗೆ, ಇನ್ನುಮೇಲೆ ಈ ಭೂಮಿಯು ನಿನ್ನ ಭಾಗಕ್ಕಿಲ್ಲವೆಂದೇ ನಿಶ್ಚಯವೇರ್ಪಟ್ಟಿತು. ದುರ್ಯೋಧನಾ! ಅದುದಾಯಿತು! ಇದೋ ನೋಡು! ಪಾಂಡವ ಸೃಂಜಯಸೈನ್ಯಗಳೆಲ್ಲ ಒಂದಾಗಿ ಸೇರಿ ಈಗ ನನ್ನನ್ನು ಇದಿರಿಸುವುದಕ್ಕಾಗಿ ಬರುತ್ತಿವೆ. ಈ ಪಾಂಚಾಲರನ್ನೆಲ್ಲ ಕೊಂದಲ್ಲದೆ ನಾನು ಈ ಯುದ್ಧಕವಚವನ್ನು ಕಳೆಯುವುದಿಲ್ಲ. ಈ ಮುಂದಿನ ಯುದ್ಧದಲ್ಲಿ ನಿನ್ನ ಮನಸ್ಸಿಗೆ ಹಿತವಾದ ಕಾರ್ಯಗಳನ್ನು ನಾನು ಮಾಡಿಬರುವೆನು. ರಾಜಾ! ಈಗಲೇ ನೀನು ನನ್ನ ಮಗನಾದ ಅಶ್ವತ್ಥಾಮನ ಬಳಿಗೆ ಹೋಗಿ ನನ್ನ

ಮಾತಿನಿಂದ ಹೀಗೆಂದು ಹೇಳು! "ನಿನ್ನ ಜೀವವನ್ನು ಎಚ್ಚರಿಕೆಯಿಂದ ಕಾಪಾಡಿಕೊಂಡು ಸೋಮಕರನ್ನು ಧ್ವಂಸಮಾಡಬೇಕು. ಅವರನ್ನು ಬಿಡಬಾರದು! ಇದು ನಿನ್ನ ತಂದೆಯ ಆಜ್ಞೆ! ಆ ಪಿತ್ರಾಜ್ಞೆಯನ್ನು ನೀನು ರಕ್ಷಿಸಬೇಕು" ಎಂದು ತಿಳಿಸು. ಮತ್ತು ಅವನಿಗೆ ನೀನು, ಅಹಿಂಸೆ, ಸತ್ಯ, ಇಂದ್ರಿಯನಿಗ್ರಹ, ಋಜುತ್ವ ಮುಂತಾದ ಗುಣಗಳಲ್ಲಿ ಸ್ಥಿರವಾಗಿ ನಿಲ್ಲುವಂತೆಯೂ, ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳನ್ನು ಸರಿಯಾಗಿ ಅನುಷ್ಠಿಸುವಂತೆಯೂ ಹೇಳು! ನೀನೂ ಬ್ರಾಹ್ಮಣರನ್ನು ಯಥಾಶಕ್ತಿಯಾಗಿ ಪೂಜಿಸುತ್ತ, ಅವರ ಕಣ್ಣಿಗೂ, ಮನಸ್ಸಿಗೂ ಸಂತೋಷವುಂಟಾಗುವಂತೆ ಮಾಡಬೇಕು. ಅವರಿಗೆ ಯಾವ ವಿಧದಿಂದಲೂ ಅಪ್ರಿಯವನ್ನು ಮಾಡಬಾರದು. ಅವರು ಅಗ್ನಿಜ್ವಾಲೆಗೆ ಸಮಾನರು. ಇದನ್ನು ನೀನು ಚೆನ್ನಾಗಿ ಮನಸ್ಸಿನಲ್ಲಿಡು. ನಿನ್ನ ವಾಗ್ಬಾಣಗಳಿಂದ ನೊಂದ ನಾನು, ಇದೋ! ಈಗಲೇ ಪ್ರಬಲಯುದ್ಧಕ್ಕಾಗಿ ಶತ್ರುಸೈನ್ಯವನ್ನು ಪ್ರವೇಶಿಸುವೆನು. ಓ ರಾಜಕುಮಾರಾ! ನಿನ್ನಿಂದ ಸಾಧ್ಯವಾದರೆ ನಮ್ಮ ಸೈನ್ಯವನ್ನು ರಕ್ಷಿಸುತ್ತಿರು. ಈ ದಿನದ ರಾತ್ರಿಯಲ್ಲಿಯೂ ಯುದ್ಧವನ್ನು ನಡೆಸುವುದಾಗಿ ನಾನು ನಿಶ್ಚಯಿಸಿರುವೆನು. ಕೌರವರೆಲ್ಲ ಈ ರಾತ್ರಿ ಯುದ್ಧಕ್ಕೆ ಸಿದ್ಧರಾಗಿರಲಿ" ಎಂದು ಹೇಳಿ, ದ್ರೋಣನು ಪಾಂಡವರೂ, ಸೃಂಜಯರೂ ಸೇರಿರತಕ್ಕ ಸೈನ್ಯದಕಡೆಗೆ ಹೊರಟು, ದಾರಿಯುದ್ದಕ್ಕೂ ತನಗಿದಿರಾದ ಕ್ಷತ್ರಿಯರ ತೇಜಸ್ಸನ್ನೆಲ್ಲ ಕಂದಿಸುತ್ತ ಮುಂದೆ ಹೊರಟನು.

ಇದು ನೂರ ಐವತ್ತೆರಡನೆಯ ಅಧ್ಯಾಯವು.



ದ್ರೋಣನು ಪಾಂಡವಪಕ್ಷಪಾತಿಯಾದುದರಿಂದಲೇ ತಮ್ಮಲ್ಲಿ ಉದಾಸೀನನಾಗಿರುವನೆಂದು ದುರ್ಯೋಧನನು ಹೇಳಲು, ಕರ್ಣನು ಅವನನ್ನು ಖಂಡಿಸಿ ತಮ್ಮ ಅಪಜಯವು ದೈವಾಯತ್ತವೆಂದುದು. ರಾತ್ರಿ ಯುದ್ಧಾರಂಭವು.

ಮಹಾರಾಜಾ! ದ್ರೋಣನಿಂದ ಪ್ರೋತ್ಸಾಹಿತನಾದ ನಿನ್ನ ಮಗನು, ಆ ದ್ರೋಣನ ಬುದ್ಧಿವಾದಗಳಿಗೆ ಕಿವಿಗೊಡದೆ, ಕೋಪವಶನಾಗಿ ತಿರುಗಿ ಯುದ್ಧಕ್ಕೆ ನಿಶ್ಚಯಿಸಿದನು. ಒಡನೆ ಅವನು ಕರ್ಣನ ಬಳಿಗೆ ಹೋಗಿ

“ಮಿತ್ರ ಕರ್ಣಾ! ನೋಡಿದೆಯಾ! ಕೃಷ್ಣಸಹಾಯವುಳ್ಳ ಕಿರೀಟಿಯು, ದೇವತೆಗಳಿಗೂ ದುರ್ಭೇದ್ಯವಾಗಿರುವಂತೆ ನಮ್ಮ ಆಚಾರ್ಯನಿಂದ ರಚಿಸಲ್ಪಟ್ಟ ವ್ಯೂಹವನ್ನೂ ಭೇದಿಸಿಕೊಂಡುಬಂದು, ನೀನೂ, ಆ ದ್ರೋಣನೂ ತಡೆಯುತ್ತಿರುವಾಗಲೇ ಎಲ್ಲಾ ಕೌರವಯೋಧರ ಕಣ್ಣೆದಿರಾಗಿ ಸೈಂಧವನನ್ನು ಕೊಂದುಕೆಡಹಿದನು. ಬಹಳ ಬಲಾಢ್ಯರೆಂದು ಪ್ರಸಿದ್ಧಿಗೊಂಡ ನಮ್ಮ ಕಡೆಯ ಅನೇಕರಾಜರನ್ನು ಆ ಪಾರ್ಥನೊಬ್ಬನೇ ಸಿಂಹವು ಕ್ಷುದ್ರಮೃಗಗಳನ್ನು ಹೇಗೋ ಹಾಗೆ ಓಡಿಸಿಬಿಟ್ಟನು. ಎಷ್ಟೋ ಜನರು ಅವನಿಂದ ಹತರಾದರು! ನಾನೂ ಬಹಳ ಸಾಹಸದಿಂದ ಹೆಣಗಾಡುತ್ತಿರುವಾಗಲೂ, ಅರ್ಜುನನು ನಮ್ಮ ಸೈನ್ಯವನ್ನೆಲ್ಲ ಕೊಂದು, ಅಲ್ಪಸ್ವಲ್ಪವನ್ನೇ ಉಳಿಸಿರುವನು. ಕರ್ಣಾ! ಇದರಿಂದ ನೀನು ತಿಳಿಯುವುದೇನು? ದ್ರೋಣನು ಯುದ್ಧಕ್ಕೆ ನಿಂತಮೇಲೆ, ಅರ್ಜುನನಿಗೆ ಎಷ್ಟೇ ಪ್ರಯತ್ನದಿಂದಾದರೂ ನಮ್ಮ ವ್ಯೂಹವನ್ನು ಭೇದಿಸಿಕೊಂಡುಹೋಗುವುದು ಎಂದಾದರೂ ಸಾಧ್ಯವೇ? ಅವನು ಸೈಂಧವನನ್ನು ಕೊಂದು ತನ್ನ ಪ್ರತಿಜ್ಞೆಯನ್ನು ಕೊನೆಗಾಣಿಸಿಯೇಬಿಟ್ಟನು! ಇಂದ್ರಪರಾಕ್ರಮವುಳ್ಳ ಎಷ್ಟುಮಂದಿ ರಾಜರು ಆ ಅರ್ಜುನನಿಂದ ಹತರಾಗಿ ಬಿದ್ದಿರುವರು ನೋಡು! ಇದೆಲ್ಲಾ ದ್ರೋಣನಿಗೆ ಸಮ್ಮತವಿಲ್ಲದಿದ್ದಪಕ್ಷದಲ್ಲಿ, ಆ ಅರ್ಜುನನು ಎಷ್ಟೇ ಪ್ರಯತ್ನಪಟ್ಟರೂ, ಎಷ್ಟೇ ಪರಾಕ್ರಮಿಯಾಗಿದ್ದರೂ, ದುರ್ಭೇದ್ಯವಾದ ನಮ್ಮ ವ್ಯೂಹವನ್ನು ಹೇಗೆತಾನೇ ಭೇದಿಸಿಕೊಂಡು ಹೋಗಲು ಸಾಧ್ಯವು? ಮುಖ್ಯವಾಗಿ ಅರ್ಜುನನು ದ್ರೋಣಾಚಾರ್ಯನಿಗೆ ಬಹಳ ಪ್ರೇಮಪಾತ್ರನು! ಅದರಿಂದಲೇ ಆ ಆಚಾರ್ಯನು ಯುದ್ಧಮಾಡದೆಯೇ ಅಲಕ್ಷ್ಯವಾಗಿದ್ದು, ಅರ್ಜುನನಿಗೆ ತಾನಾಗಿ ದಾರಿಯನ್ನು ಮಾಡಿಕೊಟ್ಟನು! ಆ ದ್ರೋಣನು ಸಿಂಧುರಾಜನನ್ನು ಕಾಪಾಡುವುದಾಗಿ ಅಭಯವನ್ನು ಕೊಟ್ಟಿದ್ದರೂ, ನನ್ನಲ್ಲಿ ತನಗೆ ಗುಣವಿಲ್ಲವೆಂದು ತಿಳಿದು, ಅರ್ಜುನನಿಗೆ ದಾರಿಯನ್ನು ಬಿಟ್ಟುಬಿಟ್ಟನು. ಮೊದಲೇ ಸೈಂಧವನು, ತಾನು ಯುದ್ಧವನ್ನು ಬಿಟ್ಟು ಮನೆಗೆ ಹೋಗಿ ಸೇರಿಕೊಳ್ಳುವುದಾಗಿ ಕೇಳಿದಾಗ, ಆ ದ್ರೋಣನು ಅದಕ್ಕೆ ಅನುಮತಿಯನ್ನು ಕೊಟ್ಟಿದ್ದಪಕ್ಷದಲ್ಲಿ, ಅರ್ಜುನನಿಂದ ನಮ್ಮಲ್ಲಿ ಇಷ್ಟು ಜನಕ್ಷಯವಾಗುವುದಕ್ಕೇ ಕಾರಣವಿಲ್ಲ. ಅಯ್ಯೋ ಪಾಪವೇ! ಆ ಬಡಸೈಂಧವನು ತನ್ನ ಜೀವವನ್ನುಳಿಸಿಕೊಳ್ಳುವುದಕ್ಕಾಗಿ ಯುದ್ಧವನ್ನು

ಬಿಟ್ಟು ಮನೆಗೆ ಹೋಗುತ್ತಿರುವಾಗ, ನಾನು ದ್ರೋಣನ ಮಾತನ್ನು ನಂಬಿ ಅವನನ್ನು ತಡೆದು ನಿಲ್ಲಿಸಿದೆನು. “ಅರ್ಜುನನು ಸೈಂಧವನ ಬಳಿಗೆ ಹೋಗದಂತೆ ನಾನು ತಡೆಯುವೆನು! ನಾನು ಅವನನ್ನು ರಕ್ಷಿಸುವೆನು” ಎಂದು ದ್ರೋಣನು ನಮಗೆ ಇಲ್ಲದ ಆಶೋತ್ತರವನ್ನು ಕೊಟ್ಟನು. ಅವನ ವಾಗ್ದಾನವು ನಮ್ಮ ಸೈನ್ಯದ ವಿನಾಶದಲ್ಲಿ ಮುಗ್ಗಿಯಿತಲ್ಲದೆ ಬೇರೆಯಲ್ಲ. ಮಂದಭಾಗ್ಯನಾದ ನಾನು ಎಷ್ಟು ಪ್ರಯತ್ನಪಟ್ಟು ಫಲವೇನು? ನಮ್ಮ ಸೈನ್ಯಗಳೆಲ್ಲಾ ಹತವಾದುವು. ಸೈಂಧವನೂ ಹತನಾದನು. ನಮ್ಮಕಡೆಯ ಅನೇಕ ರಾಜರು ಅರ್ಜುನನ ಬಾಣಗಳಿಂದ ಹತರಾಗಿ ನೂರುಸಾವಿರಲೆಕ್ಕದಿಂದ ರಣರಂಗದಲ್ಲಿ ಬಿದ್ದಿರುವುದನ್ನು ನೋಡು. ಎಲ್ಲರ ಮೈಯಲ್ಲಿಯೂ ಆ ಪಾರ್ಥನಾಮಾಂಕಿತಗಳಾದ ಬಾಣಗಳೇ ನಾಟಿವೆ! ನಾವು ಇಷ್ಟುಮಂದಿ ಬಹುಪ್ರಯತ್ನದಿಂದ ತಡೆಯುತ್ತಿರುವಾಗಲೇ, ಏಕಾಕಿಯಾದ ಅರ್ಜುನನು ನಮ್ಮ ಕಣ್ಣೆದಿರಾಗಿ ಸಾವಿರಾರುಮಂದಿ ಯೋಧರನ್ನು ಕೊಂದು, ಸೈಂಧವನನ್ನೂ ಕೊನೆಗಾಣಿಸಿಬಿಟ್ಟನು. ಚಿತ್ರಸೇನನೇ ಮೊದಲಾದ ನನ್ನ ಅನೇಕ ಸಹೋದರರು ನಮ್ಮ ಕಣ್ಣೆದಿರಾಗಿ ಭೀಮನಿಂದ ಹತರಾದರು. ಮಿತ್ರ ಕರ್ಣಾ! ಎಂತಹ ಮೋಸವಾಯಿತು ನೋಡು?” ಎಂದನು. ಆಗ ಕರ್ಣನು “ದುರ್ಯೋಧನಾ! ನೀನು ಈ ಮಾತನ್ನಾಡಬಾರದು! ಆಚಾರ್ಯನನ್ನು ನಿಂದಿಸಬೇಡ! ಆ ಬ್ರಾಹ್ಮಣನು ತನ್ನ ಬಲಕ್ಕೂ, ಉತ್ಸಾಹಕ್ಕೂ ತಕ್ಕಂತೆ ಶಕ್ತಿಮಿರಿ ಯುದ್ಧಮಾಡುತ್ತಿರುವನು. ತನ್ನ ಪ್ರಾಣವನ್ನೇ ತೃಣೀಕರಿಸಿ ಹೋರಾಡುತ್ತಿರುವನು. ಅರ್ಜುನನು ಅವನನ್ನೂ ಮಿರಿ ವ್ಯೂಹದೊಳಗೆ ಪ್ರವೇಶಿಸಿದನೆಂದರೆ, ಅದರಲ್ಲಿ ಲವಮಾತ್ರವೂ ಆಚಾರ್ಯನ ತಪ್ಪಿಲ್ಲ. ರಾಜಾ! ಅರ್ಜುನನನ್ನು ಸಾಮಾನ್ಯನೆಂದು ತಿಳಿಯಬೇಡ! ಅವನು ಮಹಾಧೀಮಂತನು! ಸಮರ್ಥನು! ತರುಣವಯಸ್ಕನು! ಶೂರನು! ಸರ್ವಾಸ್ತ್ರಗಳಲ್ಲಿ ಸುಶಿಕ್ಷಿತನು! ತೀವ್ರಪರಾಕ್ರಮವುಳ್ಳವನು! ಅಂತವನು ದಿವ್ಯಾಸ್ತ್ರಗಳಿಂದ ತುಂಬಿದ ವಾನರಧ್ವಜವುಳ್ಳ ತನ್ನ ದಿವ್ಯರಥವನ್ನೇರಿ ಅಭೇದ್ಯಕವಚವನ್ನು ಧರಿಸಿಬಂದವನಲ್ಲವೆ? ಸಾಕ್ಷಾದ್ವಾಸುದೇವನೇ ಅವನ ಕುದುರೆಗಳನ್ನು ನಡೆಸುತ್ತಿರುವನು. ಅಕ್ಷಯವಾದ ಗಾಂಡೀವವೆಂಬ ದಿವ್ಯಧನುಸ್ಸು ಅವನ ಕೈಯಲ್ಲಿರುವುದು! ಅಂತವನು ತನ್ನ ಬಾಹುಬಲದಿಂದ

ತೀವ್ರಬಾಣಗಳನ್ನು ವರ್ಷಿಸುತ್ತ ದ್ರೋಣನನ್ನು ಅತಿಕ್ರಮಿಸಿ ಬಂದನೆಂದರೆ, ಅದು ಅವನ ಪರಾಕ್ರಮಕ್ಕೆ ತಕ್ಕುದೇ! ಆಚಾರ್ಯನಾದರೋ ವಯಸ್ಸಿನಲ್ಲಿ ವೃದ್ಧನು! ರಣಾಂಗಣದಲ್ಲಿ ಅರ್ಜುನನಂತೆ ಶೀಘ್ರಸಂಚಾರಕ್ಕೂ ಅವನಿಗೆ ಸಾಮರ್ಥ್ಯವಿಲ್ಲ! ಅವನ ತೋಳುಗಳ ಬಲವೂ, ವ್ಯಾಪಾರವೂ ಅರ್ಜುನನಷ್ಟು ಶಕ್ತಿಯುಳ್ಳುದಾಗಿಲ್ಲ. ಅಂತವನು ಕೃಷ್ಣಸಹಾಯವುಳ್ಳ ಅರ್ಜುನನಿಂದ ಅತಿಕ್ರಮಿಸಲ್ಪಟ್ಟನೆಂದರೆ, ಅದರಲ್ಲಿ ದ್ರೋಣನ ತಪ್ಪೇನೂ ಇರುವಂತೆ ನನಗೆ ತೋರುವುದಿಲ್ಲ. ದ್ರೋಣನು ಅಸ್ತ್ರಗಳನ್ನು ಬಲ್ಲವನಾಗಿದ್ದರೂ ಅವನಿಂದ ಪಾಂಡವರನ್ನು ಜಯಿಸಲು ಸಾಧ್ಯವಿಲ್ಲವೆಂದೇ ನನಗೂ ತೋರಿದೆ! ಇದಲ್ಲದೆ ದುರ್ಯೋಧನಾ! ಎಷ್ಟೋ ಪರಾಕ್ರಮದಿಂದ ಮತ್ತು ಹೆಮ್ಮೆಯಿಂದ ಎಡೆಬಿಡದೆ ಯುದ್ಧಮಾಡುತ್ತಿದ್ದವರಿಗೂ ಪರಾಜಯವುಂಟು. ಅದು ದೈವಾಯತ್ತವು. ಆದುದರಿಂದ ಅದನ್ನು ತಪ್ಪಿಸುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ! ಈಗ ನೋಡು! ನಾವೆಲ್ಲರೂ ನಮ್ಮ ಶಕ್ತಿಮೀರಿ ಯುದ್ಧಮಾಡುತ್ತಿರುವಾಗಲೇ, ನಮ್ಮ ಕಣ್ಣೆದಿರಲ್ಲಿಯೇ ಸೈಂಧವನು ಹತನಾದನು! ಇದಕ್ಕೆ ದೈವವಲ್ಲದೆ ಬೇರೆ ಕಾರಣವೇನಿದೆ? ನಿನ್ನೊಡನೆ ನಾವೆಲ್ಲರೂ ಆದಷ್ಟು ಪ್ರಯತ್ನಮಾಡುತ್ತಿದ್ದೆವು. ಆದರೇನು? ನಮ್ಮ ಪೌರುಷವನ್ನೆಲ್ಲ ದೈವವು ವಿಫಲಮಾಡಿತು! ದೈವವಮುಂದೆ ಯಾವುದೂ ಇಲ್ಲ! ದೈವವು ಪ್ರತಿಕೂಲವಾಗಿದ್ದಾಗ ಮನುಷ್ಯನು ಯಾವಯಾವ ಪ್ರಯತ್ನವನ್ನು ಮಾಡಿದರೂ, ಅದು ದೈವದಿಂದ ಕೆಡಿಸಲ್ಪಡುವುದು. ಮನುಷ್ಯನು ಸ್ವಪ್ರಯತ್ನದಿಂದ ಮಾಡಬೇಕಾದ ಕಾರ್ಯವನ್ನೇನೋ ಶಂಕೆಯಿಲ್ಲದೆ ನಡೆಸುತ್ತಲೇ ಇರಬೇಕು. ಕಾರ್ಯಸಿದ್ಧಿಯೆಂಬುದು ಅದೃಷ್ಟದಮೇಲೆ ಹೊಂದಿರುವುದು. ದುರ್ಯೋಧನಾ! ಹಿಂದೆ ನಾವು ಪಾಂಡವರನ್ನು ಎಷ್ಟೋ ವಿಧದಿಂದ ವಂಚಿಸಿದೆವು! ವಿಷಪ್ರಯೋಗದಿಂದ ಅವರನ್ನು ಕೊಲ್ಲುವುದಕ್ಕೆ ಯತ್ನಿಸಿದೆವು! ಅರಗಿನ ಮನೆಯಲ್ಲಿ ಸುಡುವುದಕ್ಕೆ ಪ್ರಯತ್ನಿಸಿದೆವು. ಜೂಜಿನಿಂದ ಅವರ ಸರ್ವಸ್ವವನ್ನೂ ಕಿತ್ತುಕೊಂಡೆವು! ರಾಜನೀತಿಯ ನೆವದಿಂದ ಅವರನ್ನು ಕಾಡಿಗೂ ಅಟ್ಟಿದೆವು. ನಾವು ಮಾಡಿದ ಇಷ್ಟು ಪ್ರಯತ್ನವನ್ನೂ ದೈವವು ಕೆಡಿಸಿಬಿಟ್ಟಿತು! ಆದುದರಿಂದ ರಾಜಾ! ನಾವು ದೈವವನ್ನು ಅಲಕ್ಷ್ಯಮಾಡಿ, ನಮ್ಮ ಪ್ರಯತ್ನವನ್ನು ನಡೆಸದೆತೀರದು! ನೀನು

ಯುದ್ಧವನ್ನು ಮಾಡು! ನಿನ್ನ ಪ್ರಯತ್ನದಿಂದ ದೈವವು ನಿರರ್ಥಕವಾಗುವಂತೆ ಯತ್ನಿಸು. ನೀನಾಗಲಿ, ನಿನ್ನ ಶತ್ರುಗಳಾಗಲಿ ಪ್ರಯತ್ನಪಟ್ಟರೆ, ಆ ಅದೃಷ್ಟವು ನಿಮ್ಮನ್ನೇ ಹಿಂಬಾಲಿಸಬಹುದು. ಆ ಪಾಂಡವರಾದರೂ ತಾವು ಬುದ್ಧಿಪೂರ್ವಕವಾಗಿ ತಮ್ಮ ಜಯಸಾಧಕವಾದ ಸುಕೃತವನ್ನೇನೂ ಮಾಡಿದಂತೆ ತೋರಲಿಲ್ಲ. ನೀನೂ ನಿನ್ನ ಅಪಜಯಕ್ಕೆ ಕಾರಣವಾದ ದುಷ್ಕೃತವನ್ನೇನೂ ಮಾಡಿಲ್ಲ. ಈ ಸುಕೃತ ದುಷ್ಕೃತಗಳಿಗೂಕೂಡ ದೈವವೇ ಪ್ರಮಾಣವು. ದೈವವೇ ಆಯಾ ಕಾರ್ಯಗಳಿಗೆ ಪ್ರೇರಕವು. ಪ್ರಾಣಿಗಳು ಪ್ರಜ್ಞೆತಪ್ಪಿ ಮಲಗಿರುವಾಗಲೂ ದೈವವೆಂಬುದು ಎಚ್ಚರಗೊಂಡೇ ಇರುವುದು. ಪ್ರಾಣಿಗಳನ್ನು ಕಾರ್ಯದಲ್ಲಿಯೋ, ಅಕಾರ್ಯದಲ್ಲಿಯೋ ತಗುಲಿಸುವುದೂ ಅದೇ! ರಾಜಾ! ನಿನ್ನಲ್ಲಿ ಅಪರಿಮಿತವಾದ ಸೈನ್ಯಗಳಿರುವುವು! ಯೋಧರೂ ಬಹುಮಂದಿ ಇರುವರು. ಪಾಂಡವರಲ್ಲಿಯಾದರೋ ಅಷ್ಟು ಸೈನ್ಯವೂ ಇಲ್ಲ! ಯೋಧರೂ ಇಲ್ಲ! ಹೀಗಿರುವಾಗಲೂ ನಿಮ್ಮಿಬ್ಬರಲ್ಲಿ ಯುದ್ಧವು ನಡೆದಾಗ, ಬಹುಸಂಖ್ಯಾಕರಾದ ನೀವು ಅಧಿಕ ಶಸ್ತ್ರಾಸ್ತ್ರಸಮೃದ್ಧಿಯುಳ್ಳವರಾಗಿದ್ದರೂ, ಅಲ್ಪಸಂಖ್ಯೆಯುಳ್ಳ ಅವರಿಂದ ಪರಾಜಿತರಾದಿರಿ. ನಿಮ್ಮವರೆಲ್ಲರೂ ಪ್ರಾಯಕವಾಗಿ ಹತರಾದರು. ಇವೆಲ್ಲಾ ದೈವದ ಕಾರ್ಯವೇ ಹೊರತು ಬೇರೆಯಲ್ಲವೆಂದು ನನಗೆ ತೋರಿದೆ. ನಿನ್ನ ಪೌರುಷವೆಲ್ಲ ದೈವದಿಂದಲೇ ಕೆಡಿಸಲ್ಪಟ್ಟಿತು" ಎಂದನು. ಹೀಗೆ ನಿನ್ನ ಮಗನೂ, ಕರ್ಣನೂ, ಸಂಭಾಷಿಸುತ್ತಿರುವಾಗಲೇ, ಪಾಂಡವರ ಸೈನ್ಯವು ಯುದ್ಧರಂಗದಲ್ಲಿ ಗುಂಪುಕೂಡಿತು. ಆಮೇಲೆ ನಮ್ಮವರಿಗೂ, ಶತ್ರುಗಳಿಗೂ ತಿರುಗಿ ಯುದ್ಧಾರಂಭವಾಯಿತು. ಆನೆ ಕುದುರೆ ರಥಗಳೆಲ್ಲ ಒಂದನ್ನೊಂದು ಇದಿರಿಸಿದುವು. ರಾಜಾ! ಇದೆಲ್ಲಾ ನಿನ್ನ ದುರ್ಮಂತ್ರದ ಫಲವೇ" ಎಂದನು.

ಇದು ನೂರ ಐವತ್ತುಮೂರನೆಯ ಅಧ್ಯಾಯವು.

**ಇಲ್ಲಿಗೆ ಜಯದ್ರಥವಧಪರ್ವವು ಮುಗಿದುದು.**



# ಘಟೋತ್ಕಚವಧಪರ್ವವು.

―― ಯುಧಿಷ್ಠಿರನಿಂದ ದುರ್ಯೋಧನನು ಪರಾಜಿತನಾದುದು. ――

ರಾಜಾ! ನಿನ್ನ ರಥಾಶ್ವಸೈನ್ಯಗಳೆಲ್ಲ ಪಾಂಡವಸೈನ್ಯದಮೇಲೆ ಬಿದ್ದು, ಅದಕ್ಕಿಂತಲೂ ಒಂದು ಕೈ ಮಿಾರಿದಂತೆ ಯುದ್ಧಮಾಡತೊಡಗಿತು. ನಾನಾ ಕಡೆಗಳಲ್ಲಿ ಯುದ್ಧಾರಂಭವಾಯಿತು. ಪಾಂಚಾಲರೂ, ಕುರುಗಳೂ ಇದಿರಿದಿರಾದರು. ಯಮರಾಷ್ಟ್ರವನ್ನು ವೃದ್ಧಿಗೊಳಿಸುವಂತೆ ಉಭಯಪಕ್ಷದವರೂ, ಶರ, ತೋಮರ, ಶಕ್ತಿ ಮೊದಲಾದ ಆಯುಧಗಳಿಂದ ಅನ್ಯೋನ್ಯವಾಗಿ ಹೊಡೆದಾಡಿ ಸಾಯುತ್ತಿದ್ದರು. ರಥಿಕರು ರಥಿಕರೊಡನೆಯೂ, ಆನೆಗಳು ಆನೆಗಳೊಡನೆಯೂ, ಕುದುರೆಗಳು ಕುದುರೆಗಳೊಡನೆಯೂ ಯುದ್ಧವನ್ನಾರಂಭಿಸಿದುವು. ರಥಿಕರು ಶಸ್ತ್ರಾಸ್ತ್ರಪ್ರಯೋಗಗಳಿಂದ ಹೊಡೆದಾಡಿದರು. ಆನೆಗಳು ಕೊಂಬುಗಳಿಂದಲೂ, ಸುಂಡಿಲುಗಳಿಂದಲೂ ಬಡಿದಾಡಿದುವು. ಅಶ್ವಾರೋಹಿಗಳು ಪ್ರಾಸ, ಶಕ್ತಿ, ಕೊಡಲಿ, ಮೊದಲಾದುವುಗಳಿಂದ ತಿವಿಯುತ್ತಿದ್ದರು. ಕಾಲಾಳುಗಳು ಒಬ್ಬರನ್ನೊಬ್ಬರು ಕತ್ತಿ ಮೊದಲಾದ ಶಸ್ತ್ರಗಳಿಂದ ಇರಿಯುತ್ತಿದ್ದರು. ಒಬ್ಬೊಬ್ಬರೂ ತಮ್ಮ ಕುಲ ಗೋತ್ರ ನಾಮಗಳನ್ನು ಉದ್ಘೋಷಿಸುತ್ತ ಹೊಡೆದಾಡುತ್ತಿದ್ದರು. ಅದನ್ನು ಕೇಳಿದಾಗ ಮಾತ್ರ ಪಾಂಚಾಲರಾರು, ಕುರುಗಳಾರು, ಎಂಬ ಭೇದವು ನಮಗೆ ತಿಳಿಯುತ್ತಿದ್ದಿತು. ಎಷ್ಟೋಮಂದಿ ಸತ್ತರು! ಆಕಾಶವೆಲ್ಲಾ ಬಾಣಗಳಿಂದ ಮರೆಸಿಹೋಗಿ, ಸೂರ್ಯಪ್ರಕಾಶವೇ ತಿಳಿಯದಂತಾಯಿತು. ಹೀಗೆ ಸೈನಿಕರು ಯುದ್ಧಮಾಡುತ್ತಿದ್ದಾಗ, ನಿನ್ನ ಮಗನಾದ ದುರ್ಯೋಧನನು ಸೈಂಧವವಧದಿಂದುಂಟಾದ ಕೋಪದಿಂದ ಪ್ರಾಣದಾಸೆಯನ್ನು ಬಿಟ್ಟು ಪಾಂಡವಸೈನ್ಯದೊಳಗೆ ಪ್ರವೇಶಿಸಿದನು. ತಾನು ಈ ಯುದ್ಧದಲ್ಲಿ ಸತ್ತರೂ ಚಿಂತೆಯಿಲ್ಲವೆಂಬ ಸಂಕಲ್ಪದಿಂದ, ತನ್ನ ರಥಘೋಷದಿಂದಲೇ ಭೂಮಿಯನ್ನು ನಡುಗಿಸುತ್ತ ಸೈನ್ಯದೊಳಗೆ ಹೊಕ್ಕುಬಿಟ್ಟನು. ಅನೇಕ ಸೈನ್ಯವಿನಾಶಕರವಾದ ಪ್ರಬಲಯುದ್ಧವು ನಡೆಯಿತು. ಈ ನಡುವೆ ಧೃತರಾಷ್ಟ್ರನು ಭಯಾತುರದಿಂದ ಸಂಜಯನನ್ನು ಕುರಿತು "ಸಂಜಯಾ! ಇದೇನು ಹೀಗೆ ಹೇಳುವೆ?

ನನ್ನ ಮಗನ ಸೈನ್ಯವೆಲ್ಲವೂ ಹತವಾದುವು. ಅವನೂ ಬಹಳ ಕಷ್ಟದಲ್ಲಿ ಸಿಕ್ಕಿಬಿದ್ದಿರುವನು. ಈ ಸ್ಥಿತಿಯಲ್ಲಿಯೂ ಅವನು ಯುದ್ಧಕ್ಕೆ ಹಿಮ್ಮೆಟ್ಟದೆ ಮುಂದುವರಿದನೇ? ಅವನೊಬ್ಬನಿಗೆ ಅನೇಕರೊಡನೆ ಯುದ್ಧವೇ? ಇದು ಉಚಿತವಲ್ಲವೆಂದು ನನಗೆ ತೋರುವುದು. ನನ್ನ ಮಗನೋ, ಮೊದಲಿಂದಲೂ ವಿಶೇಷಸುಖದಲ್ಲಿಯೇ ಬಳೆದವನು. ಪ್ರಜೆಗಳಿಂದ ನಿರಪಾಯವಾಗಿ ರಕ್ಷಿಸಲ್ಪಡುವುದಕ್ಕೆ ಯೋಗ್ಯನು. ಸೈನ್ಯಕ್ಕೆಲ್ಲ ತಾನೇ ಪ್ರಭುವೆನಿಸಿದವನು. ಇಂತವನು, ತಾನು ಏಕಾಕಿಯಾಗಿಯೇ ಅನೇಕರೊಡನೆ ಯುದ್ಧಮಾಡಲು ಹಿಂಜರಿಯಲಿಲ್ಲವೆ? ದ್ರೋಣ ಕರ್ಣ ಕೃಪ ಕೃತವರ್ಮರಲ್ಲಿ ಯಾರೂ ಅವನನ್ನು ಈ ಅಪಾಯಕ್ಕೆ ಹೋಗದಂತೆ ತಡೆಯದೆ ಹೋದರೆ? ಸಂಜಯಾ! ಸರ್ವೋಪಾಯಗಳಿಂದಲೂ ತಮ್ಮ ರಾಜನನ್ನು ರಕ್ಷಿಸಿಕೊಳ್ಳಬೇಕಾದುದು ಅವನ ಕಡೆಯ ಸೈನಿಕರ ಕರ್ತವ್ಯವು. ಯುದ್ಧದ ನೀತಿಯೇ ಇದು! ಹೀಗಿರುವಾಗ ನನ್ನ ಮಗನು ಏಕಾಕಿಯಾಗಿ ಶತ್ರುಸೈನ್ಯವನ್ನು ಪ್ರವೇಶಿಸಿದಮೇಲೆ ನಮ್ಮವರು ಏನನ್ನು ಮಾಡಿದರು?" ಎಂದನು. ಅದಕ್ಕೆ ಸಂಜಯನು "ರಾಜಾ! ನಿನ್ನ ಮಗನು ಏಕಾಕಿಯಾಗಿಯೇ ಬಹುಜನರೊಡನೆ ಯುದ್ಧಮಾಡಿದ ಆಶ್ಚರ್ಯವನ್ನು ಹೇಳುವೆನು ಕೇಳು. ದ್ರೋಣ, ಕೃಪ ಕರ್ಣರು ನಿನ್ನ ಮಗನನ್ನು ಬೇಡಬೇಡವೆಂದು ತಡೆಯುತ್ತಿದ್ದರೂ, ನಿನ್ನ ಮಗನು ಲಕ್ಷ್ಯಮಾಡದೆ, ಸಮುದ್ರದಲ್ಲಿ ಮಕರದಂತೆ ಪಾಂಡವಸೈನ್ಯದಲ್ಲಿ ಪ್ರವೇಶಿಸಿಬಿಟ್ಟನು. ಸಾವಿರಾರು ತೀಕ್ಷ್ಣಬಾಣಗಳಿಂದ ಪಾಂಚಾಲಪಾಂಡವಸೈನ್ಯಗಳನ್ನೆಲ್ಲ ಧ್ವಂಸಮಾಡುತ್ತಬಂದನು. ಉದಿಸುವ ಸೂರ್ಯನು ಅಂಧಕಾರವನ್ನು ಹೇಗೋ ಹಾಗೆ, ಶತ್ರುಸೈನ್ಯವನ್ನೆಲ್ಲ ನಾಶಗೊಳಿಸುತ್ತಿದ್ದನು. ನಿನ್ನ ಮಗನ ಪ್ರತಾಪವು ಆಗ ಮಧ್ಯಾಹ್ನಸೂರ್ಯನ ಕಿರಣಗಳಂತೆ ಶತ್ರುಗಳಿಗೆ ದುಸ್ಸಹವಾಗಿದ್ದಿತು. ಪಾಂಡವಸೈನ್ಯಗಳು ನಿನ್ನ ಮಗನನ್ನು ಕಣ್ಣಿಂದಲೂ ನೋಡಲಾರದೆ ಜಯದಲ್ಲಿ ನಿರಾಶರಾಗಿ ಓಡಲಾರಂಭಿಸಿದರು. ಎಷ್ಟೋಮಂದಿ ಕೊಲೆಗೀಡಾದರು! ಅನೇಕರು ಓಡಿದರು. ಅನೇಕರು ಬಾಣಪ್ರಹಾರದಿಂದ ಮೂರ್ಛಿತರಾಗಿ ಕೆಳಗೆ ಬಿದ್ದರು. ಪ್ರಳಯಕಾಲದಲ್ಲಿ ಪ್ರಜಾನಾಶಕ್ಕಾಗಿ ಬಾಯನ್ನು ತೆರೆದುಕೊಂಡು ಬರುವ ಯಮನಂತೆ, ನಿನ್ನ ಮಗನು ಬರುವುದನ್ನು ನೋಡಿ, ಎಷ್ಟೋಮಂದಿ ಭಯದಿಂದ

ತಲೆತಪ್ಪಿಸಿಕೊಂಡರು. ರಾಜಾ! ಆಗ ನಿನ್ನ ಮಗನು ತೋರಿಸಿದ ಅದ್ಭುತ ಪರಾಕ್ರಮದಂತೆ ಇದುವರೆಗೆ ನಿನ್ನವರಲ್ಲಿ ಬೇರೆ ಯಾರೂ ತೋರಿಸಲಿಲ್ಲ. ಮದದಾನೆಯು ಕಮಲವನವನ್ನು ಹೇಗೋ ಹಾಗೆ, ನಿನ್ನ ಮಗನು ಪಾಂಡವಸೈನ್ಯವನ್ನೆಲ್ಲ ನಜ್ಜುಗುಜ್ಜಾಗಿ ಮಾಡಿದನು. ಆಗ ಪಾಂಡವಸೇನೆಯು, ಬಿಸಿಲುಗಾಳಿಗಳಿಂದ ಒಣಗಿ ಹೋದ ಸರೋವರದಲ್ಲಿರುವ ಕಮಲಲತೆಯಂತೆ ಕಂದಿಹೋಯಿತು. ಪಾಂಡವಸೇನೆಯ ಈ ಸ್ಥಿತಿಯನ್ನು ನೋಡಿ ಕೆಲವು ಪಾಂಚಾಲವೀರರು ಭೀಮನನ್ನು ಮುಂದಿಟ್ಟುಕೊಂಡು, ನಿನ್ನ ಮಗನನ್ನಿದಿರಿಸಿದರು. ಆಗ ನಿನ್ನ ಮಗನು ಹತ್ತು ಬಾಣಗಳಿಂದ ಭೀಮನನ್ನೂ, ಮೂರು ಮೂರು ಬಾಣಗಳಿಂದ ನಕುಲಸಹದೇವರನ್ನೂ, ಆರುಬಾಣಗಳಿಂದ ವಿರಾಟದ್ರುಪದರನ್ನೂ, ನೂರು ಬಾಣಗಳಿಂದ ಶಿಖಂಡಿಯನ್ನೂ, ಎಪ್ಪತ್ತುಬಾಣಗಳಿಂದ ದ್ರುಪದನನ್ನೂ, ಏಳು ಬಾಣಗಳಿಂದ ಧರ್ಮರಾಜನನ್ನೂ ಪ್ರಹರಿಸಿದನು. ಅನೇಕ ತೀಕ್ಷ್ಣಬಾಣಗಳಿಂದ ಕೇಕಯರನ್ನೂ, ಚೇದಿಗಳನ್ನೂ ಹೊಡೆದಟ್ಟುತ್ತಿದ್ದನು. ಸಾತ್ಯಕಿಯಮೇಲೆ ಐದು ಬಾಣಗಳನ್ನು ಪ್ರಯೋಗಿಸಿದನು. ಘಟೋತ್ಕಚನನ್ನು ಬಲವಾಗಿ ಪ್ರಹರಿಸಿ ಸಿಂಹನಾದ ಮಾಡಿದನು. ಇನ್ನೂ ಅನೇಕ ಯೋಧರನ್ನೂ, ಗಜಸೈನ್ಯಗಳನ್ನೂ ನೂರಾರು ಬಾಣಗಳಿಂದ ಭೇದಿಸಿದನು. ಪಾಂಡವಸೈನ್ಯವು ದಿಕ್ಕುದಿಕ್ಕಿಗೆ ಓಡುತ್ತಿದ್ದುವು. ಇದನ್ನು ನೋಡಿ ಧರ್ಮರಾಜನು ಮಹತ್ತಾದ ಕೋಪದಿಂದ ದುರ್ಯೋಧನನನ್ನು ತಡೆದನು. ಇಬ್ಬರೂ ತಮ್ಮ ಪರಾಕ್ರಮದ ಸರ್ವಸ್ವವನ್ನೂ ತೋರಿಸುತ್ತ ಯುದ್ಧಮಾಡಿದರು. ಇಷ್ಟರಲ್ಲಿ ದುರ್ಯೋಧನನು ಹತ್ತು ಬಾಣಗಳಿಂದ ಧರ್ಮರಾಜನನ್ನು ಹೊಡೆದು, ಅವನ ಧ್ವಜವನ್ನು ಮುರಿದನು. ಧರ್ಮರಾಜನಿಗೆ ಪ್ರಿಯಸಾರಥಿಯಾದ ಇಂದ್ರಸೇನನ ಹಣೆಯಲ್ಲಿ ಮೂರು ಬಾಣಗಳನ್ನು ನಾಟಿದನು. ಯುಧಿಷ್ಠಿರನ ಕೈಯಲ್ಲಿದ್ದ ಧನುಸ್ಸನ್ನು ಕತ್ತರಿಸಿದನು. ನಾಲ್ಕು ಬಾಣಗಳಿಂದ ಅವನ ನಾಲ್ಕು ರಥಾಶ್ವಗಳನ್ನೂ ಕೊಂದುಕೆಡಹಿದನು. ಉತ್ತರಕ್ಷಣದಲ್ಲಿಯೇ ಧರ್ಮರಾಜನು ಬೇರೊಂದು ಬಿಲ್ಲನ್ನು ತೆಗೆದುಕೊಂಡು ಕೌರವನನ್ನಿದಿರಿಸಿದನು. ದುರ್ಯೋಧನನ ಕೈಯಲ್ಲಿದ್ದ ಮಹಾಧನುಸ್ಸನ್ನು ಎರಡು ಬಾಣಗಳಿಂದ ಮೂರುತುಂಡಾಗಿ ಕತ್ತರಿಸಿದನು. ದುರ್ಯೋಧನನಿಗೆ ಗುರಿಯಿಟ್ಟು ಹತ್ತು ಬಾಣಗಳನ್ನು

ಹೊಡೆದನು. ಆ ಬಾಣಗಳು ನಿನ್ನ ಮಗನ ಮರ್ಮಸ್ಥಾನಗಳಲ್ಲಿ ನಾಟಿ, ನೆಲದಲ್ಲಿ ಹೊಕ್ಕುವು. ವೃತ್ರನೊಡನೆ ಯುದ್ಧಮಾಡುವ ಇಂದ್ರನ ಸಹಾಯಕ್ಕಾಗಿ ದೇವಸೈನ್ಯಗಳು ಬಂದಂತೆ, ಪಾಂಡವಸೈನ್ಯಗಳೆಲ್ಲ ಯುಧಿಷ್ಠಿರನಿಗೆ ಬೆಂಬಲವಾಗಿ ಬಂದು, ನಿನ್ನಮಗನನ್ನು ಸುತ್ತಲೂ ಆವರಿಸಿಕೊಂಡುವು. ಇಷ್ಟರಲ್ಲಿಯೇ ಯುಧಿಷ್ಠಿರನು ಅತ್ಯುಗ್ರವಾದ ಒಂದು ಬಾಣವನ್ನು ಬಿಲ್ಲಿಗೆ ಸೇರಿಸಿ ನಿನ್ನ ಮಗನನ್ನು ನೋಡಿ “ಇದರಿಂದ ನಿನ್ನ ಆಯುಸ್ಸು ಮುಗಿಯಿತು” ಎಂದು ಹೇಳುತ್ತ, ವೇಗದಿಂದ ಪ್ರಹರಿಸಿದನು. ಆ ಬಾಣವು ತಗುಲಿದೊಡನೆ ನಿನ್ನ ಮಗನಿಗೆ ಮೂರ್ಛೆಬಂದಂತಾಗಿ, ರಥದಮೇಲೆಯೇ ಪ್ರಜ್ಞೆತಪ್ಪಿ ಒರಗಿದನು. ಆಗ ಪಾಂಚಾಲಸೈನ್ಯದಲ್ಲಿ ಸಂತೋಷಕೋಲಾಹಲವುಂಟಾಯಿತು. ಬಾಣಪ್ರಯೋಗಧ್ವನಿಗಳೂ ಪ್ರಬಲವಾದುವು. ಇದನ್ನು ತಿಳಿದು ದ್ರೋಣನು, ಥಟ್ಟನೆ ಅಲ್ಲಿಗೆ ಬಂದನು. ನಿನ್ನ ಮಗನು ಅಷ್ಟರಲ್ಲಿ ಸ್ವಲ್ಪ ಚೇತರಿಸಿಕೊಂಡು, ದೃಢವಾದ ಬಿಲ್ಲನ್ನು ಹಿಡಿದು, ಧರ್ಮರಾಜನನ್ನು ಕುರಿತು “ನಿಲ್ಲು ನಿ”ಲ್ಲೆಂದು ಕೂಗುತ್ತ ಇದಿರಿಸಿಬಂದನು. ಇದನ್ನು ನೋಡಿ ಪಾಂಚಾಲರೆಲ್ಲರೂ ಗುಂಪಾಗಿ ಬಂದು ದುರ್ಯೋಧನನನ್ನು ತಡೆದರು. ದುರ್ಯೋಧನನನ್ನು ರಕ್ಷಿಸಿಕೊಳ್ಳುವುದಕ್ಕಾಗಿ ದ್ರೋಣನು ಪಾಂಚಾಲರಿಗಿದಿರಾದನು. ಬಿರುಗಾಳಿಯು ಮೇಘಗಳನ್ನು ತೂರುವಂತೆ ದ್ರೋಣನು ಪಾಂಚಾಲರನ್ನು ಓಡಿಸುತ್ತಬಂದನು. ನಿನ್ನವರಿಗೂ, ಪಾಂಡವರಿಗೂ ಆಗ ಪ್ರಬಲಯುದ್ಧವಾಯಿತು.

ಇದು ನೂರ ಐವತ್ತುನಾಲ್ಕನೆಯ ಅಧ್ಯಾಯವು.



## ದ್ರೋಣಯುದ್ಧವರ್ಣನವು.

ಈ ನಡುವೆ ಧೃತರಾಷ್ಟ್ರನು “ಸಂಜಯಾ! ಆಚಾರ್ಯನು ನೀತಿಧರ್ಮಗಳನ್ನು ಮೀರಿ ನಡೆಯುತ್ತಿರುವ ಮೂಢನಾದ ನನ್ನ ಮಗನಿಗೆ ಬುದ್ಧಿವಾದಗಳನ್ನು ಹೇಳಿದನೆಂದೂ, ಅವನ ರಕ್ಷಣೆಗಾಗಿ ತಾನೇ ಬಂದು ಪಾಂಡವರನ್ನು ತಡೆದನೆಂದೂ ಹೇಳಿದೆ. ಪಾಂಡವರು ಅವನನ್ನು ಹೇಗೆ ನಿವಾರಿಸಿ

ದರು? ಆಗ ದ್ರೋಣನಿಗೆ ಎಡಬಲಪಾರ್ಶ್ವಗಳ ಚಕ್ರಗಳನ್ನು ರಕ್ಷಿಸುತ್ತಿದ್ದವರಾರು? ಅವನ ಹಿಂದೆಯೂ, ಮುಂದೆಯೂ ಸಹಾಯಕರಾಗಿ ನಿಂತ ರಥಿಕರಾರು? ಮಹಾಧನುರ್ಧಾರಿಯಾದ ಆ ದ್ರೋಣನಿಗೆ ಮುಂದಾಗಿ ಬಂದು ಇದಿರುಬಿದ್ದ ಶತ್ರುಗಳಾರು? ವೀರಾಗ್ರಣಿಯೂ, ಧನುರ್ಧಾರಿಗಳಲ್ಲಿ ಶ್ರೇಷ್ಠನೂ ಆದ ದ್ರೋಣನು, ತನ್ನ ರಥಮಾರ್ಗಗಳಲ್ಲಿ ನರ್ತಿಸುವಂತೆ ಸಂಚರಿಸುತ್ತ, ಅಗ್ನಿಯಂತೆ ಶತ್ರುಸೈನ್ಯಗಳನ್ನೆಲ್ಲ ದಹಿಸುತ್ತಬರುವ ಕಾಲದಲ್ಲಿ, ಪಾಂಚಾಲರ ಮೈಯೆಲ್ಲ, ಮಿತಿಮಿಾರಿದ ಚಳಿಗೆ ಸಿಕ್ಕಿಬಿದ್ದಂತೆ ನಡುಗಿಹೋಗಿರಬೇಕೆಂದು ತೋರುವುದು. ಸಂಜಯಾ! ಅಂತಹ ದ್ರೋಣಾಚಾರ್ಯನು ಹೇಗೆತಾನೇ ಯುದ್ಧದಲ್ಲಿ ಮರಣಕ್ಕೀಡಾದನು?" ಎಂದನು. ಅದಕ್ಕಾ ಸಂಜಯನು "ಧೃತರಾಷ್ಟ್ರಮಹಾರಾಜಾ! ಕೇಳು! ಆ ದಿನದ ಸಾಯಂಕಾಲದಲ್ಲಿ ಅರ್ಜುನನು ಸೈಂಧವನನ್ನು ಕೊಂದು ಧರ್ಮರಾಜನ ಬಳಿಗೆ ಬಂದನಷ್ಟೆ? ಆಮೇಲೆ ಸಾತ್ಯಕಿಯೂ, ಯುಧಿಷ್ಠಿರನೂ, ಭೀಮನೂ, ನಕುಲಸಹದೇವರೂ, ಧೃಷ್ಟದ್ಯುಮ್ನನೂ, ಶತಾನೀಕನೂ, ವಿರಾಟ ಕೇಕಯರೂ ಎಲ್ಲರೂ ಒಂದಾಗಿ, ತಮ್ಮತಮ್ಮ ಸೈನ್ಯಗಳೊಡನೆ ದ್ರೋಣನೊಬ್ಬನನ್ನೇ ಇದಿರಿಸಲು ಹೊರಟರು. ಮತ್ಸ್ಯ, ಸಾಲ್ವಸೈನಿಕರೂ ಆ ದ್ರೋಣನನ್ನು ಇದಿರಿಸಿ ಹೊರಟರು. ದ್ರುಪದನೂಕೂಡ ಪಾಂಚಾಲಸೈನ್ಯಗಳನ್ನೆಲ್ಲ ಸೇರಿಸಿಕೊಂಡು ದ್ರೋಣನಿಗಿದಿರಾದನು. ಇದರಂತೆಯೇ ದ್ರೌಪದಿಯ ಪುತ್ರರೂ, ಘಟೋತ್ಕಚನೆಂಬ ರಾಕ್ಷಸನೂ, ಪ್ರಭದ್ರಕರೂ, ಶಸ್ತ್ರಧಾರಿಗಳಾದ ಆರುಸಾವಿರ ಮಂದಿ ಪಾಂಚಾಲರೂ ಒಂದಾಗಿ, ಆ ದ್ರೋಣನನ್ನೇ ಇದಿರಿಸುವುದಕ್ಕಾಗಿ ಹೊರಟರು. ಪಾಂಡವರಕಡೆಯ ಇತರಮಹಾರಥರೂ ಅವರಿಗೆ ಬೆಂಬಲವಾಗಿ ಹೊರಟರು. ಇವರೆಲ್ಲರೂ ಯುದ್ಧಸನ್ನದ್ಧರಾಗಿ ಹೊರಡುವ ಹೊತ್ತಿಗೆ ಕಗ್ಗತ್ತಲೆಯಾಯಿತು. ರಾತ್ರಿಯು ಭಯಂಕರವಾಗಿ ಕಾಣಿಸುತ್ತಿದ್ದಿತು. ಚತುರಂಗಸೈನ್ಯಗಳಿಗೂ ನಾಶಕರವಾದ ಆ ಭಯಂಕರರಾತ್ರಿಯಲ್ಲಿ, ರಣರಂಗದ ಸುತ್ತಲೂ ನರಿಗಳು ಭಯಂಕರವಾಗಿ ಊಳಿಡುತ್ತ, ಬಾಯಿಂದ ಉರಿಯನ್ನು ಕಕ್ಕುತ್ತಿದ್ದುವು. ಗೂಬೆಗಳು ನಾನಾಕಡೆಗಳಿಂದೆರಗಿ, ವಿಶೇಷವಾಗಿ ಕೌರವಸೈನ್ಯದಲ್ಲಿಯೇ ಕಾಣಿಸಿಕೊಂಡು, ಭಯಂಕರಧ್ವನಿಯಿಂದ ಗುಬ್ಬಳಿಸುತ್ತಿದ್ದುವು. ಉಭಯಸೈನ್ಯಗಳಲ್ಲಿಯೂ ಯುದ್ಧಾ

ರಂಭಸೂಚಕವಾದ ಭೇರೀ ಮೃದಂಗಾದಿ ವಾದ್ಯಧ್ವನಿಗಳು ಆರಂಭವಾದುವು. ಇವುಗಳೊಡನೆ ಆನೆಗಳ ಗರ್ಜನೆ, ಕುದುರೆಗಳ ಕೂಗು, ಕುದುರೆಗಳ ಗೊರಸಿಲಿನ ಧ್ವನಿ, ಇವೆಲ್ಲಾ ಒಂದಾಗಿ ಪ್ರಬಲಘೋಷವುಂಟಾಯಿತು. ಅದೇ ರಾತ್ರಿ ಪ್ರಬಲಯುದ್ಧವು ಆರಂಭಿಸಿತು. ಅತ್ತಲಾಗಿ ದ್ರೋಣನೂ, ಇತ್ತಲಾಗಿ ಸೃಂಜಯರೂ ಒಬ್ಬರನ್ನೊಬ್ಬರು ಹೊಡೆಯಲಾರಂಭಿಸಿದರು. ಭಯಂಕರವಾದ ಕತ್ತಲೆಯೊಂದು! ಸೇನಾಧೂಳಿಯೊಂದು! ಇವೆರಡರಿಂದ ಕಣ್ಣಿಗೆ ಯಾವುದೊಂದೂ ಕಾಣದಂತಾಯಿತು. ಇಷ್ಟರಲ್ಲಿಯೇ ಆನೆ ಕುದರೆ ಕಾಲಾಳುಗಳ ದೇಹದಿಂದ ಹೊರಟ ರಕ್ತಸ್ರಾವಗಳು ನಡುನಡುವೆ ಆ ಧೂಳನ್ನು ತಗ್ಗಿಸುತ್ತಿದ್ದುವು. ಬಿದಿರನ ಮೆಳೆಗೆ ಬೆಂಕಿಹಿಡಿದಂತೆ ಶಸ್ತ್ರಗಳ ಅನ್ಯೋನ್ಯಸಂಘಟ್ಟನದಿಂದ ಉಂಟಾದ ಭಯಂಕರ ಛಟಛಟಾತ್ಕಾರವು ಕೇಳಿಸುತ್ತಿದ್ದಿತು. ಮೃದಂಗ, ಆನಕ, ಝರ್ಝರ, ಪಟಹ, ಮುಂತಾದ ರಣವಾದ್ಯಗಳ ಘೋಷವೊಂದುಕಡೆ! ಆನೆಗಳ ಗರ್ಜನೆಯೊಂದುಕಡೆ! ಕುದುರೆಗಳ ಹೇಷಿತವೊಂದು ಕಡೆ! ಈ ಶಬ್ದಗಳಿಂದ ಎಲ್ಲವೂ ಆಕುಲವಾದಂತಿದ್ದಿತು. ಆ ಅಂಧಕಾರದಲ್ಲಿ ತನ್ನವರು, ಶತ್ರುಗಳು, ಎಂಬ ಭೇದವೇ ತಿಳಿಯುತ್ತಿರಲಿಲ್ಲ. ಮೊತ್ತಕ್ಕೆ ರಣಾಂಗಣವೇ ಹುಚ್ಚುಹಿಡಿದಂತೆ ಕಾಣಿಸಿತು. ಆಗಾಗ ದೊಡ್ಡ ಧೂಳಿದ್ದು ರಕ್ತಪ್ರವಾಹದಿಂದ ತಾನಾಗಿಯೇ ಅಡಗುತ್ತಿದ್ದಿತು. ಸುವರ್ಣಮಯಗಳಾದ ಕವಚ ಭೂಷಣಗಳ ಕಾಂತಿಯಿಂದ ಆಗಾಗ ಕತ್ತಲೆಯು ತಗ್ಗಿ ಬೆಳಕು ಕಾಣಿಸುತ್ತಿದ್ದಿತು. ಸುವರ್ಣರತ್ನಾಭರಣಗಳ ಕಾಂತಿಯಿಂದ ರಣಾಂಗಣವು ನಕ್ಷತ್ರಶೋಭಿತವಾದ ರಾತ್ರಿಯಂತೆ ಕಾಣಿಸಿತು. ಅಲ್ಲಲ್ಲಿ ನರಿಗಳು ಕೂಗುವುವು! ಆನೆಗಳು ಗರ್ಜಿಸುವುವು! ಸೈನಿಕರು ಸಿಂಹನಾದಗಳನ್ನು ಮಾಡುವರು! ಈ ಎಲ್ಲಾ ಶಬ್ದಗಳೂ ಒಂದಾಗಿ ಸೇರಿ, ದಿಕ್ಕುಗಳನ್ನೆಲ್ಲ ವ್ಯಾಪಿಸಿ, ದೊಡ್ಡ ಸಿಡಿಲು ಬಡಿದಂತೆ ಕಿವಿಗೆ ಭಯಂಕರವಾಗಿ ಕೇಳಿಸುತ್ತಿದ್ದಿತು. ಸುವರ್ಣಭೂಷಣಗಳಿಂದಲೂ, ಅಲಂಕಾರಗಳಿಂದಲೂ, ಥಳಥಳಿಸುವ ಶಸ್ತ್ರಗಳಿಂದಲೂ ಕೂಡಿದ ಮಹಾರಥಗಳೂ, ಮಹಾಗಜಗಳೂ ಆ ರಾತ್ರಿಯಲ್ಲಿ ಮಿಂಚುಗಳಿಂದ ಕೂಡಿದ ಮಹಾಮೇಘಗಳಂತೆ ಕಾಣುವುವು. ಋಷ್ಟಿ, ಶಕ್ತಿ, ಗದೆ, ಬಾಣ, ಮುಸಲ, ಪ್ರಾಸ, ಪಟ್ಟಿಸ, ಮೊದಲಾದ ವಿವಿಧಾಯುಧಗಳು ಆಕಾಶದಲ್ಲಿ ಅಗ್ನಿಜ್ವಾಲೆಗಳಂತೆ ಹಾರಾಡು

ತ್ತಿದ್ದುವು. ಆಗಿನ ಯುದ್ಧರಂಗವು ಭಯಂಕರವಾದ ಮಹಾಮೇಘದಂತೆ ಕಾಣಿಸಿತು; ಅದರಲ್ಲಿ ದುರ್ಯೋಧನನೇ ಇದಿರುಗಾಳಿ! ರಥಗಜಗಳೇ ಸುತ್ತಲೂ ಆವರಿಸಿದ ಮೇಘಗಳು! ವಾದ್ಯಘೋಷವೇ ಪ್ರವಾಹಘೋಷವು! ಧ್ವಜ ಚಾಪಗಳೇ ಮಿಂಚುಗಳು! ದ್ರೋಣ ಪಾಂಡವರೇ ಪರ್ಜನ್ಯದೇವತೆಗಳು! ಕತ್ತಿ, ಶಕ್ತಿ, ಗದೆ, ಮೊದಲಾದ ಆಯುಧಗಳೇ ಸಿಡಿಲುಗಳು! ಬಾಣಗಳೇ ಜಲಪಾತಗಳು! ಅಸ್ತ್ರಗಳೇ ಮಳೆಗಾಳಿ! ಶಸ್ತ್ರಪಾತಗಳಿಂದ ಉಂಟಾದ ಕಿಡಿಗಳೇ ಸಿಡಿಲಿನ ಉಷ್ಣವು. ಸರ್ವಪ್ರಾಣಹಾರಕವಾಗಿ, ಭಯಂಕರವಾಗಿ, ಆಶ್ಚರ್ಯಕರವಾಗಿ, ಮತ್ತು ದಾಟುವುದಕ್ಕೆ ತಕ್ಕ ಸಾಧನವೂ ಇಲ್ಲದ ನದಿಯಲ್ಲಿ ಪ್ರವೇಶಿಸುವಂತೆ ಯುದ್ಧಾತುರವುಳ್ಳ ವೀರರು ರಣರಂಗದಲ್ಲಿ ಪ್ರವೇಶಿಸಿದರು. ಭೀರುಗಳಿಗೆ ಭಯವನ್ನೂ, ಶೂರರಿಗೆ ಉತ್ಸಾಹವನ್ನೂ ಹುಟ್ಟಿಸುವಂತಿದ್ದ ಆ ರಾತ್ರಿಯುದ್ಧದಲ್ಲಿ ಪಾಂಡವರೂ, ಸೃಂಜಯರೂ ಒಂದಾಗಿ ಕೋಪದಿಂದ ದ್ರೋಣನನ್ನಿದಿರಿಸಿದರು. ದ್ರೋಣನು ತನಗಿದಿರಾಗಿ ಬಂದ ಒಬ್ಬೊಬ್ಬರನ್ನೂ ತನ್ನ ಪರಾಕ್ರಮದಿಂದ ನಿಮಿಷಮಾತ್ರದಲ್ಲಿ ವಿಮುಖರನ್ನಾಗಿ ಮಾಡಿದನು! ಅನೇಕರನ್ನು ಕೊಂದನು! ಸ್ವಲ್ಪಹೊತ್ತಿನಲ್ಲಿಯೇ ಸಾವಿರಾರು ಆನೆಗಳು, ಲಕ್ಷಸಂಖ್ಯೆಯ ರಥಗಳು, ಹತ್ತುಲಕ್ಷಸಂಖ್ಯೆಯ ಪದಾತಿಗಳು, ಅರ್ಬುದಸಂಖ್ಯೆಯ ಕುದುರೆಗಳು, ಇವೆಲ್ಲಾ ದ್ರೋಣನೊಬ್ಬನ ಬಾಣಗಳಿಂದ ಹತವಾಗಿ ಬಿದ್ದುವು. ರಾತ್ರಿಯ ಆರಂಭದಲ್ಲಿಯೇ ಇಷ್ಟು ಭಯಂಕರಯುದ್ಧವು ನಡೆಯಿತು.

ಇದು ನೂರ ಐವತ್ತೈದನೆಯ ಅಧ್ಯಾಯವು.

---

{ ಭೀಮನು, ದುರ್ಮದ ದುರ್ಮರ್ಷಣರೇ ಮೊದಲಾದ ಧೃತರಾಷ್ಟ್ರಪುತ್ರರನ್ನು ಕೊಂದುದು. }

ಆಗ ಧೃತರಾಷ್ಟ್ರನು ಸಂಜಯನನ್ನು ಕುರಿತು, "ಸಂಜಯಾ! ದ್ರೋಣಾಚಾರ್ಯನೋ ಯಾರಿಗೂ ಸೋಲದವನು! ಅಮಿತತೇಜಸ್ಸುಳ್ಳವನು! ಅವನು ಆ ರಾತ್ರಿ ಯುದ್ಧದಲ್ಲಿ ಸೃಂಜಯಸೈನ್ಯವನ್ನು ಕೋಪದಿಂದ ಪ್ರವೇಶಿಸಿದಾಗ, ನಮ್ಮವರ ಆಲೋಚನೆಯೇನಾಗಿದ್ದಿತು? ಶಾಸ್ತ್ರಮರ್ಯಾದೆಯನ್ನು

ವಿಾರಿ ನಡೆಯುತ್ತಿರುವ ನನ್ನ ಮಗನಿಗೆ, ದ್ರೋಣನು ತಕ್ಕ ಬುದ್ಧಿವಾದಗಳನ್ನು ಹೇಳಿ, ತಾನು ಯುದ್ಧಕ್ಕಾಗಿ ಪಾಂಡವಸೈನ್ಯದಲ್ಲಿ ಪ್ರವೇಶಿಸಿದಾಗ ಅರ್ಜುನನೇನು ಮಾಡಿದನು? ಸೈಂಧವನೂ, ಭೂರಿಶ್ರವಸ್ಸೂ ಹತರಾದ ಮೇಲೆ, ದ್ರೋಣನು ಅತ್ಯಾಕ್ರೋಶದಿಂದ ಪಾಂಚಾಲರನ್ನು ಇದಿರಿಸಿದಾಗ, ಇತ್ತಲಾಗಿ ನಮ್ಮ ಕಡೆಯಲ್ಲಿ ದುರ್ಯೋಧನನೂ, ಅತ್ತಲಾಗಿ ಅರ್ಜುನನೂ, ತಮ್ಮ ತಮ್ಮ ಮುಂದಿನ ಕಾರ್ಯವನ್ನುಕುರಿತು ಏನನ್ನು ಆಲೋಚಿಸಿದರು? ಯುದ್ಧಕ್ಕೆ ಹೊರಟಾಗ ಆ ಬ್ರಾಹ್ಮಣೋತ್ತಮನನ್ನು ಹಿಂಬಾಲಿಸಿದವರಾರು? ಅವನ ಬೆಂಗಾವಲಿಗೆ ನಿಂತ ಶೂರರಾರು? ಅವನ ಮುಂಭಾಗದಲ್ಲಿ ಯುದ್ಧಕ್ಕೆ ನಿಂತವರಾರು? ಸಂಜಯಾ! ಆ ದ್ರೋಣನ ಬಾಣಗಳಿಗೆ ಇದಿರಾದ ಪಾಂಡವರು, ಚಳಿಗಾಲದಲ್ಲಿ ಮಹತ್ತಾದ ಚಳಿಗೆ ಸಿಕ್ಕಿದ ಹಸುಗಳಂತೆ, ಭಯದಿಂದ ನಡುಗಿಹೋಗಿರಬಹುದೆಂದು ತಿಳಿಯುವೆನು. ಮಹಾಧನುರ್ಧಾರಿಯಾದ ಆ ದ್ರೋಣನು ಪಾಂಚಾಲಸೈನ್ಯವನ್ನು ಪ್ರವೇಶಿಸಿ ಹೇಗೆ ತಾನೇ ಅಲ್ಪನಾದ ಆ ಧೃಷ್ಟದ್ಯುಮ್ನನ ಕೈಯಿಂದ ಮರಣಕ್ಕೀಡಾದನೋ ತಿಳಿಯದು! ಆ ರಾತ್ರಿಯಲ್ಲಿ ಎಲ್ಲಾ ಯೋಧರೂ ಮಹಾರಥರೂ ಸೇರಿ, ಯುದ್ಧಕ್ಕೆ ನಿಂತು ಸೈನ್ಯಗಳನ್ನೆಲ್ಲಾ ಬೇರೆಬೇರೆಯಾಗಿ ಹೊಡೆದೋಡಿಸುತ್ತಿದ್ದಾಗ, ನಮ್ಮಲ್ಲಿ ದೃಢಬುದ್ಧಿಯಿಂದ ಕದಲದೆ ನಿಂತವರಾರು? ಸಂಜಯಾ! ನೀನು ಯುದ್ಧದ ಕಥೆಯನ್ನು ಹೇಳುವಾಗಲೆಲ್ಲಾ, ನಮ್ಮ ಕಡೆಯವರೇ ಸತ್ತರೆಂದೂ, ಪರಾಜಿತರಾದರೆಂದೂ, ಶತ್ರುಗಳ ಕೈಗೆ ಸಿಕ್ಕಿಬಿದ್ದರೆಂದೂ ನಮ್ಮ ರಥಿಕರು ವಿರಥರಾದರೆಂದೂ ಬಾರಿಬಾರಿಗೂ ಹೇಳುತ್ತಲೇ ಇರುವೆ. ಹೀಗೆ ಪಾಂಡವರಿಂದ ಕೊಲೆಗೀಡಾಗಿ, ಎದೆಗುಂದಿ, ಅಂಧತಮಸ್ಸಿನಲ್ಲಿ ಮುಳುಗಿದಂತಿದ್ದ ನಮ್ಮವರಿಗೆ, ಆಗ ಹುಟ್ಟಿದ ಆಲೋಚನೆಯೇನು? ಅತ್ತಲಾಗಿ ಪಾಂಡವರ ಜಯವನ್ನೂ, ಸಂತೋಷವನ್ನೂ, ಅವರ ಮೇಲ್ಮೆಯನ್ನೂ, ನೀನು ಆಗಾಗ ವರ್ಣಿಸುತ್ತಲೇ ಇರುವೆ. ಬಾರಿಬಾರಿಗೂ ನಮ್ಮವರು ಭಗ್ನೋತ್ಸಾಹರಾದರೆಂದೂ, ಓಡಿಹೋದರೆಂದೂ ನುಡಿಯುತ್ತಿರುವೆ. ರಾತ್ರಿಯಲ್ಲಿಯೂ ಪಾಂಡವರು ಹಿಂಜರಿಯದೆ ಯುದ್ಧಮಾಡಿದುದು ಹೇಗೆ? ಅವರು ಆ ಕತ್ತಲೆಯಲ್ಲಿ ಕೌರವರನ್ನು ಕಂಡುಹಿಡಿದುದು ಹೇಗೆ? ಇವೆಲ್ಲವನ್ನೂ ತಿಳಿಸು" ಎಂದನು. ಆಗ ಸಂಜಯನು "ಮಹಾರಾಜಾ! ಆ ರಾತ್ರಿ ಯು

ದ್ಧವು ನಡೆಯುವಾಗ, ಪಾಂಡವರೂ, ಸೋಮಕರೂ, ಒಂದಾಗಿ ದ್ರೋಣನ ನ್ನಿದಿರಿಸಿದರು. ದ್ರೋಣನೂ ತನ್ನನ್ನಿದಿರಿಸಿ ಬಂದ ಕೇಕಯರನ್ನೂ, ಧೃಷ್ಟ ದ್ಯುಮ್ನನ ಮಕ್ಕಳನ್ನೂ, ತನ್ನ ತೀವ್ರಬಾಣಗಳಿಂದ ಕೊಂದುಕೆಡಹಿದನು ಅನೇಕ ಮಹಾರಥರನ್ನು ಕ್ಷಣಮಾತ್ರದಲ್ಲಿ ಪರಲೋಕಕ್ಕೆ ಕಳುಹಿಸಿಬಿಟ್ಟನು. ದ್ರೋಣನ ಈ ಜಯವನ್ನು ಸಹಿಸಲಾರದೆ, ಪಾಂಡವಪಕ್ಷದ ಶಿಬಿಯೆಂಬ ರಾ ಜನು ಅವನನ್ನಿದಿರಿಸಿದನು. ಇದನ್ನು ಕಂಡು ದ್ರೋಣನು ಹತ್ತು ಉಕ್ಕಿನಬಾ ಣಗಳನ್ನು ಅವನಮೇಲೆ ಪ್ರಯೋಗಿಸಿದನು. ಶಿಬಿಯು ಮೂವತ್ತು ಬಾಣಗ ಳಿಂದ ದ್ರೋಣನ ಬಾಣಗಳನ್ನು ಖಂಡಿಸಿ, ಒಂದು ಭಲ್ಲದಿಂದ ಆ ದ್ರೋಣನ ಸಾರಥಿಯನ್ನು ಕೊಂದುಬಿಟ್ಟನು. ಆಗ ದ್ರೋಣನು ದುಸ್ಸಹವಾದ ಕೋ ಪದಿಂದ, ಆ ಶಿಬಿಯ ಕುದುರೆಗಳನ್ನೂ, ಸಾರಥಿಯನ್ನೂ ಕೊಂದು, ಕಿರೀಟ ದೊಡನೆ ಆ ಶಿಬಿಯ ತಲೆಯನ್ನು ಕತ್ತರಿಸಿ ಕೆಡಹಿದನು. ಇಷ್ಟರಲ್ಲಿಯೇ ದುರ್ಯೋಧನನು ಬೇರೊಬ್ಬಸಾರಥಿಯನ್ನು ದ್ರೋಣನಿಗೆ ಒದಗಿಸಿಕೊಡಲು, ದ್ರೋಣನು ತಿರುಗಿ ರಥವನ್ನು ಮುಂದುವರಿಸಿ, ಶತ್ರುಸೈನ್ಯವನ್ನು ಇದಿರಿಸಿ ದನು. ಇಷ್ಟರಲ್ಲಿ ಕಳಿಂಗರಾಜನ ಮಗನು ಹಿಂದೆ ತನ್ನ ತಂದೆಯನ್ನು ಕೊಂದ ಭೀಮನಮೇಲೆ ತನ್ನ ಹಗೆತೀರಿಸಿಕೊಳ್ಳುವುದಕ್ಕಾಗಿ, ದೊಡ್ಡ ಕಳಿಂಗಸೈನ್ಯ ದೊಡನೆ ಭೀಮನನ್ನಿದಿರಿಸಿ ಹೋಗಿ, ಅವನಮೇಲೆ ಮೊದಲು ಐದುಬಾಣ ಗಳನ್ನೂ, ಆಮೇಲೆ ಏಳುಬಾಣಗಳನ್ನೂ ಪ್ರಯೋಗಿಸಿದನು. ಭೀಮನ ಸಾರಥಿಯಾದ ವಿಶೋಕನನ್ನು ಮೂರು ಬಾಣಗಳಿಂದ ಬಲವಾಗಿ ನೋಯಿ ಸಿದನು. ಒಂದು ಬಾಣದಿಂದ ಭೀಮನ ಧ್ವಜವನ್ನು ಮುರಿದನು. ಇದ ನ್ನು ನೋಡಿ ಭೀಮನು ಅತ್ಯಾಕ್ರೋಶಗೊಂಡು, ತನ್ನ ರಥದಿಂದ ಒಂದೇ ನೆಗೆತಕ್ಕೆ ಹಾರಿ, ರಥಾರೂಢನಾಗಿದ್ದ ಆ ಕಳಿಂಗಕುಮಾರನನ್ನು ಹಿಡಿದು ತನ್ನ ವಜ್ರಮುಷ್ಟಿಯಿಂದ ಅಪ್ಪಳಿಸಿದನು. ಭೀಮನ ಒಂದೇ ಮುಷ್ಟಿಪ್ರಹಾ ರಕ್ಕೆ ಆ ಕಳಿಂಗನ ದೇಹವು ನಜ್ಜುಗುಜ್ಜಾಗಿ ಅವನ ಮೈಯೆಲುಬೆಲ್ಲಾ ಪುಡಿ ಪುಡಿಯಾಗಿ ಬಿದ್ದುವು. ಕಳಿಂಗರಾಜನು ಹತನಾದೊಡನೆ ಪಾಂಡವಸೈನ್ಯ ದಲ್ಲಿ ದೊಡ್ಡ ಸಿಂಹನಾದವುಂಟಾಯಿತು. ಪಾಂಚಾಲರು “ಭಲೆ! ಭಲೆ!” ಎಂದು ಭೀಮನನ್ನು ಕೊಂಡಾಡಿದರು. ಭೀಮನ ಈ ಕಾರ್ಯವನ್ನು ನೋಡಿ ಕರ್ಣನೂ, ಅವನ ಸಹೋದರರೂ ಕೋಪಾವಿಷ್ಟರಾಗಿ ಭೀಮನನ್ನಿದಿರಿಸಿ,

ಅವನನ್ನು ಸರ್ಪಸಮಾನಗಳಾದ ತೀವ್ರಬಾಣಗಳಿಂದ ಹೊಡೆಯಲಾರಂಭಿಸಿದರು. ಆಗ ಭೀಮನು ಆ ಕಳಿಂಗನ ರಥದಿಂದ ಕೆಳಕ್ಕೆ ಹಾರಿ, ದ್ರುಮನೆಂಬವನ ರಥವನ್ನೇರಿ, ಅವನನ್ನೂ ತನ್ನ ವಜ್ರಮುಷ್ಟಿಯಿಂದ ಅಪ್ಪಳಿಸಿದನು. ಗಾಜನ್ನು ಬೀಸಿ ಬಡಿದಹಾಗೆ ಭೀಮನ ಒಂದೇ ಮುಷ್ಟಿಯಿಂದ ಅವನ ಮೈ ಪುಡಿಪುಡಿಯಾಗಿ, ಅವನು ರಕ್ತವನ್ನು ಕಾರುತ್ತ ಬಿದ್ದನು. ಕರ್ಣನ ಸಹೋದರನಾದ ದ್ರುಮನು ಬಿದ್ದಮೇಲೆ, ಭೀಮನು ಜಯರಾತನೆಂಬವನ ರಥವನ್ನೇರಿ, ಎರಡುಮೂರಾವರ್ತಿ ಉಚ್ಚಧ್ವನಿಯಿಂದ ಸಿಂಹನಾದಮಾಡಿ, ಒಂದು ಕೈಯಿಂದ ಜಯರಾತನ ಕಾಲನ್ನೂ, ಇನ್ನೊಂದು ಕೈಯಿಂದ ಅವನ ಸಾರಥಿಯ ಕಾಲನ್ನೂ ಹಿಡಿದು ಮೇಲಕ್ಕೆತ್ತಿ, ಕರ್ಣನ ಕಣ್ಣೆದಿರಾಗಿಯೇ ಅವರ ದೇಹಗಳನ್ನು ನೆಲಕ್ಕೆ ಅಪ್ಪಳಿಸಿದನು. ಅವರಿಬ್ಬರೂ ಪ್ರಾಣಗಳನ್ನು ಬಿಟ್ಟರು. ಇದನ್ನು ನೋಡುತ್ತಿದ್ದ ಕರ್ಣನು ಮಹಾಕ್ರೋಧದಿಂದ ಸುವರ್ಣಮಯವಾದ ಒಂದು ಶಕ್ತ್ಯಾಯುಧವನ್ನು ತೆಗೆದು ಭೀಮನಮೇಲೆ ಪ್ರಯೋಗಿಸಿದನು. ಆ ಶಕ್ತ್ಯಾಯುಧವು ತನ್ನ ಸಮೀಪಕ್ಕೆ ಬಂದೊಡನೆಯೇ ಭೀಮನು ಅದನ್ನು ನಗುಮುಖದಿಂದ ಕೈಗಾತುಕೊಂಡು, ಅದನ್ನು ಕರ್ಣನ ಮೇಲೆಯೇ ಬೀಸಿ ಬಡಿದನು. ಆ ಶಕ್ತಿಯು ಕರ್ಣನ ಬಳಿಗೆ ಬರುವಷ್ಟರಲ್ಲಿ, ಶಕುನಿಯು ಒಳ್ಳೇ ಹದವಾದ ಒಂದು ಬಾಣದಿಂದ ಅದನ್ನು ಕತ್ತರಿಸಿಬಿಟ್ಟನು. ಇಂತಹ ಸಾಹಸಕಾರ್ಯಗಳನ್ನೆಲ್ಲಾ ಮಾಡಿದಮೇಲೆ, ಭೀಮನು ಹಿಂತಿರುಗಿ ಬಂದು, ತನ್ನ ರಥವನ್ನೇರಿ ಕುಳಿತು, ತಿರುಗಿ ನಿನ್ನ ಸೈನ್ಯದೊಳಗೆ ಪ್ರವೇಶಿಸಿ ಹೊಡೆಯಲಾರಂಭಿಸಿದನು. ಕೋಪಗೊಂಡ ಕಾಲಾಂತಕನಂತೆ, ಬರುತ್ತಿರುವ ಆ ಭೀಮನನ್ನು ಕಂಡು ನಿನ್ನ ಮಕ್ಕಳೆಲ್ಲರೂ ಬಾಣವರ್ಷದಿಂದ ಅವನನ್ನು ತಡೆದರು. ಭೀಮನು ಹಸನ್ಮುಖನಾಗಿಯೇ ನಿನ್ನ ಮಗನಾದ ದುರ್ಮದನ ಸಾರಥಿಯನ್ನೂ, ರಥಾಶ್ವಗಳನ್ನೂ ಕೊಂದುಬಿಟ್ಟನು. ಒಡನೆ ದುರ್ಮದನು ಸಮೀಪದಲ್ಲಿದ್ದ ತನ್ನ ಸಹೋದರನಾದ ದುರ್ಮರ್ಷಣನ ರಥವನ್ನೇರಿ ಕುಳಿತನು. ಆ ಸಹೋದರರಿಬ್ಬರೂ ಒಂದೇ ರಥದಲ್ಲಿ ಕುಳಿತು ಭೀಮನೊಡನೆ ಯುದ್ಧವನ್ನಾರಂಭಿಸಿದರು. ಸೂರ್ಯವರುಣರಿಬ್ಬರೂ ಸೇರಿ ತಾರಕಾಸುರನನ್ನು ಇದಿರಿಸಿದ ಹಾಗೆ, ಬಾಣಗಳಿಂದ ಭೀಮನನ್ನು ಪರಂಪರೆಯಾಗಿ ಹೊಡೆಯುತ್ತಿದ್ದರು. ಆಗ ಭೀಮನು, ಕರ್ಣ, ಕೃಪ, ದುರ್ಯೋ

ಧನ, ಅಶ್ವತ್ಥಾಮ, ಸೋಮದತ್ತ, ಬಾಹ್ಲೀಕರೇ ಮೊದಲಾದ ನಿನ್ನ ಕಡೆಯ ವೀರರೆಲ್ಲರೂ ಕಣ್ಣೆದಿರಾಗಿ ನೋಡುತ್ತಿರುವಾಗಲೇ, ಆ ಸಹೋದರರಿಬ್ಬರೂ ಕುಳಿತಿದ್ದ ರಥವನ್ನು ಪಾದಪ್ರಹಾರದಿಂದ ಚೂರ್ಣಮಾಡಿದನು. ಆಮೇಲೆ ಆ ನಿನ್ನ ಪುತ್ರರಿಬ್ಬರನ್ನೂ ತನ್ನ ಮುಷ್ಟಿಯಿಂದ ಗುದ್ದಿ, ಕೆಳಕ್ಕೆ ಕೆಡಹಿ, ಇಬ್ಬರನ್ನೂ ಕಾಲಿನಿಂದ ತಿಕ್ಕಿಬಿಟ್ಟನು. ಈ ದುರ್ಮದ ದುಷ್ಕರ್ಣರಿಬ್ಬರ ಭಯಂಕರವಾದ ಕೊಲೆಯನ್ನು ನೋಡಿ ನಿನ್ನ ಸೈನ್ಯದಲ್ಲಿ ದೊಡ್ಡ ಹಾಹಾಕಾರವುಂಟಾಯಿತು. ಆಗ ಸೈನ್ಯಕ್ಕೆ ನಿಯಾಮಕರಾದ ಕೆಲವು ರಾಜರು, ಭೀಮನನ್ನು ನೋಡಿ ತಮ್ಮಲ್ಲಿ ಅನ್ಯೋನ್ಯವಾಗಿ “ಆಹಾ! ಕಾಲರುದ್ರನೇ ಈ ಭೀಮನ ರೂಪದಿಂದ ಬಂದು, ಧೃತರಾಷ್ಟ್ರಪುತ್ರರೊಡನೆ ಯುದ್ಧಮಾಡುವಂತಿದೆ. ಇನ್ನು ಇವನಮುಂದೆ ನಾವು ಬದುಕುವುದೆಲ್ಲಿ?” ಎಂದು ಹೇಳುತ್ತ, ರಣರಂಗವನ್ನು ಬಿಟ್ಟು ಓಡಲಾರಂಭಿಸಿದರು. ಮೈಮೇಲೆ ಪ್ರಜ್ಞೆಯಿಲ್ಲದವರಂತೆ ತಮ್ಮತಮ್ಮ ವಾಹನಗಳನ್ನು ಬಹುಬೇಗನೆ ಓಡಿಸುತ್ತ ಇಬ್ಬರು ಒಂದುಕಡೆ ನಿಲ್ಲದಂತೆ, ಬೇರೆಬೇರೆಯಾಗಿ ಚದರಿಹೋದರು. ಆ ರಾತ್ರಿ, ಯುದ್ಧಾರಂಭದಲ್ಲಿಯೇ ನಿನ್ನ ಸೈನ್ಯವು ಹೀಗೆ ಕ್ಷೋಭಹೊಂದಿ ಚದರಿಹೋಯಿತು. ಪಾಂಡವರ ಕಡೆಯ ರಾಜಶ್ರೇಷ್ಠರೆಲ್ಲ ಭೀಮನನ್ನು ಕೊಂಡಾಡಿ ಪೂಜಿಸಿದರು. ಆಮೇಲೆ ಭೀಮನು ಅಣ್ಣನ ಬಳಿಗೆ ಹೋಗಿ, ಅವನಿಗೆ ನಮಸ್ಕರಿಸಿದನು. ನಕುಲಸಹದೇವರು, ದ್ರುಪದವಿರಾಟರು, ಕೇಕಯರಾಜರು, ಯುಧಿಷ್ಠಿರನು, ಇವರೆಲ್ಲರೂ ಭೀಮನನ್ನು ಸುತ್ತಿಮುತ್ತಿ ಸಂತೋಷದಿಂದ ಅವನನ್ನು ಕೊಂಡಾಡಿ, ಅಂಧಕ ಸಂಹಾರವಾದ ಮೇಲೆ ದೇವತೆಗಳು ರುದ್ರನನ್ನು ಹೇಗೋ ಹಾಗೆ ಸತ್ಕರಿಸಿದರು. ಇತ್ತಲಾಗಿ ವರುಣಕುಮಾರನಿಗೆ ಸಮಾನತೇಜಸ್ಸುಳ್ಳ ನಿನ್ನ ಮಕ್ಕಳೆಲ್ಲರೂ ಅತಿ ಕ್ರೋಧದಿಂದ ದ್ರೋಣಾಚಾರ್ಯನನ್ನು ಮುಂದಿಟ್ಟುಕೊಂಡು, ಚತುರಂಗಸೈನ್ಯಗಳೊಡಗೂಡಿ ಭೀಮನೊಡನೆ ಯುದ್ಧಕ್ಕಾಗಿ ಅವನ ಸುತ್ತಲೂ ಆವರಿಸಿಕೊಂಡರು. ಇತ್ತಲಿಂದ ನಕುಲಸಹದೇವರೂ, ದ್ರುಪದನ ಮಕ್ಕಳೂ, ದ್ರುಪದನೂ, ವಿರಾಟನೂ, ಧರ್ಮರಾಜನೂ, ಸಾತ್ಯಕಿಯೂ, ಘಟೋತ್ಕಚನೂ, ಜಯವಿಜಯರೂ, ದ್ರುಮನೂ, ವೃಕನೂ, ಸೃಂಜಯರೂ ಒಂದಾಗಿ ಸೇರಿ, ನಿನ್ನ ಮಕ್ಕಳನ್ನಿದಿರಿಸಿ ತಡೆದರು. ಅಂಧಕಾರಮಯವಾದ ಆ

ಭಯಂಕರರಾತ್ರಿಯಲ್ಲಿ ಉಭಯಸೈನ್ಯಕ್ಕೂ ದಾರುಣ ಯುದ್ಧವಾಯಿತು. ಆ ರಾತ್ರಿಯಲ್ಲಿ, ನರಿ, ತೋಳ ಮೊದಲಾದ ಮಾಂಸಾಹಾರಿಪ್ರಾಣಿಗಳಿಗೆಲ್ಲಾ ಆನಂದಕರವಾದ ಅದ್ಭುತಯುದ್ಧವು ನಡೆಯಲಾರಂಭಿಸಿತು.

ಇದು ನೂರ ಐವತ್ತಾರನೆಯ ಅಧ್ಯಾಯವು.

ಸಾತ್ಯಕಿಯಿಂದ ಸೋಮದತ್ತನ ಪರಾಜಯವು. ಅಶ್ವತ್ಥಾಮ ಘಟೋತ್ಕಚರ ಯುದ್ಧವು. ಅಶ್ವತ್ಥಾಮನ ಅದ್ಭುತಪರಾಕ್ರಮವು.

ಮಹಾರಾಜಾ! ಇದಕ್ಕೆ ಮೊದಲು ಪ್ರಾಯೋಪವೇಶದಲ್ಲಿದ್ದ ಸೋಮದತ್ತಕುಮಾರನು ಸಾತ್ಯಕಿಯಿಂದ ಹತನಾದನಷ್ಟೆ? ತನ್ನ ಮಗನ ಈ ಅನ್ಯಾಯದ ಕೊಲೆಯನ್ನು ನೋಡಿ ಸೋಮದತ್ತನು ದುಃಖಾಕ್ರೋಶಗಳಿಂದ ಸಾತ್ಯಕಿಯನ್ನುಕುರಿತು ಹೀಗೆಂದನು. " ಓ ಸಾತ್ಯಕೀ! ಕ್ಷತ್ರಧರ್ಮವೇನೋ ಮೇಲಾದುದೇ! ಮಹಾತ್ಮರಾದ ದೇವತೆಗಳೂ ಅದನ್ನು ಕೊಂಡಾಡುವರು. ಅಂತಹ ಉತ್ತಮ ಕ್ಷತ್ರುಧರ್ಮವನ್ನು ತೊರೆದು, ನೀನು ಕ್ರೂರರಾದ ಬೇಡರ ನೀತಿಯನ್ನು ಹೇಗೆತಾನೇ ಅನುಸರಿಸಿದೆ? ಪ್ರಾಜ್ಞನಾಗಿ, ಕ್ಷತ್ರಿಯಧರ್ಮದಲ್ಲಿ ನೆಲೆಗೊಂಡವನು ಎಂದಿಗಾದರೂ ಇಂತಹ ಅಕೃತ್ಯವನ್ನು ನಡೆಸುವನೇ? ಯುದ್ಧವನ್ನು ಬಿಟ್ಟು ಹಿಂತಿರುಗಿದವರನ್ನೂ, ದೀನರನ್ನೂ, ಶಸ್ತ್ರತ್ಯಾಗಮಾಡಿದವರನ್ನೂ, ತನ್ನ ಪ್ರಾಣದಾನಕ್ಕಾಗಿ ಯಾಚಿಸುವವರನ್ನೂ, ಧರ್ಮಜ್ಞನಾದ ನಿನ್ನಂತಹ ಕ್ಷತ್ರಿಯನು ಹೇಗೆತಾನೇ ಕೊಲ್ಲಬಹುದು? ಸಾತ್ಯಕೀ! ವೃಷ್ಣಿಗಳೊಳಗೆಲ್ಲ ಪ್ರಖ್ಯಾತಿಗೊಂಡ ಮಹಾರಥರೆಂದರೆ ಮಹಾಬಾಹುವಾದ ಪ್ರದ್ಯುಮ್ನನೊಬ್ಬನು, ನೀನೊಬ್ಬನು, ಇಬ್ಬರೇ! ಅಂತಹ ಯಶಸ್ಸನ್ನು ಪಡೆದ ನೀನು, ಮೊದಲೇ ಅರ್ಜುನನಿಂದ ಕತ್ತರಿಸಲ್ಪಟ್ಟ ತೋಳುಗಳುಳ್ಳವನಾಗಿ, ಪ್ರಾಯೋಪವೇಶದಿಂದ ಶಸ್ತ್ರತ್ಯಾಗಮಾಡಿ ಕುಳಿತಿದ್ದ ನನ್ನ ಮಗನನ್ನು ಕೊಂದೆಯಲ್ಲಾ! ಇದೆಂತಹ ಅನ್ಯಾಯವು? ನೀನು ಬಹಳ ಘಾತುಕಕೃತ್ಯವನ್ನು ನಡೆಸಿದೆ. ಆ ನಿನ್ನ ಕ್ರೂರಕಾರ್ಯಕ್ಕೆ ಈಗಿನ ಯುದ್ಧದಲ್ಲಿ ತಕ್ಕ ಫಲವನ್ನು ನೀನು ನನ್ನಿಂದ ಅನುಭವಿಸದೆ ಹೋ

ಗಲಾರೆ. ಎಲ ಮೂಢಾ! ಈಗಲೇ ನಾನು ನಿನ್ನ ತಲೆಯನ್ನು ಕತ್ತರಿಸುವೆನು ನೋಡು. ನನ್ನ ಇಬ್ಬರ ಮಕ್ಕಳಮೇಲೆ, ಮತ್ತು ನನ್ನ ಧರ್ಮಕಾರ್ಯಗಳ ಮೇಲೆ, ನನ್ನ ಸುಕೃತದಮೇಲೆ, ಆಣೆಯಿಟ್ಟು ಹೇಳುವೆನು. ತಾನೇ ವೀರ ನೆಂಬ ಗರ್ವವುಳ್ಳ ನಿನ್ನನ್ನು ಈ ರಾತ್ರಿಯು ಕಳೆಯುವುದರೊಳಗಾಗಿ ಕೊಲ್ಲದಿದ್ದರೆ, ನಾನು ಘೋರನರಕಕ್ಕೆ ಬೀಳತಕ್ಕವನೇ! ಕುಂತೀಕುಮಾ ರನಾದ ಆ ಪಾರ್ಥನಿಂದ ನೀನು ರಕ್ಷಿಸಲ್ಪಡದಿದ್ದರೆ, ನಿನ್ನ ಪುತ್ರಸಹೋ ದರಾದಿಗಳೆಲ್ಲರೊಡನೆ ಸೇರಿಸಿ ನಿನ್ನನ್ನು ಕೊಂದು ತೀರಿಸಿಬಿಡುವೆನು” ಎಂದು ಆ ಸೋಮದತ್ತನು ಉಚ್ಚಧ್ವನಿಯಿಂದ ಶಂಖವನ್ನೂದಿದನು. ದೊಡ್ಡ ಸಿಂಹನಾದವನ್ನು ಮಾಡಿದನು. ಆಗ ಸಾತ್ಯಕಿಯು ಕ್ರೋಧಾವೇಶದಿಂದ ಸೋಮದತ್ತನನ್ನು ನೋಡಿ, “ಓ ಕೌರವಕುಮಾರಾ! ಇದಕ್ಕೆಲ್ಲಾ ನಾನು ಹೆದರತಕ್ಕವನಲ್ಲ! ನಿನ್ನೊಡನೆ ಮಾತ್ರವಲ್ಲ! ಬೇರೆ ಯಾರೊಡನೆಯಾದರೂ ನಾನು ಯುದ್ಧಕ್ಕೆ ನಿಲ್ಲಲು ಹೆದರಿದವನಲ್ಲ! ನೀನು ನಿನ್ನ ಸಮಸ್ತ ಸೈನ್ಯಗಳಿಂದ ರಕ್ಷಿತನಾಗಿ ಬಂದು ಯುದ್ಧಮಾಡಿದರೂ, ನಿನ್ನ ವಿಷಯ ದಲ್ಲಿ ನನಗೆ ಲವಮಾತ್ರವೂ ಭಯವಿಲ್ಲವೆಂದು ತಿಳಿ! ಅಸತ್ಪುಗಳಿಗೆ ಯೋಗ್ಯವೂ, ನಿರರ್ಥಕವೂ ಆದ ಇಂತಹ ಮಾತುಗಳಿಂದ ನೀನು ನನ್ನನ್ನು ಹೆದರಿಸಲಾರೆ. ಕ್ಷತ್ರಿಯಧರ್ಮದಲ್ಲಿರತಕ್ಕ ನಾನು ಈ ಬಾಯಿ ಬೆದರಿಕೆಗೆಲ್ಲ ಹೆದರುವವನಲ್ಲ! ನಿನಗೆ ನಿಜವಾಗಿ ನನ್ನೊಡನೆ ಯುದ್ಧಮಾಡ ಬೇಕೆಂಬ ಉದ್ದೇಶವಿದ್ದರೆ, ನೀನು ನಿರ್ದಯನಾಗಿ ನನ್ನಮೇಲೆ ಬಾಣಗಳನ್ನು ಬಿಡು. ನನ್ನನ್ನು ಪ್ರಹರಿಸು! ನಾನೂ ನಿನ್ನನ್ನು ಹೊಡೆಯುವೆನು. ನಿನ್ನ ಮಗನಾದ ಭೂರಿಶ್ರವಸ್ಸು ನನ್ನನ್ನಿದಿರಿಸಿ ಹತನಾದನು. ತನ್ನ ಸಹೋದ ರನ ಮರಣದುಃಖದಿಂದ ಪೀಡಿತನಾಗಿ ಬಂದ ಶಲನೂ ನನ್ನಿಂದ ಹತನಾ ದನು. ಈಗ ಅವರಿಬ್ಬರಲ್ಲಿ ಅಭಿಮಾನದಿಂದ ಯುದ್ಧಕ್ಕಾಗಿ ಬಂದ ನಿನ್ನನ್ನೂ ಕೊಲ್ಲುವೆನು ನೋಡು. ಮುಂದೆ ಬಂದು ನಿಲ್ಲು. ನೀನೋ ಉತ್ತಮ ಕುರು ಕುಲಕ್ಕೆ ಸೇರಿದವನು! ಮಹಾರಥನು! ಯಾವನಲ್ಲಿ ದಾನ, ಇಂದ್ರಿಯನಿಗ್ರಹ, ಶೌಚ, ಅಹಿಂಸೆ, ಲಜ್ಜೆ, ಧೈರ್ಯ, ಕ್ಷಮೆ,ಮುಂತಾದ ಎಲ್ಲಾ ಸದ್ಗುಣಗಳೂ ನಿರಪಾಯವಾಗಿ ಸೇರುವುವೋ, ಮೃದಂಗಧ್ವಜವುಳ್ಳ ಅಂತಹ ಯುಧಿಷ್ಠಿರರಾ ಜನಿಗೇ ನೀನು ದ್ವೇಷಿಯಾದುದರಿಂದ, ಆತನ ತೇಜಸ್ಸಿನಿಂದ ಮೊದಲೇ ನೀನು

ಹತನಾಗಿರುವೆ. ಕರ್ಣಶಕುನಿಗಳೊಡನೆ ಸೇರಿ ನೀನು ಈಗಿನ ಯುದ್ಧದಲ್ಲಿ ನನ್ನಿಂದ ಪೂರ್ಣವಾಗಿ ನಾಶವನ್ನು ಹೊಂದುವೆ. ಆ ಕೃಷ್ಣಾರ್ಜುನರ ಪಾದಗಳಮೇಲೆ, ಮತ್ತು ನನ್ನ ಪುಣ್ಯಕಾರ್ಯಗಳಮೇಲೆ ಆಣೆಯಿಟ್ಟು ಹೇಳುವೆನು ಕೇಳು. ಈಗಿನ ಯುದ್ಧದಲ್ಲಿ ಪಾಪಿಯಾದ ನಿನ್ನನ್ನು ನಿನ್ನ ಮಕ್ಕಳೊಡನೆ ನಾನು ಕೊಲ್ಲದೆ ಬಿಡುವವನಲ್ಲ! ನಿನ್ನನ್ನು ಕೊಂದಹೊರತು ನಾನು ರಣರಂಗವನ್ನು ಬಿಟ್ಟು ಹಿಂತಿರುಗುವವನೂ ಅಲ್ಲ. ನೀನಾಗಿ ಒಂದುವೇಳೆ ಯುದ್ಧರಂಗವನ್ನು ಬಿಟ್ಟು ಓಡಿಹೋದರೆ, ಆಗ ನೀನು ನನ್ನಿಂದ ಬದುಕಿಕೊಳ್ಳಬಹುದು" ಎಂದನು.

ಹೀಗೆ ಒಬ್ಬರನ್ನೊಬ್ಬರು ಮೂದಲಿಸುತ್ತಾ, ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವರಾಗಿ ಬಾಣಗಳನ್ನು ಬಿಡಲಾರಂಭಿಸಿದರು. ಸಾವಿರ ರಥಗಳೊಡನೆಯೂ, ಹತ್ತುಸಾವಿರ ಆನೆಗಳೊಡನೆಯೂ, ದುರ್ಯೋಧನನು ಸೋಮದತ್ತನನ್ನು ಸುತ್ತಿ ನಿಂತನು. ಶಸ್ತ್ರಧಾರಿಗಳಲ್ಲಿ ಮೇಲೆನಿಸಿದ ನಿನ್ನ ಮೈದುನನಾದ ಶಕುನಿಯು, ಇಂದ್ರಪರಾಕ್ರಮವುಳ್ಳ ತನ್ನ ಸಹೋದರರೊಡನೆಯೂ, ತನ್ನ ಮಕ್ಕಳು ಮೊಮ್ಮಕ್ಕಳೊಡನೆಯೂ ಸೇರಿ ಯುದ್ಧಕ್ಕೆ ಸಿದ್ಧನಾಗಿ ಬಂದನು. ವಜ್ರದಂತೆ ದೃಢಾಂಗನೂ, ಯುವಕನೂ ಆದ ಆ ಶಕುನಿಯ ಅಧೀನದಲ್ಲಿ ಲಕ್ಷಕ್ಕಿಂತಲೂ ಹೆಚ್ಚು ಅಶ್ವಸೈನ್ಯಗಳಿದ್ದುವು. ಅವನು ಈ ಎಲ್ಲಾ ಪರಿವಾರಗಳೊಡನೆ ಸೋಮದತ್ತನನ್ನು ರಕ್ಷಿಸುತ್ತಿದ್ದನು. ಹೀಗೆ ಬಲಾಢ್ಯರಾದ ನಿನ್ನ ಕಡೆಯುವರಿಂದ ರಕ್ಷಿತನಾದ ಸೋಮದತ್ತನು, ಸಾತ್ಯಕಿಯನ್ನು ಬಾಣಗಳಿಂದ ಮುಚ್ಚಿದನು. ಇದನ್ನು ನೋಡಿ ಧೃಷ್ಟದ್ಯುಮ್ನನು ತನ್ನ ದೊಡ್ಡ ಸೈನ್ಯವನ್ನು ಸೇರಿಸಿಕೊಂಡು ಸಾತ್ಯಕಿಗೆ ಬೆಂಬಲವಾಗಿ ಬಂದನು. ಉಭಯ ಸೈನ್ಯಗಳಿಗೂ ಘೋರಯುದ್ಧವು ಆರಂಭಿಸಿತು. ಬಿರುಗಾಳಿಯಿಂದ ಕ್ಷುಭಿತವಾದ ಸಮುದ್ರಗಳ ಘೋಷದಂತೆ, ಉಭಯಸೈನ್ಯದ ಹೊಡೆದಾಟದ ಧ್ವನಿಯು ಅತಿ ಪ್ರಬಲವಾಯಿತು. ಸೋಮದತ್ತನು ಸಾತ್ಯಕಿಯಮೇಲೆ ಒಂಭತ್ತು ಬಾಣಗಳನ್ನು ಬಿಟ್ಟನು. ಇಷ್ಟರಲ್ಲಿಯೇ ಸಾತ್ಯಕಿಯು ಒಂಭತ್ತು ಬಾಣಗಳಿಂದ ಆ ಸೋಮದತ್ತನನ್ನು ಬಲವಾಗಿ ಹೊಡೆದನು, ಇದರಿಂದ ಸೋಮದತ್ತನು ಬಹಳವಾಗಿ ನೊಂದು, ಮೂರ್ಛಿತನಾಗಿ

ರಥದ ಗದ್ದುಗೆಯಮೇಲೆಯೇ ಒರಗಿದನು. ಹೀಗೆ ಸೋಮದತ್ತನು ಮೂರ್ಛಿತನಾದುದನ್ನು ನೋಡಿ, ಅವನ ಸಾರಥಿಯು ರಣರಂಗದಿಂದ ರಥವನ್ನು ಹಿಂತಿರುಗಿಸಿಬಿಟ್ಟನು. ಸೋಮದತ್ತನ ಸ್ಥಿತಿಯನ್ನು ನೋಡಿ ಸಹಿಸಲಾರದೆ ದ್ರೋಣನು ಸಾತ್ಯಕಿಯನ್ನು ವಧಿಸುವ ಉದ್ದೇಶದಿಂದ ಬಾಣಗಳನ್ನು ಪ್ರಯೋಗಿಸುತ್ತ ಬಂದನು. ಇದನ್ನು ನೋಡಿ ಯುಧಿಷ್ಠಿರಾದಿ ಪಾಂಡವವೀರರು ಸಾತ್ಯಕಿಯ ರಕ್ಷಣೆಗಾಗಿ ಓಡಿಬಂದರು. ಬಲಿಯು ದೇವತೆಗಳೊಡನೆ ತ್ರೈಲೋಕ್ಯಜಯಕ್ಕಾಗಿ ಯುದ್ಧಮಾಡಿದಂತೆ, ದ್ರೋಣನು ಪಾಂಡವರೊಡನೆ ತೀವ್ರಯುದ್ಧವನ್ನು ನಡೆಸಿದನು. ಬಾಣಗಳ ಬಲೆಯಿಂದ ಪಾಂಡವಸೈನ್ಯವನ್ನೆಲ್ಲಾ ಮುಚ್ಚಿದನು. ಯುಧಿಷ್ಠಿರನನ್ನು ಬಲವಾಗಿ ಹೊಡೆದನು. ಹತ್ತು ಬಾಣಗಳನ್ನು ಸಾತ್ಯಕಿಗೂ, ಇಪ್ಪತ್ತು ಬಾಣಗಳನ್ನು ಧೃಷ್ಟದ್ಯುಮ್ನನಿಗೂ ಗುರಿಯಿಟ್ಟು ಹೊಡೆದನು. ಹಾಗೆಯೇ ಭೀಮನಿಗೆ ಒಂಭತ್ತು, ನಕುಲನಿಗೆ ಐದು, ಸಹದೇವನಿಗೆ ಎಂಟು, ಶಿಖಂಡಿಗೆ ನೂರು, ಉಪಪಾಂಡವರಲ್ಲಿ ಒಬ್ಬೊಬ್ಬರಿಗೆ ಐದೈದು, ವಿರಾಟನಿಗೆ ಎಂಟು, ದ್ರುಪದನಿಗೆ ಹತ್ತು, ಯುಧಾಮನ್ಯುವಿಗೆ ಮೂರು, ಉತ್ತಮೌಜಸ್ಸಿಗೆ ಆರು, ಹೀಗೆ ಒಬ್ಬೊಬ್ಬರ ಮೇಲೆಯೂ ಬಾಣಗಳನ್ನು ಹೊಡೆದನು. ಸೈನ್ಯಗಳನ್ನೆಲ್ಲಾ ಹೊಡೆದಟ್ಟಿದನು. ತಿರುಗಿ ಯುಧಿಷ್ಠಿರನನ್ನು ಇದಿರಿಸಿ ಬಂದನು. ದ್ರೋಣನ ಬಾಣಪ್ರಹಾರಕ್ಕೆ ಹೆದರಿ, ಅನೇಕ ಪಾಂಡವಸೈನಿಕರು ದೈನ್ಯದಿಂದ ಕೂಗಿಡುತ್ತ ದಿಕ್ಕುದಿಕ್ಕಿಗೆ ಓಡಿದರು. ಹೀಗೆ ದ್ರೋಣನಿಂದ ಪಾಂಡವಸೈನ್ಯವು ಚದರಿಸಲ್ಪಡುತ್ತಿರುವುದನ್ನು ನೋಡಿ ಅರ್ಜುನನ ಮನಸ್ಸಿನಲ್ಲಿ ಕೋಪವು ಅಂಕುರಿಸಿತು. ಅವನು ಧನುರ್ಧಾರಿಯಾಗಿ ಆಚಾರ್ಯನನ್ನಿದಿರಿಸಲು ವೇಗದಿಂದ ಬಂದನು. ಆಗ ಪಾಂಡವಸೈನ್ಯಗಳಿಗೆಲ್ಲಾ ತಿರುಗಿ ಧೈರ್ಯವುಂಟಾಗಿ, ಅವೆಲ್ಲವೂ ಹಿಂತಿರುಗಿ ಬಂದುವು. ದೊಡ್ಡ ಯುದ್ಧವು ನಡೆಯಿತು. ನಿನ್ನ ಮಕ್ಕಳಿಂದ ಪರಿವೃತನಾದ ದ್ರೋಣನು ತನ್ನ ಅಸ್ತ್ರಚಾತುರ್ಯದಿಂದ ಬಿರುಗಾಳಿಯು ತೂಲರಾಶಿಯನ್ನು ಹೇಗೋ ಹಾಗೆ, ಪಾಂಡವಸೈನ್ಯವನ್ನೆಲ್ಲ ಚದರಿಸುತ್ತ ಬಂದನು. ಆಗ ದ್ರೋಣನ ಆಕ್ರೋಶವನ್ನು ಕೇಳಬೇಕೆ? ಜ್ವಲಿಸುವ ಸೂರ್ಯಾಗ್ನಿಗಳಿಗೆ ಸಮಾನನಾಗಿ, ಬಾಣಗಳೆಂಬ ಜ್ವಾಲೆಗಳನ್ನು ಕೆದರುತ್ತಿರುವನು. ಮಂಡಲಾಕಾರವಾಗಿ ಧನುಸ್ಸನ್ನು ಬಾಗಿಸಿ, ಶತ್ರುಸೈ

ನ್ಯವನ್ನೆಲ್ಲಾ ದಹಿಸುತ್ತಿದ್ದನು. ಆತನನ್ನು ತಡೆಯಲು ಯಾವನೊಬ್ಬನೂ ಧೈರ್ಯದಿಂದ ಮುಂದೆ ಬರಲಿಲ್ಲ. ಯಾವಯಾವನು ತನ್ನಿದಿರಿಗೆ ಬಂದರೆ, ದ್ರೋಣನ ಬಾಣಗಳು ಆಗಲೇ ಅವನ ತಲೆಯನ್ನು ಭೇದಿಸಿಕೆಡಹುತ್ತಿದ್ದುವು. ಈ ಕೊಲೆಯನ್ನು ತಡೆಯಲಾರದೆ ತಿರುಗಿ ಪಾಂಡವಸೈನ್ಯವು ಅರ್ಜುನನನ್ನೂ ಲಕ್ಷ್ಯಮಾಡದೆ ಪಲಾಯನಮಾಡಲಾರಂಭಿಸಿತು. ಇದನ್ನು ನೋಡಿ, ಅರ್ಜುನನು ಕೃಷ್ಣನನ್ನು ಕುರಿತು “ ವಾಸುದೇವಾ! ಇದೇನೋ ವಿಪರೀತಕ್ಕೆ ಬಂದಂತಿದೆ! ದ್ರೋಣನ ರಥದ ಬಳಿಗೆ ನಮ್ಮ ರಥವನ್ನು ಬಿಡು! ಈ ರಾತ್ರಿಯ ಯುದ್ಧವು ನಮಗೆ ದುಸ್ತರವಾಗಿ ತೋರುತ್ತಿದೆ!” ಎಂದನು. ಒಡನೆಯೇ ಕೃಷ್ಣನು, ಬೆಳ್ಳಿ, ಹಾಲು, ಮೊಲ್ಲೆಯ ಹೂ, ಮತ್ತು ಚಂದ್ರನಂತೆ ಸ್ವಚ್ಛವಾದ ಬಿಳೀಬಣ್ಣವುಳ್ಳ, ತನ್ನ ರಥಾಶ್ವಗಳನ್ನು ತಟ್ಟಿ, ದ್ರೋಣನ ರಥಕ್ಕೆ ಇದಿರಾಗಿ ವೇಗದಿಂದ ರಥವನ್ನು ಬಿಟ್ಟನು. ಇದನ್ನು ಕಂಡು ಭೀಮನೂ ದ್ರೋಣನಬಳಿಗೆ ತನ್ನ ರಥವನ್ನು ಬಿಡುವಂತೆ ತನ್ನ ಸಾರಥಿಗೆ ಹೇಳಿದನು. ಭೀಮನ ಸಾರಥಿಯಾದ ವಿಶೋಕನು ಅರ್ಜುನನ ರಥದ ಹಿಂದೆಯೇ ರಥವನ್ನು ಬಿಟ್ಟುಕೊಂಡು ಹೊರಟನು. ಹೀಗೆ ಸಹೋದರರಿಬ್ಬರೂ ದ್ರೋಣನಿಗಿದಿರಾಗಿ ಹೋಗುವುದನ್ನು ನೋಡಿ, ಪಾಂಚಾಲ, ಸೃಂಜಯ, ಮಾತ್ಸ್ಯ, ಚೇದಿ, ಕಾರೂಶ, ಕೋಸಲ, ಕೇಕಯದೇಶದ ಮಹಾರಥರೆಲ್ಲ ಭೀಮಾರ್ಜುನರ ರಥವನ್ನು ಹಿಂಬಾಲಿಸಿಹೋದರು. ತಿರುಗಿ ಘೋರಯುದ್ಧಕ್ಕೆ ಆರಂಭವಾಯಿತು. ದಕ್ಷಿಣಪಾರ್ಶ್ವದಿಂದ ಅರ್ಜುನನೂ, ಉತ್ತರಪಾರ್ಶ್ವದಿಂದ ಭೀಮನೂ, ದೊಡ್ಡ ರಥಸೈನ್ಯಗಳೊಡನೆ ನಿನ್ನ ಸೈನ್ಯವನ್ನು ಮುತ್ತಿಕೊಂಡರು. ಧೃಷ್ಟದ್ಯುಮ್ನಸಾತ್ಯಕಿಗಳೂ ಸಹಾಯಕ್ಕೆ ಬಂದರು. ಬಿರುಗಾಳಿಯಿಂದ ಕ್ಷುಭಿತವಾದ ಸಮುದ್ರಘೋಷದಂತೆ ಸೈನ್ಯಗಳ ಹೊಡೆದಾಟದಿಂದುಂಟಾದ ಧ್ವನಿಯು ಕೇಳಿಸುತ್ತಿದ್ದಿತು. ಭೂರಿಶ್ರವಸ್ಸಿನ ವಧದಿಂದುಂಟಾದ ಕೋಪದಿಂದ ಅಶ್ವತ್ಥಾಮನು ಸಾತ್ಯಕಿಯನ್ನು ಕೊಂದೇಬಿಡಬೇಕೆಂದು ವೇಗದಿಂದ ಹೊರಟನು. ಅದನ್ನು ನೋಡಿ ಘಟೋತ್ಕಚನು ಕರಡಿಯ ಚರ್ಮದಿಂದ ಹೊದಿಸಲ್ಪಟ್ಟ ಅಯೋಮಯವಾದ ತನ್ನ ಮಹಾರಥವನ್ನೇರಿ ಕೋಪದಿಂದ ಅಶ್ವತ್ಥಾಮನಿಗೆ ಇದಿರಾದನು. ಮಹಾರಾಜಾ! ಆ ರಾಕ್ಷಸನ ರಥದ ಒಳಗಿನ ವೈಶಾಲ್ಯವೇ ಮೂವತ್ತು ನಲ್ವ

(ನಲ್ವವೆಂದರೆ ನಾನೂರು ಮೊಳಗಳು) ಅಳತೆಯುಳ್ಳುದು. ಅದರಲ್ಲಿ
ೀಕ ಯಂತ್ರಗಳು ಸಿದ್ಧವಾಗಿ ಇಡಲ್ಪಟ್ಟಿರುವುವು. ಅದರ ಧ್ವನಿಯು
ಕಾಮೇಘಧ್ವನಿಯಂತೆ ಕೇಳಿಸುವುದು. ಆ ರಥಕ್ಕೆ ಹೂಡಿದ ವಾಹನ
ಆನೆಗಳ ಆಕಾರಕ್ಕಿರುವುವು! ಅವು ಕುದುರೆಗಳೂ ಅಲ್ಲ! ಆನೆಗಳೂ
! ಪಿಶಾಚಗಳು! ಕಾಲುಗಳನ್ನೂ, ರೆಕ್ಕೆಗಳನ್ನೂ ಅಗಲಿಸಿ, ವಿಶಾಲವಾಗಿ
ನ್ನು ತೆರೆದು, ಆಗಾಗ ಕೂಗಿಡುತ್ತಿರುವ ಮಹಾಗೃಧ್ರವೊಂದು ಎತ್ತರ
ದ ಕಂಬದಮೇಲೆ ಅವನ ಧ್ವಜಚಿಹ್ನವಾಗಿ ಕಾಣಿಸುತ್ತಿರುವುದು. ರಕ್ತ
ನ ತೊಯ್ದ ಪತಾಕೆಗಳಿಂದಲೂ, ಆಂತ್ರಮಾಲೆಯ ತೋರಣಾಲಂಕಾರಗ
ನಲೂ ಕೂಡಿದ ಆ ಘಟೋತ್ಕಚನ ರಥಕ್ಕೆ ಎಂಟು ಚಕ್ರಗಳು! ಶೂಲ
ದ್ಗರಗಳನ್ನೂ, ಕಲ್ಲುಮರಗಳನ್ನೂ, ಆಯುಧಗಳನ್ನಾಗಿ ಹಿಡಿದು, ಭಯಂ
ರೂಪವುಳ್ಳ ಅಕ್ಷೌಹಿಣೀಸಂಖ್ಯೆಯ ರಾಕ್ಷಸಸೈನ್ಯವು ಅವನಿಗೆ ಬೆಂಬಲ
ಬರುತ್ತಿರುವುದು. ಆ ಘಟೋತ್ಕಚನು ತನ್ನ ದೊಡ್ಡ ಬಿಲ್ಲನ್ನು ಎತ್ತಿ
ಂಡು ಬರುವುದನ್ನು ನೋಡಿದಾಗಲೇ, ನಮ್ಮವರಿಗೆಲ್ಲಾ ಎದೆ ನಡುಗಿತು.
ಳಯಕಾಲದಲ್ಲಿ ದಂಡಪಾಣಿಯಾದ ಯಮನಂತೆ ಭಯಂಕರನಾಗಿ, ಪರ್ವ
ಖರದಂತೆ ಉನ್ನತಾಕಾರದಿಂದಿದ್ದ ಆ ರಾಕ್ಷಸನಿಗೋ, ಕೋರೆದಾಡೆಗಳಿಂದ
ಯಂಕರವಾದ ಬಾಯಿ! ಶಂಕ್ವಾಕಾರದ ಕಿವಿಗಳು! ಉಬ್ಬಿದ ದವಡೆಗಳು!
ಲಕ್ಕೆ ನಿಗುರಿದ ತಲೆಕೂದಲು! ವಿರೂಪವಾದ ಕಣ್ಣುಗಳು! ಉರಿ
ನ್ನು ಕಕ್ಕುವ ಬಾಯಿ! ಆಳಕ್ಕಿಳಿದ ಹೊಟ್ಟೆ! ಕತ್ತಿನಲ್ಲಿ ದೊಡ್ಡ ಕಮ
ಳಂತಿರುವ ಹಳ್ಳಗಳು! ಕಿರೀಟದಿಂದ ಮರೆಸಲ್ಪಟ್ಟ ತಲೆ! ಹೀಗೆ ಸಮಸ್ತ
ತಗಳಿಗೂ ಭಯವನ್ನು ಹುಟ್ಟಿಸತಕ್ಕ ಆಕಾರವುಳ್ಳ ಆ ಘಟೋತ್ಕಚನನ್ನು
ೀಡಿದೊಡನೆಯೇ, ಕೌರವಸೈನ್ಯಕ್ಕೆ ಭಯದಿಂದ ಏನೂ ತೋರದಂತಾ
ತು. ಇಷ್ಟರಲ್ಲಿಯೇ ಆ ರಾಕ್ಷಸನು ದೊಡ್ಡದೊಂದು ಗರ್ಜನೆಯನ್ನು
ಾಡಿದನು. ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿದ ಗಂಗಾಪ್ರವಾಹದ
ಳಿಯ ಘೋಷದಂತೆ, ಅದು ನಿನ್ನ ಮಗನ ಸೈನ್ಯಕ್ಕೆ ಮತ್ತಷ್ಟು ಭೀತಿಯ
ಂಟುಮಾಡಿತು. ಆ ಭಯದಿಂದ ಆನೆಕುದುರೆಗಳಿಗೆ ಮಲಮೂತ್ರಗಳು
ಬ್ತಿಕೊಂಡುವು. ಪದಾತಿಗಳೆಲ್ಲರೂ ಕೂಗಿಡಲಾರಂಭಿಸಿದರು. ಇಷ್ಟರ
ರೇ ನಿನ್ನ ಸೈನ್ಯದಮೇಲೆ ನಾಲ್ಕುಕಡೆಗಳಿಂದ ದೊಡ್ಡ ಕಲ್ಮಳೆಯು ಬೀಳ

ಲಾರಂಭಿಸಿತು. ರಾತ್ರಿಯಲ್ಲಿ ರಾಕ್ಷಸರಿಗೆ ಬಲವು ಅಧಿಕವಾದುದರಿಂದ, ಆ ರಾಕ್ಷಸಸೈನ್ಯವು ಅತಿ ವೀರ್ಯೋದ್ರೇಕದಿಂದ ವಿವಿಧಾಯುಧಗಳನ್ನು ಪ್ರಯೋಗಿಸತೊಡಗಿದರು. ಉಕ್ಕಿನ ಚಕ್ರಗಳು, ಭುಸುಂಡಿಗಳು, ಪ್ರಾಸ ತೋಮರ ಶೂಲಗಳು, ಶತಘ್ನಿಗಳು, ಪಟ್ಟಸಗಳು. ಇವೆಲ್ಲಾ ಎಡೆಬಿಡದೆ ನಿನ್ನ ಸೈನ್ಯದಮೇಲೆ ಬೀಳುತ್ತಿದ್ದುವು. ಈ ಭಯಂಕರವಾದ ಅನಾಹುತ ವನ್ನು ನೋಡಿ, ನಿನ್ನ ಮಕ್ಕಳೂ, ಕರ್ಣನೂ ಭಯದಿಂದ ಓಡಿದರು. ಆ ಸಮಯದಲ್ಲಿ ಒಳ್ಳೇ ಅಸ್ತ್ರಬಲವುಳ್ಳವನೂ, ಮಾನಿಯೂ ಆದ ಅಶ್ವತ್ಥಾ ಮನೊಬ್ಬನುಮಾತ್ರ ಧೈರ್ಯದಿಂದ ಎದೆಗೊಟ್ಟು ನಿಂತು, ತನ್ನ ಬಾಣಗ ಳಿಂದ ಆ ಘಟೋತ್ಕಚನ ಮಾಯೆಯನ್ನೆಲ್ಲಾ ಅಡಗಿಸುತ್ತ ಬಂದನು. ಇದನ್ನು ನೋಡಿ ಕೋಪದಿಂದ ಘಟೋತ್ಕಚನು ಅಶ್ವತ್ಥಾಮನಮೇಲೆ ತೀವ್ರಬಾಣಗಳನ್ನು ಪ್ರಯೋಗಿಸಿದನು. ಆ ತೀವ್ರಬಾಣಗಳು ಅಶ್ವತ್ಥಾ ಮನ ಮೈಯನ್ನು ಭೇದಿಸಿಕೊಂಡು, ಹುತ್ತದಲ್ಲಿ ಹುಗುವ ಹಾವುಗಳಂತೆ ನೆಲದಲ್ಲಿ ನಾಟಿದುವು, ಇದರಿಂದ ಅಶ್ವತ್ಥಾಮನು ಕುಪಿತನಾಗಿ, ಹತ್ತು ತೀವ್ರಬಾಣಗಳನ್ನು ಪ್ರಯೋಗಿಸಿದನು. ಅದು ಘಟೋತ್ಕಚನ ಮರ್ಮ ಸ್ಥಾನಗಳಿಗೆ ನಾಟಿತು. ಆದರಿಂದ ನೊಂದ ಘಟೋತ್ಕಚನು ಮಹತ್ತಾದ ಕೋಪದಿಂದ, ನೂರುಸಾವಿರ ಅರಗಳಿಂದಲೂ, ಸುತ್ತಲೂ ಕತ್ತಿಯ ಅಲಗುಗ ಳಿಂದಲೂ ಕೂಡಿ, ರತ್ನವಜ್ರಗಳಿಂದ ಅಲಂಕೃತವಾಗಿ, ಬಾಲಸೂರ್ಯನಂತೆ ಜ್ವಲಿಸುತ್ತಿದ್ದ ಚಕ್ರವೊಂದನ್ನು ವೇಗದಿಂದ ಅಶ್ವತ್ಥಾಮನಮೇಲೆ ಬೀ ಸಿದನು. ಆದರೇನು? ಅಶ್ವತ್ಥಾಮನು ಅದನ್ನು ನಡುದಾರಿಯಲ್ಲಿಯೇ ಬಾಣಗಳಿಂದ ಭೇದಿಸಿದನು. ದರಿದ್ರನ ಮನೋರಥದಂತೆ ಆ ಚಕ್ರವು ವಿಫಲವಾಗಿ ಕೆಳಗೆ ಬಿದ್ದಿತು. ಅಮೋಘವಾದ ತನ್ನ ಚಕ್ರವು ವಿಫಲವಾ ದುದನ್ನು ನೋಡಿ, ಘಟೋತ್ಕಚನು ಬಾಣಗಳನ್ನು ಬಿಡಲಾರಂಭಿಸಿ, ರಾ ಹುವು ಸೂರ್ಯನನ್ನು ಹೇಗೋ ಹಾಗೆ ಅಶ್ವತ್ಥಾಮನನ್ನು ಮರೆಸಿದನು. ಇದೇ ಸಮಯದಲ್ಲಿ ಘಟೋತ್ಕಚನ ಮಗನೂ, ಭೀಮನ ಮೊಮ್ಮಗನೂ, ಆದ ಅಂಜನಪರ್ವನೆಂಬ ರಾಕ್ಷಸನು, ತನ್ನ ತಂದೆಯ ಸಹಾಯಕ್ಕಾಗಿ ವೇಗ ದಿಂದ ಬಂದು, ಅಶ್ವತ್ಥಾಮನನ್ನು ಬಾಣಗಳಿಂದ ತಡೆದನು. ಪರ್ವತದ ಮೇಲೆ ಮಳೆ ಕರೆದಂತೆ ಅಶ್ವತ್ಥಾಮನಮೇಲೆ ಬಾಣಗಳು ಎಡಬಿಡದೆ

ಬೀಳುತ್ತಿದ್ದುವು. ಆದರೇನು? ಪರಾಕ್ರಮದಲ್ಲಿ ರುದ್ರನಿಗೂ, ಇಂದ್ರೋಪೇಂದ್ರರಿಗೂ ಸಮಾನನೆನಿಸಿದ ಅಶ್ವತ್ಥಾಮನು, ಆ ಬಾಣವರ್ಷಕ್ಕೆ ಹೆದರದೆ, ಅಂಜನಪರ್ವನ ಧ್ವಜವನ್ನು ಒಂದುಬಾಣದಿಂದ ತುಂಡುಮಾಡಿದನು. ಎರಡುಬಾಣಗಳಿಂದ ಅವನ ಇಬ್ಬರು ಸಾರಥಿಗಳನ್ನೂ, ಮೂರುಬಾಣಗಳಿಂದ ರಥದ ಮುಂದಿನ ತ್ರಿವೇಣುವನ್ನೂ, ಒಂದುಬಾಣದಿಂದ ಅವನ ಬಿಲ್ಲನ್ನೂ, ನಾಲ್ಕುಬಾಣಗಳಿಂದ ಅವನ ನಾಲ್ಕು ರಥಾಶ್ವಗಳನ್ನೂ ಹೊಡೆದುಕೆಡಹಿದನು. ಆ ಅಂಜನಪರ್ವನು ವಿರಥನಾಗಿ ನೆಲಕ್ಕಿಳಿದು, ಚಿನ್ನದ ಕಟ್ಟುಳ್ಳ ಒಂದು ಖಡ್ಗವನ್ನು ಕೈಗೆತ್ತಿಕೊಂಡು ನಿಲ್ಲಲು, ಆ ಖಡ್ಗವನ್ನೂ ದ್ರೌಣಿಯು ತುಂಡುಮಾಡಿದನು. ಆಮೇಲೆ ಆ ಘಟೋತ್ಕಚನ ಕುಮಾರನು ಒಂದು ಗದೆಯನ್ನು ಬೀಸಿದನು. ಅದೂ ಅಶ್ವತ್ಥಾಮನ ಬಾಣದಿಂದ ತುಂಡಾಗಿ ಬಿದ್ದಿತು. ಒಡನೆಯೇ ಅಂಜನಪರ್ವನು ಗಗನಕ್ಕೆ ಹಾರಿ, ಮೇಘದಂತೆ ಗರ್ಜಿಸುತ್ತಾ, ಆಕಾಶದಿಂದ ವೃಕ್ಷಗಳ ಮಳೆಯನ್ನು ಕರೆದನು. ಹೀಗೆ ಆ ರಾಕ್ಷಸನು ಮಾಯೆಯಿಂದ ಯುದ್ಧಮಾಡತೊಡಗಲು, ಅಶ್ವತ್ಥಾಮನು ಅದಕ್ಕೂ ಹಿಂಜರಿಯದೆ, ಅವನಮೇಲೆ ಅಪರಿಮಿತವಾಗಿ ಬಾಣಗಳನ್ನು ವರ್ಷಿಸಿದನು. ಆಮೇಲೆ ರಾಕ್ಷಸನು ತಿರುಗಿ ಕೆಳಕ್ಕಿಳಿದು, ಬೇರೊಂದು ರಥವನ್ನೇರಿ, ಅಂಜನಪರ್ವತದಂತೆ ಅಶ್ವತ್ಥಾಮನ ಮುಂದೆ ನಿಂತನು. ಅಶ್ವತ್ಥಾಮನು ಅವನಮೇಲೆ ಎಡೆಬಿಡದೆ ಬಾಣಗಳನ್ನು ಪ್ರಯೋಗಿಸಿ, ಕೊನೆಗೆ ರುದ್ರನು ಅಂಧಕಾಸುರನನ್ನು ಕೆಡಹಿದಹಾಗೆ ಅವನನ್ನು ಕೆಳಕ್ಕೆ ಕೆಡಹಿಬಿಟ್ಟನು. ಅಶ್ವತ್ಥಾಮನಿಂದ ತನ್ನ ಮಗನು ಹತನಾಗಿ ಬಿದ್ದುದನ್ನು ನೋಡಿ ಘಟೋತ್ಕಚನು ಕೋಪದಿಂದ ತುಟಿಗಳನ್ನಲುಗಿಸುತ್ತಾ, ದ್ರೋಣಪುತ್ರನ ಮುಂದೆ ನಿಂತನು. ಕಾಡುಗಿಚ್ಚು ಕಾಡನ್ನು ದಹಿಸುವಂತೆ, ಪಾಂಡವಸೈನ್ಯವನ್ನೆಲ್ಲ ಬಾಣಜ್ವಾಲೆಯಿಂದ ದಹಿಸುತ್ತಿರುವ ಆ ಗುರುಪುತ್ರನನ್ನು ನೋಡಿ ಹೀಗೆಂದನು. "ಓ ಬ್ರಾಹ್ಮಣಕುಮಾರಾ! ನಿಲ್ಲು! ನಿಲ್ಲು! ಇನ್ನು ನೀನು ನನ್ನಿಂದ ಬದುಕಿಹೋಗಲಾರೆ! ಅಗ್ನಿಕುಮಾರನಾದ ಸ್ಕಂದನು ಕ್ರೌಂಚವನ್ನು ಭೇದಿಸಿದಂತೆ, ಈಗಲೇ ನಿನ್ನನ್ನು ಭೇದಿಸುವೆನು" ಎನಲು, ಅಶ್ವತ್ಥಾಮನು "ವತ್ಸಾ! ಹಿಡಿಂಬಕುಮಾರಾ! ನೀನೇನೋ ದೇವತೆಗಳಿಗೆ ಸಮಾನವಾದ ಪರಾಕ್ರಮವುಳ್ಳವನೇ! ಆದರೂ, ನೀನು ನನಗಿದಿ

ರಾಗಿ ನಿಲ್ಲಬಾರದು! ಬೇರೆಯವರೊಡನೆ ಯುದ್ಧಕ್ಕೆ ಹೋಗು! ಮಗನಿಗೆ ಸಮಾನನಾದ ನೀನು ತಂದೆಗೆ ಸಮಾನರಾದವರನ್ನು ಪೀಡಿಸುವುದು ನ್ಯಾಯವಲ್ಲ. ನಿನ್ನಲ್ಲಿ ನನಗೆ ನಿಜವಾಗಿ ರೋಷವಿಲ್ಲ. ಆದರೆ, ರೋಷವುಂಟಾದ ಪ್ರಾಣಿಯು ತನ್ನನ್ನೇ ತಾನು ಕೊಲ್ಲುವುದಕ್ಕೂ ಹೇಸುವುದಿಲ್ಲ. ಆದುದರಿಂದ ಹೊರಟುಹೋಗು" ಎಂದನು. ಈ ಮಾತನ್ನು ಕೇಳಿ ಪುತ್ರಶೋಕಪೀಡಿತನಾದ ಘಟೋತ್ಕಚನು "ಓ ದ್ರೋಣಪುತ್ರಾ! ಬೇರೆ ಸಾಮಾನ್ಯಜನರಂತೆ ಯುದ್ಧಕ್ಕೆ ನಾನು ಹೆದರುವೆನೆಂದು ತಿಳಿದೆಯಾ? ಮಾತಿನಿಂದ ನನ್ನನ್ನು ಹೆದರಿಸುತ್ತಿರುವೆ! ಈ ಮಾತು ನಿನಗೆ ಯೋಗ್ಯವಲ್ಲ. ನಾನು ಪ್ರಖ್ಯಾತವಾದ ಕುರುವಂಶದಲ್ಲಿ ಭೀಮನಿಂದ ಹುಟ್ಟಿದವನು. ಯುದ್ಧದಲ್ಲಿ ವಿಮುಖರಾಗದ ಪಾಂಡವರ ಮಗನು! ರಾಕ್ಷಸರಿಗೆ ಅಧಿರಾಜನು! ಬಲದಲ್ಲಿ ದಶಗ್ರೀವನಿಗೆ ಸಮಾನನು. ಓ ಬ್ರಾಹ್ಮಣಾ! ನಿಲ್ಲು! ನಿಲ್ಲು! ನೀನು ನನ್ನಿಂದ ಬದುಕಿಹೋಗಲಾರೆ. ನಿನಗಿರುವ ಯುದ್ಧಾತುರವನ್ನು ಇಂದಿಗೆ ನಾನು ತೀರಿಸಿಬಿಡುವೆನು" ಎಂದು ಹೇಳಿ, ಸಿಂಹವು ಆನೆಯನ್ನಿದಿರಿಸುವಂತೆ ಕೋಪದಿಂದ ಅಶ್ವತ್ಥಾಮನನ್ನಿದಿರಿಸಿದನು. ಬಂಡಿಯ ಇರಿಚಿಯಂತೆ ದೊಡ್ಡ ಆಕಾರವುಳ್ಳ ಬಾಣಗಳನ್ನು ಅಶ್ವತ್ಥಾಮನಮೇಲೆ ವರ್ಷಿಸಿದನು. ಅವುಗಳನ್ನೆಲ್ಲಾ ಅಶ್ವತ್ಥಾಮನು ತನ್ನ ಬಾಣಗಳಿಂದ ಭೇದಿಸುತ್ತ ಬಂದನು. ಆಕಾಶವೆಲ್ಲಾ ಬಾಣಮಯವಾದಂತೆ ತೋರಿತು. ಅವರಿಬ್ಬರ ಶಸ್ತ್ರಾಸ್ತ್ರಗಳ ಸಂಘಟ್ಟನೆಯಿಂದ ಆಕಾಶದಲ್ಲಿ ಕಿಡಿಗಳುಂಟಾಗಿ, ಕತ್ತಲೆಯಲ್ಲಿ ಮಿಂಚುಹುಳುಗಳಂತೆ ಕಾಣುತ್ತಿದ್ದುವು. ಘಟೋತ್ಕಚನು ವಿವಿಧಮಾಯೆಗಳನ್ನು ಪ್ರಯೋಗಿಸಿದನು. ಅವೆಲ್ಲವೂ ಅಶ್ವತ್ಥಾಮನಿಂದ ಭಗ್ನವಾಗಲು, ಆಮೇಲೆ ತಾನು ಅದೃಶ್ಯನಾಗಿ ಬೇರೆ ತರದ ಮಾಯೆಯನ್ನು ಉಪಯೋಗಿಸಿದನು. ಒಡನೆಯೇ ಘಟೋತ್ಕಚನು. ವೃಕ್ಷಗಳಿಂದ ದಟ್ಟವಾದ ಅನೇಕಶಿಖರಗಳುಳ್ಳ ಮಹಾಗಿರಿಯಂತೆ ಆಕಾರವನ್ನು ತಾಳಿ, ಶೂಲ, ಪ್ರಾಸ, ಮುಸಲ, ಖಡ್ಗಗಳೇ ಮೊದಲಾದ ಆಯುಧಗಳನ್ನು ತನ್ನಿಂದ ಪ್ರವಾಹರೂಪವಾಗಿ ಸುರಿಸುತ್ತಿದ್ದನು. ಆ ಬೆಟ್ಟದಿಂದ ವಿವಿಧಶಸ್ತ್ರಗಳು ಹೊರಟುಬರುತ್ತಿದ್ದುವು. ಆಂಜನಗಿರಿಯಂತೆ ಮಹೋನ್ನತಪರ್ವತವು ಇದಿರಿಗೆ ಕಾಣಿಸುತ್ತಿದ್ದಿತು. ಅಶ್ವತ್ಥಾಮನು ಅದಕ್ಕೂ ಹೆದರಲಿಲ್ಲ. ಒಡ

ನೆ ಅಶ್ವತ್ಥಾಮನು ವಜ್ರಾಸ್ತ್ರವನ್ನು ಪ್ರಯೋಗಿಸಿದನು. ವಜ್ರತಾಡನದಿಂದ ಆ ಪರ್ವತವು ಪುಡಿಪುಡಿಯಾಗಿ ಬಿದ್ದಿತು. ಆಮೇಲೆ ಘಟೋತ್ಕಚನು ತನ್ನ ಮಾಯೆಯಿಂದ ದೊಡ್ಡ ಕಾಮನ ಬಿಲ್ಲಿನಿಂದ ಕೂಡಿದ ಮೇಘದಂತೆ ಕಾಣಿಸಿ, ಅಶ್ವತ್ಥಾಮನಮೇಲೆ ತೀವ್ರವಾದ ಕಲ್ಮಳೆಯನ್ನು ಕರೆದನು. ಅದನ್ನು ನೋಡಿ ಅಶ್ವತ್ಥಾಮನು ವಾಯುವ್ಯಾಸ್ತ್ರದಿಂದ ಆ ಮೇಘವನ್ನು ತೂರಿಸಿಬಿಟ್ಟನು. ಅಲ್ಲದೆ ತನ್ನ ಬಾಣಗಳಿಂದ ದಿಕ್ಕುಗಳನ್ನೆಲ್ಲಾ ಮರೆಸಿ, ಸಾವಿರಾರು ರಥಗಳನ್ನು ಚೂರ್ಣಮಾಡಿದನು. ಇಷ್ಟರಲ್ಲಿಯೇ ತಿರುಗಿ ಘಟೋತ್ಕಚನು ಅನೇಕ ರಾಕ್ಷಸಸೈನ್ಯಗಳಿಂದ ಪರಿವೃತನಾಗಿ, ರಥವನ್ನೇರಿ ಧನುರ್ಧಾರಿಯಾಗಿ ಯುದ್ಧಕ್ಕೆ ಬಂದನು. ಸಿಂಹಶಾರ್ದೂಲಗಳಂತೆ ಪರಾಕ್ರಮವುಳ್ಳವರೂ, ಮದದಾನೆಗಳಂತೆ ಬಲಾಢ್ಯರೂ, ಭಯಂಕರವಾದ ವಿಕಾರರೂಪದ ಕಣ್ಣು, ಕಿವಿ, ಮೂಗು, ತಲೆ, ಮುಂತಾದ ಅವಯವಗಳುಳ್ಳವರೂ ಆದ ಅನೇಕ ರಾಕ್ಷಸರು, ಆನೆ ಕುದುರೆ ರಥಗಳನ್ನೇರಿ ಅಶ್ವತ್ಥಾಮನಿಗೆ ಬೆಂಬಲವಾಗಿ ಬಂದರು. ಪೌಲಸ್ತ್ಯರು, ಯಾತುಧಾನರು, ಇಂದ್ರಪರಾಕ್ರಮವುಳ್ಳ ತಾಮಸರು, ಮೊದಲಾದ ಬೇರೆಬೇರೆ ಪಂಗಡದ ರಾಕ್ಷಸರು ಆ ಸೈನ್ಯದಲ್ಲಿ ಸೇರಿದ್ದರು. ಒಬ್ಬೊಬ್ಬರೂ ಶಸ್ತ್ರಗಳನ್ನೂ, ವಿಚಿತ್ರಕವಚಭೂಷಣಗಳನ್ನೂ ಧರಿಸಿರುವರು! ಒಬ್ಬೊಬ್ಬರೂ ವೀರರು! ಮಹಾಬಲಾಢ್ಯರು! ಭಯಂಕರ ವೇಗವುಳ್ಳವರು! ಕೋಪದಿಂದ ಕಣ್ಣಾಲಿಗಳನ್ನು ತೊಳಲಿಸುತ್ತ, ಯುದ್ಧಾತುರದಿಂದ ಬಂದು ನಿಂತರು. ಅವರನ್ನು ನೋಡಿದ ಮಾತ್ರಕ್ಕೆ ನಿನ್ನಮಗನು ಭಯಪಟ್ಟುದನ್ನು ನೋಡಿ ಅಶ್ವತ್ಥಾಮನು, "ದುರ್ಯೋಧನಾ! ಹೆದರಬೇಡ. ಬಾ! ಈಗಲೇ ನಾನು ಇವರನ್ನೆಲ್ಲಾ ಅವರ ಸಹೋದರರೊಡನೆ, ಮತ್ತು ಅವರ ಸಹಾಯಕ್ಕಾಗಿ ಬಂದ ಎಲ್ಲಾ ರಾಜರೊಡನೆ ಸೇರಿಸಿ ಕೊಲ್ಲುವೆನು. ಇಂದಿಗೆ ನಿನ್ನ ಶತ್ರುಗಳು ತೀರಿದರೆಂದು ತಿಳಿ. ಪ್ರತಿಜ್ಞೆಮಾಡಿ ಹೇಳುವೆನು. ನೀನು ಚಿಂತಿಸಬೇಡ. ನಿನ್ನ ಸೈನ್ಯಗಳಿಗೂ ಧೈರ್ಯವನ್ನು ಕೊಡು" ಎಂದನು, ಅದಕ್ಕಾ ದುರ್ಯೋಧನನು "ಓ ಆಚಾರ್ಯಪುತ್ರಾ! ನೀನು ಅಷ್ಟು ದೊಡ್ಡಮನಸ್ಸನ್ನಿಟ್ಟರೆ, ಅದೇನೂ ಅಸಾಧ್ಯಕಾರ್ಯವಲ್ಲ. ನಮ್ಮಲ್ಲಿ ನಿನಗೆ ಅಧಿಕಭಕ್ತಿಯಿರುವುದೆಂಬುದನ್ನು ನಾವು ಬಲ್ಲೆವು" ಎಂದನು. ರಾಜಾ! ನಿನ್ನ ಮಗನು ಅಶ್ವತ್ಥಾಮನಿಗೆ

ಹೀಗೆಂದು ಹೇಳಿ, ಶಕುನಿಯನ್ನು ಕುರಿತು, " ಮಾತುಲಾ! ಅದೋ! ಸಹ ಸ್ರರಥಗಳನ್ನೂ, ಯುದ್ಧಸಮರ್ಥಗಳಾದ ಕುದುರೆಗಳನ್ನೂ ಸೇರಿಸಿಕೊಂಡು ಬರುವ ಅರ್ಜುನನಿಗೆ, ನೀನು ಅರುವತ್ತುಸಾವಿರ ರಥಗಳೊಡನೆ ಇದಿರಾಗಿ ಹೊರಡು. ಕರ್ಣ, ಕೃಪ, ವೃಷಸೇನರೂ, ನೀಲನೂ, ಕೃತವರ್ಮನೂ ಪುರುಮಿತ್ರನೂ, ಸುತಾಪನನೂ, ದುಶ್ಶಾಸನನೂ, ಉತ್ತರದೇಶದ ರಾಜರೂ, ನಿನಗೆ ಬೆಂಬಲವಾಗಿ ಬರುವರು. ಅಷ್ಟುಮಾತ್ರವಲ್ಲ! ನಿಕುಂಭನು, ಕುಂಡಭೇದಿ, ಪುರಂಜಯನು, ಹೇಮಕಂಪನನು, ಶಲ್ಯನು, ಆರುಣಿ, ಇಂದ್ರಸೇನನು, ಸಂಜಯನು, ವಿಜಯನು, ಜಯನು, ಕಮಲಾಕ್ಷನು, ಪರಕ್ರಾಥಿ, ಜಯವರ್ಮನು, ಸುದರ್ಶನನು, ಇವರೆಲ್ಲರೂ ನಿನ್ನನ್ನು ಹಿಂಬಾಲಿಸುವರು. ಆರು ಲಕ್ಷ ಪದಾತಿಗಳನ್ನೂ ನಿನ್ನೊಡನೆ ಕಳುಹಿಸಿಕೊಡುವೆನು. ಇಷ್ಟು ಸೈನ್ಯದೊಡನೆ ನೀನು ಹೋಗಿ, ಆ ಭೀಮನನ್ನೂ, ನಕುಲಸಹದೇವರನ್ನೂ, ಧರ್ಮರಾಜನನ್ನೂ ಕೊಂದುಬರಬೇಕು. ಇಂದ್ರನು ದೈತ್ಯರನ್ನು ಹೇಗೋ ಹಾಗೆ ನೀನು ಶತ್ರುಗಳನ್ನು ಜಯಿಸಿ ಬಾ! ನಿನ್ನಲ್ಲಿಯೇ ಈಗ ನಮಗೆ ಪೂರ್ಣವಾದ ಭರವಸೆಯಿರುವುದು. ಅಗ್ನಿಕುಮಾರನಾದ ಷಣ್ಮುಖನು ದೈತ್ಯಸೇನೆಯನ್ನು ಧ್ವಂಸಮಾಡಿದಂತೆ, ಪಾಂಡವಸೇನೆಯನ್ನು ನೀನು ಧ್ವಂಸಮಾಡಬೇಕು " ಎಂದನು. ಈ ಮಾತನ್ನು ಕೇಳಿದೊಡನೆಯೇ ಶಕುನಿಯು, ಪಾಂಡವರನ್ನು ಕೊಂದು ನಿನ್ನ ಮಕ್ಕಳಿಗೆ ಪ್ರಿಯವನ್ನುಂಟುಮಾಡಬೇಕೆಂಬ ದೃಢೋದ್ದೇಶದಿಂದ ಸೇನಾಸನ್ನಾಹದೊಡನೆ ಹೊರಟನು ಅಲ್ಲಿ ಅಶ್ವತ್ಥಾಮನಿಗೂ, ಘಟೋತ್ಕಚನಿಗೂ ಇಂದ್ರಪ್ರಹ್ಲಾದರಿಗೆ ನಡೆದ ಯುದ್ಧದಂತೆ ದೊಡ್ಡ ಯುದ್ಧವು ನಡೆಯುತ್ತಿದ್ದಿತು. ಆ ರಾತ್ರಿಯಲ್ಲಿ ಪ್ರಬಲಯುದ್ಧವು ನಡೆಯುವಾಗ ಘಟೋತ್ಕಚನು ವಿಷಸಮಾನಗಳಾದ ಹತ್ತು ಬಾಣಗಳನ್ನು ಅಶ್ವತ್ಥಾಮನ ಎದೆಗೆ ಗುರಿಯಿಟ್ಟು ಹೊಡೆದನು. ಈ ಬಾಣಗಳಿಂದ ಅಶ್ವತ್ಥಾಮನು ಬಹಳವಾಗಿ ನೊಂದು, ಬಿರುಗಾಳಿಯಿಂದ ಮುರಿಯಲ್ಪಟ್ಟ ಮರದಂತೆ, ರಥದ ಗದ್ದುಗೆಯಮೇಲೆ ಪ್ರಜ್ಞೆತಪ್ಪಿ ಒರಗಿದನು. ಇದೇ ಸಮಯದಲ್ಲಿ ಘಟೋತ್ಕಚನು ಅಶ್ವತ್ಥಾಮನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿಬಿಟ್ಟನು. ಇಷ್ಟರಲ್ಲಿಯೇ ಅಶ್ವತ್ಥಾಮನು ತಿರುಗಿ ಚೇತರಿಸಿಕೊಂಡು, ಬೇರೊಂದು ದೊಡ್ಡ ಬಿಲ್ಲನ್ನು ಎತ್ತಿಕೊಂಡು, ಘಟೋತ್ಕಚನ

ಮೇಲೆ ಎಡಬಿಡದೆ ಬಾಣವರ್ಷಗಳನ್ನು ಕರೆದನು. ಅಶ್ವತ್ಥಾಮನ ಬಾಣಗಳಿಂದ ರಾಕ್ಷಸಸೈನ್ಯವೆಲ್ಲಾ ಚದರಿಸಲ್ಪಟ್ಟಿತು. ಆನೆಗಳ ಗುಂಪಿಗೆ ಸಿಂಹವು ನುಗ್ಗಿದಂತೆ, ಅಶ್ವತ್ಥಾಮನು ಆ ರಾಕ್ಷಸಸೈನ್ಯವನ್ನೆಲ್ಲಾ ಉಲ್ಲೋಲಕಲ್ಲೋಲ ಮಾಡಿದನು. ಆ ರಾಕ್ಷಸರ ರಥ, ರಥಾಶ್ವ, ಸಾರಥಿಗಳನ್ನೂ, ಆನೆಗಳನ್ನೂ, ಕುದುರೆಗಳನ್ನೂ, ಪ್ರಳಯಕಾಲದ ಬೆಂಕಿಯು ಪ್ರಾಣಿಗಳನ್ನು ಹೇಗೋ ಹಾಗೆ ಅಶ್ವತ್ಥಾಮನ ಬಾಣಜ್ವಾಲೆಯು ದಹಿಸಿಬಿಟ್ಟಿತು. ಹೀಗೆ ಅಶ್ವತ್ಥಾಮನು ತನ್ನ ಆಗ್ನೇಯಾಸ್ತ್ರದಿಂದ ಅಕ್ಷೌಹಿಣೀಸಂಖ್ಯೆಯ ರಾಕ್ಷಸಸೈನ್ಯವನ್ನೆಲ್ಲಾ ದಹಿಸಿ, ತ್ರಿಪುರದಹನಮಾಡಿ ಬಂದ ರುದ್ರನಂತೆ ಶೋಭಿಸುತ್ತಿದ್ದನು. ಪ್ರಳಯ ಕಾಲಾಗ್ನಿಯು ಸಮಸ್ತ ಭೂತಗಳನ್ನೂ ದಹಿಸಿದಮೇಲೆ ಹೇಗೋ ಹಾಗೆ, ಜಯಶೀಲನಾದ ದ್ರೋಣಪುತ್ರನು ಮಹೋತ್ಸಾಹದಿಂದಿರುವುದನ್ನು ನೋಡಿ, ಘಟೋತ್ಕಚನಿಗೆ ಮಹತ್ತಾದ ಕೋಪವುಂಟಾಯಿತು. ಅವನು ತನ್ನ ರಾಕ್ಷಸಸೈನ್ಯವನ್ನು ಕುರಿತು'' ಕೊಲ್ಲಿರಿ ! ದ್ರೋಣಪುತ್ರನನ್ನು ಬೇಗನೆ ಸಂಹರಿಸಿರಿ!" ಎಂದು ಬಾರಿಬಾರಿಗೂ ಹುರಿಗೊಳಿಸುತ್ತಿದ್ದನು. ಭಯಂಕರರೂಪದಿಂದಲೂ, ದೊಡ್ಡ ಬಾಯಿಯಿಂದಲೂ, ಕೋರೆದಾಡೆಗಳಿಂದಲೂ, ಭಯಂಕರವಾದ ನಾಲಗೆಯಿಂದಲೂ ಕೂಡಿದ ಅನೇಕರಾಕ್ಷಸರು ಬಾಯನ್ನು ತೆರೆದುಕೊಂಡು, ಭೂಮಿಯನ್ನು ನಡುಗಿಸುವಂತೆ ಸಿಂಹನಾದ ಮಾಡುತ್ತಾ, ವಿವಿಧಾಯುಧಗಳನ್ನು ಹಿಡಿದು ಅಶ್ವತ್ಥಾಮನಿಗೆ ಇದಿರಾದರು. ಶತಘ್ನಿ, ಪರಿಘ, ಅಶನಿ, ಶೂಲ, ಪಟ್ಟಿಸ, ಖಡ್ಗ, ಗದೆ, ಭಿಂಡಿವಾಲ, ಮುಸಲ, ಪರಶು, ಪ್ರಾಸ, ತೋಮರ, ಕಣಪ, ಕಂಪನ, ಭುಸುಂಡಿ, ಗದೆ, ಉಕ್ಕಿನ ಕಂಬಗಳು, ಕಲ್ಲುಗಳು, ಮುದ್ಗರಗಳು, ಇವನ್ನೆಲ್ಲಾ ನಾನಾದಿಕ್ಕುಗಳಿಂದ ಆ ಅಶ್ವತ್ಥಾಮನ ತಲೆಯಮೇಲೆ ಬೀಸಿ ಬಡಿಯುತ್ತಿದ್ದರು. ನೂರುಸಾವಿರಸಂಖ್ಯೆಯ ರಾಕ್ಷಸರು ನಾನಾದಿಕ್ಕುಗಳಿಂದ ಎಡೆಬಿಡದೆ ಹೀಗೆ ಶಸ್ತ್ರವರ್ಷವನ್ನು ಕರೆಯುತ್ತಿರಲು, “ಇಂದಿಗೆ ಅಶ್ವತ್ಥಾಮನ ಆಸೆಯು ತೀರಿ” ತೆಂದು ನಿನ್ನಕಡೆಯ ಯೋಧರೆಲ್ಲರೂ ಭಯದಿಂದ ತತ್ತಳಿಸುತ್ತಿದ್ದರು. ಆದರೆ, ಮಹಾ ಪರಾಕ್ರಮಿಯಾದ ದ್ರೋಣಪುತ್ರನು ತನ್ನ ವಜ್ರಸಮಾನಗಳಾದ ಬಾಣಗಳಿಂದ ಆ ಶಸ್ತ್ರವರ್ಷಗಳನ್ನೆಲ್ಲಾ ಧ್ವಂಸಮಾಡಿದನು. ತನ್ನ ದಿವ್ಯಾಸ್ತ್ರಗಳಿಂದ ಅನೇಕ ರಾಕ್ಷಸರನ್ನು ಕೊಂದನು. ಆ ಬಾಣಪ್ರಹಾ

ರವನ್ನು ತಡೆಯಲಾರದೆ ರಾಕ್ಷಸಸೈನ್ಯವು ಸಿಂಹಗಳ ಗುಂಪಿನಿಂದ ಚದರಿಸಲ್ಪಟ್ಟ ಆನೆಯ ಹಿಂಡಿನಂತೆ ವ್ಯಾಕುಲವಾಯಿತು. ಕೆಲವು ರಾಕ್ಷಸರು ತಮ್ಮ ಜೀವದಾಸೆಯನ್ನೂ ಬಿಟ್ಟು ಅಶ್ವತ್ಥಾಮನನ್ನು ಕೊಲ್ಲಬೇಕೆಂದು ಮುಂದುವರಿದರು. ಮಹಾರಾಜಾ! ಅಶ್ವತ್ಥಾಮನ ಅದ್ಭುತಪರಾಕ್ರಮವನ್ನು ಆಗ ನಾವು ತಿಳಿದೆವು! ಬೇರೊಬ್ಬರಿಗೆ ಸಾಧ್ಯವಲ್ಲದ ಪರಾಕ್ರಮಕಾರ್ಯವನ್ನು ಅವನು ನಡೆಸಿದನು. ಮಹಾಸ್ತ್ರಗಳನ್ನೆಲ್ಲಾ ಬಲ್ಲ ಆ ದ್ರೋಣಪುತ್ರನು ತಾನೊಬ್ಬನೇ, ಅಸಹಾಯನಾಗಿ ಅಷ್ಟು ದೊಡ್ಡ ರಾಕ್ಷಸಸೈನ್ಯವನ್ನು ಕ್ಷಣಮಾತ್ರದಲ್ಲಿ ತನ್ನ ಬಾಣದುರಿಗೆ ಆಹುತಿಮಾಡಿದನು. ಆ ಸಮಯದಲ್ಲಿ ಅಶ್ವತ್ಥಾಮನನ್ನು ಕಣ್ಣಿಂದ ನೋಡುತ್ತ ನಿಲ್ಲುವುದಕ್ಕೂ, ಪಾಂಡವವೀರರಲ್ಲಿ ಯಾವನೊಬ್ಬನೂ ಸಮರ್ಥನಾಗಲಿಲ್ಲ. ಆಗಲೂ ವೀರನಾದ ಆ ಘಟೋತ್ಕಚನೊಬ್ಬನೇ ಎದೆಗುಂದದೆ, ಅಶ್ವತ್ಥಾಮನನ್ನು ಇದಿರಿಸಿ ನಿಂತನು. ಆಗ ಕೋಪದಿಂದ ಘಟೋತ್ಕಚನು ಆಗಾಗ ಕೈಗಳನ್ನು ಹಿಸುಕುವನು! ತುಟಿಗಳನ್ನು ಕಚ್ಚುವನು! ಹೇಗಾದರೂ ಅಶ್ವತ್ಥಾಮನನ್ನು ಕೊಂದು ತೀರಿಸಬೇಕೆಂಬ ಧೃಢಸಂಕಲ್ಪದಿಂದ ಆ ಭೀಮಪುತ್ರನು ತನ್ನ ಸಾರಥಿಯನ್ನು ನೋಡಿ, "ಅಶ್ವತ್ಥಾಮನ ಸಮೀಪಕ್ಕೆ ರಥವನ್ನು ಬಿಡು" ಎಂದನು. ಅವನ ರಥವು ಮುಂದುವರಿಯಿತು. ಇಬ್ಬರಿಗೂ ದ್ವೈರಥಯುದ್ಧವು ಆರಂಭಿಸಿತು. ಘಟೋತ್ಕಚನು ದೊಡ್ಡದೊಂದು ಸಿಂಹನಾದವನ್ನು ಮಾಡಿ, ಅಷ್ಟಘಂಟೆಯುಳ್ಳದೂ, ದೇವನಿರ್ಮಿತವೂ, ಅತಿಭಯಂಕರವೂ ಆದ ಒಂದು ವಜ್ರಾಯುಧವನ್ನು ಅಶ್ವತ್ಥಾಮನಿಗೆ ಗುರಿಯಿಟ್ಟು ಬೀಸಿದನು. ಇದನ್ನು ನೋಡಿ ಅಶ್ವತ್ಥಾಮನು ಥಟ್ಟನೆ ತನ್ನ ಕೈಯಲ್ಲಿದ್ದ ಬಿಲ್ಲನ್ನು ಕೆಳಗಿಟ್ಟು, ಆ ಆಯುಧವನ್ನು ಕೈಯಿಂದಾತುಕೊಂಡು, ಅದನ್ನೇ ಘಟೋತ್ಕಚನ ರಥದಮೇಲೆ ಪ್ರಯೋಗಿಸಿದನು. ಘಟೋತ್ಕಚನು ರಥದಿಂದ ಕೆಳಕ್ಕೆ ಹಾರಿಬಿಟ್ಟನು. ಆ ವಜ್ರವು ಘಟೋತ್ಕಚನ ರಥಕ್ಕೆ ತಗುಲಿದೊಡನೆ, ಆ ರಥವು ರಥಾಶ್ವಧ್ವಜಸಾರಥಿಗಳೊಡನೆ ಭಸ್ಮೀಭೂತವಾಯಿತು. ಅಶ್ವತ್ಥಾಮನ ಈ ಅದ್ಭುತಕಾರ್ಯವನ್ನು ನೋಡಿ, ಸಮಸ್ತಭೂತಗಳೂ ಆಶ್ಚರ್ಯಪಟ್ಟುವು. ಅಶ್ವತ್ಥಾಮನು ರುದ್ರನಿರ್ಮಿತವಾದ ಆ ಮಹಾಯುಧವನ್ನು ಕೈಯಿಂದಲೇ ಆತುಕೊಂಡು, ಅದನ್ನೇ

ಹಿಂತಿರುಗಿ ಪ್ರಯೋಗಿಸಿದ ಈ ವೀರ್ಯಕಾರ್ಯಕ್ಕಾಗಿ ಜನರೆಲ್ಲರೂ ಅವನನ್ನು ಕೊಂಡಾಡಿದರು. ಆಮೇಲೆ ಘಟೋತ್ಕಚನು ಧೃಷ್ಟದ್ಯುಮ್ನನ ರಥದ ಬಳಿಗೆ ಹೋಗಿ, ಅಲ್ಲಿಂದ ಇಂದ್ರಧನುಸ್ಸಿಗೆ ಸಮಾನವಾದ ದೊಡ್ಡ ಧನುಸ್ಸೊಂದನ್ನು ಎತ್ತಿಕೊಂಡು ಬಂದು, ತಿರುಗಿ ಅಶ್ವತ್ಥಾಮನಮೇಲೆ ತೀಕ್ಷ್ಣಬಾಣಗಳನ್ನು ಬಿಡಲಾರಂಭಿಸಿದನು. ಧೃಷ್ಟದ್ಯುಮ್ನನೂ ಕೂಡ ಎದೆಗುಂದದೆ ಅಶ್ವತ್ಥಾಮನ ಎದೆಗೆ ಗುರಿಯಿಟ್ಟು ಸರ್ಪಸಮಾನಗಳಾದ ಬಾಣಗಳನ್ನು ಬಿಡುತ್ತಿದ್ದನು. ಇದನ್ನು ನೋಡಿ ಅಶ್ವತ್ಥಾಮನು ಅಗ್ನಿಜ್ವಾಲೆಗಳಿಗೆ ಸಮಾನಗಳಾದ ಪ್ರತಿಬಾಣಗಳನ್ನು ಬಿಡಲು, ಆ ಧೃಷ್ಟದ್ಯುಮ್ನನ ಬಾಣಗಳೆಲ್ಲಾ ಆದರಿಂದ ಪ್ರತಿಹತವಾದುವು. ಅಲ್ಲಿ ಅವರಿಬ್ಬರಿಗೂ ನೋಡುವವರಿಗೆ ಆಶ್ಚರ್ಯಕರವಾದ ಪ್ರಬಲಯುದ್ಧವಾಯಿತು. ಅಶ್ವತ್ಥಾಮನಿಗೆ ಅದು ಯುದ್ಧೋತ್ಸಾಹವನ್ನು ಹೆಚ್ಚಿಸುತ್ತಿದ್ದಿತು. ಇಷ್ಟರಲ್ಲಿಯೇ ಭೀಮನು ಸಾವಿರ ರಥಗಳೊಡನೆಯೂ, ಮುನ್ನೂರು ಆನೆಗಳೊಡನೆಯೂ, ಆರುಸಹಸ್ರ ಕುದುರೆಗಳೊಡನೆಯೂ ಸೇರಿ ಆ ಪ್ರದೇಶಕ್ಕೆ ಬಂದನು. ಅಶ್ವತ್ಥಾಮನು ಘಟೋತ್ಕಚನೊಡನೆಯೂ, ಸೇನಾಸಮೇತನಾದ ಧೃಷ್ಟದ್ಯುಮ್ನನೊಡನೆಯೂ ತಾನೊಬ್ಬನೇ ಯುದ್ಧಮಾಡುತ್ತ, ಆದರಲ್ಲಿ ಬೇರೊಬ್ಬರಿಗೆ ಸಾಧ್ಯವಲ್ಲದ ಆಶ್ಚರ್ಯಪರಾಕ್ರಮವನ್ನು ತೋರಿಸಿದನು. ನಿಮಿಷಮಾತ್ರದಲ್ಲಿ ಗಜ, ತುರಗ, ರಥ, ಪದಾತಿಗಳೆಂಬ ಚತುರಂಗಗಳಿಂದ ಕೂಡಿದ ಅಕ್ಷೌಹಿಣೀಸಂಖ್ಯೆಯ ರಾಕ್ಷಸಸೈನ್ಯವನ್ನೆಲ್ಲಾ ಕೊಂದುಕೆಡಹಿದನು. ಪಂಚಪಾಂಡವರು, ಘಟೋತ್ಕಚನು, ಧೃಷ್ಟದ್ಯುಮ್ನನು, ಶ್ರೀಕೃಷ್ಣನು, ಇವರೆಲ್ಲರೂ ನಿಂತು ನೋಡುತ್ತಿರುವಾಗಲೇ ಎಷ್ಟೋ ಆನೆಗಳು ಅಶ್ವತ್ಥಾಮನ ತೀವ್ರವೇಗವುಳ್ಳ ಬಾಣಗಳಿಂದ ಹತವಾಗಿ, ವಜ್ರಾಹತಗಳಾದ ಪರ್ವತಗಳಂತೆ ಬಿದ್ದುಹೋದುವು. ಅಲ್ಲಲ್ಲಿ ಆನೆಗಳ ಸುಂಡಿಲುಗಳು ತುಂಡಾಗಿ ಬಿದ್ದು, ಇನ್ನೂ ಅರ್ಧಜೀವದಿಂದ ನೆಲದಮೇಲೆ ಹೊರಳಾಡುತ್ತ, ರಣಭೂಮಿಯೆಲ್ಲಾ ಹರಿದಾಡುವ ಹೆಬ್ಬಾವುಗಳಿಂದ ವ್ಯಾಪ್ತವಾದಂತೆ ತೋರಿತು. ಅನೇಕರಾಜರ ರಥದಮೇಲಿನ ಛತ್ರಗಳ ಸುವರ್ಣದಂಡಗಳು ಅಲ್ಲಲ್ಲಿ ತುಂಡಾಗಿ ಬಿದ್ದು, ಆಗಿನ ರಣಭೂಮಿಯು ಸೂರ್ಯಚಂದ್ರರಿಂದಲೂ, ಗ್ರಹಗಳಿಂದಲೂ, ವ್ಯಾಪ್ತವಾದ ಆಕಾಶದಂತೆ ಕಾಣಿ

ಸುತ್ತಿದ್ದಿತು. ಆಗ ದ್ರೋಣನ ಬಾಣಗಳಿಂದ ದೊಡ್ಡದೊಂದು ರಕ್ತನದಿಯೇ ರಣಾಂಗಣದಲ್ಲಿ ಪ್ರವಹಿಸುತ್ತಿದ್ದಿತು. ಅದರಲ್ಲಿ ಧ್ವಜಗಳೇ ಮಂಡೂಕಗಳು! ಆನೆಗಳೇ ಕಲ್ಲುಬಂಡೆಗಳು! ಬಿಳೀಕೊಡೆಗಳೇ ಹಂಸಗಳು! ಚಾಮರಗಳೇ ನೊರೆಗಳು! ಹದ್ದು, ರಣಹದ್ದು, ಮೊದಲಾದ ಪಕ್ಷಿಗಳೇ ಗ್ರಾಹಗಳು! ಆಯುಧಗಳೇ ಮೀನುಗಳು! ಕುದುರೆಗಳ ಮೃತದೇಹಗಳೇ ಮಕರಗಳು! ರಥಗಳೇ ಅಲ್ಲಲ್ಲಿನ ತೀರದ ತಿಟ್ಟುಗಳು! ಪತಾಕಗಳೇ ಮುರಿದ ವೃಕ್ಷಗಳು! ಪ್ರಾಸ, ಶಕ್ತಿ, ಋಷ್ಟಿ, ಮೊದಲಾದ ಆಯುಧಗಳೇ ಡುಂಡುಭಗಳು! ಕೊಬ್ಬು, ಮಾಂಸ, ಕೆನ್ನೀರು, ಮೊದಲಾದುವುಗಳೇ ಕೆಸರು! ಮೃತಶರೀರಗಳೇ ತೆಪ್ಪಗಳು! ತಲೆಕೂದಲುಗಳೇ ಪಾಚಿ! ಹೀಗೆ ಅತಿಭಯಂಕರವಾದ ಆ ರಕ್ತನದಿಯಲ್ಲಿ, ಯೋಧರ ಆರ್ತಧ್ವನಿಯೇ ದೊಡ್ಡ ಪ್ರವಾಹಘೋಷದಂತೆ ಕೇಳಿಸುತ್ತಿದ್ದಿತು. ಭೀರುಗಳಿಗೆ ಭಯವನ್ನೂ, ಶೂರರಿಗೆ ಉತ್ಸಾಹವನ್ನೂ ಹೆಚ್ಚಿಸುತ್ತ, ಯಮರಾಷ್ಟ್ರವನ್ನು ವೃದ್ಧಿಗೊಳಿಸತಕ್ಕ ಆಗಿನ ರಣರಂಗವು, ನೋಡುವವರಿಗೆ ಅತಿರೌದ್ರವಾಗಿ ಕಾಣಿಸಿತು. ಅಶ್ವತ್ಥಾಮನು ಬಾಣಗಳಿಂದ ಅನೇಕರಾಕ್ಷಸರನ್ನು ಕೊಂದಮೇಲೆ, ಘಟೋತ್ಕಚನನ್ನು ತೀವ್ರಬಾಣಗಳಿಂದ ಹೊಡೆದನು. ಆಮೇಲೆ ಕ್ರಮವಾಗಿ ಧೃಷ್ಟದ್ಯುಮ್ನನನ್ನೂ, ಪಂಚಪಾಂಡವರನ್ನೂ ತೀವ್ರಬಾಣಗಳಿಂದ ನೋಯಿಸಿದನು. ದ್ರುಪದನ ಮಗನಾದ ಸುರಥನೆಂಬವನನ್ನು ಕೆಡಹಿದನು. ದ್ರುಪದನ ಮತ್ತೊಬ್ಬ ಮಗನಾದ ಶತ್ರುಂಜಯನನ್ನೂ ಪ್ರಹರಿಸಿದನು. ಹಾಗೆಯೇ ಬಲಾನೀಕ, ಜಯಾನೀಕ, ಜಯಾಶ್ವ, ಶ್ರುತಾಹ್ವಯರೇ ಮೊದಲಾದ ಅನೇಕರಾಜರನ್ನು ಯಮಪುರಿಗೆ ಕಳುಹಿಸಿದನು. ಆಮೇಲೆ ಮೂರು ತೀವ್ರಬಾಣಗಳಿಂದ ಪೃಷಧ್ರ ಚಂದ್ರಸೇನರೆಂಬ ವೀರರಾಜರನ್ನು ಕೊನೆಮುಟ್ಟಿಸಿದನು. ಹತ್ತುಬಾಣಗಳಿಂದ ಕುಂತಿಭೋಜನ ಹತ್ತುಮಂದಿ ಮಕ್ಕಳನ್ನೂ ಕೊಂದುಬಿಟ್ಟನು. ಆಮೇಲೆ ಅತ್ಯಂತ ಕ್ರೋಧಾವಿಷ್ಟನಾಗಿ, ಯಮದಂಷ್ಟ್ರಕ್ಕೆ ಸಮಾನವಾದ ಕ್ರೂರಬಾಣವೊಂದನ್ನು ಬಿಲ್ಲಿನಲ್ಲಿ ಸೇರಿಸಿ, ಕಿವಿಯವರೆಗೆ ನಾಣನ್ನೆಳೆದು, ಅದನ್ನು ಘಟೋತ್ಕಚನಿಗೆ ಗುರಿಯಿಟ್ಟು ಪ್ರಯೋಗಿಸಿದನು. ಆ ಬಾಣವು ಘಟೋತ್ಕಚನ ಎದೆಗೆ ಬಲವಾಗಿ ನಾಟಿತು. ಒಡನೆಯೇ ಅವನು ಮೂರ್ಛಿತನಾಗಿ

ಕೆಳಗೆ ಬಿದ್ದುಬಿಟ್ಟನು. ಇದನ್ನು ನೋಡಿ ಧೃಷ್ಟದ್ಯುಮ್ನನು ಘಟೋತ್ಕಚನು ಸತ್ತನೆಂದೇ ತಿಳಿದು, ಥಟ್ಟನೆ ಓಡಿಬಂದು, ಆ ಘಟೋತ್ಕಚನನ್ನು ಬೇರೆಕಡೆಗೆ ಸಾಗಿಸಿಬಿಟ್ಟನು. ಹೀಗೆ ಪಾಂಡವಸೈನ್ಯವೆಲ್ಲಾ ಪರಾಜಿತವಾಗಿ ಯುದ್ಧರಂಗದಿಂದ ಪಲಾಯನಮಾಡಿತು. ಜಯೋತ್ಸಾಹದಿಂದ ದ್ರೋಣಪುತ್ರನು ಸಿಂಹನಾದಮಾಡಿದನು. ಸಮಸ್ತಭೂತಗಳೂ ಅಶ್ವತ್ಥಾಮನ ಪರಾಕ್ರಮವನ್ನು ಕೊಂಡಾಡಿದುವು. ನಿನ್ನ ಮಕ್ಕಳೂ ಅವನನ್ನು ಬಹಳವಾಗಿ ಪೂಜಿಸಿದರು. ಮಹಾರಾಜಾ! ಹೀಗೆಯೇ ಅಶ್ವತ್ಥಾಮನ ಬಾಣಗಳಿಂದ ಹತರಾದ ಅನೇಕರಾಕ್ಷಸರ ಮೃತದೇಹಗಳು ರಣರಂಗದೊಳಗೆಲ್ಲಾ ಪರ್ವತಾಕಾರದಲ್ಲಿ ಬಿದ್ದು, ಭೂಮಿಯು ಅತಿಭಯಂಕರವಾಗಿ, ಸಂಚಾರಕ್ಕೂ ಕೂಡ ದಾರಿಯಿಲ್ಲದಂತಾಯಿತು. ಆಕಾಶದಲ್ಲಿ ಈ ಯುದ್ಧವನ್ನು ನೋಡುತ್ತಿದ್ದ ಸಿದ್ಧ, ಚಾರಣ, ಗಂಧರ್ವ, ಪಿಶಾಚ, ಪನ್ನಗ, ಗರುಡರೇ ಮೊದಲಾದ ಎಲ್ಲಾ ದೇವಗಣಗಳೂ, ಭೂತಗಣಗಳೂ, ಅಶ್ವತ್ಥಾಮನ ಅದ್ಭುತಪರಾಕ್ರಮವನ್ನು ಕೊಂಡಾಡುತ್ತಿದ್ದುವು.

ಇದು ನೂರ ಐವತ್ತೇಳನೆಯ ಅಧ್ಯಾಯವು.

---

ಭೀಮನು ಬಾಹ್ಲೀಕರನ್ನು ಕೊಂದು, ದುರ್ಯೋಧನನ ಹತ್ತು ಮಂದಿ ತಮ್ಮಂದಿರನ್ನೂ, ಶಕುನಿಯ ಐದುಮಂದಿ ಸಹೋದರರನ್ನೂ ವಧಿಸಿದುದು.

ಮಹಾರಾಜಾ! ಅಶ್ವತ್ಥಾಮನಿಂದ ಸಾವಿರಾರುಮಂದಿ ರಾಕ್ಷಸರೂ, ದ್ರುಪದ ಕುಂತಿಭೋಜರ ಮಕ್ಕಳೂ ಹತರಾಗಿ, ತಮ್ಮ ಸೈನ್ಯವೆಲ್ಲಾ ಪರಾಜಿತವಾದುದನ್ನು ನೋಡಿ, ಯುಧಿಷ್ಠಿರ ಭೀಮಸೇನರೂ, ಧೃಷ್ಟದ್ಯುಮ್ನನೂ, ಸಾತ್ಯಕಿಯೂ ಮಹಾವ್ಯಸನದಿಂದ ತಮ್ಮೊಳಗೆ ಆಲೋಚಿಸಿ, ತಿರುಗಿ ಯುದ್ಧನಿಶ್ಚಯದಿಂದ ಹೊರಟರು. ಸಾತ್ಯಕಿಯು ಯುದ್ಧಕ್ಕೆ ಬಂದುದನ್ನು ನೋಡಿ, ಅವನ ಮೇಲಿನ ರೋಷದಿಂದ ಸೋಮದತ್ತನು ಅವನನ್ನಿದಿರಿಸಿ ದೊಡ್ಡ ಬಾಣವರ್ಷವನ್ನು ಕರೆದನು. ಉಭಯಪಕ್ಷಕ್ಕೂ ಪ್ರಬಲಯುದ್ಧವಾಯಿತು. ಆಗ ಸಾತ್ಯಕಿಗೆ ಬೆಂಬಲವಾಗಿ ಭೀಮನು ಸಹಾಯಕ್ಕೆ

ಬಂದು, ಸೋಮದತ್ತನಮೇಲೆ ಹತ್ತು ಬಾಣಗಳನ್ನು ಪ್ರಯೋಗಿಸಿದನು. ಸೋಮದತ್ತನು ಪ್ರತಿಯಾಗಿ ನೂರು ಬಾಣಗಳನ್ನು ಬಿಟ್ಟನು. ಪುತ್ರಶೋಕ ಪೀಡಿತನೂ, ವೃದ್ಧನೂ, ವೃದ್ಧಗುಣಗಳಿಂದ ಕೂಡಿದವನೂ, ನಹುಷಪುತ್ರನಾದ ಯಯಾತಿಯಂತೆ ಗುಣಾಢ್ಯನೂ ಆದ ಆ ಸೋಮದತ್ತನನ್ನು ಸಾತ್ಯಕಿಯು ಹತ್ತು ತೀಕ್ಷ್ಣಬಾಣಗಳಿಂದ ಹೊಡೆದು, ಒಂದು ಶಕ್ತ್ಯಾಯುಧವನ್ನು ಪ್ರಯೋಗಿಸಿದನು. ತಿರುಗಿ ಏಳು ಬಾಣಗಳನ್ನು ಬಿಟ್ಟನು. ಇದೇಸಮಯದಲ್ಲಿ ಸಾತ್ಯಕಿಯ ಸಹಾಯಕ್ಕಾಗಿ ಬಂದಿದ್ದ ಭೀಮನೂಕೂಡ, ಸೋಮದತ್ತನ ತಲೆಗೆ ಗುರಿಯಿಟ್ಟು ಭಯಂಕರವಾದ ಒಂದು ಪರಿಘವನ್ನು ಪ್ರಯೋಗಿಸಿದನು. ಸಾತ್ಯಕಿಯು ಅದೇ ಸಮಯದಲ್ಲಿ ಅಗ್ನಿಸಮಾನವಾದ ಇನ್ನೊಂದು ಬಾಣವನ್ನು ಸೋಮದತ್ತನ ಎದೆಗೆ ಗುರಿಯಿಟ್ಟು ಹೊಡೆದನು. ಈ ಬಾಣಗಳೆರಡೂ ಏಕಕಾಲದಲ್ಲಿ ಸೋಮದತ್ತನಮೇಲೆ ವೇಗದಿಂದ ಬಿದ್ದುವು. ಒಡನೆಯೇ ಆ ವೃದ್ಧರಾಜನು ಮೂರ್ಛಿತನಾಗಿ ಕೆಳಗೆ ಬಿದ್ದನು. ಅವನು ಮೂರ್ಛಿತನಾದುದನ್ನು ನೋಡಿ ಅವನ ತಂದೆಯಾದ ಬಾಹ್ಲೀಕನು ಬಾಣವರ್ಷಗಳನ್ನು ಕರೆಯುತ್ತ, ಭೀಮಸಾತ್ಯಕಿಗಳನ್ನು ಇದಿರಿಸಿ ಬಂದನು. ಭೀಮನು ಪ್ರತೀಪಪುತ್ರನಾದ ಆ ಬಾಹ್ಲೀಕನನ್ನು ಒಂಭತ್ತುಬಾಣಗಳಿಂದ ಪ್ರಹರಿಸಿದನು. ಬಾಹ್ಲೀಕನು ಅತಿಕ್ರುದ್ಧನಾಗಿ, ವಜ್ರಸಮಾನವಾದ ಒಂದು ಶಕ್ತ್ಯಾಯುಧವನ್ನು ಭೀಮನ ಎದೆಗೆ ಗುರಿಯಿಟ್ಟು ಬೀಸಿದನು. ಅದರಿಂದ ಭೀಮನು ಬಹಳವಾಗಿ ನೊಂದು, ಮೈನಡುಗಿ, ಮೂರ್ಛಿತನಾದನು. ಆದರೆ ಸ್ವಲ್ಪಹೊತ್ತಿನಲ್ಲಿಯೇ ಚೇತರಿಸಿಕೊಂಡು, ತನ್ನ ಗದೆಯನ್ನು ಬಾಹ್ಲೀಕನ ಮೇಲೆ ಪ್ರಯೋಗಿಸಿದನು. ಅದರಿಂದ ಬಾಹ್ಲೀಕನ ತಲೆಯು ಕತ್ತರಿಸಿ ಬಿದ್ದಿತು. ಬಾಹ್ಲೀಕನು ವಜ್ರಾಹತವಾದ ಪರ್ವತದಂತೆ ಸತ್ತುಬಿದ್ದನು. ಇದನ್ನು ನೋಡಿ ನಿನ್ನ ಮಕ್ಕಳಲ್ಲಿ ನಾಗದತ್ತ, ದೃಢರಥ, ಮಹಾಬಾಹು, ಅಯೋಗಜ, ದೃಢ, ಸುಹಸ್ತ, ವಿರಜಸ್ಸು, ಪ್ರಮಾಥಿ, ಉಗ್ರ, ಅನುಯಾಯಿಗಳೆಂಬ ಈ ಹತ್ತುಮಂದಿಯೂ ಒಟ್ಟಾಗಿ ಸೇರಿ, ಭೀಮನಿಗಿದಿರಾಗಿ ಬಂದರು. ಭೀಮನು ಮಹಾಭಾರವುಳ್ಳ ಗದೆ ಮೊದಲಾದ ಆಯುಧಗಳನ್ನು ಎತ್ತಿಕೊಂಡು, ಒಬ್ಬೊಬ್ಬನ ಮರ್ಮಸ್ಥಾನಗಳಿಗೆ ಗುರಿಯಿಟ್ಟು ಒಂದೊಂದು ಆಯುಧಗಳನ್ನು ಪ್ರಯೋಗಿಸಿದನು. ಒಬ್ಬೊಬ್ಬರೂ ಒಂದೊಂದೇ ಪ್ರಹಾ

ರಕ್ಕೆ ಪ್ರಾಣವನ್ನು ನೀಗಿ, ಬಿರುಗಾಳಿಯ ವೇಗಕ್ಕೆ ಪರ್ವತಾಗ್ರದಿಂದ ಮುರಿದುಬೀಳುವ ವೃಕ್ಷಗಳಂತೆ ರಥದಿಂದ ಕೆಳಕ್ಕೆ ಉರುಳಿದರು. ಹೀಗೆ ಭೀಮನು ನಿನ್ನ ಹತ್ತುಮಂದಿ ಮಕ್ಕಳನ್ನು ಕೊಂದಮೇಲೆ, ಕರ್ಣನ ಮಗನಾದ ವೃಷಸೇನನನ್ನು ಇದಿರಿಸಿಹೋದನು. ಅವನಿಗೆ ಬೆಂಬಲವಾಗಿ ವೃಕರಥನೆಂಬ ಕರ್ಣನ ಸಹೋದರನು ಭೀಮನಮೇಲೆ ಬಾಣಗಳನ್ನು ಪ್ರಯೋಗಿಸುತ್ತ ಬಂದನು. ಭೀಮನು ಅವರಿಬ್ಬರನ್ನೂ ಹೊಡೆದೋಡಿಸಿ, ಆಮೇಲೆ ನಿನ್ನ ಮೈದುನರಲ್ಲಿ ಏಳುಮಂದಿ ಮಹಾರಥರನ್ನು ತನ್ನ ಬಾಣಗಳಿಂದ ಹೊಡೆದು ಕೊಂದನು. ಆಮೇಲೆ ಶತಚಂದ್ರನೆಂಬವನನ್ನು ವಧಿಸಿದನು. ಇದನ್ನು ನೋಡಿ ಶಕುನಿಯ ತಮ್ಮಂದಿರಾದ ಗವಾಕ್ಷ, ಶರಭ, ವಿಭು, ಸುಭಗ, ಭಾನುದತ್ತರೆಂಬ ಐದುಮಂದಿ ಮಹಾರಥರು ಭೀಮನಿಗಿದಿರಾಗಿ ಪರ್ವತದ ಮೇಲೆ ಮಳೆಯನ್ನು ಕರೆಯುವ ಮೇಘದಂತೆ ಎಡೆಬಿಡದೆ ಬಾಣಗಳನ್ನು ಬಿಡುತ್ತಿದ್ದರು. ಭೀಮನು ಆ ಐದುಮಂದಿಯನ್ನೂ ಐದೇ ಬಾಣಗಳಿಂದ ಕೊಂದುಕೆಡಹಿದನು. ಇದನ್ನು ನೋಡಿ ನಮ್ಮಕಡೆಯ ಅನೇಕ ರಾಜರು ರಣರಂಗದಿಂದ ಚದರಿಹೋದರು. ಇದೇ ಸಮಯದಲ್ಲಿ ಯುಧಿಷ್ಠಿರನುಕೂಡ ದ್ರೋಣನೂ, ನಿನ್ನ ಮಕ್ಕಳೂ ನೋಡುತ್ತಿರುವಾಗಲೇ ನಿನ್ನ ಸೈನ್ಯದಲ್ಲಿ ಅನೇಕರನ್ನು ಹೊಡೆದೋಡಿಸಿದನು. ಅಂಬಷ್ಠರು, ಮಾಲವರು, ತ್ರಿಗರ್ತರು, ಶಿಬಿಗಳು, ಅಭೀಷಹರು, ಶೂರಸೇನರು, ಯೌಧೇಯರು, ಬಾಹ್ಲೀಕರು, ವಸಾತಿಗಳು, ಮದ್ರಕರು, ಮೊದಲಾದವರನ್ನೆಲ್ಲ ತನ್ನ ಬಾಣಗಳಿಂದ ಸಂಹರಿಸಿ, ರಣಭೂಮಿಯನ್ನೆಲ್ಲ ರಕ್ತಪ್ರವಾಹಮಯವನ್ನಾಗಿ ಮಾಡಿದನು. ಯುಧಿಷ್ಠಿರನಮೇಲೆ ಆಕ್ರೋಶದಿಂದ ಆಗ ನಿನ್ನವರಲ್ಲಿ "ಹಿಡಿಯಿರಿ! ಕೊಲ್ಲಿರಿ! ಸೆಳೆತನ್ನಿರಿ! ಹೊಡೆಯಿರಿ! ಕತ್ತರಿಸಿರಿ" ಎಂಬ ಕೂಗಾಟವು ಪ್ರಬಲವಾಯಿತು. ಅನೇಕ ಸೈನ್ಯಗಳು ಯುಧಿಷ್ಠಿರನಿಗೆ ಭಯಪಟ್ಟು ಓಡುತ್ತಿದ್ದುವು. ಇದನ್ನು ಕಂಡು ನಿನ್ನ ಮಗನು ದ್ರೋಣನನ್ನು ಪ್ರೇರಿಸಲು, ದ್ರೋಣನು ಧನುರ್ಧಾರಿಯಾಗಿ ಬಂದು ಪ್ರಬಲವಾದ ವಾಯವ್ಯಾಸ್ತ್ರವೊಂದನ್ನು ಯುಧಿಷ್ಠಿರನಕಡೆಗೆ ಪ್ರಯೋಗಿಸಿದನು. ಯುಧಿಷ್ಠಿರನು ಪ್ರತ್ಯಸ್ತ್ರದಿಂದ ಅದನ್ನು ಮುರಿದನು. ಆಮೇಲೆ ದ್ರೋಣನು ಕ್ರಮವಾಗಿ ವರುಣಾಸ್ತ್ರ, ಯಮಾಸ್ತ್ರ, ಆಗ್ನೇಯ, ಸಾವಿತ್ರ, ತ್ವಾಷ್ಟ್ರಗಳೆಂಬ

ದಿವ್ಯಾಸ್ತ್ರಗಳನ್ನು ಪ್ರಯೋಗಿಸುತ್ತಬಂದನು. ಅವೆಲ್ಲವನ್ನೂ ಧರ್ಮಪುತ್ರನು ಪ್ರತ್ಯಸ್ತ್ರಗಳಿಂದ ಭಂಗಿಸಿದನು. ಆಗ ದ್ರೋಣನು ತಾನು ದುರ್ಯೋಧನನಿಗೆ ಮಾಡಿಕೊಟ್ಟ ಪ್ರತಿಜ್ಞೆಯನ್ನು ಹೇಗಾದರೂ ಕೊನೆಮುಟ್ಟಿಸಬೇಕೆಂಬ ಸಂಕಲ್ಪದಿಂದ ಐಂದ್ರಾಸ್ತ್ರವನ್ನು ಬಿಟ್ಟನು! ಪ್ರಾಜಾಪತ್ಯವೆಂಬ ಮಹಾಸ್ತ್ರವನ್ನು ಬಿಟ್ಟನು! ಇನ್ನೂ ಅನೇಕಾಸ್ತ್ರಗಳನ್ನು ಪ್ರಯೋಗಿಸಿದನು! ಧರ್ಮರಾಜನು ಮಾಹೇಂದ್ರವೆಂಬ ಅಸ್ತ್ರವನ್ನು ಪ್ರಯೋಗಿಸಿ ಆ ದ್ರೋಣನ ಅಸ್ತ್ರಗಳನ್ನೆಲ್ಲ ವಿಫಲಮಾಡಿದನು. ಹೀಗೆ ತನ್ನ ಅಸ್ತ್ರಗಳೆಲ್ಲ ಭಗ್ನವಾದಮೇಲೆ ದ್ರೋಣನು ಕೋಪದಿಂದ ಬ್ರಹಾಸ್ತ್ರವನ್ನು ಪ್ರಯೋಗಿಸಿದನು. ಒಡನೆಯೇ ಆ ಅಸ್ತ್ರಪ್ರಭಾವದಿಂದ ಭಯಂಕರವಾದ ತಮಸ್ಸು ಆವರಿಸಿತು. ಯಾವುದೊಂದೂ ಕಣ್ಣಿಗೆ ತಿಳಿಯಲಿಲ್ಲ. ಸಮಸ್ತಭೂತಗಳೂ ಭಯದಿಂದ ನಡುಗಿದುವು. ಇದನ್ನು ನೋಡಿ ಯುಧಿಷ್ಠಿರನು ಆ ಬ್ರಹ್ಮಾಸ್ತ್ರದ ಪ್ರಭಾವವನ್ನಡಗಿಸುವುದಕ್ಕಾಗಿ, ತಾನೂ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿದನು. ದ್ರೋಣ ಯುಧಿಷ್ಠಿರರ ಈ ಅಸ್ತ್ರಪ್ರತ್ಯಸ್ತ್ರಚಾತುರ್ಯವನ್ನು ಸಮಸ್ತಸೈನ್ಯಗಳೂ ಕೊಂಡಾಡಿದುವು. ಆಮೇಲೆ ದ್ರೋಣನು ಧರ್ಮರಾಜನನ್ನು ಬಿಟ್ಟು ದ್ರುಪದಸೈನ್ಯಕ್ಕಿದಿರಾಗಿ ಬಂದು, ಅದರಮೇಲೆ ವಾಯುವ್ಯಾಸ್ತ್ರವನ್ನು ಪ್ರಯೋಗಿಸಿದನು. ಈ ಅಸ್ತ್ರವೇಗವನ್ನು ತಡೆದು ನಿಲ್ಲಲಾರದೆ ಪಾಂಚಾಲರು ಭಯದಿಂದ ಓಡಲಾರಂಭಿಸಿದರು. ಇದನ್ನು ನೋಡಿ ಭೀಮಾರ್ಜುನರಿಬ್ಬರೂ ಸೇನಾಸನ್ನಾಹದೊಡನೆ ಯುದ್ಧರಥಗಳನ್ನೇರಿ ದಕ್ಷಿಣಪಾರ್ಶ್ವದಿಂದ ಅರ್ಜುನನೂ, ಉತ್ತರಪಾರ್ಶ್ವದಿಂದ ಭೀಮನೂ ದ್ರೋಣನನ್ನಾವರಿಸಿಕೊಂಡು, ಬಾಣವರ್ಷಗಳನ್ನು ಸುರಿಸತೊಡಗಿದರು. ಒಡನೆಯೇ ಕೇಕಯ, ಸೃಂಜಯ, ಪಾಂಚಾಲ, ಮಾತ್ಸ್ಯ, ಸಾತ್ವತ, ಸೈನಿಕರೆಲ್ಲ ಆ ಭೀಮಾರ್ಜುನರಿಗೆ ಬೆಂಬಲವಾಗಿ ಹಿಂಬಾಲಿಸಿದರು. ಆಗ ಅರ್ಜುನನ ಬಾಣವೇಗವನ್ನು ತಡೆಯಲಾರದೆ, ನಿನ್ನ ಸೈನ್ಯವೆಲ್ಲ ಹಿಂದುಮುಂದುತೋರದೆ ಚದರಿಹೋಯಿತು. ದ್ರೋಣನೂ, ನಿನ್ನ ಮಗನೂ ಆ ಸೈನ್ಯಗಳಿಗೆ ಎಷ್ಟೇ ಧೈರ್ಯವನ್ನು ಹೇಳಿ ಪ್ರೋತ್ಸಾಹಿಸುತ್ತಿದ್ದರೂ, ಅದನ್ನು ತಡೆದು ನಿಲ್ಲಿಸಲು ಅವರಿಗೂ ಸಾಧ್ಯವಾಗಲಿಲ್ಲ.

ಇದು ನೂರ ಐವತ್ತೆಂಟನೆಯ ಅಧ್ಯಾಯವು.

ಕರ್ಣನು ಪಾಂಡವರನ್ನು ತಾನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದುದನ್ನು ಕೇಳಿ ಕೃಪನು, ಅವನ ಮಾತಿಗೆ ಸಮ್ಮತಿಸದೆ ನಿರಾಕರಿಸಲು, ಕರ್ಣನು ಕೋಪದಿಂದ ಆ ಕೃಪನ ನಾಲಗೆಯನ್ನು ಕತ್ತರಿಸುವುದಾಗಿ ಪ್ರತಿಜ್ಞೆಮಾಡಿದುದು.

ಮಹಾರಾಜಾ! ಹೀಗೆ ತನ್ನ ಸೈನ್ಯವೆಲ್ಲ ಭಗ್ನವಾಗಿ, ಪಾಂಡವಸೈನ್ಯದ ವೇಗವು ತಮಗೆ ದುಃಸ್ಸಹವಾದುದನ್ನು ನೋಡಿ, ನಿನ್ನ ಮಗನಾದ ದುರ್ಯೋಧನನು ಕರ್ಣನನ್ನು ಕರೆದು ಹೀಗೆಂದನು. "ಮಿತ್ರವಾತ್ಸಲ್ಯವುಳ್ಳ ಕರ್ಣಾ! ನಿನ್ನ ಮಿತ್ರಪ್ರೇಮವನ್ನು ತೋರಿಸುವುದಕ್ಕೆ ಒಳ್ಳೇಸಮಯವು ಈಗ ಒದಗಿಬಂದಿದೆ. ನಮ್ಮ ಸೈನ್ಯಗಳನ್ನು ನೀನೇ ಕಾಪಾಡಬೇಕು. ಅದೋ ನೋಡು! ಮತ್ಸ್ಯ ಪಾಂಚಾಲ ಪಾಂಡವ ಕೇಕಯರೇ ಮೊದಲಾದ ಮಹಾರಥರೆಲ್ಲರೂ ನಮ್ಮ ಸೈನ್ಯವನ್ನು ನಾನಾಕಡೆಗಳಿಂದ ಮುತ್ತಿಕೊಂಡು, ಸರ್ಪಗಳಂತೆ ಕೋಪದಿಂದ ಬುಸುಗುಟ್ಟುತ್ತ ಕೊಲೆಮಾಡುತ್ತಿರುವರು. ಪಾಂಡವರೂ, ಪಾಂಚಾಲರೂ ತಮ್ಮ ಜಯದ ಹೆಮ್ಮೆಯಿಂದ ಆಗಾಗ ಸಿಂಹನಾದವನ್ನು ಮಾಡುತ್ತಿರುವುದನ್ನು ನೋಡು" ಎಂದನು. ಅದಕ್ಕಾ ಕರ್ಣನು "ದುರ್ಯೋಧನಾ! ಇದಕ್ಕಾಗಿ ನೀನೇಕೆ ಚಿಂತಿಸುವೆ? ಈಗಿನ ಯುದ್ಧದಲ್ಲಿ ಸಾಕ್ಷಾದ್ದೇವೇಂದ್ರನೇ ಅರ್ಜುನನನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಬಂದರೂ, ಅವನನ್ನು ನಾನು ಮೊದಲು ಸೋಲಿಸಿ ಆಮೇಲೆ ಅರ್ಜುನನನ್ನು ಕೊಂದುಕೆಡಹುವೆನು. ಇದೋ! ಆಣೆಯಿಟ್ಟು ಹೇಳುವೆನು. ಸಮಾಧಾನದಿಂದಿರು. ಷಣ್ಮುಖನು ದೈತ್ಯಸೇನೆಯನ್ನು ಧ್ವಂಸಮಾಡಿ ಇಂದ್ರನನ್ನು ಸಂತೋಷಗೊಳಿಸಿದಂತೆ ಪಾಂಡವ ಪಾಂಚಾಲರನ್ನೆಲ್ಲ ಕೊಂದು, ನಿನಗೆ ನಾನು ಜಯವನ್ನು ಕೂಡಿಸಿ, ಸಂತೋಷಗೊಳಿಸುವೆನು. ಮಿತ್ರಾ? ನಿನಗೆ ಪ್ರಿಯವನ್ನು ಮಾಡಬೇಕೆಂದೇ ನಾನು ಬದುಕಿರುವೆನೆಂದು ತಿಳಿ. ಅರ್ಜುನನೇನೋ ಎಲ್ಲಾ ರಾಜರಲ್ಲಿ ಅತಿಶಯವಾದ ಬಲವುಳ್ಳವನೇ! ಆದರೇನು? ಇಂದ್ರನು ನನಗೆ ಕೊಟ್ಟ ಅಮೋಘವಾದ ಶಕ್ತಿಯನ್ನು ಈಗಿನ ಯುದ್ಧದಲ್ಲಿ ನಾನು ಅವನಮೇಲೆ ಪ್ರಯೋಗಿಸಿಬಿಡುವೆನು. ಆದರಿಂದ ಅವನು ಸಾಯುವುದು ನಿಶ್ಚಯವು. ಅವನು ಸತ್ತಮೇಲೆ ಅವನ ಸಹೋದರರೆಲ್ಲ ನಿನ್ನ ದಾಸರಾದಂತೆಯೇ! ಅಥವಾ ಅವರು ತಿರುಗಿ ಕಾಡಿಗೆ ಹೋಗು

ವರು. ನಾನು ಬದುಕಿರುವವರೆಗೆ ನೀನು ಚಿಂತಿಸಬೇಕಾದ ಕಾರಣವಿಲ್ಲ; ಪಾಂಡವ, ಪಾಂಚಾಲ, ಕೇಕಯ ವೃಷ್ಣಿಗಳನ್ನೆಲ್ಲ ಒಂದಾಗಿ ಸೇರಿಸಿ, ನಾನು ಈ ಯುದ್ಧದಲ್ಲಿ ನನ್ನ ಬಾಣಗಳಿಂದ ಕೊಂದು, ಭೂಮಿಯನ್ನು ನಿನ್ನ ಕೈ ಸೇರಿಸುವೆನು" ಎಂದನು. ಹೀಗೆ ಪರಾಕ್ರಮದ ಹೆಮ್ಮೆಯಿಂದ ಮಾತಾಡು ತ್ತಿರುವ ಕರ್ಣನನ್ನು ನೋಡಿ ನಗುತ್ತ ಕೃಪಾಚಾರ್ಯನು 'ಭಲೆ! ಶಹಬಾಸ್! ಕರ್ಣ! ನೀನಿದ್ದಮೇಲೆ ದುರ್ಯೋಧನನಿಗೆ ಏನುತಾನೇ ಕಡಿಮೆ? ನೀನು ನಮ್ಮ ರಾಜನಿಗೆ ದಿಕ್ಕಾಗಿದ್ದಮೇಲೆ ಅವನು ಸನಾಥನೇ! ಆದರೆ ನಿನ್ನ ಮಾತಿನಂತೆ ಮಾತ್ರ ಎಲ್ಲವೂ ನಡೆಯಬೇಕು. ಬರೀ ಬಾಯಿ ಮಾತುಗಳಿಂದ ಪ್ರಯೋಜನವಿಲ್ಲ. ಕರ್ಣ! ಕೌರವರಾಜನ ಮುಂದು ಗಡೆಯಲ್ಲಿ ನೀನು ಆಗಾಗ ಹೀಗೆಯೇ ಜಂಭವನ್ನು ಹೇಳಿಕೊಳ್ಳುವೆಯೇ ಹೊರತು, ನಿನ್ನ ಆ ವಿಧವಾದ ಪರಾಕ್ರಮವನ್ನು ನಾವು ಇದುವರೆಗೆ ನೋಡ ಲಿಲ್ಲ! ಅದರ ಫಲವನ್ನೂ ಅನುಭವಿಸಲಿಲ್ಲ. ರಾಧೇಯಾ! ಇದುವರೆಗೆ ನೀನು ಪಾಂಡವರೊಡನೆ ಎಷ್ಟೋ ಆವರ್ತಿ ಯುದ್ಧಕ್ಕಾಗಿ ಕೈಕಲೆತು ನಿಂತು ದಾಯಿತು! ಎಲ್ಲಾ ಕಡೆಯೂ ಅವರಿಗೆ ಸೋತುಬಂದೆಯೇಹೊರತು, ನೀನು ಜಯಿಸಿದುದನ್ನು ನಾವು ನೋಡಲಿಲ್ಲ. ಅಷ್ಟೇಕೆ? ಹಿಂದೆ ಇದೇ ದುರ್ಯೋಧನನು ಗಂಧರ್ವರ ಕೈಯಲ್ಲಿ ಸೆರೆಸಿಕ್ಕಿ, ಅವರಿಂದ ಸಾಗಿಸಲ್ಪಡು ತ್ತಿರುವಾಗ, ಇತರ ಸೈನ್ಯಗಳೆಲ್ಲವೂ ಹೆದರದೆ ಧೈರ್ಯದಿಂದ ಎದೆಗೊಟ್ಟು ನಿಂತುವೇಹೊರತು, ಮೊದಲು ಭಯಪಟ್ಟು ಪಲಾಯನಮಾಡಿದವನು ನೀನೇ! ಆಮೇಲೆ ವಿರಾಟನಗರದಲ್ಲಿ ಅರ್ಜುನನಿಂದ ಕೌರವರೆಲ್ಲರೂ ಪರಾ ಜಿತರಾದಾಗ, ನೀನು ನಿನ್ನ ತಮ್ಮಂದಿರೊಡನೆ ತಲೆತಪ್ಪಿಸಿಕೊಂಡು ಎಲ್ಲಿಯೋ ಪಲಾಯನಮಾಡಿದೆ! ಈ ಯುದ್ಧಗಳೊಳಗೆಲ್ಲ ಆ ಅರ್ಜುನನು ಏಕಾಕಿ ಯಾಗಿ ಬಂದು ನಿನ್ನನ್ನಿದಿರಿಸಿದಾಗಲೇ ಅವನನ್ನು ಜಯಿಸಲು ನಿನ್ನಿಂದ ಸಾಧ್ಯವಾಗಲಿಲ್ಲ. ಈಗ ಆ ಶ್ರೀಕೃಷ್ಣನೂ, ಇತರ ಪಾಂಡವರೂ ಒಂದಾಗಿ ಸೇರಿರುವಾಗ, ನೀನು ಅವನನ್ನು ಜಯಿಸಬಲ್ಲೆಯಾ? ಕರ್ಣ! ಬರೀ ಆತ್ಮ ಸ್ತುತಿಯಿಂದ ಫಲವಿಲ್ಲ. ಬಾಯಿಂದಾಡದೆ ಯುದ್ಧದಲ್ಲಿ ನಿನ್ನ ಪರಾಕ್ರಮ ವನ್ನು ತೋರಿಸು. ಜಂಭವನ್ನು ಹೇಳಿಕೊಳ್ಳದೆ ಕಾರ್ಯತಃ ಪರಾಕ್ರಮ ವನ್ನು ತೋರಿಸುವುದೇ ಸತ್ಪುರುಷರ ಲಕ್ಷಣವು. ಶರತ್ಕಾಲದಲ್ಲಿ ನೀರಿಲ್ಲದ

ಮೇಘಗಳು ಗರ್ಜಿಸುವಂತೆ, ಈಗ ನೀನು ಗರ್ಜಿಸಿದುದರಿಂದ ಪ್ರಯೋಜನ ವಿಲ್ಲ. ಓ ಸೂತಪುತ್ರಾ! ಈ ನಿನ್ನ ಗರ್ಜನೆಗಳೆಲ್ಲ ಕೆಲಸಕ್ಕೆ ಬಾರವೆಂಬುದು ನಮ್ಮ ರಾಜನಾದ ದುರ್ಯೋಧನನಿಗೆ ಇನ್ನೂ ತಿಳಿಯಲಿಲ್ಲ. ಸರಿ! ನಿನಗೆ ಇಷ್ಟಬಂದಂತೆ ಕೌರವನ ಮುಂದೆ ಈಗಲೇ ಕೂಗಿಬಿಡು! ನಿನ್ನ ಗರ್ಜನೆಗ ಳೆಲ್ಲ ಆ ಅರ್ಜುನನು ನಿನ್ನ ಕಣ್ಣಿಗೆ ಬೀಳುವವರೆಗೆಮಾತ್ರವೇ! ಯುದ್ಧ ಕ್ಕಾಗಿ ಬಂದ ಆ ಅರ್ಜುನನನ್ನು ನೋಡಿಬಿಟ್ಟಮೇಲೆ, ಈ ನಿನ್ನ ಗರ್ಜನೆಗ ಳನ್ನು ನಾವು ಕೇಳಲಾರೆವು! ಅರ್ಜುನನ ಬಾಣಗಳು ನಿನ್ನಮೇಲೆ ಬೀಳುವ ವರೆಗೆಮಾತ್ರವೇ ನಿನ್ನ ಗರ್ಜನೆಯೇಹೊರತು, ಆ ಬಾಣಗಳು ಬಂದು ಮೈಗೆ ತಾಗಿದಮೇಲೆ, ನಮಗೆ ನಿನ್ನ ಈ ಗರ್ಜನೆಗಳು ದುರ್ಲಭವು. ಕರ್ಣಾ! ಕ್ಷತ್ರಿಯರು ತೋಳುಗಳಲ್ಲಿ ಶೂರರು! ಬ್ರಾಹ್ಮಣರು ಮಾತುಗಳಲ್ಲಿ ಶೂರರು! ಅರ್ಜುನನು ಧನುಸ್ಸಿನಲ್ಲಿ ಶೂರನು! ಕರ್ಣಾ! ನೀನಾದರೋ ಬರೀ ಮನೋರಥಗಳಲ್ಲಿ ಶೂರನು. ಯಾವನು ತನ್ನ ಪರಾಕ್ರಮದಿಂದ ಆ ರುದ್ರ ದೇವನನ್ನೇ ಸಂತೋಷಗೊಳಿಸಿದನೋ, ಆ ಪಾರ್ಥನನ್ನು ಇದಿರಿಸಿ ಹೊಡೆ ಯಬಲ್ಲವನಾವನು? ಇದನ್ನೆಲ್ಲ ಯೋಚಿಸದೆ ನೀನು ಈ ಆತ್ಮಸ್ತುತಿಗಳಿಂದ ನಮ್ಮ ರಾಜನನ್ನೇಕೆ ಮರುಳುಮಾಡುವೆ?" ಎಂದನು. ಕೃಪನ ಈ ಮಾತು ಗಳನ್ನು ಕೇಳಿ ಕರ್ಣನಿಗೆ ತಡೆಯಲಾರದಷ್ಟು ಕೋಪವುಂಟಾಯಿತು. ಆಗ ಕರ್ಣನು ಕೃಪನನ್ನು ನೋಡಿ "ಓ ಬ್ರಾಹ್ಮಣಾ! ಶೂರರ ಗರ್ಜನೆಗಳು ಮಳೆಗಾಲದ ಮೇಘಗಳ ಗರ್ಜನೆಗಳಂತೆ ಸಫಲವೇಹೊರತು ವಿಫಲವಲ್ಲ. ಜೌಳಿಲ್ಲದ ಭೂಮಿಯಲ್ಲಿ ನಟ್ಟ ಬೀಜದಹಾಗೆ ಅಂತವರ ಗರ್ಜನೆಗಳು ಶೀಘ್ರ ದಲ್ಲಿ ಫಲವನ್ನೇ ಕೊಡುವುವು. ಯುದ್ಧರಂಗದಲ್ಲಿ ಶೂರರು ವೀರವಾದಗ ಳನ್ನು ನುಡಿಯುವುದರಲ್ಲಿ ನನಗೇನೂ ದೋಷವು ತೋರುವುದಿಲ್ಲ. ಯುದ್ಧ ಭಾರವನ್ನು ವಹಿಸಿದವರು ತಮ್ಮ ಪರಾಕ್ರಮವನ್ನು ಹೇಳಿಕೊಳ್ಳುವುದು ಸಹ ಜವೇ! ಮನುಷ್ಯನು ಯಾವ ಭಾರವನ್ನು ವಹಿಸುವುದಕ್ಕೆ ಮನಸ್ಸಿನಿಂದ ಸಂಕಲ್ಪಿಸುವನೋ, ದೈವವು ಆ ಕಾರ್ಯಕ್ಕೆ ಅವನಿಗೆ ಸಹಾಯವನ್ನು ಮಾಡ ದಿರದು! ನಾನು ಬಾಯಿಂದ ಆಡಿದರೂ ಅದನ್ನು ಕಾರ್ಯದಿಂದ ಸಾಧಿಸ ತಕ್ಕವನೇ! ನನಗೆ ವ್ಯವಸಾಯವೇ ಬಲವು. ನಾನು ಮನಸ್ಸಿನಿಂದ ಉದ್ದೇ ಶಿಸಿದ ಭಾರವನ್ನು ನಿರ್ವಹಿಸದೆ ಬಿಡತಕ್ಕವನಲ್ಲ. ಕೃಷ್ಣನೊಡನೆಯೂ,

ಇತರ ವೃಷ್ಣಿಗಳೊಡನೆಯೂ ಸೇರಿದ ಪಾಂಡವರನ್ನು ಯುದ್ಧದಲ್ಲಿ ಕೊಂದೇ ಕೊಲ್ಲುವೆನು. ಓ ಬ್ರಾಹ್ಮಣಾ! ಇಲ್ಲಿ ನಾನು ಗರ್ಜಿಸಿದಮಾತ್ರಕ್ಕೆ ಅದರಿಂದ ನಿನಗೆ ಕೆಟ್ಟುಹೋಗುವುದೇನು? ಜಲಪೂರ್ಣವಾದ ಮೇಘಗಳಂತೆ ಶೂರರು ತಮ್ಮ ಸಾಮರ್ಥ್ಯವನ್ನು ಮೊದಲು ತಿಳಿದುಕೊಂಡೇ ಗರ್ಜಿಸುವರೇಹೊರತು ವ್ಯರ್ಥವಾಗಿ ಗರ್ಜಿಸುವುದಿಲ್ಲ. ಈಗ ನಾನು ಕೃಷ್ಣಾರ್ಜುನರನ್ನು ಯುದ್ಧದಲ್ಲಿ ಜಯಿಸಬಲ್ಲೆನೆಂಬ ಭರವಸೆಯಿಂದಲೇ ಗರ್ಜಿಸುತ್ತಿರುವೆನು. ಓ ಗೌತಮಾ! ನನ್ನ ಗರ್ಜನೆಯ ಫಲವನ್ನು ಶೀಘ್ರದಲ್ಲಿಯೇ ನೀನು ನೋಡುವೆ. ಕೃಷ್ಣಸಾತ್ಯಕಿಗಳೊಡಗೂಡಿದ ಪಾಂಡವರನ್ನು, ಅವರ ಎಲ್ಲಾ ಅನುಚರರೊಡನೆ ಈಗಿನ ಯುದ್ಧದಲ್ಲಿ ಕೊಂದು, ಈ ಭೂಮಿಯನ್ನು ನಿಷ್ಕಂಟಕವಾಗಿ ಮಾಡಿ ಈ ದುರ್ಯೋಧನನಿಗೆ ಒಪ್ಪಿಸುವೆನು" ಎಂದನು. ಇದನ್ನು ಕೇಳಿ ಕೃಪನು ತಿರುಗಿ ಕರ್ಣನನ್ನು ನೋಡಿ "ಓ ಸೂತಪುತ್ರಾ! ಈ ವ್ಯರ್ಥಮನೋರಥದ ಪ್ರಲಾಪಗಳಿಂದ ಏನೂ ಪ್ರಯೋಜನವಿಲ್ಲ. ಅವುಗಳನ್ನು ನಾನು ಕೇಳಲಾರೆನು. ಯಾವಾಗಲೂ ನೀನು ಆ ಕೃಷ್ಣಾರ್ಜುನರನ್ನೂ, ಧರ್ಮರಾಜನನ್ನೂ ತುಚ್ಛೀಕರಿಸುತ್ತಲೇ ಇರುವೆ. ಕರ್ಣಾ! ಆ ಕೃಷ್ಣಾರ್ಜುನರು ಸೇರಿದ ಕಡೆಯಲ್ಲಿ ಜಯವೆಂಬುದು ಸಿದ್ಧವು. ಅವರು ಯುದ್ಧವಿಶಾರದರು. ದೇವ ಗಂಧರ್ವ ಯಕ್ಷ ರಾಕ್ಷಸ ದಾನವ ಮಾನವರೇ ಮೊದಲಾಗಿ ಎಲ್ಲರೂ ಸೇರಿ ಯುದ್ಧಕ್ಕೆ ಬಂದರೂ ಅವರನ್ನು ಜಯಿಸಲು ಸಾಧ್ಯವಿಲ್ಲ. ಆ ಧರ್ಮಪುತ್ರನಾದರೂ ಸಾಮಾನ್ಯನಲ್ಲ. ಅವನು ಬ್ರಾಹ್ಮಣಪ್ರಿಯನು. ಸತ್ಯಸಂಧನು. ಜಿತೇಂದ್ರಿಯನು. ಗುರುದೈವಪೂಜಕನು. ಯಾವಾಗಲೂ ಧರ್ಮನಿರತನು. ಶಸ್ತ್ರಾಸ್ತ್ರಗಳಲ್ಲಿಯೂ ಸುಶಿಕ್ಷಿತನು. ಧೀರನು! ಕೃತಜ್ಞನು! ಅವನ ಸಹೋದರರೂ ಕೂಡ ಬಲಾಢ್ಯರು. ಸರ್ವಾಸ್ತ್ರಸುಶಿಕ್ಷಿತರು! ತನ್ನಣ್ಣನ ಕಾರ್ಯದಲ್ಲಿ ನಿತ್ಯಾಸಕ್ತರು. ಪ್ರಾಜ್ಞರು! ಧರ್ಮನಿರತರು! ಯಶಸ್ವಿಗಳು! ಆ ಧರ್ಮರಾಜನ ಅನುಬಂಧಿಗಳೆಲ್ಲರೂ ಇಂದ್ರಪರಾಕ್ರಮವುಳ್ಳವರು. ಆ ಧರ್ಮರಾಜನಲ್ಲಿ ವಿಶೇಷವಾದ ಅನುರಾಗವುಳ್ಳವರು. ಉತ್ತಮಶಸ್ತ್ರಗಳನ್ನು ಧರಿಸಿದವರು. ಇದಲ್ಲದೆ ಆ ಪಾಂಡವರ ಸಹಾಯಕ್ಕಾಗಿ ಬಂದಿರತಕ್ಕವರೆಲ್ಲ ಪ್ರಬಲಪರಾಕ್ರಮಿಗಳು. ಧೃಷ್ಟದ್ಯುಮ್ನನು, ಶಿಖಂಡಿ, ದೌರ್ಮುಖಿ, ಜನ

ಮೇಜಯನು, ಚಂದ್ರಸೇನನು, ರುದ್ರಸೇನನು, ಕೀರ್ತಿಧರ್ಮನು, ಧ್ರುವನು, ಧರನು, ವಸುಚಂದ್ರನು, ದಾಮಚಂದ್ರನು, ಸಿಂಹಚಂದ್ರನು, ಸುತೇಜನನು, ದ್ರುಪದನ ಮಕ್ಕಳು, ಮಹಾಸ್ತ್ರಗಳನ್ನು ಬಲ್ಲ ದ್ರುಪದನು, ತನ್ನ ಸಹೋದರರೊಡಗೂಡಿದ ಮತ್ಸ್ಯರಾಜನು, ಇವರೆಲ್ಲರೂ ಯಾವನ ಜಯಸಾಧನೆಗಾಗಿಯೇ ಆಕ್ಕರೆಯನ್ನು ವಹಿಸಿರುವರೋ, ಅಂತಹ ಧರ್ಮರಾಜನಿಗೆ ಪರಾಜಯವೆಂದರೇನು? ಇದಲ್ಲದೆ ಶತಾನೀಕ, ಸೂರ್ಯದತ್ತ, ಶ್ರುತಾನೀಕ, ಶ್ರುತಧ್ವಜ, ಬಲಾನೀಕ, ಜಯಾನೀಕ, ಜಯಾಶ್ವ, ರಥವಾಹನ, ಚಂದ್ರೋದಯ, ಸಮರಥರೇ ಮೊದಲಾದವರೂ, ನಕುಲಸಹದೇವರೂ, ದ್ರೌಪದಿಯ ಐದುಮಂದಿ ಮಕ್ಕಳೂ, ಘಟೋತ್ಕಚನೆಂಬ ರಾಕ್ಷಸನೂ ಯಾರ ಪ್ರಯೋಜನಕ್ಕಾಗಿ ಬಂದು ಯುದ್ಧಮಾಡುತ್ತಿರುವರೋ, ಅಂತಹ ಪಾಂಡವರಿಗೆ ನಾಶವೆಂದರೇನು? ಇದಲ್ಲದೆ ಇನ್ನೂ ಎಷ್ಟೋ ಮಂದಿ ಮಹಾವೀರರು ಧರ್ಮರಾಜನ ಪಕ್ಷದಲ್ಲಿರುವರು. ಅಷ್ಟೇಕೆ? ದೇವ, ದಾನವ, ಮಾನವ ಯಕ್ಷ ರಾಕ್ಷಸ ಪನ್ನಗಾದಿ ಸಮಸ್ತಭೂತಗಳೊಡಗೂಡಿದ ಜಗತ್ತನ್ನೆಲ್ಲ ಆ ಭೀಮಾರ್ಜುನರಿಬ್ಬರೇ ತಮ್ಮ ಅಸ್ತ್ರವೀರ್ಯದಿಂದ ನಿಶ್ಶೇಷವಾಗಿ ಮಾಡಬಲ್ಲರು. ಧರ್ಮಾತ್ಮನಾದ ಆ ಯುಧಿಷ್ಠಿರನು ತನ್ನ ದೃಷ್ಟಿಯಿಂದಲೇ ಜಗತ್ತನ್ನು ದಹಿಸಬಲ್ಲನು. ಅಪ್ರಮೇಯಪ್ರಭಾವವುಳ್ಳ ಶ್ರೀಕೃಷ್ಣನೂಕೂಡ ಅವರ ಕಾರ್ಯಸಿದ್ಧಿಗಾಗಿ ಕೈಕಟ್ಟಿನಿಂತಿರುವನು. ಕರ್ಣಾ! ಅಂತವರನ್ನು ನೀನು ಜಯಿಸಬಲ್ಲೆಯಾ? ಈಗ ನೀನು ಆ ಶ್ರೀಕೃಷ್ಣನಿಗಿದಿರಾಗಿ ನಿಲ್ಲಬೇಕೆಂದು ಮನಸ್ಸಿನಲ್ಲಿ ಎಣಿಸುವುದೇ ನಿನ್ನ ದೊಡ್ಡ ತಪ್ಪೆಂದು ತಿಳಿ" ಎಂದನು. ಈ ಮಾತನ್ನು ಕೇಳಿ ಕರ್ಣನು ಮತ್ತಷ್ಟು ರೇಗಿದವನಾಗಿ, ಗರ್ವದಿಂದ ನಗುತ್ತ ಕೃಪನನ್ನು ಕುರಿತು "ಓ ಬ್ರಾಹ್ಮಣಾ! ಪಾಂಡವರ ವಿಷಯದಲ್ಲಿ ನೀನು ಹೇಳಿದ ಮಾತು ನಿಜವೇ! ನೀನು ಹೇಳಿದಂತೆ ಇನ್ನೂ ಎಷ್ಟೋ ಗುಣವಿಶೇಷಗಳು ಪಾಂಡರಲ್ಲಿರಬಹುದು. ಅವರು ದೇವದಾನವ ಯಕ್ಷ ಗಂಧರ್ವ ಪಿಶಾಚ ರಾಕ್ಷಸರೇ ಮೊದಲಾಗಿ ಎಂಥವರಿಗೂ ಯುದ್ಧದಲ್ಲಿ ಅಜೇಯರೂ ಆಗಿರಬಹುದು. ಇಂದ್ರನೊಡಗೂಡಿದ ದೇವತೆಗಳೂ ಅವನಿಗೆ ಸೋಲಬಹುದು. ಆದರೂ ನಾನು ಆ ಪಾರ್ಥನನ್ನು ಜಯಿಸುವೆನು. ಇಂದ್ರದತ್ತವಾದ ಶಕ್ತಿಯಿಂದ ನಾನು ಅವನನ್ನು ಕೊಲ್ಲುವೆನು!

ಓ ಕೃಪಾಚಾರ್ಯನೇ! ಇಂದ್ರನು ನನಗೆ ಅಮೋಘವಾದ ಶಕ್ತಿಯೊಂದನ್ನು ಕೊಟ್ಟಿರುವನು. ಆದರಿಂದಲೇ ನಾನು ಆ ಅರ್ಜುನನನ್ನು ಈಗಿನ ಯುದ್ಧ ದಲ್ಲಿ ಕೊಲ್ಲುವೆನು. ಆ ಅರ್ಜುನನು ಹತನಾದರೆ, ಅವನ ಸಹೋದರರು ಅರ್ಜುನರಹಿತವಾದ ಭೂಮಿಯನ್ನು ತಾವು ಅನುಭವಿಸುವುದಕ್ಕೆ ಹೇಗೂ ಇಷ್ಟಪಡಲಾರರು. ಅವರೂ ಪ್ರಾಣತ್ಯಾಗವನ್ನು ಮಾಡುವರು. ಆಗ ಸಮು ದ್ರಾಂತವಾದ ಸಮಸ್ತಭೂಮಿಯೂ ಅಪ್ರಯತ್ನವಾಗಿ ದುರ್ಯೋಧನನ ವಶ ವಾಗುವುದು. ಈ ಉಪಾಯದಿಂದಲೇ ನಮಗೆ ಸರ್ವಾರ್ಥಗಳೂ ಸಿದ್ಧಿಸು ವುದರಲ್ಲಿ ಸಂದೇಹವಿಲ್ಲ. ಇದನ್ನೆಲ್ಲ ದೂರದೃಷ್ಟಿಯಿಂದ ತಿಳಿದೇ ನಾನು ಗರ್ಜಿಸುವೆನೆಂದು ತಿಳಿ. ನೀನಾದರೋ ಬ್ರಾಹ್ಮಣನು. ಅದರಲ್ಲಿಯೂ ವೃದ್ಧನು. ಯುದ್ಧಮಾಡಲು ಶಕ್ತಿಯಿಲ್ಲದವನು. ಇಷ್ಟೇ ಅಲ್ಲದೆ ಒಳಗೊ ಳಗೆ ನೀನು ಪಾಂಡವರಲ್ಲಿ ಪಕ್ಷಪಾತವುಳ್ಳವನು. ಅವರಲ್ಲಿರುವ ಮೋಹದಿಂ ದಲೇ ನೀನು ಬುದ್ಧಿಗೆಟ್ಟು ನನ್ನನ್ನು ಅವಮಾನಿಸುತ್ತಿರುವೆ. ಓ ಬ್ರಾಹ್ಮ ಣಾ! ನನಗೆ ಅಪ್ರಿಯವಾದ ಇಂತಹ ಮಾತುಗಳು ತಿರುಗಿ ನಿನ್ನ ಬಾಯಿಂದ ಹೊರಟಪಕ್ಷದಲ್ಲಿ, ಇದೋ! ಇದೇಖಡ್ಗದಿಂದ ನಿನ್ನ ನಾಲಗೆಯನ್ನು ಕತ್ತ ರಿಸಿಬಿಡುವೆನು. ಓ ಬುದ್ಧಿಗೆಟ್ಟ ಬ್ರಾಹ್ಮಣಾ! ಕೌರವರನ್ನೂ, ಅವರ ಸೈನ್ಯ ಗಳನ್ನೂ ಹೆದರಿಸಿ, ಅವರಿಗೆ ಉತ್ಸಾಹಭಂಗವನ್ನುಂಟುಮಾಡುವುದಕ್ಕಾಗಿ ನೀನು ಇಲ್ಲಿ ಪಾಂಡವರನ್ನು ಸುಮ್ಮನೆ ಸ್ತೋತ್ರಮಾಡುತ್ತಿರುವೆ. ಎಲಾ! ಗೌತಮಾ! ಈಗಲೂ ನಾನೊಂದು ಮಾತನ್ನು ಹೇಳುವೆನು ಕೇಳು. ದುರ್ಯೋಧನನು, ದ್ರೋಣನು, ಶಕುನಿ, ದುರ್ಮುಖನು, ಜಯನು, ದುಶ್ಶಾ ಸನನು, ವೃಷಸೇನನು, ಶಲ್ಯನು, ಸೋಮದತ್ತನು, ಭೂರಿ, ಅಶ್ವತ್ಥಾಮನು, ವಿವಿಂಶತಿ, ಕೊನೆಗೆ ನೀನೂ ಒಬ್ಬನು, ಇಷ್ಟುಮಂದಿಯೂ ಯುದ್ಧಕ್ಕಾಗಿ ಕವಚವನ್ನು ತೊಟ್ಟು ನಿಂತಮೇಲೆ, ಇಂದ್ರಪರಾಕ್ರಮವುಳ್ಳವನಾದರೂ ಇವರನ್ನು ಜಯಿಸಬಲ್ಲನೆ? ಎಲ್ಲರೂ ಯುದ್ಧವಿಶಾರದರು. ಶೂರರು. ಅಸ್ತ್ರಗಳಲ್ಲಿ ಸುಶಿಕ್ಷಿತರು. ಬಲಾಢ್ಯರು. ಯುದ್ಧದಲ್ಲಿ ಸ್ವರ್ಗಕ್ಕಾಗಿ ಆಸೆ ಪಡತಕ್ಕವರು. ಧರ್ಮಜ್ಞರು. ಇಂಥವರು ದೇವತೆಗಳನ್ನಾದರೂ ಯುದ್ಧ ದಲ್ಲಿ ಕೊಲ್ಲಬಲ್ಲರು. ಇವರೆಲ್ಲರೂ ಪಾಂಡವರನ್ನು ಕೊಂದು ದುರ್ಯೋಧನ ನಿಗೆ ಜಯವನ್ನು ಕೈಗೂಡಿಸುವುದಕ್ಕಾಗಿ ಕೈಕಟ್ಟಿ ಬಂದಿರುವರು. ಆದರೆ,

ಓ ಬ್ರಾಹ್ಮಣಾ! ಬಲಾಢ್ಯರಿಗಾದರೂ ಜಯವೆಂಬುದು ದೈವಾಯತ್ತವು. ಇದಕ್ಕೆ ನಮಗೆ ಬೇರೆ ನಿದರ್ಶನವೇಕೆ? ಮಹಾಬಾಹುವಾದ ಭೀಷ್ಮನು ಶಿಖಂಡಿಗೆ ಸೋತು, ಅವನ ಬಾಣಗಳಿಂದ ಪೀಡಿತನಾಗಿ ಮಲಗಿರುವನು. ವಿಕರ್ಣ, ಚಿತ್ರಸೇನ, ಬಾಹ್ಲೀಕ, ಜಯದ್ರಥ, ಭೂರಿಶ್ರವಸ್ಸು, ಜಯ, ಜಲಸಂಧ, ಸುದಕ್ಷಿಣ, ಶಲ, ಭಗದತ್ತರೇ ಮೊದಲಾಗಿ ದೇವತೆಗಳಿಗೂ ದುರ್ಜಯರೆನಿಸಿದ ಇನ್ನೂ ಅನೇಕರಾಜರು ತಮಗಿಂತಲೂ ಅಲ್ಪಬಲವುಳ್ಳ ಪಾಂಡವರಿಂದ ಯುದ್ಧದಲ್ಲಿ ಹತರಾದರು. ಇದೆಲ್ಲಾ ದೈವವ್ಯಾಪಾರವಲ್ಲದೆ ಬೇರೇನು? ಓ ಪುರುಷಾಧಮಾ! ನೀನು ದುರ್ಯೋಧನನ ಪಕ್ಷದಲ್ಲಿದ್ದುಕೊಂಡು, ಅವನಿಗೆ ವೈರಿಗಳಾದ ಪಾಂಡವರನ್ನೇ ಯಾವಾಗಲೂ ಸ್ತುತಿಸುತ್ತಿರುವೆ. ಅವರಲ್ಲಿಯೂ ನೂರು ಸಾವಿರಸಂಖ್ಯೆಯಿಂದ ವೀರರು ಹತರಾಗಲಿಲ್ಲವೆ? ಕೌರವಸೈನ್ಯಗಳೊಡನೆ ಪಾಂಡವಸೈನ್ಯವೂ ಅನೇಕವಾಗಿ ಕ್ಷೀಣಿಸಲಿಲ್ಲವೆ? ಹೀಗಿರುವಾಗ ಪಾಂಡವರಲ್ಲಿ ನೀನು ಹೇಳುವ ಅಧಿಕಪ್ರಭಾವವೇನೂ ನನಗೆ ತೋರಲಿಲ್ಲ. ಓ ಬ್ರಾಹ್ಮಣಾ! ಹೆಚ್ಚುಮಾತಿನಿಂದೇನು? ನಾನು ಈ ರಾಜನ ಹಿತಕ್ಕಾಗಿ ಈ ಯುದ್ಧದಲ್ಲಿ ನನ್ನ ಶಕ್ತಿಮೀರಿ ಪ್ರಯತ್ನಿಸುವೆನು. ಇದರ ಮೇಲೆ ಜಯವೆಂಬುದು ದೈವವಶವಾಗಿರುವುದು" ಎಂದನು.

ಇದು ನೂರ ಐವತ್ತೊಂಭತ್ತನೆಯ ಅಧ್ಯಾಯವು.

---

ಕೃಪನ ಧಿಕ್ಕಾರವಾಕ್ಯವನ್ನು ಕೇಳಲಾರದೆ, ಅಶ್ವತ್ಥಾಮನು ಕರ್ಣನನ್ನು ವಧಿಸುವುದಕ್ಕಾಗಿ ಎದ್ದುಬಂದುದು. ಕೃಪದುರ್ಯೋಧನರು ಅವನನ್ನು ತಡೆದುದು. ಅರ್ಜುನನಿಂದ ಕರ್ಣನು ಪರಾಜಿತನಾದಾಗ ದುರ್ಯೋಧನನು ಯುದ್ಧಕ್ಕಾಗಿ ಅಶ್ವತ್ಥಾಮನನ್ನು ಕಳುಹಿಸಿದುದು.

ಮಹಾರಾಜಾ! ಹೀಗೆ ಕರ್ಣನು ಕೃಪನನ್ನು ಧಿಕ್ಕರಿಸಿ ನುಡಿದ ಪರುಷವಾಕ್ಯವನ್ನು ಕೇಳಲಾರದೆ, ಅಶ್ವತ್ಥಾಮನು ಕೋಪದಿಂದ ಕತ್ತಿಯನ್ನೆತ್ತಿಕೊಂಡು, ಸಿಂಹವು ಆನೆಯಮೇಲೆ ಬೀಳುವಂತೆ ದುರ್ಯೋಧನನು ನೋಡು

ತ್ತಿರುವಾಗಲೇ ಆ ಕರ್ಣನನ್ನು ಕೊಲ್ಲುವುದಕ್ಕಾಗಿ ಮುಂದುವರಿದು "ಎಲಾ! ಸೂತಾಧಮಾ! ಕರ್ಣಾ! ಅರ್ಜುನನಲ್ಲಿ ನಿಜವಾಗಿರುವ ಗುಣವಿಶೇಷಗಳನ್ನು ನನ್ನ ಮಾವನು ರಾಜನಿಗೆ ತಿಳಿಸುತ್ತಿದ್ದಾಗ, ಬುದ್ಧಿಗೆಟ್ಟ ನೀನು ದ್ವೇಷಬುದ್ಧಿಯಿಂದ ಆಚಾರ್ಯನನ್ನು ಹೆದರಿಸುತ್ತಿರುವೆ. ಕೇವಲ ಆತ್ಮಸ್ತುತಿರತನಾದ ನೀನು, ಮಹತ್ತಾದ ಗರ್ವದಿಂದ ಯಾರನ್ನೂ ಲಕ್ಷ್ಯಮಾಡದೆ, ಲೋಕೈಕಧನುರ್ಧರನಾದ ಅರ್ಜುನನನ್ನೇ ತುಚ್ಛೀಕರಿಸುತ್ತಿರುವೆ. ನಿನ್ನ ದರ್ಪದಿಂದ ಲೋಕದಲ್ಲಿ ಧನುರ್ಧಾರಿಯೊಬ್ಬನನ್ನೂ ಗಣನೆಗೆ ತಾರದಿರುವೆ. ನರಾಧಮಾ! ಅರ್ಜುನನು ನಿನ್ನ ಕಣ್ಣೆದಿರಾಗಿಯೇ ಜಯದ್ರಥನನ್ನು ಕೊಂದಾಗ, ನಿನ್ನ ವೀರ್ಯವೆಲ್ಲಿಹೋಯಿತು? ನಿನ್ನ ಅಸ್ತ್ರಗಳೆಲ್ಲಿ ಹೋಗಿದ್ದುವು? ನಿನ್ನನ್ನು ಜಯಿಸಿದಮೇಲಲ್ಲವೇ ಅರ್ಜುನನು ಆ ಜಯದ್ರಥನನ್ನು ಕೊಂದನು? ಹಿಂದೆ ಯಾವನು ಸಾಕ್ಷಾತ್ ರುದ್ರನನ್ನೇ ಯುದ್ಧದಲ್ಲಿ ಮೆಚ್ಚಿಸಿದನೋ, ಆ ಅರ್ಜುನನನ್ನು ನೀನು ಜಯಿಸುವೆನೆಂದು ಇಲ್ಲದ ಮನೋರಥಗಳನ್ನು ಇಟ್ಟುಕೊಂಡಿರುವೆ. ಇಂದ್ರಾದಿ ದೇವತೆಗಳೂ ಕೃಷ್ಣಸಹಾಯವುಳ್ಳ ಆ ಅರ್ಜುನನನ್ನು ಜಯಿಸಲಾರರು. ಅವನು ಲೋಕೈಕವೀರನು. ಎಂತವರಿಗೂ ದುರ್ಜಯನು. ಅಂತವನನ್ನು ಈ ಸಾಮಾನ್ಯರಾಜರೊಡನೆ ಸೇರಿ ನೀನು ಜಯಿಸುವೆಯಾ? ಎಲ ಬುದ್ಧಿಗೆಟ್ಟವನೇ! ಇದೋ! ನೋಡು! ಈಗಲೇ ನಿನ್ನ ತಲೆಯನ್ನು ನಿನ್ನ ಶರೀರದಿಂದ ಬೇರ್ಪಡಿಸುವೆನು! ಬಂದು ನಿಲ್ಲು" ಎಂದನು. ಅಶ್ವತ್ಥಾಮನು ಹೀಗೆ ಕೋಪದಿಂದ ಖಡ್ಗಪಾಣಿಯಾಗಿ ಕರ್ಣನಮೇಲೆ ಬೀಳಲು ಹೋಗುವುದನ್ನು ಕಂಡೊಡನೆ, ದುರ್ಯೋಧನನೂ, ಕೃಪನೂ ಥಟ್ಟನೆ ಬಂದು ಅವನನ್ನು ತಡೆದರು. ಆಗ ಕರ್ಣನು "ರಾಜಾ! ಬಿಡು! ಬಿಡು! ಅವನನ್ನು ಬಿಟ್ಟುಬಿಡು. ತಾನೇ ಶೂರನೆಂದೂ, ಯುದ್ಧಸಮರ್ಥನೆಂದೂ ಹೇಳಿಕೊಳ್ಳುತ್ತಿರುವ ಆ ಬ್ರಾಹ್ಮಣಾಧಮನು ಮುಂದೆ ಬರಲಿ. ನನ್ನ ವೀರ್ಯಕ್ಕೆ ಅವನು ಆಹುತಿಯಾಗಲಿ ಬಿಡು" ಎಂದನು. ಆಗ ಅಶ್ವತ್ಥಾಮನು "ಓ ಬುದ್ಧಿಗೆಟ್ಟ ಸೂತಪುತ್ರಾ! ನೀನು ಎಷ್ಟು ಬಗುಳಿದರೂ ಬಗುಳು! ನಾವು ನಿನ್ನನ್ನು ಈಗ ಮನ್ನಿಸಬೇಕಾಗಿದೆ. ಈ ನಿನ್ನ ಮಿತಿಮೀರಿದ ದರ್ಪವನ್ನು ಶೀಘ್ರದಲ್ಲಿಯೇ ಅರ್ಜುನನು ಮುರಿಯುವನು" ಎಂದನು. ಆಗ ದುರ್ಯೋಧನನು "ಗುರು

ಕುಮಾರಾ! ಪ್ರಸನ್ನನಾಗು! ಮನ್ನಿಸು! ಇದು ಕೋಪಕ್ಕೆ ಕಾಲವಲ್ಲ. ಈ ಕರ್ಣನ ಮಾತಿಗಾಗಿ ನೀನು ಕೋಪಿಸದೆ ಮನ್ನಿಸು. ಮುಖ್ಯವಾಗಿ ಈಗಿನ ಸ್ಥಿತಿಯಲ್ಲಿ ನನ್ನ ಕಾರ್ಯಭಾರವು ನಿಮ್ಮೆಲ್ಲರಲ್ಲಿಯೂ ಸಮಾನವಾಗಿ ಬಿದ್ದಿರುವುದು. ನೀನು, ಈ ಕರ್ಣನು, ನಿನ್ನ ಮಾವನಾದ ಕೃಪನು, ನಿನ್ನ ಜನಕನಾದ ದ್ರೋಣನು, ಶಲ್ಯನು, ಶಕುನಿ, ಇವರೆಲ್ಲರಮೇಲೆ ಈಗಿನ ಕಾರ್ಯಭಾರವು ಬಿದ್ದಿರುವುದರಿಂದ, ನೀನು ಮನ್ನಿಸಿಬಿಡು. ಅದೋ! ಆಗಲೇ ಪಾಂಡವರು ಕರ್ಣನೊಡನೆ ಯುದ್ಧಮಾಡಬೇಕೆಂಬ ಆತುರದಿಂದ ನಾಲ್ಕು ಕಡೆಗಳಿಂದಲೂ ಅವನನ್ನು ಕರೆಯುತ್ತ ಬರುತ್ತಿರುವುದನ್ನು ನೋಡು" ಎಂದನು. ರಾಜನಾದ ದುರ್ಯೋಧನನೇ ಕೈಹಿಡಿದು ಸಮಾಧಾನೋಕ್ತಿಗಳನ್ನು ಹೇಳಿದಮೇಲೆ, ಅಶ್ವತ್ಥಾಮನು ತನ್ನ ಕೋಪವನ್ನು ಅಡಗಿಸಿಕೊಂಡು ಶಾಂತನಾದನು. ಆಮೇಲೆ ಉದಾರಬುದ್ಧಿಯುಳ್ಳ ಕೃಪಾಚಾರ್ಯನೂ ಕೂಡ ತನ್ನ ಕೋಪವನ್ನು ಬಿಟ್ಟು ಸೌಮ್ಯಸ್ವಭಾವದಿಂದ ಕರ್ಣನನ್ನು ಕುರಿತು "ಓ ಸೂತಪುತ್ರಾ! ನೀನು ಬುದ್ಧಿಗೆಟ್ಟು ಬಾಯಿಗೆ ಬಂದಹಾಗೆ ಮಾತುಗಳನ್ನಾಡಿದೆ. ನಾವು ಅಪರಾಧವನ್ನು ಮನ್ನಿಸಿರುವೆವು. ಈ ನಿನ್ನ ಗರ್ವವನ್ನು ಶೀಘ್ರದಲ್ಲಿಯೇ ಅರ್ಜುನನು ಮುರಿಯುವನು" ಎಂದನು. ಇಷ್ಟರಲ್ಲಿಯೇ ಅತ್ತಲಿಂದ ಪಾಂಡವರೂ, ಪಾಂಚಾಲರೂ ಕರ್ಣನೊಡನೆ ಯುದ್ಧಕ್ಕೆ ಸಿದ್ಧರಾಗಿ, ವೀರವಾದಗಳನ್ನು ನುಡಿಯುತ್ತ ನಾಲ್ಕುಕಡೆಗಳಿಂದಲೂ ಬಂದು ಕರ್ಣನನ್ನು ಮುತ್ತಿದರು. ರಥಿಕಶ್ರೇಷ್ಠನಾದ ಕರ್ಣನು ಧನುಸ್ಸನ್ನು ಎತ್ತಿಕೊಂಡು ದೇವಗಣಗಳಿಂದ ಪರಿವೃತನಾದ ಇಂದ್ರನಂತೆ ಕೌರವವೀರರಿಂದ ಪರಿವೃತನಾಗಿ, ಅವರನ್ನಿದಿರಿಸುವುದಕ್ಕೆ ತೊಡಗಿದನು. ಪಾಂಡವರೊಡನೆ ಕರ್ಣನಿಗೆ ಭಯಂಕರ ಯುದ್ಧವಾಯಿತು. ಉಭಯಪಕ್ಷದಲ್ಲಿಯೂ ಸಿಂಹನಾದಗಳು ಹೆಚ್ಚಿದುವು. ಆಗ ಪಾಂಡವರೂ, ಪಾಂಚಾಲರೂ ಕರ್ಣನನ್ನು ಹುಡುಕುತ್ತ ಒಬ್ಬರಿಗೊಬ್ಬರು "ಇದೋ! ಕರ್ಣನು! ಕರ್ಣನೆಲ್ಲಿ? ಕರ್ಣಾ! ಮುಂದೆ ಬಂದು ನಿಲ್ಲು! ದುರಾತ್ಮಾ! ಎಲ ನರಾಧಮಾ! ನಮ್ಮೊಡನೆ ಯುದ್ಧಮಾಡು" ಎಂದರು. ಇನ್ನು ಕೆಲವರು ಕೋಪದಿಂದ "ಕೊಲ್ಲಿರಿ! ಮಹಾಗರ್ವಿಯಾಗಿ ಅಲ್ಪಬುದ್ಧಿಯುಳ್ಳ ಈ ಸೂತಪುತ್ರನನ್ನು ಈಗಲೇ ವಧಿಸಿರಿ! ಇವನು ಭೂಮಿಯಲ್ಲಿ ಜೀವಿಸಿ ಪ್ರಯೋಜನವಿಲ್ಲ.

ಎಲ್ಲಾ ರಾಜರೂ ಒಂದಾಗಿ ಸೇರಿ ಅವನನ್ನು ಕೊಲ್ಲಿರಿ! ಇವನು ಪಾಂಡವರಿಗೆ ಪರಮವೈರಿ! ಯಾವಾಗಲೂ ಪಾಪಬುದ್ಧಿಯುಳ್ಳವನು. ಇವನೇ ಎಲ್ಲಾ ಅನರ್ಥಗಳಿಗೂ ಮೂಲವು. ದುರ್ಯೋಧನನಿಗೆ ಅತ್ಯಂತ ಪ್ರಿಯತಮನು. ಅವನು ಹೇಳಿದಂತೆ ನಡೆಯತಕ್ಕವನು. ಇವನನ್ನು ಮೊದಲು ಕೊಲ್ಲಿರಿ" ಎಂದು ಹೇಳುತ್ತ, ಅನೇಕಮಹಾರಥರು ಕರ್ಣನನ್ನು ಕೊಲ್ಲುವುದಕ್ಕಾಗಿ ದೊಡ್ಡ ಬಾಣವರ್ಷಗಳೊಡನೆ ಮುಂದೆ ಬಂದರು. ಆದರೇನು? ಅವರ ಆರ್ಭಟಕ್ಕೆ ಕರ್ಣನು ಸ್ವಲ್ಪಮಾತ್ರವೂ ಹೆದರಲಿಲ್ಲ. ಸಮುದ್ರದಂತೆ ಅಪಾರವಾದ ಆ ಶತ್ರುಸೈನ್ಯವನ್ನು ನೋಡಿ ಕರ್ಣನು ಮತ್ತಷ್ಟು ಯುದ್ಧೋತ್ಸಾಹದಿಂದ, ನಿನ್ನ ಮಗನಿಗೆ ಆ ಯುದ್ಧದಲ್ಲಿ ತನ್ನಿಂದಾದಷ್ಟು ಪ್ರಿಯವನ್ನುಂಟುಮಾಡಬೇಕೆಂಬ ದೃಢಸಂಕಲ್ಪದೊಡನೆ, ತನ್ನ ಸುತ್ತಲೂ ಮುತ್ತಿದ್ದ ಸೈನ್ಯಗಳನ್ನೆಲ್ಲ ಚದರಿಸುತ್ತಬಂದನು. ಶತ್ರುರಾಜರೂ ನೂರುಸಾವಿರಲೆಕ್ಕದಿಂದ ಧನುರ್ಧಾರಿಗಳಾಗಿ ನಿಂತು ಕರ್ಣನಮೇಲೆ ಬಾಣಗಳನ್ನು ಕರೆದರು. ಇವನೂ ತನ್ನ ಬಾಣವರ್ಷದಿಂದ ಅವರ ಬಾಣಗಳನ್ನು ತಡೆಯುತ್ತಿದ್ದನು. ಹೀಗೆ ಪ್ರತಿಗೆ ಪ್ರತಿಯಾಗಿ ಪರಾಕ್ರಮವನ್ನು ತೋರಿಸುತ್ತಿದ್ದ ಅವರಿಬ್ಬರ ಯುದ್ಧವು ದೇವಾಸುರ ಯುದ್ಧದಂತೆ ಅತಿಪ್ರಬಲವಾಯಿತು. ಮಹಾರಾಜಾ! ನಾಲ್ಕುಕಡೆಗಳಿಂದಲೂ ಅನೇಕ ರಾಜರು ಕರ್ಣನನ್ನು ಸುತ್ತಿಮುತ್ತಿ ಹೊಡೆಯುತ್ತಿದ್ದರೂ, ಕರ್ಣನು ಅವರನ್ನೆಲ್ಲ ತನ್ನ ಹಸ್ತವೇಗದಿಂದ ನಿವಾರಿಸುತ್ತಿದ್ದನು. ಕರ್ಣನ ಆಶ್ಚರ್ಯಕರವಾದ ಹಸ್ತಲಾಘವವನ್ನು ಆಗ ನಾವು ನೋಡಿದೆವು. ಮಹಾರಥನಾದ ಕರ್ಣನು ಶತ್ರುಗಳ ಬಾಣಸಮೂಹಗಳನ್ನು ನಿವಾರಿಸಿದುದಲ್ಲದೆ, ಅವರ ರಥಗಳನ್ನೆಲ್ಲ ತನ್ನ ಬಾಣಗಳಿಂದ ಮುಚ್ಚಿದನು. ಆ ರಾಜರ ರಥಾಶ್ವಗಳು, ಧ್ವಜಗಳು, ಛತ್ರಗಳು, ನೊಗ, ಮೂಕಿ, ಇವುಗಳೊಳಗೆಲ್ಲ ಕರ್ಣನಾಮಾಂಕಿತಗಳಾದ ಬಾಣಗಳೇ ಕಾಣುತ್ತಿದ್ದುವು. ಕರ್ಣನ ಬಾಣಗಳಿಂದ ಆ ರಾಜರೆಲ್ಲರೂ ಬಹಳವಾಗಿ ನೊಂದು, ಚಳಿಗೆ ಸಿಕ್ಕಿದ ದನಗಳಂತೆ ತತ್ತಳಿಸುತ್ತಿದ್ದರು. ಆನೆ, ಕುದುರೆ ಮುಂತಾದ ಸೇನಾಂಗಗಳು ಅಸಂಖ್ಯಾತವಾಗಿ ಕೊಲೆಗೀಡಾದುವು. ಎಷ್ಟೋ ಮಂದಿ ರಥಿಕರು ಸತ್ತರು! ಅನೇಕ ಶೂರರ ತಲೆಗಳೂ, ತೋಳುಗಳೂ ಅಲ್ಲಲ್ಲಿ ಕತ್ತರಿಸಿಬಿದ್ದು, ಆ ಅವಯವಗಳನ್ನೇ ಭೂಮಿಗೆಲ್ಲ ಹರಡಿದಂತೆ ಕಾಣಿಸಿತು. ಹತರಾಗಿಬಿದ್ದವರು, ಅಗಲೇ

ಕೊಲೆಗೀಡಾಗುತ್ತಿದ್ದವರು, ಅಲ್ಲಲ್ಲಿ ದೀನಧ್ವನಿಯಿಂದ ಕೂಗುತ್ತಿದ್ದವರು, ಇವರಿಂದ ರಣಭೂಮಿಯೆಲ್ಲ ಭಯಂಕರವಾದ ಯಮನಗರಿಯಂತೆ ಕಾಣಿಸುತ್ತಿದ್ದಿತು. ಕರ್ಣನ ಈ ಅದ್ಭುತಪರಾಕ್ರಮವನ್ನು ನೋಡಿ ದುರ್ಯೋಧನನು ಅಶ್ವತ್ಥಾಮನ ಬಳಿಗೆ ಬಂದು "ಆಚಾರ್ಯಪುತ್ರಾ! ಅದೋ! ಅತ್ತಲಾಗಿ ಕರ್ಣನೊಬ್ಬನೇ ಅನೇಕರಾಜರೊಡನೆ ಯುದ್ಧಮಾಡುತ್ತಿರುವನು. ಹಿಂದೆ ಷಣ್ಮುಖನ ಕೊಲೆಗೀಡಾಗಿ ಚದರುತ್ತಿರುವ ದೈತ್ಯಸೇನೆಯಂತೆ ಕರ್ಣನ ಬಾಣವೇಗವನ್ನು ಸಹಿಸಲಾರದೆ ಪಾಂಡವಸೈನ್ಯವು, ಪಲಾಯನಮಾಡುತ್ತಿರುವುದು ನೋಡು. ಪಾಂಡವಸೈನ್ಯವು ಚದರಿಸಲ್ಪಡುತ್ತಿರುವುದನ್ನು ನೋಡಿ ಅರ್ಜುನನು ಕುಪಿತನಾಗಿ, ಕರ್ಣನನ್ನು ಕೊಲೆಮಾಡಬೇಕೆಂದು ಬರುತ್ತಿರುವನು. ಆದುದರಿಂದ ಈಗಲೇ ನೀನು ಕರ್ಣನ ರಕ್ಷಣೆಗಾಗಿ ಅಲ್ಲಿಗೆ ಹೋಗಿ ಸೇರಬೇಕು. ನಮ್ಮ ಕಣ್ಣೆದಿರಾಗಿಯೇ ಮಹಾರಥನಾದ ಕರ್ಣನು ಅರ್ಜುನನ ಕೊಲೆಗೀಡಾಗದಂತೆ ಯತ್ನಿಸು" ಎಂದನು. ಒಡನೆಯೇ ಅಶ್ವತ್ಥಾಮನೂ, ಕೃಪನೂ, ಶಲ್ಯನೂ, ಮಹಾರಥನಾದ ಕೃತವರ್ಮನೂ ಒಂದಾಗಿ ಸೇರಿ, ಕರ್ಣನ ರಕ್ಷಣೆಗಾಗಿ ಹೊರಟರು. ಅರ್ಜುನನೂಕೂಡ ಪಾಂಚಾಲವೀರರೊಡಗೂಡಿ ಇಂದ್ರನು ವೃತ್ರನನ್ನು ಇದಿರಿಸುವಂತೆ ಕರ್ಣನನ್ನು ಇದಿರಿಸಿಬಂದನು" ಎಂದನು.

ಧೃತರಾಷ್ಟ್ರನು "ಸಂಜಯಾ! ಮುಂದೆ ನಡೆದುದೇನು? ಅರ್ಜುನನು ಕಾಲಾಂತಕನಂತೆ ಕೋಪದಿಂದ ಬರುತ್ತಿರುವಾಗ ಕರ್ಣನು ಮುಂದೇನುಮಾಡಬೇಕೆಂದಿದ್ದನು? ಕರ್ಣನು ಬಾಲ್ಯದಿಂದಲೂ ಅರ್ಜುನನಿಗೆ ಪ್ರತಿಸ್ಪರ್ಧಿಯಾಗಿಯೇ ಇದ್ದವನು. ಈ ಯುದ್ಧದಲ್ಲಿ ತಾನು ಅರ್ಜುನನನ್ನು ಹೇಗಾದರೂ ಜಯಿಸಬೇಕೆಂದು ಆತುರಗೊಂಡಿದ್ದವನು. ತನಗೆ ನಿತ್ಯವೈರಿಯಾದ ಅರ್ಜುನನು ಕೋಪಾವೇಶದಿಂದ ತನ್ನನ್ನಿದಿರಿಸಿಬಂದಾಗ ಕರ್ಣನು ಮಾಡಿದುದೇನು?" ಎಂದನು. ಅದಕ್ಕಾ ಸಂಜಯನು "ಮಹಾರಾಜಾ! ಕರ್ಣನು ಅದಕ್ಕಾಗಿ ಸ್ವಲ್ಪವೂ ಹೆದರಲಿಲ್ಲ. ಮಹಾಗಜವು ಪ್ರತಿಗಜವನ್ನು ಹೇಗೋ ಹಾಗೆ, ಕರ್ಣನೂ ಧೈರ್ಯದಿಂದ ಅರ್ಜುನನನ್ನು ಇದಿರಿಸಿಹೋದನು. ಒಡನೆಯೇ ಅರ್ಜುನನು ಕರ್ಣನಮೇಲೆ ಬಾಣಗಳನ್ನು ವರ್ಷಿಸಿ

ದನು. ಕರ್ಣನು ಪ್ರತಿಬಾಣಗಳನ್ನು ಬಿಟ್ಟನು. ಇಬ್ಬರೂ ಬಾಣವರ್ಷಗಳಿಂದ ಒಬ್ಬರನ್ನೊಬ್ಬರು ಮುಚ್ಚಿದರು. ಆಮೇಲೆ ಕರ್ಣನು ತೀವ್ರವಾದ ಮೂರು ಬಾಣಗಳನ್ನು ಅರ್ಜುನನಿಗೆ ಗುರಿಯಿಟ್ಟು ಹೊಡೆದನು. ಅದನ್ನು ಸಹಿಸಲಾರದೆ ಅರ್ಜುನನು ಅದಕ್ಕಿಂತಲೂ ತೀವ್ರವಾದ ಮೂವತ್ತುಬಾಣಗಳನ್ನು ಕರ್ಣನಮೇಲೆ ಪ್ರಯೋಗಿಸಿದನು. ಆಮೇಲೆ ಒಂದು ತೀಕ್ಷ್ಣವಾದ ನಾರಾಚವನ್ನು ಕರ್ಣನ ಬಲಭುಜಕ್ಕೆ ಹೊಡೆದನು. ಅದರಿಂದ ಕರ್ಣನ ಕೈಯಲ್ಲಿದ್ದ ಬಿಲ್ಲು ಜಾರಿಬಿದ್ದಿತು. ಒಡನೆಯೇ ಕರ್ಣನು ಬೇರೆ ಬಿಲ್ಲನ್ನೆತ್ತಿಕೊಂಡು, ತನ್ನ ಹಸ್ತವೇಗದಿಂದ ಅರ್ಜುನನಮೇಲೆ ಎಡೆಬಿಡದೆ ಬಾಣವರ್ಷವನ್ನು ಕರೆದನು. ಅರ್ಜುನನು ಪ್ರತಿಬಾಣಗಳಿಂದ ಅವುಗಳನ್ನು ಮುರಿದನು. ಇಬ್ಬರೂ ಪ್ರತಿಗೆ ಪ್ರತಿಯಾಗಿ ಎಡೆಬಿಡದೆ ಬಾಣಗಳನ್ನು ಬಿಡುತ್ತಿದ್ದರು. ಅವರಿಬ್ಬರ ಯುದ್ಧವು ಒಂದು ಹೆಣ್ಣಾನೆಗಾಗಿ ಹೋರಾಡುವ ಮದದಾನೆಗಳ ಕದನದಂತೆ ಭಯಂಕರವಾಯಿತು. ಆಗ ಪಾರ್ಥನು ಕರ್ಣನ ಪರಾಕ್ರಮವನ್ನು ಸಹಿಸಲಾರದೆ, ಅವನ ಬಿಲ್ಲನ್ನು ಮುಷ್ಟಿಭಾಗದಲ್ಲಿ ಕತ್ತರಿಸಿ, ಅವನ ನಾಲ್ಕು ಕುದುರೆಗಳನ್ನೂ, ಸಾರಥಿಯನ್ನೂ ಕೊಂದುಬಿಟ್ಟನು. ಕರ್ಣನನ್ನೂ ನಾಲ್ಕು ಬಾಣಗಳಿಂದ ಬಲವಾಗಿ ನೋಯಿಸಿದನು. ಆಗ ಕರ್ಣನು ಥಟ್ಟನೆ ತನ್ನ ರಥದಿಂದ ಧುಮುಕಿ, ಕೃಪನ ರಥವನ್ನೇರಿ ಕುಳಿತನು. ಅರ್ಜುನನ ಬಾಣಗಳು ಕರ್ಣನ ಅಂಗಾಂಗಗಳೊಳಗೆಲ್ಲ ನಾಟಿರಲು, ಅವನು ಮುಳ್ಳನ್ನು ಕೆದರಿ ನಿಂತ ಮುಳ್ಳುಹಂದಿಯಂತೆ ಕಾಣುತ್ತಿದ್ದನು. ಆ ಸ್ಥಿತಿಯಲ್ಲಿ ಅವನು ತಾನು ಬದುಕಿದರೆ ಸಾಕೆಂದು ಕೃಪನ ರಥವನ್ನು ಏರಿ ಕುಳಿತಮೇಲೆ, ಇತ್ತಲಾಗಿ ನಮ್ಮ ಸೈನ್ಯವೆಲ್ಲವೂ ಕರ್ಣನ ಪರಾಜಯವನ್ನು ನೋಡಿ, ದಿಕ್ಕುದಿಕ್ಕಿಗೆ ಪಲಾಯನಮಾಡಲಾರಂಭಿಸಿದುವು. ತನ್ನ ಸೈನ್ಯವು ಚದರುತ್ತಿರುವುದನ್ನು ನೋಡಿ ದುರ್ಯೋಧನನು ಅದನ್ನು ಹಿಂತಿರುಗಿಸುವುದಕ್ಕಾಗಿ ಹೀಗೆಂದನು. “ಎಲೈ ಶೂರರೇ! ನೀವು ಕ್ಷತ್ರಿಯಕುಲದಲ್ಲಿ ಹುಟ್ಟಿದವರಲ್ಲವೇ? ನಿಲ್ಲಿರಿ! ಓಡಿಹೋಗಬೇಡಿರಿ! ಇದೋ! ಈಗಲೇ ಪಾರ್ಥನ ವಧಕ್ಕಾಗಿ ನಾನೇ ಹೊರಡುವೆನು. ಪಾಂಡವ ಪಾಂಚಾಲ ಸೋಮಕರನ್ನೆಲ್ಲ ಕ್ಷಣಮಾತ್ರದಲ್ಲಿ ಕೊಂದುಬರುವೆನು. ಆ ಗಾಂಡೀವಧಾರಿಯೊಡನೆ ಈಗ ನಾನು ಯುದ್ಧಮಾಡತಕ್ಕ ರೀತಿಯನ್ನು ಪಾಂಚಾಲರೆಲ್ಲರೂ

ನೋಡಲಿ. ಪ್ರಳಯಕಾಲದ ಯಮನಂತೆ ನಾನು ಮಾಡುವ ಕೊಲೆಯನ್ನು ಎಲ್ಲರೂ ನೋಡಲಿ. ಈಗ ನನ್ನ ಬಾಣಗಳು ಮಿಡಿತೆಗಳ ಹಿಂಡಿನಂತೆ ನೂರು ಸಾವಿರ ಲೆಕ್ಕದಿಂದ ಆಕಾಶದಲ್ಲಿ ಹಾರುವುದನ್ನು ಎಲ್ಲರೂ ನೋಡಲಿ! ಮಳೆಗಾಲದ ಮೇಘಗಳ ವರ್ಷದಂತೆ ನನ್ನ ಬಾಣವರ್ಷವನ್ನು ಸೈನಿಕರೆಲ್ಲರೂ ಈಗ ನೋಡುವರು. ಅರ್ಜುನನನ್ನು ಈಗಿನ ಯುದ್ಧದಲ್ಲಿ ನಾನು ಜಯಿಸುವುದು ನಿಶ್ಚಯವು! ಭಯವನ್ನು ಬಿಡಿರಿ! ಯುದ್ಧಕ್ಕೆ ನಿಲ್ಲಿರಿ! ಸಮುದ್ರವು ತನ್ನ ವೇಲೆಯನ್ನು ಹೇಗೋ ಹಾಗೆ, ನನ್ನ ಪರಾಕ್ರಮವನ್ನು ಅರ್ಜುನನು ಎಂದಿಗೂ ಮೀರಲಾರನು" ಎಂದು ಹೇಳಿ, ನಿನ್ನ ಮಗನು ಅತ್ಯಾಕ್ರೋಶದಿಂದ ದೊಡ್ಡ ಸೈನ್ಯವನ್ನು ಸೇರಿಸಿಕೊಂಡು, ಅರ್ಜುನನಿಗೆ ಇದಿರಾಗಿ ವೇಗದಿಂದ ಹೊರಟನು. ಇದನ್ನು ನೋಡಿ ಕೃಪಾಚಾರ್ಯನು ಅಶ್ವತ್ಥಾಮನನ್ನು ಕುರಿತು "ಕುಮಾರಾ! ಅದೋ ನೋಡು! ನಮ್ಮ ರಾಜನು ಕೋಪದಿಂದ ಹಿಂದುಮುಂದು ತಿಳಿಯದೆ, ಬೆಂಕಿಯಮೇಲೆ ಬೀಳುವ ಶಲಭದಂತೆ ಅರ್ಜುನನಮೇಲೆ ಯುದ್ಧಕ್ಕಾಗಿ ಹೊರಟಿರುವನು. ಅರ್ಜುನನ ಕೈಯಿಂದ ಅವನು ನಮ್ಮ ಕಣ್ಣುಮುಂದೆಯೇ ಸಾಯದಂತೆ, ಅವನನ್ನು ಕಾಪಾಡಿಕೊಳ್ಳಬೇಕಾದುದು ನಮ್ಮ ಕರ್ತವ್ಯವು. ಅಶ್ವತ್ಥಾಮಾ! ನಮ್ಮ ರಾಜನು ಅರ್ಜುನನ ಬಾಣಗಳಿಗೆ ಗೋಚರವಾಗುವಮೊದಲೇ ನೀನು ಹೋಗಿ ಅದನ್ನು ತಡೆಯಬೇಕು. ಪರೆಯುರ್ಚಿದ ಮಹಾಸರ್ಪಗಳಂತೆ ಅರ್ಜುನನ ಬಾಣಗಳು ನಮ್ಮ ರಾಜಕುಮಾರನನ್ನು ಭಸ್ಮೀಭೂತವಾಗಿ ಮಾಡುವಮೊದಲೇ, ನೀನು ಯುದ್ಧದಿಂದ ಅವನನ್ನು ನಿವಾರಿಸಬೇಕು. ಕುಮಾರಾ! ನಾವೆಲ್ಲರೂ ಇದ್ದುಕೊಂಡು, ನಮ್ಮ ರಾಜನು ತಾನೊಬ್ಬನೇ ಯುದ್ಧಕ್ಕೆ ಹೋಗಲು ಅವಕಾಶಕೊಡುವುದು ಅಯುಕ್ತವೆಂದು ನನಗೆ ತೋರುವುದು. ಹುಲಿಯೊಡನೆ ಹೋರಾಟಕ್ಕೆ ನಿಲ್ಲುವ ಆನೆಯಂತೆ ನಮ್ಮ ರಾಜನು ಆ ಕಿರೀಟಿಯೊಡನೆ ಯುದ್ಧಕ್ಕೆ ಹೋದಮೇಲೆ, ಅವನು ಬದುಕಿಬರುವುದು ಕಷ್ಟವೆಂದೂ ನನಗೆ ತೋರುವುದು" ಎಂದನು. ಮಾವನಾದ ಕೃಪಾಚಾರ್ಯನ ಈ ಮಾತನ್ನು ಕೇಳಿ ಅಶ್ವತ್ಥಾಮನು ಥಟ್ಟನೆ ದುರ್ಯೋಧನನ ಬಳಿಗೆ ಬಂದು "ರಾಜಾ! ನಾನು ಬದುಕಿರುವಾಗ, ನೀನು ಸ್ವತಃ ಯುದ್ಧಕ್ಕೆ ಹೋಗುವುದು ಯುಕ್ತವಲ್ಲ. ಯಾವಾಗಲೂ

ನಿನಗೆ ಹಿತೈಷಿಯಾದ ನನ್ನನ್ನು ನಿರಾಕರಿಸಿ ನೀನು ಯುದ್ಧಕ್ಕಾಗಿ ಇಷ್ಟು ಆತುರಪಡುವುದೇಕೆ? ಅರ್ಜುನನನ್ನು ಜಯಿಸುವುದಕ್ಕೆ ನಾನಿರುವೆನು. ನೀನು ನಿಲ್ಲು" ಎಂದನು. ಅದಕ್ಕಾ ದುರ್ಯೋಧನನು "ಅಶ್ವತ್ಥಾಮಾ! ನಮಗೆ ಆಚಾರ್ಯನಾದ ನಿನ್ನ ತಂದೆಯು ಪಾಂಡವರಲ್ಲಿ ಪುತ್ರಪ್ರೇಮವನ್ನಿಟ್ಟು, ಅವರನ್ನು ಮಕ್ಕಳಂತೆ ಕಾಪಾಡುತ್ತಿರುವನು. ನೀನೂ ಅವರ ವಿಷಯದಲ್ಲಿ ಔದಾಸೀನ್ಯವನ್ನೇ ತೋರಿಸುತ್ತಿರುವೆ. ಇದು ನನ್ನ ದೌರ್ಭಾಗ್ಯವೋ, ಅಥವಾ ಪಾಂಡವರ ಮುಂದೆ ನಿನ್ನ ಪರಾಕ್ರಮವೇ ಅಡಗಿಹೋಯಿತೋ ತಿಳಿಯದು. ಇದು ಧರ್ಮರಾಜನ ಪ್ರಿಯಕ್ಕಾಗಿಯೇ! ಅಥವಾ ದ್ರೌಪದಿಯ ಸಂತೋಷಕ್ಕಾಗಿಯೇ? ನೀವು ಯಾವ ಕಾರಣದಿಂದ ಯುದ್ಧದಲ್ಲಿ ಹೀಗೆ ಉದಾಸೀನರಾಗಿರುವಿರೆಂದು ತಿಳಿಯಲಿಲ್ಲ. ಛೀ! ನನ್ನ ಜನ್ಮವನ್ನು ಸುಡಬೇಕು! ರಾಜ್ಯಲೋಭವುಳ್ಳ ನನಗಾಗಿಯೇ ಅಲ್ಲವೇ ಯಾವಾಗಲೂ ಸುಖಾರ್ಹರೂ, ಯುದ್ಧದಲ್ಲಿ ಪರಾಜಯವಿಲ್ಲದವರೂ ಆದ ನನ್ನ ಬಂಧುಗಳೆಲ್ಲ ಇಷ್ಟು ಕಷ್ಟಕ್ಕೊಳಗಾದರು! ಆಚಾರ್ಯಪುತ್ರಾ! ಶಸ್ತ್ರಜ್ಞರಲ್ಲಿ ಶ್ರೇಷ್ಠನೆನಿಸಿ, ಯುದ್ಧಕಾರ್ಯದಲ್ಲಿ ಸಾಕ್ಷಾನ್ಮಹೇಶ್ವರನಿಗೆ ಸಮಾನನಾಗಿ, ಶತ್ರುಜಯದಲ್ಲಿ ಸಮರ್ಥನೂ ಆದ ನೀನೊಬ್ಬನುಹೊರತು ಬೇರೆ ಯಾವನು ತಾನೇ ಇದುವರೆಗೆ ಶತ್ರುವನ್ನು ಕೊಲ್ಲದೆ ಸುಮ್ಮನಿರುವನು. ಅಶ್ವತ್ಥಾಮಾ! ನನ್ನ ಮಾತಿಗೆ ಕೋಪಿಸಬೇಡ! ಪ್ರಸನ್ನನಾಗು! ಹೇಗಾದರೂ ಮಾಡಿ ನನ್ನ ಶತ್ರುಗಳನ್ನು ವಧಿಸು. ದೇವ ದಾನವರಾದರೂ ನಿನ್ನ ಶಸ್ತ್ರದಮುಂದೆ ನಿಲ್ಲಲಾರರು. ಆದುದರಿಂದ ನೀನು ನಿಷ್ಕಪಟವಾದ ಪರಾಕ್ರಮವನ್ನು ಹಿಡಿದು, ಪಾಂಚಾಲರನ್ನೂ ಸೋಮಕರನ್ನೂ ಧ್ವಂಸಮಾಡು. ನಾವೂ ನಿನ್ನ ರಕ್ಷಣೆಯಲ್ಲಿದ್ದುಕೊಂಡು ಉಳಿದವರನ್ನು ಕೊನೆಮುಟ್ಟಿಸುವೆವು. ಅದೋ! ಸೋಮಕರೂ, ಪಾಂಚಾಲರೂ ನನ್ನ ಸೈನ್ಯದಲ್ಲಿ ಪ್ರವೇಶಿಸಿ, ಕಾಡುಗಿಚ್ಚಿನಂತೆ ಅದನ್ನು ನಾನಾಕಡೆಗಳಿಂದ ದಹಿಸುವರು. ಓ ಮಹಾಬಾಹೂ! ಅವರನ್ನು ನೀನು ಮೊದಲು ನಿವಾರಿಸು! ಆ ಕೇಕಯರನ್ನು ವಧಿಸು. ಅರ್ಜುನನ ರಕ್ಷಣೆಯಿಂದ ಅವರು ನಮ್ಮ ಸೈನ್ಯವನ್ನು ನಿರ್ಮೂಲಮಾಡುವುದಕ್ಕೆ ಮೊದಲೇ ನೀನು ತ್ವರೆಮಾಡು! ಅಶ್ವತ್ಥಾಮಾ! ಬೇಗನೆ ಹೊರಡು. ಓ ಬ್ರಾಹ್ಮಣೋತ್ತಮಾ! ಮೊದಲಲ್ಲಿಯೋ, ಕೊನೆಯಲ್ಲಿಯೋ

ಈ ಕಾರ್ಯಭಾರವು ನಿನಗೇ ಸೇರಿದುದು. ನೀನು ಪಾಂಚಾಲರ ವಧಕ್ಕಾಗಿಯೇ ಭೂಮಿಯಲ್ಲಿ ಹುಟ್ಟಿದವನು. ನೀನು ಪ್ರಯತ್ನಪಟ್ಟರೆ ಈ ಜಗತ್ತಿನಲ್ಲಿ ಪಾಂಚಾಲರ ಹುಟ್ಟೇ ಇಲ್ಲದಂತೆ ಮಾಡಬಲ್ಲವನು. ಮೊದಲೇ ಇದನ್ನು ಸಿದ್ಧರು ನನಗೆ ಹೇಳಿರುವರು. ಅದು ಹಾಗೆಯೇ ನಡೆಯುವುದು! ಓ ಪುರುಷಶ್ರೇಷ್ಠಾ! ಬೇಗನೆ ಹೊರಡು. ಪಾಂಚಾಲರನ್ನು ಅವರ ಸಮಸ್ತಪರಿವಾರಗಳೊಡನೆ ಧ್ವಂಸಮಾಡು. ಇಂದ್ರನೊಡಗೂಡಿದ ದೇವತೆಗಳಾದರೂ ನಿನ್ನ ಅಸ್ತ್ರದಮುಂದೆ ನಿಲ್ಲಲಾರರು. ಇನ್ನು ಪಾಂಡವರೂ, ಪಾಂಚಾಲರೂ ಎಷ್ಟುಮಾತ್ರದವರು? ನಾನು ಸತ್ಯವಾಗಿ ಹೇಳುವೆನು. ಪಾಂಚಾಲ ಪಾಂಡವ ಸೋಮಕರಲ್ಲಿ ಯಾರೂ ನಿನ್ನೊಡನೆ ಯುದ್ಧಕ್ಕೆ ನಿಲ್ಲಲಾರರು. ಇದು ಸತ್ಯವು. ಓ ಮಹಾಬಾಹೂ! ಹೊರಡು! ಹೊರಡು! ಕಾಲವಿಳಂಬವು ಕೂಡದು. ಅರ್ಜುನನ ಬಾಣದ ಕೋಲೆಗೆ ತಡೆಯಲಾರದೆ ನಮ್ಮ ಸೈನ್ಯವು ಓಡಿಹೋಗುತ್ತಿರುವುದು. ನಿನ್ನ ಸಹಜವಾದ ತೇಜಸ್ಸಿನಿಂದಲೇ ನೀನು ಪಾಂಡವರನ್ನೂ, ಪಾಂಚಾಲರನ್ನೂ ನಿಗ್ರಹಿಸಲು ಸಮರ್ಥನು" ಎಂದನು.

ಇದು ನೂರಅರುವತ್ತನೆಯ ಅಧ್ಯಾಯವು.

---

## { ಅಶ್ವತ್ಥಾಮ ಧೃಷ್ಟದ್ಯುಮ್ನರ ಯುದ್ಧವು. ಅಶ್ವತ್ಥಾಮನ ಅದ್ಭುತ ಪರಾಕ್ರಮ ಕಾರ್ಯಗಳು. }

ದುರ್ಯೋಧನನ ಈ ಪ್ರೋತ್ಸಾಹವಾಕ್ಯಗಳನ್ನು ಕೇಳಿದೊಡನೆಯೇ, ಅಶ್ವತ್ಥಾಮನಿಗೆ ಶತ್ರುಗಳನ್ನು ತಾನು ವಧಿಸುವೆನೆಂಬ ಹೆಮ್ಮೆಯು ಮಿತಿಮೀರಿತು. ಆಗ ಅವನು ನಿನ್ನಮಗನನ್ನು ಕುರಿತು "ಕೌರವರಾಜಾ! ನೀನು ಈಗ ಹೇಳಿದ ಮಾತುಗಳಲ್ಲಿ ಒಂದೊಂದೂ ವಾಸ್ತವವೇ! ನನಗೂ, ನನ್ನ ತಂದೆಗೂ, ಪಾಂಡವರಲ್ಲಿ ಯಾವಾಗಲೂ ಪ್ರೇಮವುಂಟೆಂಬುದೂ ಸತ್ಯವು. ಅವರಿಗೂ ನಮ್ಮಿಬ್ಬರಲ್ಲಿ ಅಸಾಧಾರಣ ಪ್ರೇಮವುಂಟು. ಆದರೆ ಈ ಪ್ರೇಮವು ಯುದ್ಧದಲ್ಲಿ ನಿಲ್ಲತಕ್ಕುದಲ್ಲ. ಯುದ್ಧಕ್ಕೆ ನಿಂತಮೇಲೆ ನಾವು ಪ್ರಾಣದಮೇಲೆಯೂ ಆಸೆಯಿಲ್ಲದೆ, ನಮ್ಮ ಶಕ್ತಿಮೀರಿ ನಿರ್ಭಯವಾಗಿ

ಯುದ್ಧಮಾಡತಕ್ಕವರು. ರಾಜಾ! ನಾನು, ಕರ್ಣನು, ಶಲ್ಯನು, ಕೃಪನು, ಕೃತವರ್ಮನು ಈ ನಾವೆಲ್ಲರೂ ಒಂದು ನಿಮಿಷಮಾತ್ರದಲ್ಲಿ ಪಾಂಡವಸೈನ್ಯವನ್ನು ನಾಶಮಾಡಬಲ್ಲೆವು. ನಾವಿಷ್ಟುಮಂದಿಯೂ ಯುದ್ಧಕ್ಕೆ ಬಾರದಿದ್ದರೆ, ಆ ಪಾಂಡವರೂ ಕೂಡ ನಿಮಿಷಾರ್ಧದಲ್ಲಿ ಕೌರವಸೈನ್ಯವನ್ನೆಲ್ಲ ಧ್ವಂಸಮಾಡುತ್ತಿದ್ದರು. ನಾವೇನೋ ನಮ್ಮ ಶಕ್ತಿಗೆ ತಕ್ಕಂತೆ ಯುದ್ಧ ಮಾಡುವೆವು. ಅವರೂ ತಮ್ಮ ಶಕ್ತಿಗೆ ತಕ್ಕಂತೆ ನಮ್ಮೊಡನೆ ಯುದ್ಧಮಾಡುವರು. ಈ ಉಭಯತೇಜಸ್ಸುಗಳೂ ಒಂದನ್ನೊಂದು ಇದಿರಿಸಿ, ಕೊನೆಗೆ ಯಾವುದು ಅಡಗಿಹೋಗುವುದೋ ಹೋಗಲಿ! ಆದರೆ, ರಾಜಾ! ಪಂಚಪಾಂಡವರು ಬದುಕಿರುವವರೆಗೆ, ಅವರ ಸೈನ್ಯವನ್ನು ಸುಲಭವಾಗಿ ಜಯಿಸುವುದು ನಮ್ಮಂಥ ಸಾಧ್ಯವೇ ಅಲ್ಲ. ಸತ್ಯವಾಗಿ ಹೇಳುವೆನು! ಕೌರವರಾಜಾ! ಆ ಪಾಂಡವರು ನಿನಗಿಂತಲೂ ಸಮರ್ಥರು. ಅವರು ಸರ್ವರ ಪ್ರಯೋಜನಕ್ಕಾಗಿ ಯುದ್ಧಮಾಡತಕ್ಕವರು. ಹೀಗಿರುವಾಗ ನಿನ್ನ ಸೈನ್ಯಗಳನ್ನು ಅವರು ಕೊಲ್ಲದೆ ಬಿಡುವ ಕಾರಣವೇನಿದೆ? ನೀನಾದರೋ ಲುಬ್ಧಾಗ್ರೇಸರನು! ವಂಚನೆಯಲ್ಲಿಯೇ ಪ್ರವರ್ತಿಸತಕ್ಕವನು. ಇವರಿಂದಲೇ ಇತರರ ವಿಷಯದಲ್ಲಿಯೂ ಸಂದೇಹಪಡುವೆ! ರಾಜಾ! ನೀನು ಗರ್ವಿಷ್ಠನು! ಯಾವಾಗಲೂ ಕುತ್ಸಿತಸ್ವಭಾವವುಳ್ಳವನು. ಪಾಪಬುದ್ಧಿಯುಳ್ಳವನು! ಪಾಪವೇ ಮೂರ್ತೀಭವಿಸಿದಂತೆ ಇರುವವನು! ಆ ನಿನ್ನ ಅಲ್ಪಸ್ವಭಾವಕ್ಕೆ ತಕ್ಕಂತೆ ಇತರರಲ್ಲಿಯೂ ನೀನು ಅದೇ ವಿಧವಾಗಿ ಶಂಕಿಸುತ್ತಿರುವೆ. ರಾಜಾ! ಅದು ಹೇಗಾದರೂ ಇರಲಿ! ನಿನಗಾಗಿ ನಾನು ಪ್ರಾಣದಾಸೆಯನ್ನು ತೊರೆದು, ನನ್ನ ಸರ್ವಪ್ರಯತ್ನದಿಂದ ಯುದ್ಧಮಾಡುವೆನು. ಇದೋ! ಈಗಲೇ ರಣರಂಗಕ್ಕೆ ಹೊರಟೆನು. ಅಲ್ಲಿಹೋಗಿ ಶತ್ರುಗಳೊಡನೆ ಯುದ್ಧಮಾಡಿ, ಅವರಲ್ಲಿ ಮುಖ್ಯಮುಖ್ಯರಾದವರನ್ನೇ ಕೊನೆಮುಟ್ಟಿಸಿ ಬರುವೆನು. ನಿನಗಾಗಿ ನಾನು ಪಾಂಚಾಲ, ಸೋಮಕರೊಡನೆಯೂ, ಕೇಕಯರೊಡನೆಯೂ, ಪಾಂಡವರೊಡನೆಯೂ ಶಕ್ತಿಮೀರಿ ಯುದ್ಧಮಾಡುವೆನು. ಈಗಿನ ಯುದ್ಧದಲ್ಲಿ ಅವರೆಲ್ಲರೂ, ಸಿಂಹದಿಂದ ಪೀಡಿತಗಳಾದ ಹಸುಗಳಂತೆ ಪಲಾಯನಮಾಡುವುದನ್ನು ನೋಡು. ಧರ್ಮಪುತ್ರನು ನನ್ನ ಪರಾಕ್ರಮವನ್ನು ನೋಡಿ ಲೋಕವೆಲ್ಲಾ ಅಶ್ವತ್ಥಾಮಮಯವೆಂದೇ ತಿಳಿಯುವನು. ನನ್ನಿಂದ ಹತರಾದ

ಪಾಂಚಾಲ ಸೋಮಕರನ್ನು ನೋಡಿದಾಗ, ಅವನು ಈ ಯುದ್ಧದಲ್ಲಿ ತಲೆಯಿ ಕ್ಕಿದುದಕ್ಕಾಗಿ ಪಶ್ಚಾತ್ತಾಪಪಡುವನು. ರಾಜಾ! ಈ ಯುದ್ಧದಲ್ಲಿ ನನಗೆ ಯಾರುಯಾರು ಇದಿರಾದರೂ ಅವರನ್ನೆಲ್ಲ ಕೊಲ್ಲುವೆನು. ನನ್ನ ಭುಜ ಗಳ ನಡುವೆ ಸಿಕ್ಕಿದವರು ತಿರುಗಿ ಬದುಕಿ ಹೋಗಲಾರರು" ಎಂದನು. ಹೀಗೆಂದು ಅಶ್ವತ್ಥಾಮನು ನಿನ್ನ ಮಗನೊಡನೆ ಹೇಳಿ, ಒಡನೆಯೇ ಯುದ್ಧ ಕ್ಕೆ ಹೊರಟು, ತನ್ನ ಬಾಣಪ್ರಯೋಗವೇಗದಿಂದ ಧನುರ್ಧಾರಿಗಳನ್ನೆಲ್ಲಾ ಹೆದರಿಸುತ್ತ, ಪಾಂಡವಸೈನ್ಯಕ್ಕಿದಿರಾಗಿ ನಿಂತು ಹೀಗೆಂದನು. "ಎಲೈ ಮಹಾರಥರೇ! ಇದೋ! ನಾನು ಇಲ್ಲಿರುವೆನು. ನನ್ನಮೇಲೆ ನೀವೆ ಲ್ಲರೂ ಸೇರಿ ಇಷ್ಟಬಂದಂತೆ ಬಾಣಗಳನ್ನು ಹೊಡೆಯಿರಿ. ನಿಮ್ಮ ಶಸ್ತ್ರಾಸ್ತ್ರ ಲಾಘವವನ್ನೆಲ್ಲಾ ತೋರಿಸಿ ಸ್ಥಿರಮನಸ್ಸಿನಿಂದ ಯುದ್ಧಮಾಡಿರಿ" ಎಂದನು ಅಶ್ವತ್ಥಾಮನ ಈ ಮಾತನ್ನು ಕೇಳಿದೊಡನೆಯೇ ಪಾಂಚಾಲ ಸೋಮಕರೆ ಲ್ಲರೂ, ಅವನಮೇಲೆ ಬಾಣವರ್ಷವನ್ನು ಕರೆದರು. ದ್ರೋಣಪುತ್ರನು ಆ ಬಾಣಗಳನ್ನೆಲ್ಲ ಭಂಗಿಸಿ, ಧೃಷ್ಟದ್ಯುಮ್ನನೂ, ಪಾಂಡವರೂ ನೋಡುತ್ತಿದ್ದ ಹಾಗೆಯೇ ಹತ್ತುಮಂದಿ ವೀರರನ್ನು ಕೊಂದುಕೆಡಹಿದನು. ಆಗ ಇತರ ಪಾಂಚಾಲಸೈನಿಕರು ಭಯದಿಂದ ರಣಾಂಗಣವನ್ನು ಬಿಟ್ಟು ಓಡಲಾರಂಭಿಸಿ ದರು. ಇದನ್ನು ನೋಡಿ, ಧೃಷ್ಟದ್ಯುಮ್ನನು ಥಟ್ಟನೆ ಬಂದು ಅಶ್ವತ್ಥಾ ಮನನ್ನು ಇದಿರಿಸಿ ನಿಂತನು. ಅವನನ್ನು ನೂರುಮಂದಿ ರಥಿಕವೀರರು ಹಿಂಬಾಲಿಸಿ ಬಂದರು. ಹೀಗೆ ವೀರರಿಂದ ಪರಿವೃತನಾದ ಧೃಷ್ಟದ್ಯುಮ್ನನು ಅಶ್ವತ್ಥಾಮನನ್ನು ಕುರಿತು "ಆಚಾರ್ಯಪುತ್ರಾ! ನಿನಗೆ ಮಂಗಳವಾ ಗಲಿ! ನಮ್ಮಕಡೆಯ ಸಾಮಾನ್ಯಯೋಧರನ್ನು ಕೊಂದುದರಿಂದೇನು? ನೀನು ಶೂರನಾಗಿದ್ದರೆ ನನ್ನೊಡನೆ ಯುದ್ಧಕ್ಕೆ ನಿಲ್ಲು. ಆಗ ನನ್ನ ಪರಾಕ್ರಮ ವನ್ನು ನೋಡು. ಮುಂದೆ ಬಾ!" ಎಂದು ಹೇಳಿ, ಮರ್ಮಭೇದಕಗಳಾದ ಬಾಣಗಳನ್ನು ಅವನಿಗೆ ಹೊಡೆದನು. ಧೃಷ್ಟದ್ಯುಮ್ನನ ಬಾಣಗಳು ಸಾಲು ಸಾಲಾಗಿ ಅಶ್ವತ್ಥಾಮನ ಮೇಲೆ ಬಂದು ಬಿದ್ದು, ಅವನ ಸರ್ವಾವಯವಗಳ ಲ್ಲಿಯೂ ನಾಟುತ್ತಿದ್ದುವು. ಪುಷ್ಪಿತವಾದ ಮರದಮೇಲೆ, ಜೇನಿಗಾಗಿ ಭ್ರಮ ರಗಳು ಬಂದು ಬೀಳುವಂತೆ, ಆ ಬಾಣಗಳು ನಾನಾಕಡೆಗಳಿಂದ ಎಡೆಬಿಡದೆ ಬಂದು ಬೀಳುತ್ತಿದ್ದುವು, ಇದರಿಂದ ಬಹಳವಾಗಿ ನೊಂದ ಅಶ್ವತ್ಥಾಮನು,

ಕಾಲಿಂದ ಮೆಟ್ಟಿದ ಸರ್ಪದಂತೆ ಕೋಪಗೊಂಡು, ಕೈಯಲ್ಲಿ ಬಾಣವನ್ನು ಹಿಡಿದು, “ಧೃಷ್ಟದ್ಯುಮ್ನಾ! ಸ್ಥಿರಮನಸ್ಸಿನಿಂದ ಸ್ವಲ್ಪಹೊತ್ತು ನಿರೀಕ್ಷಿಸು. ನನ್ನ ತೀವ್ರಬಾಣಗಳಿಂದ ನಿನ್ನನ್ನು ಯಮಪುರಿಗೆ ಕಳುಹಿಸುವೆನು” ಎಂದು ಹೇಳಿ, ತನ್ನ ಹಸ್ತವೇಗವನ್ನೆಲ್ಲಾ ತೋರಿಸುತ್ತಾ, ಅನೇಕ ಬಾಣಗಳನ್ನು ಬಿಟ್ಟು, ಧೃಷ್ಟದ್ಯುಮ್ನನ ರಥವನ್ನು ಮರೆಸಿದನು. ಧೃಷ್ಟದ್ಯುಮ್ನನೂ ಅಶ್ವತ್ಥಾಮನಿಗೆ ಪ್ರತಿಯಾಗಿ ವೀರವಾದಗಳಿಂದ “ಎಲ ಬುದ್ಧಿಗೆಟ್ಟ ಬ್ರಾಹ್ಮಣಾ! ನನ್ನ ಪ್ರತಿಜ್ಞೆಯೇನೆಂಬುದನ್ನು ನೀನು ತಿಳಿಯೆ! ನಾನು ಮೊದಲು ನಿನ್ನ ತಂದೆಯಾದ ದ್ರೋಣನನ್ನು ಕೊಂದು ಆಮೇಲೆ ನಿನ್ನನ್ನು ಕೊನೆಗಾಣಿಸತಕ್ಕವನು. ಆದುದರಿಂದ ಈಗ ನಿನ್ನ ತಂದೆಯು ಬದುಕಿರುವವರೆಗೆ ನಿನ್ನನ್ನು ನಾನು ಕೊಲ್ಲಲಾರೆನು. ಇದೋ! ಈ ರಾತ್ರಿಯು ಕಳೆದು ಬೆಳಗಾಗುವ ಮೊದಲೇ, ನಿನ್ನ ತಂದೆಯನ್ನು ಕೊಂದು, ನಿನ್ನನ್ನೂ, ನಾನು ಪಿತೃಲೋಕಗಳಿಗೆ ಕಳುಹಿಸಿಬಿಡುವೆನು. ಇದು ನನ್ನ ಮನಸ್ಸಿನಲ್ಲಿರುವ ಸಂಕಲ್ಪವು. ಓ ಬ್ರಾಹ್ಮಣಕುಮಾರಾ! ನಿನಗೆ ಪಾಂಡವರಲ್ಲಿರುವ ದ್ವೇಷಕ್ಕೂ, ಕೌರವರಲ್ಲಿರುವ ಭಕ್ತಿಗೂ, ತಕ್ಕ ಕಾರ್ಯವನ್ನು ಈಗ ಮಾಡಿ ತೋರಿಸು. ನೀನು ಹೇಗೂ ನನ್ನಿಂದ ಬದುಕಿಹೋಗಲಾರೆ. ಯಾವನು ಬ್ರಾಹ್ಮಣಜಾತಿಯಲ್ಲಿ ಹುಟ್ಟಿ, ಆ ಬ್ರಾಹ್ಮಣಧರ್ಮವನ್ನು ಬಿಟ್ಟು ಕ್ಷತ್ರಧರ್ಮವನ್ನು ಹಿಡಿಯುವನೋ, ಅಂತವನು ಸರ್ವಲೋಕಕ್ಕೂ ವಧಾರ್ಹನೇ. ಅಂತಹ ಪುರುಷಾಧಮನು ನೀನು” ಎಂದನು. ಈ ಕ್ರೂರವಾಕ್ಯವನ್ನು ಕೇಳಿ, ಅಶ್ವತ್ಥಾಮನು ಕೋಪವನ್ನು ತಡೆಯಲಾರದೆ, ತನ್ನ ಕಣ್ಣಿಂದಲೇ ದಹಿಸಿಬಿಡುವಂತೆ ಧೃಷ್ಟದ್ಯುಮ್ನನನ್ನು ದುರುದುರನೆ ನೋಡಿ, “ಎಲಾ! ನಿಲ್ಲು! ನಿಲ್ಲು!” ಎಂದು ಹೇಳುತ್ತಾ ತನ್ನ ಬಾಣದಿಂದ ಆ ಧೃಷ್ಟದ್ಯುಮ್ನನಿದ್ದ ಸ್ಥಳವೇ ತಿಳಿಯದಂತೆ ಮುಚ್ಚಿದನು. ಆದರೇನು? ಧೃಷ್ಟದ್ಯುಮ್ನನು ಆಗಲೂ ಹೆದರದೆ, ಪ್ರತಿಬಾಣಗಳನ್ನು ಬಿಟ್ಟು, ಅಶ್ವತ್ಥಾಮನನ್ನು ಬಹಳವಾಗಿ ಪ್ರಹರಿಸಿದನು. ಅವರಿಬ್ಬರೂ ಯುದ್ಧದ್ಯೂತಕ್ಕಾಗಿ ತಮ್ಮ ಪ್ರಾಣಗಳನ್ನೇ ಒತ್ತೆಯಾಗಿಟ್ಟು, ಬಾಣವರ್ಷಗಳನ್ನು ಕರೆಯುತ್ತಾ ಒಬ್ಬರನ್ನೊಬ್ಬರು ಬಹಳವಾಗಿ ಪೀಡಿಸಿದರು. ಇವರಿಬ್ಬರ ಭಯಂಕರಯುದ್ಧವನ್ನು ನೋಡಿ, ಸಿದ್ಧಚಾರಣಾದಿಗಳು “ಭಲೆ! ಭಲೆ! ಎಂದು ಕೊಂಡಾಡಿದರು. ಇಬ್ಬರೂ

ಆಕಾಶವನ್ನೂ, ದಿಕ್ಕುಗಳನ್ನೂ, ತಮ್ಮ ಬಾಣಾಂಧಕಾರದಿಂದ ಮರೆಸಿ, ಒಬ್ಬರಿಗೊಬ್ಬರು ಅದೃಶ್ಯರಾಗಿಯೇ ಯುದ್ಧಮಾಡುತ್ತಿದ್ದರು. ಇಬ್ಬರೂ ಮಂಡಲಾಕಾರವಾದ ಧನುಸ್ಸನ್ನು ಹಿಡಿದು ರಣರಂಗದಲ್ಲಿ ನರ್ತಿಸುವವರಂತೆ ಸಂಚರಿಸುತ್ತ, ಒಬ್ಬರನ್ನೊಬ್ಬರು ಕೊಲ್ಲಬೇಕೆಂಬ ಆತುರದಿಂದ ವಿಚಿತ್ರವಾಗಿಯೂ ಲಘುವಾಗಿಯೂ, ಚಮತ್ಕಾರವಾಗಿಯೂ ಇರುವ ಯುದ್ಧಚಾತುರ್ಯಗಳನ್ನೆಲ್ಲಾ ತೋರಿಸಿದರು. ಸುತ್ತಲೂ ನೆರೆದಿದ್ದ ಸಾವಿರಾರುಮಂದಿ ಯೋಧರಿಂದ ಪ್ರಶಂಸಿಸಲ್ಪಡುತ್ತಾ, ಇಬ್ಬರೂ ಕಾಡಾನೆಗಳಂತೆ ಹೋರಾಡಿದರು. ಉಭಯಸೈನ್ಯಗಳಿಗೂ ಅವರ ಪರಾಕ್ರಮವು ಹರ್ಷಜನಕವಾಯಿತು. ನಾನಾಕಡೆಗಳಿಂದ ಸಿಂಹನಾದಗಳೂ, ಶಂಖಧ್ವನಿಗಳೂ, ರಣವಾದ್ಯಗಳೂ, ಮೊಳಗುತ್ತಿದ್ದುವು. ಒಂದು ಮುಹೂರ್ತಕಾಲದವರೆಗೆ ಅವರಿಬ್ಬರೂ ಸಮಬಲದಿಂದ ಯುದ್ಧಮಾಡಿದರು. ಇಷ್ಟರಲ್ಲಿಯೇ ಅಶ್ವತ್ಥಾಮನು ಧೃಷ್ಟದ್ಯುಮ್ನನ ಧ್ವಜವನ್ನೂ, ಧನುಸ್ಸನ್ನೂ. ಛತ್ರವನ್ನೂ ಮುರಿದು, ಅವನ ರಥದ ಪಕ್ಕದ ಸಾರಥಿಗಳನ್ನೂ ಕೊಂದನು. ಅವನ ರಥಾಶ್ವಗಳನ್ನೂ, ಸಾರಥಿಯನ್ನೂ ವಧಿಸಿದನು. ಆ ಧೃಷ್ಟದ್ಯುಮ್ನನಿಗೆ ಬೆಂಬಲವಾಗಿ ಬಂದಿದ್ದ ಪಾಂಚಾಲರನ್ನೆಲ್ಲಾ ತೀವ್ರಬಾಣಗಳಿಂದ ಹೊಡೆದು ಓಡಿಸಿಬಿಟ್ಟನು. ಪಾಂಡವಸೈನ್ಯವು ಮಹತ್ತಾದ ವಿಪತ್ತಿಗೆ ಸಿಕ್ಕಿ ಚದರಿಹೋಯಿತು. ದೈತ್ಯಸೇನೆಯಲ್ಲಿ ಇಂದ್ರನಂತೆ ಅಸಾಧ್ಯಕಾರ್ಯವನ್ನು ನಡೆಸಿ, ಅಶ್ವತ್ಥಾಮನು ನೂರುಮಂದಿಯನ್ನು ನೂರುಬಾಣಗಳಿಂದ ಸಂಹರಿಸಿ, ಧೃಷ್ಟದ್ಯುಮ್ನನೂ, ಅರ್ಜುನನೂ ನೋಡುತ್ತಿರುವಾಗಲೇ ಪ್ರಾಯಕವಾಗಿ ಬಹುಮಂದಿ ಪಾಂಚಾಲರನ್ನು ಕೊನೆಗಾಣಿಸಿಬಿಟ್ಟನು. ಸತ್ತುಳಿದ ಕೆಲವುಮಂದಿ ಪಾಂಚಾಲರು ಅಶ್ವತ್ಥಾಮನ ಕೊಲೆಗೆ ತಡೆಯಲಾರದೆ ತಮ್ಮ ರಥಧ್ವಜಾದಿಗಳನ್ನೆಲ್ಲಾ ಕಳೆದುಕೊಂಡು ಪಲಾಯನಮಾಡಿಬಿಟ್ಟರು. ಹೀಗೆ ದ್ರೋಣಪುತ್ರನು ಅನೇಕಶೂರರನ್ನು ಕೊಂದು, ಆ ಜಯೋತ್ಸಾಹದಿಂದ ವರ್ಷಾಕಾಲದ ಮೇಘದಂತೆ ಸಿಂಹಗರ್ಜನೆಯನ್ನು ಮಾಡಿದನು. ಪ್ರಳಯಕಾಲದಲ್ಲಿ ಕಾಲಾಗ್ನಿಯು ಸಮಸ್ತ ಭೂತಗಳನ್ನೂ ಭಸ್ಮೀಭೂತವನ್ನಾಗಿ ಮಾಡಿ ಶಾಂತವಾಗುವಂತೆ, ಅಶ್ವತ್ಥಾಮನು ಶತ್ರುಜಯವಾದಮೇಲೆ ಶಾಂತನಾಗಿ, ಕೌರವರಿಂದ ಪೂಜಿಸಲ್ಪಡುತ್ತಿದ್ದನು.

ಇದು ನೂರ ಅರುವತ್ತೊಂದನೆಯ ಅಧ್ಯಾಯವು.

## ಸಂಕುಲಯುದ್ಧವು.

ಮಹಾರಾಜಾ! ಆಮೇಲೆ ಯುಧಿಷ್ಠಿರನೂ, ಭೀಮನೂ, ದೊಡ್ಡ ಸೈನ್ಯದೊಡನೆ ಅಶ್ವತ್ಥಾಮನನ್ನು ಸುತ್ತಲೂ ಮುತ್ತಿದರು. ದುರ್ಯೋಧನನು ದ್ರೋಣನೊಡಗೂಡಿ ಪಾಂಡವರಿಗಿದಿರಾದನು. ಭಯಂಕರಯುದ್ಧವು ಆರಂಭಿಸಿತು. ಅಂಬಷ್ಠರು, ಮಾಲವರು, ವಂಗರು, ಶಿಬಿಗಳು, ತ್ರೈಗರ್ತಕರು, ಮೊದಲಾದ ಅನೇಕ ಸೈನ್ಯವರ್ಗದವರನ್ನು ಭೀಮನು ಕೊಂದುಕೆಡಹಿದನು. ಅಭಿಷಾಹ, ಶೂರಸೇನರೇ ಮೊದಲಾದ ಅನೇಕ ಕ್ಷತ್ರಿಯರನ್ನು ಕೊಂದು, ರಣಭೂಮಿಯನ್ನೆಲ್ಲಾ ರಕ್ತದ ಕೆಸರಿನಿಂದ ತುಂಬಿದನು. ಅರ್ಜುನನು ಅತ್ಯಂತ ವೇಗವುಳ್ಳ ತೀಕ್ಷ್ಣಬಾಣಗಳಿಂದ ಯೌಧೇಯು, ಅದ್ರಿಜ, ಮದ್ರಕ, ಮಾಲವರೇ ಮೊದಲಾದ ಇನ್ನು ಕೆಲವು ಸೈನಿಕರನ್ನು ಕೊಂದುಕೆಡಹಿದನು. ಆನೆಗಳು ಬಾಣಹತಗಳಾಗಿ ಪರ್ವತಗಳಂತೆ ಬಿದ್ದುವು. ತುಂಡಾದ ಆನೆಯ ಸುಂಡಿಲುಗಳು ಅರ್ಧಜೀವದಿಂದ ಸರ್ಪಗಳಂತೆ ಹೊರಳಾಡುತ್ತಿದ್ದುವು. ಸುವರ್ಣಾಲಂಕೃತಗಳಾದ ಶ್ವೇತಚ್ಛತ್ರಗಳು ಅಲ್ಲಲ್ಲಿ ಮುರಿದುಬಿದ್ದು, ರಣಭೂಮಿಯು ಸೂರ್ಯಚಂದ್ರಾದಿ ಗ್ರಹಗಳಿಂದ ಶೋಭಿತವಾದ ಆಕಾಶದಂತೆ ಕಾಣಿಸುತ್ತಿದ್ದಿತು. "ಹೊಡೆಯಿರಿ! ಬಡಿಯಿರಿ! ಕತ್ತರಿಸಿರಿ!" ಎಂಬ ಶಬ್ದಗಳೇ ಎಲ್ಲೆಲ್ಲಿಯೂ ಹೊರಡುತ್ತಿದ್ದಿತು. ಎಲ್ಲರೂ ದ್ರೋಣನ ರಥಕ್ಕಿದಿರಾಗಿ ನುಗ್ಗಿದರು. ಆಗ ದ್ರೋಣನು ಅತ್ಯಂತಕುಪಿತನಾಗಿ, ವಾಯವ್ಯಾಸ್ತ್ರದಿಂದ ಶತ್ರುಸೈನ್ಯಗಳನ್ನೆಲ್ಲಾ ತೂರಿಬಿಟ್ಟನು. ಭೀಮಾರ್ಜುನರ ಕಣ್ಣೆದಿರಾಗಿಯೇ ಪಾಂಚಾಲಸೈನ್ಯಗಳು ಭಯಪಟ್ಟು ಓಡಲಾರಂಭಿಸಿದುವು. ಇದನ್ನು ನೋಡಿ ಭೀಮಾರ್ಜುನರಿಬ್ಬರೂ ದೊಡ್ಡ ರಥಸೈನ್ಯದೊಡನೆ ಸೇರಿ, ಅರ್ಜುನನು ದಕ್ಷಿಣದ ಕಡೆಯಿಂದಲೂ, ಭೀಮನು ಉತ್ತರದಕಡೆಯಿಂದಲೂ ಬಾಣವರ್ಷಗಳನ್ನು ಕರೆಯುತ್ತಾ, ದ್ರೋಣನನ್ನು ಮುತ್ತಿದರು. ಸೃಂಜಯ, ಪಾಂಚಾಲ, ಮಾತ್ಸ್ಯ, ಸೋಮಕರೆಲ್ಲ ಅವರಿಗೆ ಬೆಂಬಲವಾಗಿ ಬಂದರು. ಅದರಂತೆಯೇ ಇತ್ತಲಾಗಿ ನಿನ್ನ ಮಗನಕಡೆಯ ರಥಿಕರೂ ದೊಡ್ಡ ಸೈನ್ಯದೊಡನೆ ದ್ರೋಣನಿಗೆ ಬೆಂಬಲವಾಗಿ ಬಂದರು. ಇಷ್ಟರಲ್ಲಿಯೇ ಅರ್ಜುನನ ಬಾಣದ ಕೊಲೆಗೆ ತಡೆಯಲಾರದೆ ಕೌರವ

ಸೈನ್ಯವು ಮುಂಕುಹಿಡಿದಂತಾಗಿ, ಅಲ್ಲಲ್ಲಿ ಚದರಲಾರಂಭಿಸಿತು. ದ್ರೋಣನೂ ನಿನ್ನ ಮಗನೂ, ಧೈರ್ಯವನ್ನು ಹೇಳಿ ತಡೆಯುತ್ತಿದ್ದರೂ, ಅದನ್ನು ನಿಲ್ಲಿಸಲಾರದೆ ಹೋದರು. ಆ ರಾತ್ರಿ ಕಗ್ಗತ್ತಲೆಯೊಂದುಕಡೆ! ನಿದ್ರೆಯೊಂದು ಕಡೆ! ಇವೆರಡರಿಂದಲೂ ನಮ್ಮ ಸೈನ್ಯಗಳು ಯುದ್ಧೋತ್ಸಾಹವಿಲ್ಲದೆ ನಾನಾದಿಕ್ಕಿಗೆ ಓಡಿಹೋದುವು. ಕೆಲವು ರಾಜರು ಭಯದಿಂದ ತಮ್ಮ ವಾಹನಗಳನ್ನು ಇದ್ದಲ್ಲಿಯೇ ಬಿಟ್ಟು, ಕಾಲುನಡೆಯಿಂದಲೇ ಓಡಲಾರಂಭಿಸಿದರು.

ಇದು ನೂರ ಅರುವತ್ತೆರಡನೆಯ ಅಧ್ಯಾಯವು.



## ಸಾತ್ಯಕಿಯು ಸೋಮದತ್ತನನ್ನು ವಧಿಸಿದುದು. ದ್ರೋಣಯುಧಿಷ್ಠಿರರ ಯುದ್ಧವು.

ಮಹಾರಾಜಾ! ಅತ್ತಲಾಗಿ ಸಾತ್ಯಕಿಯು ತನಗಿದಿರಾಗಿ ಮಹಾಧನುಸ್ಸನ್ನು ಝಳಪಿಸುತ್ತ ಬರುತ್ತಿರುವ ಸೋಮದತ್ತನನ್ನು ನೋಡಿ ತನ್ನ ಸಾರಥಿಯನ್ನು ಕುರಿತು "ಸಾರಥೀ! ಈಗ ನಾನು ಸೋಮದತ್ತನನ್ನು ಕೊಲ್ಲದೆ, ಇಲ್ಲಿಂದ ಹಿಂತಿರುಗುವವನಲ್ಲ. ಈ ಮಾತನ್ನು ಸತ್ಯವೆಂದು ತಿಳಿ. ಅಲ್ಲಿಗೆ ರಥವನ್ನು ಬಿಡು" ಎಂದನು. ಆಗ ಸಾರಥಿಯು ಶಂಖದಂತೆ ಬಿಳುಪಾಗಿಯೂ, ಮನೋವೇಗವುಳ್ಳವುಗಳಾಗಿಯೂ, ಎಂತಹ ಶಬ್ದಗಳಿಗೂ ಭಯಪಡದವುಗಳಾಗಿಯೂ ಇರುವ ತನ್ನ ರಥಾಶ್ವಗಳನ್ನು ತಟ್ಟಿಬಿಡಲು, ಆ ಕುದುರೆಗಳು ಇಂದ್ರಾಶ್ವಗಳು ದೈತ್ಯವಧಕ್ಕಾಗಿ ಹೊರಟ ಮಹೇಂದ್ರನನ್ನು ಹೇಗೋಹಾಗೆ, ವೇಗದಿಂದ ಸೋಮದತ್ತನಕಡೆಗೆ ಮುಂದುವರಿದುವು. ಇದನ್ನು ಕಂಡು ಸೋಮದತ್ತನು ಮೇಘವರ್ಷದಂತೆ ಸಾತ್ಯಕಿಯ ರಥದ ಮೇಲೆ ಬಾಣವರ್ಷಗಳನ್ನು ಕರೆಯುತ್ತ, ಮೇಘವು ಸೂರ್ಯನನ್ನು ಮರೆಸಿದಹಾಗೆ ಸಾತ್ಯಕಿಯನ್ನು ಬಾಣವರ್ಷಗಳಿಂದ ಮರೆಸಿದನು. ಸಾತ್ಯಕಿಯೂ ಎದೆಗುಂದದೆ, ತನ್ನ ಬಾಣಗಳಿಂದ ಸೋಮದತ್ತನನ್ನು ಮರೆಸಿದನು. ಸೋಮದತ್ತನು ಸಾತ್ಯಕಿಯ ಎದೆಗೆ ಅರುವತ್ತು ಬಾಣಗಳನ್ನು ಗುರಿಯಿಟ್ಟು

ಹೊಡೆದನು. ಸಾತ್ಯಕಿಯೂ ಸೋಮದತ್ತನನ್ನು ಹಲವು ಬಾಣಗಳಿಂದ ಪ್ರಹರಿಸಿದನು. ಇಬ್ಬರಿಗೂ ಬಾಣಘಾತದಿಂದ ದೇಹವೆಲ್ಲಾ ರಕ್ತಮಯ ವಾಗಿ, ಪುಷ್ಪಿತಗಳಾದ ಮುತ್ತುಗದ ಮರದಂತೆ ಕಾಣಿಸಿದರು. ಕಣ್ಣಿನಿಂ ದಲೇ ಒಬ್ಬರನ್ನೊಬ್ಬರು ದಹಿಸಿಬಿಡುವಂತೆ ಕೋಪದಿಂದ ದುರುದುರನೆ ನೋಡಿದರು. ಇಬ್ಬರೂ ಭಯಂಕರರೂಪದಿಂದ ತೋರುತ್ತ, ರಥಮಾರ್ಗ ಗಳಲ್ಲಿ ಸಂಚರಿಸುತ್ತಿದ್ದರು. ಇಬ್ಬರ ಮೈಯಲ್ಲಿಯೂ ಬಾಣಗಳು ನಾಟಿ, ಮುಳ್ಳನ್ನು ಕೆದರಿದ ಮುಳ್ಳುಹಂದಿಗಳಂತೆ ಕಾಣುತ್ತಿದ್ದರು. ಮಳೆಗಾಲದಲ್ಲಿ ಮಿಂಚುಹುಳುಗಳಿಂದ ಆವೃತವಾದ ವೃಕ್ಷಗಳಂತೆ, ಇಬ್ಬರ ಮೈಯಲ್ಲಿಯೂ, ಬಾಣಜ್ವಾಲೆಯಿಂದುಂಟಾದ ಕಿಡಿಗಳು ಹೊರಡುತ್ತಿದ್ದುವು. ಮತ್ತು ಅವರ ಸುತ್ತಲೂ ಬಾಣಜ್ವಾಲೆಗಳು ವ್ಯಾಪಿಸಿ, ಇಬ್ಬರ ದೇಹಗಳೂ ಕೊಳ್ಳಿಗಳಿಂದ ಆವೃತವಾದ ಕಾಡಾನೆಗಳ ದೇಹದಂತೆ ಕಾಣಿಸುತ್ತಿದ್ದುವು. ಈ ನಡುವೆ ಸೋಮದತ್ತನು ಒಂದು ಅರ್ಧಚಂದ್ರಬಾಣದಿಂದ ಸಾತ್ಯಕಿಯ ಕೈಯಲ್ಲಿದ್ದ ದೊಡ್ಡ ಬಿಲ್ಲನ್ನು ಕತ್ತರಿಸಿ ಅವನಮೇಲೆ ಇಪ್ಪತ್ತೈದು ಬಾಣಗಳನ್ನು ಹೊಡೆ ದನು. ಆಮೇಲೆ ತಿರುಗಿ ಹತ್ತು ತೀಕ್ಷ್ಣಬಾಣಗಳನ್ನು ಬಿಟ್ಟನು. ಸಾತ್ಯಕಿ ಯು ಆಕ್ಷಣವೇ ಬೇರೊಂದು ಬಿಲ್ಲನ್ನು ತೆಗೆದುಕೊಂಡು ಐದುಬಾಣಗಳಿಂದ ಸೋಮದತ್ತನನ್ನು ಹೊಡೆದನು. ಒಂದು ಭಲ್ಲದಿಂದ ಅವನ ಸುವರ್ಣಧ್ವಜ ವನ್ನು ಕತ್ತರಿಸಿಕೆಡಹಿದನು. ಇದರಿಂದ ಬಾಹ್ಲೀಕರಾಜನು ಮತ್ತಷ್ಟು ರೇಗಿ, ಸಾತ್ಯಕಿಯ ಮೇಲೆ ತಿರುಗಿ ಇಪ್ಪತ್ತೈದು ಬಾಣಗಳನ್ನು ಬಿಟ್ಟನು. ಸಾತ್ಯಕಿಯು ಒಂದು ಭಲ್ಲದಿಂದ ಸೋಮದತ್ತನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿ ಸಿದುದಲ್ಲದೆ, ಕೊಂಬುಮುರಿದ ಆನೆಯಂತಿದ್ದ ಆ ಸೋಮದತ್ತನನ್ನು ನೂರು ಬಾಣಗಳಿಂದ ಮೇಲೆಮೇಲೆ ಹೊಡೆಯುತ್ತಿದ್ದನು. ಸೋಮದತ್ತನು ಬೇರೊಂ ದುಬಿಲ್ಲನ್ನು ಕೈಗೆತ್ತಿಕೊಂಡು ಬಾಣವರ್ಷದಿಂದ ಸಾತ್ಯಕಿಯನ್ನು ಮರೆಸಿ ದನು. ಸಾತ್ಯಕಿಯೂ ಸೋಮದತ್ತನನ್ನು ತನ್ನ ಬಾಣಗಳಿಂದ ಮು ಚ್ಚಿದನು. ಇಷ್ಟರಲ್ಲಿ ಭೀಮನು ಸಾತ್ಯಕಿಯ ಸಹಾಯಕ್ಕಾಗಿ ಬಂದು, ಸೋಮದತ್ತನಮೇಲೆ ಹತ್ತುಬಾಣಗಳನ್ನು ಪ್ರಯೋಗಿಸಿದನು. ಸೋಮ ದತ್ತನೂ ಭೀಮನನ್ನು ತೀವ್ರಬಾಣಗಳಿಂದ ಹೊಡೆದನು. ಆಗ ಭೀಮನು ಅತಿ ಕ್ರುದ್ಧನಾಗಿ, ಸೋಮದತ್ತನ ಎದೆಗೆ ಗುರಿಯಿಟ್ಟು ಒಂದು ಪರಿಘಾಯು

ಧವನ್ನು ಬೀಸಿದನು. ಅದು ಬರುತ್ತಿರುವಾಗಲೇ ಸೋಮದತ್ತನು ಲೀಲಾಮಾತ್ರದಿಂದ ಅದನ್ನು ಎರಡು ತುಂಡಾಗಿ ಭೇದಿಸಿದನು. ಆ ಉಕ್ಕಿನ ಪರಿಘವು ವಜ್ರಾಹತವಾದ ಪರ್ವತಶಿಖರದಂತೆ ತುಂಡಾಗಿಬಿದ್ದಿತು. ಇಷ್ಟರಲ್ಲಿ ಸಾತ್ಯಕಿಯು ಒಂದು ಭಲ್ಲದಿಂದ ತಿರುಗಿ ಸೋಮದತ್ತನ ವಿಲ್ಲನ್ನು ಕತ್ತರಿಸಿ, ಬೇರೆ ಐದುಬಾಣಗಳಿಂದ ಅವನ ಕೈಚೀಲಗಳನ್ನೂ, ನಾಲ್ಕುಬಾಣಗಳಿಂದ ಅವನ ನಾಲ್ಕು ರಥಾಶ್ವಗಳನ್ನೂ ಭೇದಿಸಿಕೆಡಹಿದನು. ಒಂದು ಭಲ್ಲದಿಂದ ಅವನ ಸಾರಥಿಯು ತಲೆಯನ್ನು ಹಾರಿಸಿಬಿಟ್ಟನು. ಅಮೇಲೆ ಉರಿಯುವ ಬೆಂಕಿಯಂತೆ ಜ್ವಲಿಸುವ ಒಂದು ಘೋರಬಾಣವನ್ನು ಬಾಹ್ಲೀಕನ ಎದೆಗೆ ಗುರಿಯಿಟ್ಟು ವೇಗದಿಂದ ಬಿಟ್ಟನು ಈ ಬಾಣವು ಎದೆಗೆ ತಗುಲಿದೊಡನೆ, ಸೋಮದತ್ತನು ಮೂರ್ಛಿತನಾಗಿ ಕೊನೆಗೆ ಪ್ರಾಣವನ್ನೂ ಬಿಟ್ಟನು. ಇದನ್ನು ನೋಡಿ ಅವನಕಡೆಯ ಅನೇಕಸೈನಿಕರು ಸಾತ್ಯಕಿಯನ್ನು ಕೊಲ್ಲುವುದಕ್ಕಾಗಿ ವೇಗದಿಂದ ಮುಂದುವರಿದು, ಎಡೆಬಿಡದೆ ಬಾಣಗಳನ್ನು ಸುರಿಸಿದರು. ಇದನ್ನು ನೋಡಿ ಯುಧಿಷ್ಠಿರನೂ, ಇತರ ಪಾಂಡವರೂ, ಎಲ್ಲಾ ಪ್ರಭದ್ರಕಸೈನ್ಯಗಳೊಡನೆ ದ್ರೋಣನ ಸೈನ್ಯಕ್ಕಿದಿರಾಗಿ ಹೊರಟರು. ಯುಧಿಷ್ಠಿರನು ತನ್ನ ಬಾಣವೇಗದಿಂದ ನಿನ್ನ ದೊಡ್ಡ ಸೈನ್ಯವನ್ನೆಲ್ಲ ಚದರಿಸುತ್ತ ಬಂದನು. ಇದನ್ನು ನೋಡಿ ದ್ರೋಣನು ಕೋಪದಿಂದ ಯುಧಿಷ್ಠಿರನಿಗಿದಿರಾಗಿ ಅವನ ಮೇಲೆ ತೀಕ್ಷ್ಣವಾದ ಏಳು ಬಾಣಗಳನ್ನು ಹೊಡೆದನು. ಯುಧಿಷ್ಠಿರನು ದ್ರೋಣನನ್ನು ಐದುಬಾಣಗಳಿಂದ ಪ್ರಹರಿಸಿದನು. ಆಗ ದ್ರೋಣನು ಅತಿಕೋಪದಿಂದ ಕಡೆಬಾಯಿಗಳನ್ನು ನಕ್ಕುತ್ತ, ಒಂದುಬಾಣದಿಂದ ಯುಧಿಷ್ಠಿರನ ಧ್ವಜವನ್ನೂ, ಇನ್ನೊಂದು ಬಾಣದಿಂದ ಅವನ ಬಿಲ್ಲನ್ನೂ ಕತ್ತರಿಸಿದನು. ಒಡನೆಯೇ ಧರ್ಮಪುತ್ರನು ಬೇರೊಂದು ಬಿಲ್ಲನ್ನೆತ್ತಿಕೊಂಡು, ಎಡೆಬಿಡದೆ ದ್ರೋಣನ ಮೇಲೆ ಸಾವಿರ ಬಾಣಗಳನ್ನು ಬಿಟ್ಟನು. ಅವನ ರಥ, ರಥಾಶ್ವ, ಧ್ವಜ, ಸಾರಥಿಗಳನ್ನೆಲ್ಲಾ ಛೇದಿಸಿದನು. ಇದು ಆಶ್ಚರ್ಯಕರವಾಯಿತು. ಈ ಬಾಣಪ್ರಹಾರದಿಂದ ದ್ರೋಣನು ಬಹಳವಾಗಿ ನೊಂದು, ರಥದ ಗದ್ದುಗೆಯ ಮೇಲೆ ಪ್ರಜ್ಞೆತಪ್ಪಿದವನಂತೆ ಕುಳಿತುಬಿಟ್ಟನು. ಮುಹೂರ್ತಕಾಲದೊಳಗಾಗಿಯೇ ಚೇತರಿಸಿಕೊಂಡು, ಮಹಾ ಕ್ರೋಧಾವೇಶದಿಂದ ವಾಯುವ್ಯಾಸ್ತ್ರ

ವನ್ನು ಪ್ರಯೋಗಿಸಿದನು. ಯುಧಿಷ್ಠಿರನು ಅದಕ್ಕೆ ಪ್ರತಿಯಾಗಿ ವಾಯ ವ್ಯಾಸ್ತ್ರವನ್ನೇ ಬಿಟ್ಟು ಅದನ್ನಡಗಿಸಿ, ತಿರುಗಿ ದ್ರೋಣನ ಬಿಲ್ಲನ್ನು ಕತ್ತರಿಸಿ ದನು. ಒಡನೆಯೇ ದ್ರೋಣನು ಬೇರೊಂದು ಬಿಲ್ಲನ್ನು ಕೈಗೆತ್ತಿಕೊಳ್ಳಲು ಅದನ್ನೂ ಯುಧಿಷ್ಠಿರನು ಕತ್ತರಿಸಿದನು. ಈ ಸಮಯದಲ್ಲಿ ಶ್ರೀಕೃಷ್ಣನು ಧರ್ಮಪುತ್ರನನ್ನು ನೋಡಿ, "ಯುಧಿಷ್ಠಿರಾ! ನನ್ನ ಮಾತನ್ನು ಲಾಲಿಸು. ನೀನು ಈ ದ್ರೋಣನೊಡನೆ ಯುದ್ಧವನ್ನು ಇಷ್ಟಕ್ಕೇ ನಿಲ್ಲಿಸಿಬಿಡು. ಈ ದ್ರೋಣನು ದುರ್ಯೋಧನನ ಪ್ರಿಯಕ್ಕಾಗಿ ನಿನ್ನನ್ನು ಸೆರೆಹಿಡಿಯಬೇಕೆಂಬ ಧೃಢಪ್ರಯತ್ನದಿಂದ ಬಂದಿರುವನು. ಆದುದರಿಂದ ನಿನಗೆ ಈಗ ಇವನೊ ಡನೆ ಯುದ್ಧವು ಯೋಗ್ಯವಲ್ಲ. ಇವನನ್ನು ವಧಿಸುವುದಕ್ಕಾಗಿಯೇ ಹುಟ್ಟಿ ದವನೊಬ್ಬನುಂಟು! ಅವನೇ ಈತನನ್ನು ಕೊಲ್ಲುವನು. ಆದುದರಿಂದ ನೀನು ಈ ನಿನ್ನ ಗುರುವನ್ನು ಬಿಟ್ಟು, ರಾಜನಾದ ದುರ್ಯೋಧನನಿಗೆ ಇದಿ ರಾಗು. ರಾಜನು ತನಗೆ ಸಮಾನನಾದ ರಾಜನೊಡನೆ ಯುದ್ಧಮಾಡಬೇ ಕಲ್ಲದೆ ಅವನಿಗೆ ರಾಜನಲ್ಲದವನೊಡನೆ ಯುದ್ಧವು ಅನುರೂಪವಲ್ಲ. ನಿನ್ನ ಚತುರಂಗಸೈನ್ಯಗಳನ್ನು ಸೇರಿಸಿಕೊಂಡು ನೀನು ಅಲ್ಲಿಗೆ ಹೋಗು. ನನ್ನ ಸಹಾಯದಿಂದ ಅರ್ಜುನನೂ, ಭೀಮನೂ, ಕೌರವರೊಡನೆ ಯುದ್ಧಮಾಡು ತ್ತಿರುವ ಸ್ಥಳಕ್ಕೆ ನೀನು ಬೇಗನೆ ಹೊರಟುಬಾ" ಎಂದನು. ಈ ಮಾತನ್ನು ಕೇಳಿ ಧರ್ಮರಾಜನು ಸ್ವಲ್ಪಹೊತ್ತಿನವರೆಗೆ ಆಲೋಚಿಸಿ, ಆಮೇಲೆ ಭೀಮ ನಿದ್ದ ಸ್ಥಳಕ್ಕೆ ಹೊರಟನು. ದಾರಿಯುದ್ದಕ್ಕೂ ನಿನ್ನ ಸೈನ್ಯಗಳನ್ನು ಕೊಲ್ಲುತ್ತ, ತನ್ನ ರಥಘೋಷದಿಂದ ಭೂಮಿಯನ್ನೂ, ದಶದಿಕ್ಕುಗಳನ್ನೂ ಮೊಳಗಿ ಸುತ್ತ, ಭೀಮನ ಸಮೀಪವನ್ನು ಸೇರಿ, ಅವನಿಗೆ ಬೆಂಬಲವಾಗಿ ನಿಂತನು. ಇತ್ತಲಾಗಿ ದ್ರೋಣನು ಆ ರಾತ್ರಿಯಲ್ಲಿ ಅನೇಕ ಪಾಂಡವ ಪಾಂಚಾಲ ಸೈನ್ಯಗಳನ್ನು ಧ್ವಂಸಮಾಡುತ್ತಿದ್ದನು.

ಇದು ನೂರ ಅರುವತ್ತುಮೂರನೆಯ ಅಧ್ಯಾಯವು.



## ಉಭಯಸೈನ್ಯಗಳಲ್ಲಿಯೂ ದೀಪಗಳನ್ನು ಬೆಳಗಿಸಿದುದು.

ಮಹಾರಾಜಾ! ಹೀಗೆ ಪಾಂಡವರೊಡನೆ ನಮಗೆ ಭಯಂಕರಯುದ್ಧವು ನಡೆಯುತ್ತಿದ್ದಿತು. ಆ ರಾತ್ರಿಯಲ್ಲಿ ಗಾಢಾಂಧಕಾರವೊಂದು! ಸೇನಾಧೂಳಿಯೊಂದು! ಇವೆರಡರಿಂದ ಯಾವುದೊಂದೂ ಕಾಣದಂತಾಯಿತು. ಯುದ್ಧದಲ್ಲಿ ಯೋಧರು ಒಬ್ಬರನ್ನೊಬ್ಬರು ನೋಡುವುದಕ್ಕೂ ಸಾಧ್ಯವಿಲ್ಲದೆ, ಅನುಮಾನದಿಂದಲೂ, ಸಂಜ್ಞೆಯಿಂದಲೂ, ಒಬ್ಬರನ್ನೊಬ್ಬರು ಹೊಡೆಯುತ್ತಿದ್ದರು. ಅತ್ತಲಾಗಿ ದ್ರೋಣ, ಕೃಪ, ಕರ್ಣರೂ, ಇತ್ತಲಾಗಿ ಭೀಮಸಾತ್ಯಕಿ ಧೃಷ್ಟದ್ಯುಮ್ನರೂ ಪ್ರತಿಸೈನ್ಯಗಳನ್ನು ನಾನಾಕಡೆಗಳಲ್ಲಿ ಧ್ವಂಸಮಾಡುತ್ತಿದ್ದರು. ಆ ಕಗ್ಗತ್ತಲೆಯಲ್ಲಿ ಸೈನ್ಯಗಳು ಕೊಲೆಯನ್ನು ತಡೆಯಲಾರದೆ, ಹಿಂದುಮುಂದು ತಿಳಿಯದೆ ಓಡಲಾರಂಭಿಸಿ ಓಡುವಾಗಲೂ ಅಲ್ಲಲ್ಲಿ ಕೊಲೆಗೀಡಾಗುತ್ತಿದ್ದುವು. ಅನೇಕ ಮಹಾರಥರು ಒಬ್ಬರಿಗೊಬ್ಬರು ಹೊಡೆದಾಡಿ ಸತ್ತರು. ಆ ಮಹಾಂಧಕಾರದಲ್ಲಿ ಯಾವುದೊಂದೂ ತಿಳಿಯದೆ ಅನೇಕರು ತನ್ನವರನ್ನೇ ವಧಿಸುತ್ತಿದ್ದರು. ಮಹಾರಾಜಾ! ನಿನ್ನ ಮಗನ ದುರ್ಮಂತ್ರದ ಫಲದಿಂದ, ಆಗಿನ ರಾತ್ರಿಯುದ್ಧವು ಇಂತಹ ಅನರ್ಥದಲ್ಲಿ ಪರಿಣಮಿಸಿತು. ಸೈನ್ಯಗಳೂ, ಸೇನಾಧಿಪತಿಗಳೂ ಆ ಕತ್ತಲೆಯಲ್ಲಿ ತತ್ತಳಿಸುತ್ತಿದ್ದರು" ಎಂದನು. ಈ ನಡುವೆ ಧೃತರಾಷ್ಟ್ರನು "ಸಂಜಯಾ! ನಮ್ಮವರು ಪಾಂಡವರ ಕೊಲೆಗೆ ಸಿಕ್ಕಿ, ತಮ್ಮ ಶಕ್ತಿಯನ್ನೆಲ್ಲಾ ಕಳೆದುಕೊಂಡು, ಆ ಮಹಾಂಧಕಾರದಲ್ಲಿ ಮುಳುಗಿದಂತಿದ್ದಾಗ, ಅವರ ಮುಂದಿನ ಆಲೋಚನೆಯೇನು? ಆ ಕತ್ತಲೆಯಲ್ಲಿ ಮುಂದಿನ ಯುದ್ಧಕ್ಕೆ ಅವರಿಗೆ ಬೆಳಕೆಲ್ಲಿಯದು?" ಎನಲು, ಸಂಜಯನು "ರಾಜೇಂದ್ರಾ! ಅನೇಕ ಸೈನ್ಯಗಳು ಹತವಾದಮೇಲೆ, ಹತಶೇಷವಾದ ಕೆಲವು ಸೈನ್ಯಗಳು ಸೈನ್ಯರಕ್ಷಕರನ್ನು ಗೊತ್ತುಮಾಡಿಕೊಂಡು, ತಿರುಗಿ ಒಂದು ಸೇನಾವ್ಯೂಹವನ್ನು ಕಲ್ಪಿಸಿಕೊಂಡುವು. ದ್ರೋಣನು ಆ ವ್ಯೂಹದ ಮುಖಭಾಗದಲ್ಲಿ ನಿಂತನು. ಶಲ್ಯನು ಬೆನ್ನಿನ ಭಾಗದಲ್ಲಿ ನಿಂತನು. ಅಶ್ವತ್ಥಾಮನೂ, ಕೃತವರ್ಮನೂ, ಶಕುನಿಯೂ, ನಿನ್ನ ಮಗನಾದ ದುರ್ಯೋಧನನೂ, ಆ ವ್ಯೂಹದ ನಾಲ್ಕು ಕಡೆಗಳಲ್ಲಿಯೂ ರಕ್ಷಕರಾಗಿ ನಿಂತರು. ಆಮೇಲೆ ನಿನ್ನ ಮಗನಾದ ದುರ್ಯೋಧನನು ತನ್ನ ಕಡೆಯ ಪದಾತಿಸೈನಿಕರನ್ನು ಕರೆದು, ಸಮಾಧಾನಪೂರ್ವಕವಾಗಿ ಹೀಗೆಂ

ದನು. "ಎಲ್ಲೈ ಯೋಧರೇ! ನೀವು ಈಗಿನ ಯುದ್ಧದಲ್ಲಿ ಆಯುಧಗಳನ್ನು ಹಿಡಿದು ಯುದ್ಧಮಾಡಬೇಕಾದುದಿಲ್ಲ. ಎಲ್ಲರೂ ನಿಮ್ಮ ನಿಮ್ಮ ಆಯುಧಗಳನ್ನು ಇಟ್ಟುಬಂದು, ಉರಿಯುವ ದೀವಟಿಗೆಗಳನ್ನು ಹಿಡಿಯಬೇಕು" ಎಂದನು. ಅದರಂತೆಯೇ ನಮ್ಮ ಕಡೆಯ ಪದಾತಿಸೈನ್ಯಗಳೆಲ್ಲಾ ಸಂತೋಷದಿಂದ ಕೈಯಲ್ಲಿ ದೊಡ್ಡ ದೊಡ್ಡ ದೀವಟಿಗೆಗಳನ್ನು ಹಿಡಿದು ನಿಂತರು. ಆಕಾಶದಲ್ಲಿ ಈ ಯುದ್ಧವನ್ನು ನೋಡುವ ಕುತೂಹಲದಿಂದ ಬಂದ ದೇವರ್ಷಿಗಳೂ, ಗಂಧರ್ವರೂ, ಅಪ್ಸರೋಗಣಗಳೂ, ವಿದ್ಯಾಧರರೂ, ಯಕ್ಷ ಕಿನ್ನರನಾಗರೂ ದೀಪಗಳನ್ನು ಸಂಗ್ರಹಿಸಿಕೊಂಡು ಬಂದರು. ಯುದ್ಧಕುತೂಹಲಿಗಳಾದ ನಾರದಪರ್ವತರೂ, ದಿಗ್ದೇವತೆಗಳೂ ಕೂಡ ಕೌರವಪಾಂಡವರ ಸೌಕರ್ಯಕ್ಕಾಗಿ ಅಲ್ಲಲ್ಲಿ ಸುಗಂಧತೈಲದ ದೀಪಗಳನ್ನು ಬೆಳಗಿದಂತೆ ಕಾಣಿಸಿತು. ಆಗ ಆ ಉಭಯಸೈನ್ಯದ ವಿಭಾಗಗಳು ಆ ರಾತ್ರಿಯಲ್ಲಿ ದೀಪಪ್ರಭೆಯಿಂದ ಕಾಣಿಸತೊಡಗಿತು. ಇದಲ್ಲದೆ ಆಯಾರಾಜರು ಧರಿಸಿರತಕ್ಕ ದಿವ್ಯಾಭರಣಗಳಲ್ಲಿಯೂ, ಅವರ ಕೈಯಲ್ಲಿ ಥಳಥಳಿಸುವ ಶಸ್ತ್ರಧಾರೆಗಳಲ್ಲಿಯೂ, ಈ ದೀಪದ ಬೆಳಕು ಪ್ರತಿಫಲಿಸಿ, ಹೆಚ್ಚು ಪ್ರಕಾಶವನ್ನು ಕೊಡುತ್ತಿದ್ದಿತು. ಒಂದೊಂದು ರಥವನ್ನು ಸುತ್ತಿ ಐದೈದು ದೀವಟಿಗೆಗಳೂ, ಒಂದೊಂದು ಆನೆಗೆ ಮೂರುಮೂರು ದೀಪಗಳೂ ಹಿಡಿಯಲ್ಪಟ್ಟುವು. ಒಂದೊಂದು ಕುದುರೆಯ ಮುಂದೆ ಒಂದೊಂದು ದೀಪವಿದ್ದಿತು. ಪದಾತಿಗಳು ಒಂದು ಕೈಯಲ್ಲಿ ದೀವಟಿಗೆಯನ್ನೂ ಮತ್ತೊಂದು ಕೈಯಲ್ಲಿ ಎಣ್ಣೆಯಪಾತ್ರೆಯನ್ನೂ ಇಟ್ಟುಕೊಂಡು ದೀಪಗಳನ್ನುರಿಸುತ್ತಿದ್ದರು. ಆ ಕಗ್ಗತ್ತಲೆಯಲ್ಲಿ ಕರೀಮೇಘಗಳಲ್ಲಿರುವ ಮಿಂಚುಗಳಂತೆ, ದೀಪಗಳು ಪ್ರಕಾಶಿಸುತ್ತಿದ್ದುವು. ದೀಪದ ಬೆಳಕಿನಿಂದ ಉಭಯಸೈನ್ಯವೂ ಚೆನ್ನಾಗಿ ಪ್ರಕಾಶಕ್ಕೆ ಬಂದಾಗ, ದ್ರೋಣನು ಸುವರ್ಣಕವಚವನ್ನು ಧರಿಸಿ, ಅಗ್ನಿಯಂತೆಯೂ, ಮಧ್ಯಾಹ್ನಸೂರ್ಯನಂತೆಯೂ, ಬೆಳಗುತ್ತಾ ಶತ್ರುಗಳಿಗೆ ಭಯಂಕರನಾಗಿದ್ದನು. ದೀಪಪ್ರಭೆಗಳು ರಾಜರ ಸುವರ್ಣಾಭರಣಗಳಲ್ಲಿಯೂ, ಚಿನ್ನದ ಕಟ್ಟುಳ್ಳ ಅವರ ಧನುಸ್ಸುಗಳಲ್ಲಿಯೂ, ಅವರ ಶಸ್ತ್ರಗಳಲ್ಲಿಯೂ ಪ್ರತಿಫಲಿಸಿ, ನೋಡುವವರ ಕಣ್ಣನ್ನು ಕೋರೈಸುವಂತಿದ್ದುವು. ಅಡ್ಡೆಯಲ್ಲಿ ಕಟ್ಟಿ ಸಾಗಿಸಿಕೊಂಡು ಬರುವ ಗದೆಗಳು, ಪರಿಘಗಳು, ರಥಗಳಲ್ಲಿ ಸಿದ್ಧವಾಗಿಟ್ಟ ಶಕ್ತಿಗಳು, ಇವುಗಳೊಳಗೆಲ್ಲಾ ಆ ದೀಪಪ್ರಭೆ

ಗಳು ಪ್ರತಿಫಲಿಸಿ, ಒಂದಕ್ಕೆರಡು ದೀಪಗಳನ್ನು ಹಚ್ಚಿಸಿದಂತೆ ಕಾಣಿಸುತ್ತಿದ್ದುವು. ಸುವರ್ಣರತ್ನಖಚಿತಗಳಾದ ಛತ್ರ ಚಾಮರಗಳು, ಖಡ್ಗಗಳು, ದೊಡ್ಡ ಕೊಳ್ಳಿಗಳು, ಸುವರ್ಣಮಾಲಿಕೆಗಳು, ಇವೆಲ್ಲಾ ದೀಪಗಳ ಪ್ರತಿ ಪ್ರಭೆಗಳನ್ನು ಹರಡುತ್ತಿದ್ದುವು. ಹೀಗೆ ಆ ಉಭಯಸೈನ್ಯಗಳಲ್ಲಿಯೂ ದೀಪಪ್ರಭೆಗಳು ಮಾತ್ರವಲ್ಲದೆ ಶಸ್ತ್ರಪ್ರಭೆಗಳು, ಆಭರಣಪ್ರಭೆಗಳು, ಇವೆಲ್ಲ ಒಂದಾಗಿ ಸೈನ್ಯಕ್ಕೆ ದೊಡ್ಡ ಬೆಳಕನ್ನುಂಟುಮಾಡುತ್ತಿದ್ದುವು. ರಕ್ತದಿಂದ ತೊಯ್ದು ಕೆಂಪಾದ ಶಸ್ತ್ರಗಳು! ಕಳಚಿಬಿದ್ದ ಕವಚಗಳು! ಇವೆಲ್ಲ ತಮ್ಮ ಮೇಲೆ ಬಿದ್ದ ದೀಪಪ್ರಭೆಯಿಂದ ಮಿಂಚನ್ನು ಹೊರಡಿಸುವಂತಿದ್ದುವು. ಶಸ್ತ್ರಪ್ರಹಾರದಿಂದ ಮೈ ನಡುಗುವವರು! ಇದಿರಾಳಿಗಳನ್ನು ಹೊಡೆಯುವವರು! ವೇಗದಿಂದೋಡುವವರು! ಇಂತಹ ಸೈನಿಕರ ಮುಖಗಳು ಗಾಳಿಯಿಂದ ಆಡಿಸಲ್ಪಟ್ಟ ಕಮಲಗಳಂತೆ ಕಾಣುತ್ತಿದ್ದುವು. ಒಣಗಿದ ಕಾಡು ಕಾಡುಗಿಚ್ಚಿನಿಂದ ದಗ್ಧವಾಗುತ್ತಿರುವಾಗ, ಅದರ ಉರಿಯಿಂದಲೂ, ಹೊಗೆಯಿಂದಲೂ ಸೂರ್ಯನ ಕಾಂತಿಯು ಮಸುಕಾಗುವಂತೆ, ಆಗ ರಣಾಂಗಣದಲ್ಲಿದ್ದ ಭಾರತ ಸೈನ್ಯವು ಆ ದೀಪಜ್ವಾಲೆಗಳ ನಡುವೆ ಕಾಣಿಸುತ್ತಿದ್ದಿತು, ನಮ್ಮ ಸೈನ್ಯದಲ್ಲಿ ಸುತ್ತಲೂ ದೀಪಗಳು ಬೆಳಗಲ್ಪಟ್ಟುದನ್ನು ನೋಡಿ, ಅತ್ತಲಾಗಿ ಪಾಂಡವರೂ ತಮ್ಮ ಸೈನ್ಯದ ಪದಾತಿಗಳಿಗೆ ದೀಪಗಳನ್ನು ಬೆಳಗಿಸುವಂತೆ ಆಜ್ಞೆಮಾಡಿದರು. ಅದರಂತೆ ಆ ಕಡೆಯಲ್ಲಿ ಒಂದೊಂದು ಆನೆಯನ್ನು ಸುತ್ತಿ ಏಳೇಳುದೀಪಗಳು! ರಥವೊಂದಕ್ಕೆ ಹತ್ತು ದೀಪಗಳು! ಒಂದೊಂದು ಕುದುರೆಗೆ ಎರಡೆರಡು ದೀಪಗಳು! ಇದಲ್ಲದೆ ಸೈನ್ಯಗಳ ಪಕ್ಕಗಳಲ್ಲಿ ಕೆಲವು ದೀಪಗಳು! ಸೈನ್ಯದ ಹಿಂಭಾಗದಲ್ಲಿ ಕೆಲವು! ಧ್ವಜಚಿಹ್ನಗಳು ಕಾಣಿಸುವಂತೆ ಒಂದೊಂದು ಧ್ವಜದ ಮೇಲೆಯೂ ಕೆಲವು ದೀಪಗಳು! ಹೀಗೆಯೇ ಸೇನೆಗಳ ಹಿಂದೆ, ಮುಂದೆ, ನಡುವೆ, ಉಭಯಪಾರ್ಶ್ವಗಳಲ್ಲಿ, ಎಲ್ಲಾ ಕಡೆಯೂ, ಪದಾತಿಗಳು ಉರಿಯುವ ದೊಂದೆಗಳನ್ನು ಕೈಯಲ್ಲಿ ಹಿಡಿದು ನಿಂತರು. ಕೆಲವರು ಸೈನ್ಯಗಳ ನಡುಭಾಗದಲ್ಲಿಯೂ, ಅವುಗಳ ಸುತ್ತಿನಲ್ಲಿಯೂ, ದೀವಟಿಗೆಗಳನ್ನು ಹಿಡಿದುಕೊಂಡು ಸುತ್ತಿಸುತ್ತಿ ಬರುತ್ತಿದ್ದರು. ಹೀಗೆ ಉಭಯಸೈನ್ಯಗಳಲ್ಲಿಯೂ, ಪದಾತಿಗಳು ಗಜ, ರಥ, ತುರಗ, ಸೈನ್ಯಗಳಿಗೆ ದೀಪಗಳನ್ನು ಹಿಡಿಯುತ್ತಿದ್ದರು. ಮಹಾರಾಜಾ! ಸೂರ್ಯಗ್ರಹದಿಂದ ಅಗ್ನಿಗೆ

ಪ್ರಕಾಶವು ಒದಗುವಂತೆ, ನಿನ್ನ ಸೈನ್ಯವೆಲ್ಲಾ ದೀಪಸಹಾಯದಿಂದ ಕಾಂತಿ ಯುಕ್ತವಾಗಿ ಬೆಳಗುತ್ತಿದ್ದಿತು. ಈ ಉಭಯಸೈನ್ಯದಲ್ಲಿ ಹಚ್ಚಿದ ದೀಪಪ್ರಭೆಗಳು ಭೂಮ್ಯಂತರಿಕ್ಷದಿಕ್ಕುಗಳನ್ನೆಲ್ಲ ತಮ್ಮ ಪ್ರಕಾಶದಿಂದ ಬೆಳಗುತ್ತಾ, ಉಭಯಸೈನ್ಯವನ್ನೂ ಪ್ರಕಾಶಗೊಳಿಸುತ್ತಿದ್ದುವು. ಈ ದೀಪಪ್ರಕಾಶದಿಂದ ದೇವ, ಗಂಧರ್ವ, ಯಕ್ಷ, ಸಿದ್ಧಾದಿಗಳೆಲ್ಲ ಆಕರ್ಷಿಸಲ್ಪಟ್ಟು, ಯುದ್ಧದರ್ಶನಕ್ಕಾಗಿ ಆಕಾಶದಲ್ಲಿ ಬಂದು ನೆರೆದರು. ಅಲ್ಲಿ ನೆರೆದ ಯಕ್ಷ ಗಂಧರ್ವಾಪ್ಸರಸ್ಸುಗಳ ಗುಂಪಿನಿಂದಲೂ ಯುದ್ಧದಲ್ಲಿ ಹತರಾಗಿ ಸ್ವರ್ಗಕ್ಕೇರುವ ವೀರರಿಂದಲೂ ಆ ರಣಭೂಮಿಯು ದೇವತೆಗಳ ನಿವಾಸದಂತೆ ಕಾಣಿಸುತ್ತಿದ್ದಿತು. ದೀಪಪ್ರಭೆಗಳಲ್ಲಿ ಸಂಚರಿಸುತ್ತಿರುವ ಆನೆಕುದುರೆಗಳು, ರಥಗಳು, ಕೋಪಗೊಂಡ ಯೋಧರು, ಅಲ್ಲಲ್ಲಿ ಸತ್ತುಬಿದ್ದ ವಾಹನಗಳು, ಭಯದಿಂದೋಡುತ್ತಿರುವ ಕುದುರೆಗಳು, ಇವುಗಳಿಂದ ತುಂಬಿದ ಆ ಉಭಯ ಸೇನಾವ್ಯೂಹವು ಸುರಾಸುರರ ವ್ಯೂಹಕ್ಕೆ ಸಮಾನವಾಗಿದ್ದಿತು. ಆಗಿನ ಸೈನ್ಯವು ಶಕ್ತಿಪ್ರಯೋಗಗಳೆಂಬ ಬಿರುಗಾಳಿಯಿಂದಲೂ, ಮಹಾರಥಗಳೆಂಬ ಮೇಘಗಳಿಂದಲೂ, ಆನೆಕುದುರೆಗಳ ಧ್ವನಿಯೆಂಬ ಘೋಷದಿಂದಲೂ, ಶಸ್ತ್ರವರ್ಷವೆಂಬ ವರ್ಷದಿಂದಲೂ, ರಕ್ತವೆಂಬ ಜಲಪ್ರವಾಹದಿಂದಲೂ, ಕೂಡಿದ ಒಂದು ಮಳೆಗಾಲದ ದಿನದಂತೆ ಕಾಣಿಸಿತು. ಆ ರಾತ್ರಿಯುದ್ಧದಲ್ಲಿ ಅಗ್ನಿಗೆಣೆಯಾದ ತೇಜಸ್ಸುಳ್ಳ ದ್ರೋಣನು, ಬೇಸಗೆಯಲ್ಲಿ ಗಗನಮಧ್ಯಗತನಾದ ಸೂರ್ಯನಂತೆ ತನ್ನ ಪರಾಕ್ರಮದಿಂದ ಪಾಂಡವರನ್ನೆಲ್ಲಾ ಸಂತಾಪಗೊಳಿಸುತ್ತಿದ್ದನು.

ಇದು ನೂರ ಅರುವತ್ತುನಾಲ್ಕನೆಯ ಅಧ್ಯಾಯವು.

---

## ಸಂಕುಲಯುದ್ಧವು.

ಮಹಾರಾಜಾ! ಹೀಗೆ ಧೂಳಿನಿಂದಲೂ, ಕತ್ತಲೆಯಿಂದಲೂ ಗಾಢಾಂಧಕಾರವು ಕವಿದಂತಿದ್ದ ಆ ರಾತ್ರಿಯಲ್ಲಿ, ಉಭಯಪಕ್ಷದಲ್ಲಿಯೂ ದೀಪಗಳನ್ನು ಹಚ್ಚಿದಮೇಲೆ, ಎರಡುಕಡೆಯ ವೀರರೂ ಆಯುಧಗಳನ್ನು ಧರಿಸಿ ಸಿದ್ಧರಾಗಿ, ಒಬ್ಬರನ್ನೊಬ್ಬರು ವಧಿಸುವ ಸಂಕಲ್ಪದಿಂದ ಯುದ್ಧಕ್ಕೆ ಆರಂಭಿಸಿ

ದರು. ಒಬ್ಬರನ್ನೊಬ್ಬರು ದುರದುರನೆ ನೋಡಿದರು. ಅಲ್ಲಲ್ಲಿ ರತ್ನಖಚಿತವಾದ ಸುವರ್ಣದಂಡಗಳಮೇಲೆ ಸುಗಂಧತೈಲದಿಂದ ನೆನೆಸಲ್ಪಟ್ಟ ದೀವಟಿಗೆಗಳು ಧಗಧಗನೆ ಉರಿಯುತ್ತಿದ್ದುವು. ಅತ್ಯಂತ ಪ್ರಕಾಶವುಳ್ಳ ದೇವ ಗಂಧರ್ವದೀಪಗಳೇ ಮೊದಲಾದ ವಿಶೇಷ ದೀಪಗಳೂ ಅಲ್ಲಲ್ಲಿ ಬೆಳಗುತ್ತಿದ್ದುವು. ಈ ದೀಪಗಳಿಂದ ಆ ರಣಭೂಮಿಯು ಗ್ರಹಗಳಿಂದಾವೃತವಾದ ಆಕಾಶದಂತೆ ಕಾಣಿಸಿತು. ಸುತ್ತಲೂ ಉರಿಯುತ್ತಿರುವ ಕೊಳ್ಳಿಗಳಿಂದ ಭೂಮಿಯು ಪ್ರಳಯಕಾಲಾಗ್ನಿಯಿಂದ ಆವರಿಸಲ್ಪಟ್ಟಂತೆ ತೋರಿತು. ಮಳೆಗಾಲದಲ್ಲಿ ಮಿಣುಕುಹುಳುಗಳಿಂದ ಆವರಿಸಲ್ಪಟ್ಟ ಕಾಡುಗಳಂತೆ ದಿಕ್ಕುದಿಕ್ಕುಗಳಲ್ಲೆಲ್ಲ ದೀಪಗಳು ಮಿಣುಗುತ್ತಿದ್ದುವು. ಯುದ್ಧಾರಂಭವಾಯಿತು. ವೀರರು ವೀರರನ್ನೂ, ಆನೆಗಳು ಆನೆಗಳನ್ನೂ, ಕುದುರೆಗಳು ಕುದುರೆಗಳನ್ನೂ, ರಥಗಳು ರಥಗಳನ್ನೂ ಇದಿರಿಸಿ ನಿಂತವು. ಆ ಭಯಂಕರರಾತ್ರಿಯಲ್ಲಿ ನಿನ್ನ ಮಗನ ಆಜ್ಞೆಯಿಂದ ಚತುರಂಗಸೈನ್ಯಗಳೂ ಅತಿಕೋಪೋದ್ರೇಕದಿಂದ ಇದಿರಿಸಿ ನಿಂತುವು. ಇಷ್ಟರಲ್ಲಿ ಅರ್ಜುನನು ಕೌರವಸೈನ್ಯವನ್ನೆಲ್ಲ ಒಂದೇಕ್ಷಣಕ್ಕೆ ಧ್ವಂಸಮಾಡುವಷ್ಟು ಹಸ್ತವೇಗದಿಂದ ಕೌರವಸೈನ್ಯದಮೇಲೆ ಬಾಣಗಳನ್ನು ಬಿಡಲಾರಂಭಿಸಿದನು" ಎಂದನು. ಆಗ ಧೃತರಾಷ್ಟ್ರನು ಭಯಾತುರದಿಂದ "ಸಂಜಯಾ! ಅರ್ಜುನನು ಅಷ್ಟು ಕ್ರೋಧಾವೇಶದಿಂದ ನನ್ನ ಮಗನ ಸೈನ್ಯದಲ್ಲಿ ಪ್ರವೇಶಿಸಿದಮೇಲೆ, ನಮ್ಮವರು ಏನನ್ನಾಲೋಚಿಸಿದರು? ಅವರ ಮನಸ್ಸು ಹೇಗಿದ್ದಿತು? ಅರ್ಜುನನು ಇದಿರಿಸಿಬಂದಾಗ ನಮ್ಮ ಸೈನ್ಯಗಳು ಏನನ್ನು ಮಾಡಿದುವು? ದುರ್ಯೋಧನನು ಆ ಕಾಲಕ್ಕೆ ಉಚಿತವಾದ ತನ್ನ ಕೃತ್ಯವೇನೆಂದು ನಿರ್ಣಯಿಸಿದನು? ಅವನನ್ನು ಇದಿರಿಸಿ ನಿಂತವರಾರು? ಅರ್ಜುನನು ಬಂದಾಗ ದ್ರೋಣನಿಗೆ ಯಾರು ರಕ್ಷಕರಾಗಿ ನಿಂತರು? ದ್ರೋಣನ ಎಡಬಲಪಾರ್ಶ್ವಗಳಲ್ಲಿಯೂ, ಅವನ ಹಿಂದೆಯೂ, ಅವನ ಮುಂಭಾಗದಲ್ಲಿಯೂ ಶತ್ರುಗಳನ್ನು ನಿವಾರಿಸುವುದಕ್ಕಾಗಿ ಯಾರುಯಾರು ನಿಂತರು? ಸಂಜಯಾ! ಯಾವನು ಪಾಂಚಾಲಸೈನ್ಯವನ್ನು ಪ್ರವೇಶಿಸಿ ರಥಮಾರ್ಗಗಳಲ್ಲಿ ನರ್ತಿಸುವಂತೆ ಉತ್ಸಾಹದಿಂದ ತಡೆಬಡೆಯಿಲ್ಲದೆ ಸಂಚರಿಸುತ್ತ, ಅನೇಕ ಪಾಂಚಾಲರಥಿಕರನ್ನು ತನ್ನ ಬಾಣಗಳಿಂದ ದಹಿಸಿದನೋ, ಆ ದ್ರೋಣನು ಧೃಷ್ಟದ್ಯುಮ್ನನಿಂದ ಹೇಗೆತಾನೇ ಹತನಾದನು? ಕೋಪಗೊಂಡ ಕಾಲಾ

ಗ್ನಿಯಂತಿರುವ ಆ ಆಚಾರ್ಯನಿಗೆ ಯುದ್ಧದಲ್ಲಿ ಶತ್ರುಗಳಿಂದ ಮರಣವೆಂದರೇನು? ಇದಲ್ಲದೆ ಓ ಸಂಜಯಾ! ನೀನು ಯಾವಾಗಲೂ ನಮ್ಮ ಶತ್ರುಗಳಿಗೆ ಪರಾಜಯವೇ ಇಲ್ಲವೆಂದೂ, ಅವರು ಯಾವಾಗಲೂ ಎದೆಗುಂದಲಿಲ್ಲವೆಂದೂ, ಅವರು ಯಾವಾಗಲೂ ಸಂತೋಷದಿಂದಲೂ, ಉತ್ಸಾಹದಿಂದಲೂ ಕೂಡಿರುವರೆಂದೂ ಬಾರಿಬಾರಿಗೂ ಹೇಳುತ್ತಿರುವೆ. ನಮ್ಮವರ ವಿಷಯದಲ್ಲಿ ನಿನ್ನಿಂದ ಅಂತಹ ಮಾತುಗಳೇ ಹೊರಡಲಿಲ್ಲ. ನಮ್ಮವರು ಯಾವಾಗಲೂ ಯುದ್ಧದಲ್ಲಿ ಹತರಾದರೆಂದೂ. ಗಾಯಪಟ್ಟರೆಂದೂ, ಓಡಿಹೋದರೆಂದೂ ರಥಿಕರೆಲ್ಲರೂ ವಿರಥರಾಗಿ ಮಾಡಲ್ಪಟ್ಟರೆಂದೂ ಹೇಳುತ್ತಿರುವೆ. ಇಂತಹ ವಿಪರೀತಕ್ಕೆ ಕಾರಣವೇನು?" ಎಂದನು. ಆಪಕ್ಕಾ ಸಂಜಯನು "ಮಹಾರಾಜಾ! ಅದು ನಡೆಯುವುದೇ ಹಾಗೆ! ಅದಿರಲಿ! ದ್ರೋಣನು ಆ ರಾತ್ರಿ ಯುದ್ಧಮಾಡಬೇಕೆಂದು ನಿಶ್ಚಯಿಸಿದಮೇಲೆ, ದುರ್ಯೋಧನನು ಅವನ ಅಭಿಪ್ರಾಯವನ್ನು ತಿಳಿದು, ಕರ್ಣ, ಶಲ್ಯ, ವೃಷಸೇನರನ್ನೂ, ತನ್ನ ಸಹೋದರರನ್ನೂ, ದುರ್ಧರ್ಷಣನನ್ನೂ, ದೀರ್ಘಬಾಹುವನ್ನೂ ಇನ್ನೂ ಅವರಿಗೆ ಸಹಚರರಾಗಿದ್ದವರನ್ನೂ ಕರೆದು ಹೀಗೆಂದನು. "ಎಲೈ! ನೀವೆಲ್ಲರೂ ಈಗಿನ ಯುದ್ಧದಲ್ಲಿ ದ್ರೋಣನನ್ನು ಬಹಳ ಎಚ್ಚರಿಕೆಯಿಂದ ರಕ್ಷಿಸಿಕೊಳ್ಳಬೇಕು. ನಿಮ್ಮ ಪರಾಕ್ರಮದ ಪರಾಕಾಷ್ಠೆಯನ್ನು ತೋರಿಸಬೇಕು. ಎಲ್ಲರೂ ಅವನಿಗೆ ಬೆಂಬಲವಾಗಿರಬೇಕು. ಕೃತವರ್ಮನು ಆ ದ್ರೋಣನಿಗೆ ಬಲಪಾರ್ಶ್ವದಲ್ಲಿಯೂ, ಶಲ್ಯನು ಎಡಪಾರ್ಶ್ವದಲ್ಲಿಯೂ ಹತಶೇಷರಾದ ತ್ರಿಗರ್ತದೇಶದ ಮಹಾರಥರು ದ್ರೋಣನಿಗೆ ಮುಂಭಾಗದಲ್ಲಿಯೂ ಇರಬೇಕು" ಎಂದನು. ನಿನ್ನ ಮಗನು ಅವರೆಲ್ಲರಿಗೆ ಹೀಗೆ ಸ್ಥಾನವಿಭಾಗಗಳನ್ನು ಮಾಡಿಕೊಟ್ಟು, ತಿರುಗಿ ಅವರನ್ನು ಕುರಿತು "ಎಲೈ ವೀರರೇ! ಈ ರಾತ್ರಿ ಯುದ್ಧದಲ್ಲಿ ನಮ್ಮ ಆಚಾರ್ಯನು ಬಹಳ ಅಕ್ಕರೆಯಿಂದ ಕೆಲಸಮಾಡುವಂತೆ ತೋರುವುದು. ಅದರಂತೆಯೇ ಪಾಂಡವರೂ ಬಹಳ ಪ್ರಯತ್ನದಿಂದಿರುವರು. ಆದುದರಿಂದ ಶತ್ರುಸಂಹಾರಕ್ಕೆ ಯತ್ನಿಸುತ್ತಿರುವ ಆ ದ್ರೋಣನನ್ನು ನೀವು ಬಹಳ ಎಚ್ಚರಿಕೆಯಿಂದ ರಕ್ಷಿಸಿಕೊಳ್ಳಬೇಕು. ದ್ರೋಣನು ಯುದ್ಧದಲ್ಲಿ ಮಹಾಬಲಾಢ್ಯನು. ಹಸ್ತವೇಗವುಳ್ಳವನು. ಅದ್ಭುತಪರಾಕ್ರಮವುಳ್ಳವನು. ದೇವತೆಗಳನ್ನಾದರೂ ಜಯಿಸಬಲ್ಲವನು. ಇನ್ನು ಪಾಂಡವರೂ, ಸೋಮ

ಕರೂ ಅವನಿಗೆ ಎಷ್ಟುಮಾತ್ರದವರು? ಆದರೂ ಮಹಾರಥರಾದ ನೀವೂ ಕೂಡ, ಏಕೀಭಾವದಿಂದ ಅವನನ್ನು ಧೃಷ್ಟದ್ಯುಮ್ನನ ಕೈಯಿಂದ ರಕ್ಷಿಸಿಕೊಳ್ಳುವ ವಿಷಯದಲ್ಲಿ ಬಹಳ ಜಾಗರೂಕರಾಗಿರಬೇಕು. ಮುಖ್ಯವಾಗಿ ದ್ರೋಣನಿಗೆ ಆ ಧೃಷ್ಟದ್ಯುಮ್ನನೇ ಮೃತ್ಯುವಾಗಿ ಹುಟ್ಟಿರುವನೆಂದು ಹೇಳುವರು. ಪಾಂಡವಸೈನ್ಯದಲ್ಲಿ ಆ ಧೃಷ್ಟದ್ಯುಮ್ನನೊಬ್ಬನುಹೊರತು, ದ್ರೋಣನಿಗಿದಿರಾಗಿ ಎದೆಗೊಟ್ಟು ಯುದ್ಧಕ್ಕೆ ನಿಲ್ಲತಕ್ಕ ಪುರುಷನೊಬ್ಬನೂ ಇಲ್ಲ. ಆದುದರಿಂದ ನೀವು ಸರ್ವವಿಧದಿಂದಲೂ ಆ ದ್ರೋಣನ ರಕ್ಷಣೆಯಲ್ಲಿ ಎಚ್ಚರಿಕೆಯುಳ್ಳಿರಬೇಕು. ನೀವು ಅವನನ್ನು ನಿರಪಾಯವಾಗಿ ಕಾಪಾಡಿಕೊಂಡರೆ, ಅವನೊಬ್ಬನೇ ಸೃಂಜಯ ಸೋಮಕ ಸೈನ್ಯಗಳನ್ನೆಲ್ಲ ನಿರ್ಮೂಲಮಾಡಬಲ್ಲನು. ಆಗ ಧೃಷ್ಟದ್ಯುಮ್ನನನ್ನೂ ಸುಲಭವಾಗಿ ಅವನೇ ಕೊಂದುಬಿಡುವನು. ಇದರಲ್ಲಿ ಸಂದೇಹವಿಲ್ಲ. ಇದರಂತೆಯೇ ನಮ್ಮ ಕರ್ಣನೂ ಅರ್ಜುನನನ್ನು ಶೀಘ್ರದಲ್ಲಿಯೇ ವಧಿಸುವನು. ನಾನು ಭೀಮಸೇನನನ್ನು ಕೊಲ್ಲುವುದಕ್ಕೆ ಈಗಾಗಲೇ ದೀಕ್ಷೆಯನ್ನು ವಹಿಸಿರುವೆನು. ಉಳಿದ ಪಾಂಡವರನ್ನು ನಮ್ಮ ಕಡೆಯ ಸಾಮಾನ್ಯಯೋಧರೇ ಸುಲಭವಾಗಿ ಜಯಿಸಬಲ್ಲರು. ಆಗ ನಮಗೆ ಜಯವು ಸಿದ್ಧವು. ಈ ಕಾರ್ಯಕ್ಕೆ ನಮಗೆ ಹೆಚ್ಚುಕಾಲವೂ ಬೇಕಾದುದಿಲ್ಲ. ಆದುದರಿಂದ ನೀವು ದ್ರೋಣನೊಬ್ಬನನ್ನು ಕಾಪಾಡಿಕೊಳ್ಳಿರಿ'' ಎಂದನು. ಇದೇರೀತಿಯಲ್ಲಿ ನಿನ್ನ ಮಗನು ಆ ರಾತ್ರಿಯ ಯುದ್ಧಕ್ಕಾಗಿ ಎಲ್ಲಾ ಸೈನ್ಯವನ್ನೂ ಹುರಿಗೊಳಿಸಿದನು. ಭಯಂಕರವಾದ ಆಗಿನ ಕಗ್ಗತ್ತಲೆಯಲ್ಲಿ ಉಭಯಸೈನ್ಯಗಳಲ್ಲಿಯೂ ಯುದ್ಧಾರಂಭವಾಯಿತು. ಅರ್ಜುನನು ಕೌರವಸೈನ್ಯಗಳನ್ನು ನಾನಾಶಸ್ತ್ರಗಳಿಂದ ಭಂಗಿಸುತ್ತಿದ್ದನು. ಕೌರವರೂ ಅರ್ಜುನನನ್ನು ವಿವಿಧಾಸ್ತ್ರಗಳಿಂದ ಇದಿರಿಸುತ್ತಿದ್ದರು. ಅಶ್ವತ್ಥಾಮನು ದ್ರುಪದನನ್ನೂ, ದ್ರೋಣನು ಸೃಂಜಯರನ್ನೂ ಬಾಣಗಳಿಂದ ಮುಚ್ಚುತ್ತಿದ್ದರು. ಪಾಂಡವಪಾಂಚಾಲಸೈನ್ಯಗಳೊಡನೆ ಕೌರವರಿಗೆ ಘೋರಯುದ್ಧವಾಯಿತು. ಆ ರಾತ್ರಿ ಕುರುಕ್ಷೇತ್ರದಲ್ಲಿ ನಡೆದ ಯುದ್ಧದಂತೆ ಘೋರಯುದ್ಧವು ಹಿಂದೆ ನಡೆದುದನ್ನು ನಾವು ಕಂಡೂ ಇಲ್ಲ! ಕೇಳಿದುದೂ ಇಲ್ಲ!

ಇದು ನೂರ ಅರುವತ್ತೈದನೆಯ ಅಧ್ಯಾಯವು.



## ಕೃತವರ್ಮನಿಂದ ಯುಧಿಷ್ಠಿರನ ಪರಾಜಯವು.

ಹೀಗೆ ರಾತ್ರಿಯುದ್ಧವು ನಡೆಯುತ್ತಿದ್ದಾಗ, ಧರ್ಮಪುತ್ರನು ತನ್ನ ಕಡೆಯ ಪಾಂಡವ ಪಾಂಚಾಲ ಸೋಮಕ ವೀರರನ್ನು ನೋಡಿ "ಎಲೈ ವೀರರೇ! ನೀವೆಲ್ಲರೂ ಸೇರಿ ದ್ರೋಣನೊಬ್ಬನನ್ನೇ ಇದಿರಿಸಿರಿ! ಅವನಿಂದ ನಮ್ಮ ಸೈನ್ಯವು ಬಹಳವಾಗಿ ಕ್ಷೀಣಿಸುತ್ತಿರುವುದು" ಎಂದನು. ಅದರಂತೆ ಅವರೆಲ್ಲರೂ ಒಂದಾಗಿ ಸೇರಿ ಭಯಂಕರಗರ್ಜನೆಯೊಡನೆ ದ್ರೋಣನನ್ನೇ ಇದಿರಿಸಿಹೋದರು. ನಮ್ಮವರೂ ಪ್ರತಿಗರ್ಜನೆಗಳಿಂದ ತಮ್ಮ ಯುದ್ಧೋತ್ಸಾಹಗಳನ್ನು ತೋರಿಸುತ್ತ, ಅವರಿಗಿದಿರಾಗಿ ತಮ್ಮ ಶಕ್ತಿಗೂ, ಪೌರುಷಕ್ಕೂ, ಉತ್ಸಾಹಕ್ಕೂ ತಕ್ಕಂತೆ ಯುದ್ಧವನ್ನು ನಡೆಸುತ್ತಿದ್ದರು. ಇಷ್ಟರಲ್ಲಿ ಕೃತವರ್ಮನು ದ್ರೋಣನಿಗಿದಿರಾಗಿ ವೇಗದಿಂದ ಹೋಗುತ್ತಿದ್ದ ಯುಧಿಷ್ಠಿರನನ್ನು ನೋಡಿ, ಮದದಾನೆಯು ಆನೆಯನ್ನಿದಿರಿಸುವಂತೆ ಅವನನ್ನು ದಾರಿಯಲ್ಲಿಯೇ ತಡೆದನು. ಇನ್ನೊಂದುಕಡೆ ಬಾಣವರ್ಷವನ್ನು ಕರೆಯುತ್ತಬರುವ ಸಾತ್ಯಕಿಯನ್ನು ಭೂರಿಯೆಂಬ ರಾಜನು ಇದಿರಿಸಿ ತಡೆದನು. ಸಹದೇವನನ್ನು ಕರ್ಣನು ತಡೆದನು. ಕಾಲಾಂತಕನಂತೆ ಬರುತ್ತಿದ್ದ ಭೀಮನನ್ನು ನಿನ್ನ ಮಗನಾದ ದುರ್ಯೋಧನನು ಅಡ್ಡಗಟ್ಟಿ ನಿಂತನು. ನಕುಲನನ್ನು ನಿನ್ನ ಮೈದುನನಾದ ಶಕುನಿಯು ತಡೆದನು. ಶಿಖಂಡಿಯನ್ನು ಕೃಪನೂ, ಮಯೂರವರ್ಣದ ಕುದುರೆಗಳುಳ್ಳ ಪ್ರತಿವಿಂಧ್ಯನನ್ನು ದುಶ್ಶಾಸನನೂ, ಅನೇಕ ಮಾಯೆಗಳನ್ನು ಬಲ್ಲ ಘಟೋತ್ಕಚನನ್ನು ಅಶ್ವತ್ಥಾಮನೂ, ದ್ರುಪದನನ್ನು ವೃಷಸೇನನೂ, ವಿರಾಟನನ್ನು ಶಲ್ಯನೂ, ನಕುಲಪುತ್ರನಾದ ಶತಾನೀಕನನ್ನು ಚಿತ್ರಸೇನನೂ, ಅರ್ಜುನನನ್ನು ಅಲಾಯುಧನೆಂಬ ರಾಕ್ಷಸನೂ, ದ್ರೋಣನ ಸಮೀಪಕ್ಕೆ ಬಾರದಹಾಗೆ ಅಡ್ಡಗಟ್ಟಿ ನಿವಾರಿಸಿದರು. ದ್ರೋಣನಿಗೆ ಇದಿರಾಗಿ ಧೃಷ್ಟದ್ಯುಮ್ನನು ನಿಂತನು. ಹೀಗೆ ದ್ರೋಣವಧೆಯನ್ನುದ್ದೇಶಿಸಿ ಬರುತ್ತಿದ್ದ ಶತ್ರುವೀರರನ್ನು ಕೌರವ ಸೈನಿಕರು ಬಹುಪ್ರಯತ್ನದಿಂದ ತಡೆಯುತ್ತಿದ್ದರು. ಗಜಯೋಧರೂ ನೂರುಸಾವಿರ ಲೆಕ್ಕದಿಂದ ಒಬ್ಬರನ್ನೊಬ್ಬರು ಇದಿರಿಸಿ ಹೊಡೆದಾಡುತ್ತಿದ್ದರು. ಯುದ್ಧಕ್ಕಾಗಿ ಪ್ರೇರಿಸಲ್ಪಟ್ಟ ಕುದುರೆಗಳು ರೆಕ್ಕೆಯುಳ್ಳ ಪರ್ವತಗಳಂತೆ ಓಡಾಡುತ್ತ ಒಂದನ್ನೊಂದು ತಡೆಯುತ್ತಿದ್ದುವು. ಅಶ್ವಯೋಧರು ಪ್ರಾಸ, ಶಕ್ತಿ, ಋಷ್ಟಿ, ಮೊದಲಾದ ಆಯುಧಗ

ಳನ್ನು ಹಿಡಿದು ಗರ್ಜನ ಪ್ರತಿಗರ್ಜನಗಳನ್ನು ಮಾಡುತ್ತ ಹೊಡೆದಾಡುತ್ತಿದ್ದರು. ಗದೆ, ಮುಸಲ ಮೊದಲಾದ ಆಯುಧಗಳನ್ನು ಹಿಡಿದು ಪದಾತಿಗಳು ಪದಾತಿಗಳನ್ನು ಇದಿರಿಸುತ್ತಿದ್ದರು. ಹೀಗೆ ಅಲ್ಲಲ್ಲಿ ಯುದ್ಧವು ನಡೆಯುತ್ತಿದ್ದಿತು. ಕೃತವರ್ಮನು ಸಮುದ್ರವೇಗವನ್ನು ವೇಲೆಯು ಹೇಗೋಹಾಗೆ ಯುಧಿಷ್ಠಿರನ ಮಾರ್ಗವನ್ನು ತಡೆದು ನಿಲ್ಲಲು, ಯುಧಿಷ್ಠಿರನು ಕೋಪದಿಂದ ನಿಲ್ಲುನಿಲ್ಲೆಂದು ಹೇಳಿ ಕೃತವರ್ಮನಮೇಲೆ ಐದು ಬಾಣಗಳನ್ನು ಬಿಟ್ಟನು. ತಿರುಗಿ ಇಪ್ಪತ್ತು ಬಾಣಗಳನ್ನು ಪ್ರಯೋಗಿಸಿದನು. ಕೃತವರ್ಮನು ಒಂದು ಭಲ್ಲದಿಂದ ಯುಧಿಷ್ಠಿರನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿ ಅವನಮೇಲೆ ಏಳು ಬಾಣಗಳನ್ನು ಬಿಟ್ಟನು. ಒಡನೆಯೇ ಯುಧಿಷ್ಠಿರನು ಬೇರೊಂದು ಬಿಲ್ಲನ್ನು ತೆಗೆದುಕೊಂಡು ಕೃತವರ್ಮನ ಎದೆಗೂ, ತೋಳುಗಳಿಗೂ ಗುರಿಯಿಟ್ಟು ಹತ್ತು ಬಾಣಗಳನ್ನು ವೇಗದಿಂದ ಬಿಟ್ಟನು. ಕೃತವರ್ಮನು ಅದರಿಂದ ಬಹಳವಾಗಿ ನೊಂದು, ರೋಷಾವಿಷ್ಟನಾಗಿ ಯುಧಿಷ್ಠಿರನಮೇಲೆ ಏಳು ಬಾಣಗಳನ್ನು ಬಿಟ್ಟನು. ಆಮೇಲೆ ಯುಧಿಷ್ಠಿರನು ಕೃತವರ್ಮನ ಬಿಲ್ಲನ್ನೂ ಕೈಚೀಲವನ್ನೂ ಛೇದಿಸಿ, ಬೇರೆ ಐದು ಬಾಣಗಳಿಂದ ಕೃತವರ್ಮನನ್ನು ಹೊಡೆದನು. ಅದರಿಂದ ಕೃತವರ್ಮನ ಕವಚವು ಭಿನ್ನವಾಯಿತು. ಆದರೇನು? ಎವೆಹಾರುವಷ್ಟರಲ್ಲಿಯೇ ಕೃತವರ್ಮನು ಬೇರೊಂದು ಬಿಲ್ಲನ್ನು ಕೈಗೆತ್ತಿಕೊಂಡು ಧರ್ಮರಾಜನನ್ನು ಆರುವತ್ತು ಬಾಣಗಳಿಂದಲೂ, ಅವನ ಸಾರಥಿಯನ್ನು ಒಂಭತ್ತು ಬಾಣಗಳಿಂದಲೂ ಬಲವಾಗಿ ನೋಯಿಸಿದನು. ಆಗ ಧರ್ಮರಾಜನು ಕೋಪದಿಂದ ತನ್ನ ಕೈಯಲ್ಲಿದ್ದ ಬಿಲ್ಲನ್ನು ರಥದಲ್ಲಿಟ್ಟು, ಸರ್ಪದಂತಿದ್ದ ಒಂದು ಶಕ್ತಿಯನ್ನು ಕೃತವರ್ಮನಮೇಲೆ ಪ್ರಯೋಗಿಸಿದನು. ಆ ಶಕ್ತಿಯು ಕೃತವರ್ಮನ ಬಲತೋಳಿಗೆ ತಾಗಿ ಬಹಳ ನೋವನ್ನುಂಟುಮಾಡಿತು. ಇದೇಸಮಯದಲ್ಲಿ ಧರ್ಮರಾಜನು ತಿರುಗಿ ತನ್ನ ಬಿಲ್ಲನ್ನೆತ್ತಿಕೊಂಡು, ಕೃತವರ್ಮನಮೇಲೆ ಅನೇಕ ಬಾಣಗಳನ್ನು ವರ್ಷಿಸಿದನು. ಆಗಲೂ ಕೃತವರ್ಮನು ಎದೆಗುಂದದೆ, ತನ್ನ ಹಸ್ತವೇಗದಿಂದ ನಿಮಿಷಾರ್ಧದಲ್ಲಿಯೇ ಯುಧಿಷ್ಠಿರನ ರಥಾಶ್ವಗಳನ್ನೂ, ಸಾರಥಿಯನ್ನೂ ಕೆಡಹಿ, ಅವನನ್ನು ವಿರಥನನ್ನಾಗಿ ಮಾಡಿದನು. ಆಮೇಲೆ ಧರ್ಮರಾಜನು ಕತ್ತಿ ಗುರಾಣಿಗಳನ್ನು ಕೈಗೆತ್ತಿಕೊಳ್ಳಲು, ಕೃತವರ್ಮನು ಅದನ್ನೂ ಆ ಕ್ಷಣವೇ ಬಾಣ

ಗಳಿಂದ ತುಂಡುಮಾಡಿದನು. ಆಮೇಲೆ ಯುಧಿಷ್ಠಿರನು ಸುವರ್ಣದಂಡವುಳ್ಳ ಒಂದು ತೋಮರವನ್ನು ಹಾರ್ದಿಕ್ಯನಮೇಲೆ ಬೀಸಿದನು. ಕೃತವರ್ಮನು ಅದನ್ನೂ ಎರಡು ತುಂಡಾಗಿ ಕತ್ತರಿಸಿದುದಲ್ಲದೆ, ತನ್ನ ಹಸ್ತವೇಗದಿಂದ ನೂರಾರು ತೀಕ್ಷ್ಣಬಾಣಗಳನ್ನು ಯುಧಿಷ್ಠಿರನಮೇಲೆ ಪ್ರಯೋಗಿಸಿದನು. ಆ ಬಾಣಗಳಿಂದ ಧರ್ಮರಾಜನ ಕವಚವು ಭಿನ್ನವಾಗಿ, ಅಂತರಿಕ್ಷದಿಂದ ಉದಿರುವ ನಕ್ಷತ್ರಗಳಂತೆ ಪುಡಿಪುಡಿಯಾಗಿ ಬಿದ್ದಿತು. ಹೀಗೆ ಕೃತವರ್ಮನ ಬಾಣಪ್ರಹಾರದಿಂದ ಧರ್ಮರಾಜನಿಗೆ ರಥವು ಮುರಿಯಿತು! ಕವಚವು ಹರಿಯಿತು! ಧನುಸ್ಸು ತುಂಡಾಯಿತು! ಮೈಯೆಲ್ಲವೂ ಜರ್ಝರಿತವಾಯಿತು! ಇದರಮೇಲೆ ಧರ್ಮಪುತ್ರನು ಆ ಕೃತವರ್ಮನಮುಂದೆ ನಿಲ್ಲಲಾರದೆ, ಯುದ್ಧರಂಗದಿಂದ ಹಿಂತಿರುಗಿ ಹೊರಟುಹೋದನು. ಹೀಗೆ ಕೃತವರ್ಮನು ಯುಧಿಷ್ಠಿರನನ್ನು ಜಯಿಸಿದಮೇಲೆ ಹಿಂತಿರುಗಿ ದ್ರೋಣನಬಳಿಗೆ ಹೋಗಿ ಆವನಿಗೆ ಚಕ್ರರಕ್ಷಕನಾಗಿದ್ದನು,

ಇದು ನೂರ ಅರುವತ್ತಾರನೆಯ ಅಧ್ಯಾಯವು.

---

ಸಾತ್ಯಕಿಯು ಭೂರಿಯೆಂಬ ರಾಜನನ್ನು ಕೊಂದುದು. ಅಶ್ವತ್ಥಾಮನಿಂದ ಘಟೋತ್ಕಚನ ಪರಾಜಯವು ಭೀಮನು ದುರ್ಯೋಧನನನ್ನು ಸೋಲಿಸಿದುದು.

ಮಹಾರಾಜಾ! ವೇಗದಿಂದ ಬರುವ ಆನೆಯನ್ನು ತಡೆಯುವಂತೆ ಭೂರಿಯೆಂಬ ರಾಜನು ಸಾತ್ಯಕಿಯನ್ನು ಇದಿರಿಸಿ ತಡೆದನಷ್ಟೆ? ಇದರಿಂದ ಸಾತ್ಯಕಿಯು ಕುಪಿತನಾಗಿ, ಐದು ಬಾಣಗಳನ್ನು ಆ ಭೂರಿಯ ಎದೆಗೆ ನಾಟಿದನು. ಇದರಿಂದ ಭೂರಿಯ ಎದೆಯಲ್ಲಿ ದೊಡ್ಡ ಗಾಯವಾಗಿ ರಕ್ತವು ಸುರಿಯಿತು. ಆದರೂ ಲಕ್ಷ್ಯಮಾಡದೆ ಕೌರವರಾಜನಾದ ಆ ಭೂರಿಯು ಹತ್ತು ಬಾಣಗಳನ್ನು ಸಾತ್ಯಕಿಯ ಎದೆಗೆ ಗುರಿಯಿಟ್ಟು ಹೊಡೆದನು. ಇಬ್ಬರೂ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವರಾಗಿ ಬಾಣಗಳಿಂದ ಹೊಡೆದಾಡುತ್ತಿದ್ದರು. ಅವರಿಬ್ಬರ ಶಸ್ತ್ರವರ್ಷವು ಭಯಂಕರವಾಯಿತು. ಕಾಲನಿಗೂ, ಅಂತಕನಿಗೂ ಸಮಾನರೆನಿಸಿ ಅವರಿಬ್ಬರೂ ಒಬ್ಬರನ್ನೊಬ್ಬರು ಬಾಣಗ

ಳಿಂದ ಮರೆಸಿದರು. ಒಂದು ಮುಹೂರ್ತಕಾಲದವರೆಗೆ ಅವರಿಬ್ಬರ ಯುದ್ಧವು ಸಮಾನವಾಗಿದ್ದಿತು. ಈ ನಡುವೆ ಸಾತ್ಯಕಿಯು ಭೂರಿಯ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿ "ಎಲಾ! ನಿಲ್ಲು ನಿಲ್ಲೆಂದು" ಹೇಳುತ್ತ, ಒಂಭತ್ತು ಬಾಣಗಳನ್ನು ಅವನ ಎದೆಗೆ ಗುರಿಯಿಟ್ಟು ಹೊಡೆದನು. ಅದನ್ನು ಲಕ್ಷ್ಯಮಾಡದೆ ಭೂರಿಯು ಹೊಸಬಿಲ್ಲನ್ನು ಕೈಗೆತ್ತಿಕೊಂಡು, ಮೂರು ಬಾಣಗಳನ್ನು ಸಾತ್ಯಕಿಯಮೇಲೆ ಹೊಡೆದನು. ಸಾತ್ಯಕಿಯ ಬಿಲ್ಲನ್ನು ಕತ್ತರಿಸಿದನು. ಇದನ್ನು ಸಹಿಸಲಾರದೆ ಸಾತ್ಯಕಿಯು ಮಹಾವೇಗವುಳ್ಳ ಶಕ್ತಿಯೊಂದನ್ನು ಆ ಭೂರಿಯ ಎದೆಗೆ ಗುರಿಯಿಟ್ಟು ಪ್ರಯೋಗಿಸಿದನು. ಈ ಶಕ್ತಿಯ ವೇಗದಿಂದ ಭೂರಿಯು ಮೈಮುರಿದು, ಆಕಾಶದಿಂದ ನೆಲಕ್ಕೆ ಬಿದ್ದ ಅಂಗಾರಕಗ್ರಹದಂತೆ ರಥದಿಂದ ಕೆಳಕ್ಕೆ ಬಿದ್ದುಬಿಟ್ಟನು. ಹೀಗೆ ಭೂರಿಯು ಮೃತನಾದುದನ್ನು ಕಂಡು ಅಶ್ವತ್ಥಾಮನು "ಸಾತ್ಯಕೀ! ನಿಲ್ಲು! ನಿಲ್ಲೆ"ಂದು ವೇಗದಿಂದ ಇದಿರಿಸಿ ಬಂದನು. ಮೇಘವು ಮಳೆಯನ್ನು ಕರೆದಂತೆ ಸಾತ್ಯಕಿಯಮೇಲೆ ಎಡೆಬಿಡದೆ ಬಾಣಗಳನ್ನು ವರ್ಷಿಸಿದನು. ಅಶ್ವತ್ಥಾಮನು ಹೀಗೆ ಅತ್ಯಾಕ್ರೋಶದಿಂದ ಸಾತ್ಯಕಿಯ ರಥಕ್ಕಿದಿರಾಗಿ ಬರುವುದನ್ನು ಕಂಡು ಘಟೋತ್ಕಚನು ದೊಡ್ಡ ಸಿಂಹನಾದವನ್ನು ಮಾಡಿ "ಎಲಾ ಬ್ರಾಹ್ಮಣಾ! ನಿಲ್ಲು! ಇನ್ನು ನೀನು ನನ್ನಿಂದ ಬದುಕಿಹೋಗಲಾರೆ. ಸಿಂಹವು ಎಮ್ಮೆಯನ್ನು ಹೇಗೋ ಹಾಗೆ ನಿನ್ನನ್ನು ನಾನು ಈಗ ಕೊಂದುಬಿಡುವೆನು. ನಿನ್ನ ಯುದ್ಧಾತುರವನ್ನು ಇಂದಿಗೆ ಮುಗಿಸುವೆನು" ಎಂದು ಕೋಪದಿಂದ ಕೆಂಪೇರಿದ ಕಣ್ಣುಗಳೊಡನೆ ಮುಂದೆ ಬಂದನು. ತೇರಚ್ಚುಗಳಂತೆ ದೊಡ್ಡ ಬಾಣಗಳನ್ನು ಅಶ್ವತ್ಥಾಮನಮೇಲೆ ವರ್ಷಿಸಿದನು. ಆದರೆ ಅಶ್ವತ್ಥಾಮನು ನಗುಮುಖದಿಂದಲೇ ಲೀಲಾಮಾತ್ರದಿಂದ ಆ ಬಾಣಗಳನ್ನು ಭಂಗಿಸಿ, ಮರ್ಮಭೇದಕಗಳಾದ ನೂರಾರು ಬಾಣಗಳನ್ನು ಆ ಘಟೋತ್ಕಚನಮೇಲೆಯೂ ಪ್ರಯೋಗಿಸಿದನು. ಘಟೋತ್ಕಚನ ಮೈಯಲ್ಲೆಲ್ಲ ಆ ಬಾಣಗಳು ನಾಟಿ, ಕೆದರಿದ ಮುಳ್ಳುಗಳುಳ್ಳ ಮುಳ್ಳುಹಂದಿಯಂತೆ ಕಾಣಿಸಿದನು. ಆಮೇಲೆ ಘಟೋತ್ಕಚನು ವಜ್ರಸಮಾನಗಳಾದ ಬಾಣಗಳಿಂದ ಅಶ್ವತ್ಥಾಮನನ್ನು ಹೊಡೆದನು. ಅಲ್ಲದೆ ಕ್ಷುರಪ್ರ, ಅರ್ಧಚಂದ್ರ, ನಾರಾಚ, ಶಿಲೀಮುಖ, ವರಾಹಕರ್ಣ, ನಾಳೀಕ, ವಿಕರ್ಣಗಳೆಂಬ ವಿವಿಧಾಯುಧಗಳನ್ನು ಅಶ್ವತ್ಥಾಮನಮೇಲೆ ವರ್ಷಿಸಿದನು.

ಆದರೇನು? ಬಿರುಗಾಳಿಯು ಮೇಘಗಳನ್ನು ತೂರುವಂತೆ ಅಶ್ವತ್ಥಾಮನು ತನ್ನ ಮಂತ್ರಾಸ್ತ್ರಗಳಿಂದ ಆ ಬಾಣವರ್ಷಗಳನ್ನೆಲ್ಲ ತೂರಿಬಿಟ್ಟನು. ಅವರಿಬ್ಬರ ಬಾಣಗಳು ಒಂದಕ್ಕೊಂದು ತಾಗಿ, ಆಕಾಶದಲ್ಲಿ ಭಯಂಕರವಾದ ಒಂದು ಬಾಣಯುದ್ಧವೇ ನಡೆಯುವಂತೆ ತೋರಿತು. ಆ ರಾತ್ರಿಯಲ್ಲಿ ಬಾಣಸಂಘಟ್ಟನದಿಂದುಂಟಾದ ಕಿಡಿಗಳು ಮಿಂಚುಹುಳುಗಳಂತೆ ಹಾರುತ್ತಿದ್ದುವು. ಅಶ್ವತ್ಥಾಮನು ತನ್ನ ಬಾಣಗಳಿಂದ ದಿಕ್ಕುಗಳನ್ನೆಲ್ಲ ಮರೆಸಿ, ಆ ರಾಕ್ಷಸನ ಮೇಲೆ ಅಪರಿಮಿತವಾಗಿ ಬಾಣಗಳನ್ನು ಸುರಿದನು. ಅವರಿಬ್ಬರಿಗೂ ಪ್ರಬಲಯುದ್ಧವಾಯಿತು. ಘಟೋತ್ಕಚನು ಕಾಲಾಗ್ನಿಯಂತೆ ಜ್ವಲಿಸುವ ಹತ್ತು ಬಾಣಗಳನ್ನು ಅಶ್ವತ್ಥಾಮನಮೇಲೆ ಪ್ರಯೋಗಿಸಿದನು. ಆ ಬಾಣವು ತಗುಲಿದೊಡನೆ ಅಶ್ವತ್ಥಾಮನು ವ್ಯಸನಡುಗಿ, ಆ ರಥದ ಧ್ವಜವಂಡವನ್ನೊರಗಿ ಪ್ರಜ್ಞೆತಪ್ಪಿದಂತೆ ಕುಳಿತನು. ಆಗ ನಿನ್ನ ಸೈನ್ಯದಲ್ಲಿದ್ದವರಿಗೆಲ್ಲಾ ಅಶ್ವತ್ಥಾಮನು ಸತ್ತನೆಂದೇ ನಿಶ್ಚಯವುಂಟಾಯಿತು. ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಅತ್ತಲಾಗಿ ಪಾಂಚಾಲರೂ, ಸೃಂಜಯರೂ ಸಂತೋಷದಿಂದ ಸಿಂಹನಾದಗಳನ್ನು ಮಾಡಿದರು. ಇಷ್ಟರಲ್ಲಿಯೇ ಅಶ್ವತ್ಥಾಮನು ತಿರುಗಿ ಚೇತರಿಸಿಕೊಂಡು, ಎಡಗೈಯಿಂದ ಬಿಲ್ಲನ್ನು ಎತ್ತಿಹಿಡಿದು, ಯಮದಂಡಕ್ಕೆ ಸಮಾನವಾದ ಒಂದು ಘೋರಬಾಣವನ್ನು ಬಿಲ್ಲಿಗೆ ಜೋಡಿಸಿ, ಕಿವಿಯವರೆಗೆ ನಾಣನ್ನೆಳೆದು, ಘಟೋತ್ಕಚನಮೇಲೆ ಬಿಟ್ಟನು. ಆ ಬಾಣವು ಘಟೋತ್ಕಚನ ಎದೆಯಲ್ಲಿ ನಾಟಿತು. ಇದರಿಂದ ಘಟೋತ್ಕಚನು ಬಹಳವಾಗಿ ನೊಂದು ಮೂರ್ಛಿತನಾಗಿ ರಥದಮೇಲೆಯೇ ಮಲಗಿಬಿಟ್ಟನು. ಘಟೋತ್ಕಚನ ಈ ಸ್ಥಿತಿಯನ್ನು ನೋಡಿ ಅವನ ಸಾರಥಿಯು ರಥವನ್ನು ರಣರಂಗದಿಂದ ಹಿಂತಿರುಗಿಸಿಬಿಟ್ಟನು. ಅಶ್ವತ್ಥಾಮನು ಜಯೋತ್ಸಾಹದಿಂದ ದೊಡ್ಡ ಸಿಂಹನಾದ ಮಾಡಿದನು. ನಿನ್ನ ಮಕ್ಕಳೂ, ಎಲ್ಲಾ ಕೌರವಯೋಧರೂ, ಅಶ್ವತ್ಥಾಮನನ್ನು ಬಹಳವಾಗಿ ಕೊಂಡಾಡಿದರು. ಅಶ್ವತ್ಥಾಮನು ಆಗ ಮಧ್ಯಾಹ್ನಸೂರ್ಯನಂತೆ ಅಪೂರ್ವತೇಜಸ್ಸಿನಿಂದ ಬೆಳಗುತ್ತಿದ್ದನು. ಇದು ಹೀಗಿರಲು, ಅತ್ತಲಾಗಿ ದುರ್ಯೋಧನನು ದ್ರೋಣನ ರಥಕ್ಕಿದಿರಾಗುತಿದ್ದ ಭೀಮನನ್ನು ಕಂಡು, ತಾನೇ ಆ ಭೀಮನನ್ನಿದಿರಿಸುವುದಕ್ಕಾಗಿ ಹೊರಟನು. ಅವನ ಮೇಲೆ ತೀಕ್ಷ್ಣಬಾಣಗಳನ್ನು ವರ್ಷಿಸಿದನು. ಭೀಮನು ಅದಕ್ಕೆ ಪ್ರತಿ

ಯಾಗಿ ಹತ್ತು ಬಾಣಗಳನ್ನು ಬಿಟ್ಟನು. ದುರ್ಯೋಧನನು ಇಪ್ಪತ್ತು ಬಾಣಗಳನ್ನು ಪ್ರಯೋಗಿಸಿದನು. ಆಕಾಶದಲ್ಲಿ ಮೇಘಾವೃತರಾದ ಸೂರ್ಯ ಚಂದ್ರರಂತೆ, ಅವರಿಬ್ಬರೂ ಬಾಣಗಳಲ್ಲಿ ಮರೆಯಾದರು. ಆಮೇಲೆ ತಿರುಗಿ ದುರ್ಯೋಧನನು ಭೀಮನಮೇಲೆ ಐದು ಬಾಣಗಳನ್ನು ವೇಗದಿಂದ ಹೊಡೆದನು. ಅದರಿಂದ ಕುಪಿತನಾದ ಭೀಮನು, ದುರ್ಯೋಧನನ ಕೈಯಲ್ಲಿದ್ದ ಬಿಲ್ಲನ್ನೂ, ಧ್ವಜವನ್ನೂ ಹತ್ತು ಬಾಣಗಳಿಂದ ತುಂಡುಮಾಡಿ, ತೊಂಭತ್ತು ಬಾಣಗಳನ್ನು ದುರ್ಯೋಧನನಮೇಲೆ ಬಿಟ್ಟನು. ಒಡನೆಯೇ ನಿನ್ನ ಮಗನು ಬೇರೊಂದು ಬಿಲ್ಲನ್ನೆತ್ತಿಕೊಂಡು ತೀಕ್ಷ್ಣಬಾಣಗಳನ್ನು ಭೀಮನ ಮೇಲೆ ಪ್ರಯೋಗಿಸಿದನು. ಭೀಮನು ಅವುಗಳನ್ನೆಲ್ಲ ತನ್ನ ಬಾಣಗಳಿಂದ ಭಂಗಿಸಿ, ಇಪ್ಪತ್ತೈದು ಕ್ಷುದ್ರಕಗಳೆಂಬ ಬಾಣಗಳನ್ನು ನಿನ್ನ ಮಗನಮೇಲೆ ಪ್ರಯೋಗಿಸಿದನು. ಇಷ್ಟರಲ್ಲಿಯೇ ನಿನ್ನ ಮಗನು ಒಂದು ಕ್ಷುರಪ್ರದಿಂದ ಭೀಮನ ಬಿಲ್ಲನ್ನು ಕತ್ತರಿಸಿ ಹತ್ತು ಬಾಣಗಳನ್ನು ಅವನಮೇಲೆ ಹೊಡೆದನು. ಭೀಮನು ಬೇರೊಂದು ಬಿಲ್ಲನ್ನು ತೆಗೆದುಕೊಂಡು ಏಳು ಬಾಣಗಳನ್ನು ಜೋಡಿಸಿ ಪ್ರಯೋಗಿಸುವಷ್ಟರಲ್ಲಿ, ಆ ಬಿಲ್ಲನ್ನು ನಿನ್ನ ಮಗನು ತನ್ನ ಹಸ್ತವೇಗದಿಂದ ತುಂಡುಮಾಡಿದನು. ಆಮೇಲೆ ಭೀಮನು ಮತ್ತೊಂದು ಬಿಲ್ಲನ್ನು ಕೈಗೆತ್ತಿಕೊಂಡೊಡನೆ ಅದನ್ನೂ ನಿನ್ನ ಮಗನು ತುಂಡುಮಾಡಿದನು. ಹೀಗೆಯೇ ಭೀಮನು ಕೈಗೆ ತೆಗೆದುಕೊಂಡ ಬಿಲ್ಲನ್ನೆಲ್ಲ ನಿನ್ನ ಮಗನು ಐದಾವರ್ತಿ ಕತ್ತರಿಸಿ ಕೆಡಹಿದನು. ಇದನ್ನು ಸಹಿಸಲಾರದೆ ಭೀಮನು ಒಂದು ಭಯಂಕರವಾದ ಉಕ್ಕಿನ ಶಕ್ತಿಯೊಂದನ್ನು ನಿನ್ನ ಮಗನ ಮೇಲೆ ಬೀಸಿದನು. ಮೃತ್ಯುದೇವತೆಗೆ ಒಡಹುಟ್ಟಿದ ಸಹೋದರಿಯಂತೆಯೂ, ಉರಿಯುವ ಅಗ್ನಿಜ್ವಾಲೆಯಂತೆಯೂ, ಆಕಾಶಕ್ಕೆ ಬೈತಲೆಯನ್ನು ತಿದ್ದುವಂತೆ ತನಗಿದಿರಾಗಿ ಬರುತ್ತಿದ್ದ ಆ ಭಯಂಕರಶಕ್ತಿಯನ್ನು ನಿನ್ನ ಮಗನು ನಡುದಾರಿಯಲ್ಲಿಯೇ ಕತ್ತರಿಸಿದನು. ಆಮೇಲೆ ಭೀಮನು ಮತ್ತಷ್ಟು ಕೋಪಾವಿಷ್ಟನಾಗಿ, ದೊಡ್ಡ ಗದೆಯೊಂದನ್ನು ಸುತ್ತಿ ದುರ್ಯೋಧನನ ರಥಕ್ಕೆ ಗುರಿಯಿಟ್ಟು ಬೀಸಿದನು. ಆ ಗದಾಪ್ರಹಾರದಿಂದ ನಿನ್ನ ಮಗನ ರಥಾಶ್ವಗಳು ಸಾರಥಿಯೊಡನೆ ಸತ್ತುಬಿದ್ದುವು. ವಿರಥನಾದ ನಿನ್ನ ಮಗನು ಅದನ್ನು ನೋಡಿ ಭಯಪಟ್ಟು, ಸಮೀಪದಲ್ಲಿದ್ದ ನಂದಕನ ರಥವನ್ನೇರಿ ಕುಳಿತು ತಲೆ

ತಪ್ಪಿಸಿಕೊಂಡನು. ಆಗ ಭೀಮನು, ದುರ್ಯೋಧನನು ಆ ರಥದಲ್ಲಿ ಹತನಾಗಿರಬೇಕೆಂದೇ ತಿಳಿದು ಸಂತೋಷದಿಂದ ದೊಡ್ಡ ಸಿಂಹನಾದವನ್ನು ಮಾಡಿದನು. ನಿನ್ನ ಸೈನಿಕರೂ ಕೂಡ ತಮ್ಮ ರಾಜನು ಮೃತನಾದನೆಂದೇ ನಿಶ್ಚಯಿಸಿಬಿಟ್ಟರು. ಎಲ್ಲಾ ಕಡೆಯೂ ಹಾಹಾಕಾರವು ಹೊರಟಿತು. ಈ ಹಾಹಾಕಾರವನ್ನೂ, ಭೀಮಸೇನನ ಸಿಂಹನಾದವನ್ನೂ ಕೇಳಿ ನಿನ್ನ ಸೈನ್ಯದಲ್ಲಿ ಅನೇಕರು ಭಯಪಟ್ಟು ಓಡಿದರು. ಯುಧಿಷ್ಠಿರನೂಕೂಡ ದುರ್ಯೋಧನನು ಮೃತನಾದನೆಂದೇ ತಿಳಿದು ವೇಗದಿಂದ ಭೀಮನಿದ್ದಲ್ಲಿಗೆ ಬಂದನು. ಇತ್ತಲಾಗಿ ಪಾಂಚಾಲ, ಕೇಕಯ, ಮಾತ್ಸ್ಯ, ಸೃಂಜಯಾದಿ ವೀರರೆಲ್ಲರೂ ದ್ರೋಣನೊಡನೆ ಯುದ್ಧಪ್ರಯತ್ನದಲ್ಲಿದ್ದರು. ದ್ರೋಣನಿಗೆ ಶತ್ರುಗಳೊಡನೆ ಭಯಂಕರಯುದ್ಧವಾಯಿತು. ಆ ರಾತ್ರಿಯ ಕಗ್ಗತ್ತಲೆಯಲ್ಲಿ ಒಬ್ಬರನ್ನೊಬ್ಬರು ನಿರ್ದಯವಾಗಿ ಪ್ರಹರಿಸುತ್ತಿದ್ದರು.

ಇದು ನೂರ ಅರುವತ್ತೇಳನೆಯ ಅಧ್ಯಾಯವು.



{ ಕರ್ಣನು ಸಹದೇವನನ್ನು ಜಯಿಸಿ ಅವನನ್ನು ನಿಂದಿಸಿದುದು. ಶಲ್ಯನಿಂದ ವಿರಾಟನ ಪರಾಜಯವು. ಅರ್ಜುನನು ಅಲಾಯುಧನನ್ನು ಸೋಲಿಸಿದುದು. }

ಮಹಾರಾಜಾ! ದ್ರೋಣನನ್ನು ಹಿಡಿಯುವುದಕ್ಕಾಗಿ ಸಹದೇವನು ಬರುತ್ತಿದ್ದಾಗ, ಕರ್ಣನು ಅವನನ್ನು ಅಡ್ಡಗಟ್ಟಿ ತಡೆದನು. ಸಹದೇವನು ಕರ್ಣನಮೇಲೆ ಮೊದಲು ಒಂಭತ್ತು, ಆಮೇಲೆ ಹತ್ತು ತೀವ್ರಬಾಣಗಳನ್ನು ಬಿಟ್ಟನು. ಕರ್ಣನು ನೂರಾರು ಬಾಣಗಳಿಂದ ಅವುಗಳನ್ನು ಭೇದಿಸಿದುದಲ್ಲದೆ, ಸಹದೇವನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿದನು. ಒಡನೆಯೇ ಸಹದೇವನು ಬೇರೆ ಬಿಲ್ಲನ್ನೆತ್ತಿಕೊಂಡು, ಕರ್ಣನನ್ನು ಇಪ್ಪತ್ತು ಬಾಣಗಳಿಂದ ಹೊಡೆದನು. ಆಗ ಸಹದೇವನ ಹಸ್ತಲಾಘವವು ಆಶ್ಚರ್ಯಕರವಾಗಿದ್ದಿತು. ಆಗ ಕರ್ಣನು ಸಹದೇವನ ಕುದುರೆಗಳನ್ನೂ, ಸಾರಥಿಯನ್ನೂ ಕೊಂದನು. ವಿರಥನಾದ ಸಹದೇವನು ಕತ್ತಿ ಗುರಾಣಿಗಳನ್ನೆತ್ತಿಕೊಂಡು, ಕರ್ಣನನ್ನು ಪ್ರಹರಿಸುವುದಕ್ಕಾಗಿ ಮುಂದೆ ಹೋಗುವಷ್ಟರಲ್ಲಿ, ಕರ್ಣನು ನಗುಮುಖ

ದಿಂದಲೇ ಅವೆರಡನ್ನೂ ಭೇದಿಸಿದನು. ಒಡನೆ ಸಹದೇವನು ಭಯಂಕರ ಗದೆಯೊಂದನ್ನು ಕರ್ಣನ ರಥದಮೇಲೆ ಬೀಸಿದನು. ಕರ್ಣನು ಅದನ್ನೂ ಭೇದಿಸಿ ಕೆಡಹಿದನು. ಆಮೇಲೆ ಸಹದೇವನು ಒಂದು ಶಕ್ತಿಯನ್ನು ಪ್ರಯೋಗಿಸಿದನು. ಅದೂ ಕರ್ಣನಿಂದ ಭೇದಿಸಲ್ಪಟ್ಟಿತು. ಆಮೇಲೆ ಸಹದೇವನು ಮುರಿದ ತನ್ನ ರಥದ ಒಂದು ಚಕ್ರವನ್ನೇ ಕೈಗೆತ್ತಿಕೊಂಡು ಅದನ್ನೇ ಕರ್ಣನಮೇಲೆ ಬೀಸಿದನು. ಕಾಲಚಕ್ರದಂತೆ ಬರುತ್ತಿದ್ದ ಆ ಚಕ್ರವನ್ನು ಕರ್ಣನು ಅನೇಕ ಸಹಸ್ರಬಾಣಗಳಿಂದ ತುಂಡುತುಂಡಾಗಿ ಮಾಡಿದನು. ಸಹದೇವನಿಗೆ ಮೇಲೆಮೇಲೆ ಮಿತಿಮೀರಿದ ಕೋಪವು ಹೆಚ್ಚಿತು. ಆ ಕೋಪಾವೇಶದಿಂದ ಅವನು ರಥದ ಮೂಕಿ, ನೊಗ, ಕುದುರೆಯ ಹಗ್ಗ, ತುಂಡಾದ ಆನೆಗಳ ಅವಯವಗಳು, ಸತ್ತ ಕುದುರೆಗಳು, ಸತ್ತ ಪದಾತಿಗಳು, ಶರೀರಾವಯವಗಳು, ಈ ಮೊದಲಾದವನ್ನೆಲ್ಲ ಸಿಕ್ಕಿದಹಾಗೆ ಎತ್ತಿ ಕರ್ಣನಮೇಲೆ ಬೀಸಿ ಬಡಿಯುತ್ತಿದ್ದನು. ಕರ್ಣನು ಅವೊಂದೊಂದನ್ನೂ ತನ್ನ ಬಾಣಗಳಿಂದ ತುಂಡುಮಾಡಿದನು. ಹೀಗೆ ತನ್ನ ಪ್ರಯತ್ನವೆಲ್ಲವೂ ವಿಫಲವಾಗಿ ನಿರಾಯುಧನಾದ ಸಹದೇವನು, ಕರ್ಣನ ಬಾಣದ ವೇಗವನ್ನು ತಡೆಯಲಾರದೆ ಯುದ್ಧವನ್ನು ಬಿಟ್ಟು ಹಿಂತಿರುಗಿಬಿಟ್ಟನು. ಆಗಲೂ ಬಿಡದೆ ಕರ್ಣನು ಸ್ವಲ್ಪಹೊತ್ತಿನವರೆಗೆ ಅವನನ್ನು ಬೆನ್ನಟ್ಟಿ, ಕೊನೆಗೆ ಅವನನ್ನು ನೋಡಿ ನಗುತ್ತ ಹೀಗೆಂದನು. "ಎಲ! ಬಾಲಕಾ! ಇನ್ನುಮೇಲಾದರೂ ನೀನು ನಿನಗಿಂತಲೂ ಪ್ರಬಲರಾದ ರಥಿಕರೊಡನೆ ಯುದ್ಧಕ್ಕೆ ಹೋಗದಿರು! ಧೈರ್ಯವಿಲ್ಲದ ನಿನಗೆ ಈ ಯುದ್ಧವೇಕೆ? ಅಥವಾ ನಿನಗೆ ಸಮಾನರಾದ ಅಲ್ಪಬಲವುಳ್ಳವರೊಡನೆ ಯುದ್ಧಮಾಡು. ನನ್ನ ಮಾತನ್ನು ನೀನು ಬೇರೆಯಾಗಿ ತಿಳಿಯಬೇಡ" ಎಂದು ಹೇಳಿ, ಅವನನ್ನು ತನ್ನ ಧನುಸ್ಸಿನ ತುದಿಯಿಂದ ಚುಚ್ಚುತ್ತ ತಿರುಗಿ "ಸಹದೇವಾ! ಹೋಗು! ಅದೋ! ಅಲ್ಲಿ ಅರ್ಜುನನು ಕೌರವರೊಡನೆ ಯುದ್ಧಮಾಡುತ್ತಿರುವನು. ಅಲ್ಲಿ ಹೋಗಿ, ಅವನ ಮರೆಯಲ್ಲಿದ್ದು ಬದುಕು! ಅಥವಾ ನಿನಗೆ ಇಷ್ಟವಿದ್ದರೆ ಮನೆಗೆ ಹೋಗಿ ಸೇರು" ಎಂದನು. ಹೀಗೆಂದು ಹೇಳಿ ಕರ್ಣನು ಪಾಂಚಾಲ ಪಾಂಡವರ ಸೈನ್ಯಗಳಿದ್ದಕಡೆಗೆ ಹೊರಟುಹೋದನು. ಮಹಾರಾಜಾ! ಆಗ ಮಾದ್ರೀಪುತ್ರನು ಸುಲಭವಾಗಿ ತನ್ನ ಕೊಲೆಗೆ ಸಿಕ್ಕಿದ್ದರೂ, ಕರ್ಣನು ಸತ್ಯಸಂಧನಾ

ದುದರಿಂದ, ತನ್ನ ತಾಯಿಯಾದ ಕುಂತಿಗೆ ತಾನು ಕೊಟ್ಟ ಭಾಷೆಯನ್ನು ನೆನೆಸಿಕೊಂಡು ಅವನನ್ನು ಕೊಲ್ಲದೆ ಬಿಟ್ಟನು. ಸಹದೇವನಾದರೋ ಇತ್ತಲಾಗಿ ಕರ್ಣನ ಬಾಣಗಳಿಂದಲೂ, ಅವಮಾನಕರವಾದ ಅವನ ವಾಗ್ಬಾಣಗಳಿಂದಲೂ ಬಹಳವಾಗಿ ನೊಂದು, ಇನ್ನು ತಾನು ಲೋಕದಲ್ಲಿ ಬದುಕಿರುವುದೇ ಅವಮಾನಕರವೆಂದು ಕೊರಗುತ್ತಿದ್ದನು. ಒಡನೆಯೇ ಅವನು ಅಲ್ಲಿಂದೋಡಿ ಪಾಂಚಾಲಕುಮಾರನಾದ ಜನಮೇಜಯನ ರಥದಲ್ಲಿ ಹೋಗಿ ಕುಳಿತುಬಿಟ್ಟನು. ಇದು ಹೀಗಿರಲು, ಇತ್ತಲಾಗಿ ದ್ರೋಣನನ್ನು ಹಿಡಿಯುವುದಕ್ಕಾಗಿ ವೇಗದಿಂದ ಬರುತ್ತಿದ್ದ ವಿರಾಟನನ್ನು ಶಲ್ಯನು ತಡೆದನು. ಇಂದ್ರಜಂಭಾಸುರರ ಯುದ್ಧದಂತೆ ಅವರಿಬ್ಬರ ಯುದ್ಧವು ಸಮಬಲವಾಗಿದ್ದಿತು. ಶಲ್ಯನು ವಿರಾಟನಮೇಲೆ ನೂರು ಬಾಣಗಳನ್ನು ಪ್ರಯೋಗಿಸಿದನು. ವಿರಾಟನು ಒಂಭತ್ತು ಬಾಣಗಳಿಂದ ಶಲ್ಯನನ್ನು ಹೊಡೆದನು. ಅಲ್ಲದೆ, ಆಮೇಲೆ ಎಪ್ಪತ್ತುಮೂರು, ಅದರಿಂದಾಚೆಗೆ ನೂರು, ಹೀಗೆ ತಂಡತಂಡವಾಗಿ ಬಾಣಗಳನ್ನು ಬಿಡುತ್ತಿದ್ದನು. ಶಲ್ಯನು ಅತ್ಯಂತ ಕೋಪಾವಿಷ್ಟನಾಗಿ ವಿರಾಟನ ಸೂತ, ಧ್ವಜ, ಸಾರಥಿಗಳನ್ನೆಲ್ಲ ತನ್ನ ಬಾಣಗಳಿಂದ ಭೇದಿಸಿಬಿಟ್ಟನು. ವಿರಾಟನು ಥಟ್ಟನೆ ರಥದಿಂದ ಹಾರಿ, ಧನುಸ್ಸನ್ನು ಕೈಗೆತ್ತಿಕೊಂಡು ಪದಾತಿಯಾಗಿಯೇ ಬಾಣಗಳನ್ನು ಪ್ರಯೋಗಿಸತೊಡಗಿದನು. ಇದನ್ನು ನೋಡಿ ವಿರಾಟನ ತಮ್ಮನಾದ ಶತಾನೀಕನು ಅವನ ಸಹಾಯಕ್ಕಾಗಿ ತನ್ನ ರಥವನ್ನು ತೆಗೆದುಕೊಂಡು ಬಂದನು. ಇದನ್ನು ನೋಡಿ ಶಲ್ಯನು ಒಂದೇ ಪ್ರಹಾರದಿಂದ ಶತಾನೀಕನನ್ನು ಕೊಂದುಕೆಡಹಿದನು ಆಗ ವಿರಾಟನು ಥಟ್ಟನೆ ಆ ಶತಾನೀಕನ ರಥದಲ್ಲಿ ತಾನು ಏರಿ ಕುಳಿತು, ಶಲ್ಯನ ರಥದಮೇಲೆ ಎಡೆಬಿಡದೆ ಬಾಣಗಳನ್ನು ಸುರಿಸಿದನು. ಶಲ್ಯನು ಇದನ್ನು ಸಹಿಸಲಾರದೆ, ಅತಿತೀಕ್ಷ್ಣವಾದ ಒಂದು ಬಾಣವನ್ನು ವಿರಾಟನ ಎದೆಗೆ ಗುರಿಯಿಟ್ಟು ಹೊಡೆದನು. ವಿರಾಟನು ಅದರಿಂದ ನೊಂದು ಪ್ರಜ್ಞೆತಪ್ಪಿ, ರಥದ ಗದ್ದುಗೆಯ ಮೇಲೆ ಮಲಗಿಬಿಟ್ಟನು. ಒಡನೆಯೇ ಸಾರಥಿಯು ರಥವನ್ನು ಹಿಂತಿರುಗಿಸಿಕೊಂಡು ಹೊರಟುಹೋದನು. ಶಲ್ಯನ ಅಟ್ಟುಳಿಯನ್ನು ಸಹಿಸಲಾರದೆ ವಿರಾಟಸೈನ್ಯವೆಲ್ಲಾ ಚದರಿ ಓಡಲಾರಂಭಿಸಿತು. ಇದನ್ನು ಕಂಡು ಕೃಷ್ಣಾರ್ಜುನರಿಬ್ಬರೂ ಶಲ್ಯನಿಗಿದಿರಾಗಿ ಬಂದರು. ಇದನ್ನು ನೋಡಿ ಅಲಾಯುಧ

ನೆಂಬ ರಾಕ್ಷಸನು ಈ ಕೃಷ್ಣಾರ್ಜುನರನ್ನು ತಡೆಯುವುದಕ್ಕಾಗಿ ವೇಗದಿಂದ ಬಂದನು. ಈ ಅಲಾಯುಧನೆಂಬ ರಾಕ್ಷಸನ ರಥಕ್ಕೆ ಎಂಟು ಚಕ್ರಗಳು! ಕುದುರೆಯ ಮುಖವುಳ್ಳ ಭಯಂಕರಗಳಾದ ಪಿಶಾಚಗಳೇ ಅದನ್ನು ಎಳೆಯುವುವು! ರಕ್ತದಿಂದ ನೆನೆದು ಕೆಂಪಾದ ಧ್ವಜಪತಾಕೆಗಳು! ಕೆಂಪುಹೂಸರಗಳಿಂದ ಆ ರಥವು ಅಲಂಕರಿಸಲ್ಪಟ್ಟಿರುವುದು. ಕರೀಕಬ್ಬಿಣದಿಂದ ನಿರ್ಮಿತವಾದ ಆ ರಥಕ್ಕೆ ಸುತ್ತಲೂ ಕರಡಿಯ ಚರ್ಮವನ್ನು ಹೊದಿಸಿರುವರು! ವಿಚಿತ್ರವರ್ಣದ ರೆಕ್ಕೆಯುಳ್ಳುದಾಗಿ, ಕಣ್ಣುಗಳನ್ನಗಲಿಸಿ ಭಯಂಕರಾಕಾರವುಳ್ಳ ರಣಹದ್ದು ಅವನ ಧ್ವಜಚಿಹ್ನವಾಗಿರುವುದು. ಅಂಜನದಂತೆ ಕಪ್ಪುಬಣ್ಣವುಳ್ಳ ಆ ರಾಕ್ಷಸನು ಪರ್ವತವನ್ನಿದಿರಿಸುವ ಬಿರುಗಾಳಿಯಂತೆ ವೇಗದಿಂದ ಬಂದು, ನೂರಾರು ಬಾಣಗಳನ್ನು ವರ್ಷಿಸುತ್ತ, ಅರ್ಜುನನನ್ನು ತಡೆದನು. ನೋಡತಕ್ಕವರೆಲ್ಲರಿಗೂ ಆಶ್ಚರ್ಯವುಂಟಾಗುವಂತೆ ತೀವ್ರಯುದ್ಧವು ನಡೆಯಿತು. ಹದ್ದು, ಕಾಗೆ, ಕೊಕ್ಕರೆ, ಗೂಬೆ, ನರಿ, ಮೊದಲಾದ ಮಾಂಸಾಹಾರಿ ಪ್ರಾಣಿಗಳಿಗೆಲ್ಲ ಸಂತೋಷಕರವಾಗುವಂತೆ ಎಷ್ಟೋ ಹೆಣಗಳು ಬಿದ್ದುಹೋದುವು. ಈ ನಡುವೆ ಅರ್ಜುನನು ನೂರು ಬಾಣಗಳಿಂದ ಆ ರಾಕ್ಷಸನನ್ನು ಪ್ರಹರಿಸಿ ಒಂಭತ್ತು ಬಾಣಗಳಿಂದ ಅವನ ಧ್ವಜವನ್ನು ಮುರಿದನು. ಹಾಗೆಯೇ ಮೂರು ಮೂರು ಬಾಣಗಳಿಂದ ಆ ರಾಕ್ಷಸನ ಸಾರಥಿಯನ್ನೂ, ಅವನ ಮೂಕಿಯನ್ನೂ ಭೇದಿಸಿಕೆಡಹಿದನು. ಅವನ ಧನುಸ್ಸನ್ನು ತುಂಡುಮಾಡಿದನು. ನಾಲ್ಕು ಬಾಣಗಳಿಂದ ಅವನ ನಾಲ್ಕು ಕುದುರೆಗಳನ್ನು ಕೊಂದನು. ಆಮೇಲೆ ಆ ರಾಕ್ಷಸನು ಬೇರೊಂದು ಬಿಲ್ಲಿಗೆ ನಾಣೇರಿಸುತ್ತಿರುವಷ್ಟರಲ್ಲಿ ಅದನ್ನೂ ಅರ್ಜುನನು ತುಂಡುಮಾಡಿದನು. ಆಮೇಲೆ ಆ ರಾಕ್ಷಸನು ಖಡ್ಗವನ್ನೆತ್ತಿ ನಿಲ್ಲುವಷ್ಟರಲ್ಲಿ ಆ ಖಡ್ಗವನ್ನೂ ಎರಡಾಗಿ ತುಂಡುಮಾಡಿದನು. ಆಮೇಲೆ ಅರ್ಜುನನು ಅತಿತೀಕ್ಷ್ಣಗಳಾದ ನಾಲ್ಕು ಬಾಣಗಳಿಂದ ಆ ರಾಕ್ಷಸನನ್ನು ಹೊಡೆಯಲು, ಅವನು ಬಹಳವಾಗಿ ನೊಂದು ಭಯದಿಂದ ಓಡಿಹೋದನು. ಹೀಗೆ ಆ ಅಲಾಯುಧನನ್ನು ಜಯಿಸಿದಮೇಲೆ ದ್ರೋಣನನ್ನಿದಿರಿಸುವುದಕ್ಕಾಗಿ ಹೊರಟು, ದಾರಿಯಲ್ಲಿದ್ದ ಆನೆ, ಕುದುರೆ, ಕಾಲಾಳುಗಳನ್ನೆಲ್ಲ ತನ್ನ ಬಾಣಗಳಿಂದ ಚದರಿಸುತ್ತ ಮುಂದುವರಿಯುತ್ತಿದ್ದನು. ಇವನ ಬಾಣವೇಗದಿಂದ ಅನೇಕ ಸೈನಿಕರು ಹತ

ರಾಗಿ ನೆಲಕ್ಕೆ ಬಿದ್ದರು. ಆಗ ಅರ್ಜುನನ ಬಾಣಪ್ರಹಾರವನ್ನು ತಡೆಯಲಾರದೆ ನಿನ್ನ ಮಕ್ಕಳ ಸೈನ್ಯವು ಅಲ್ಲಲ್ಲಿ ತಲೆತಪ್ಪಿಸಿಕೊಂಡು ಓಡಲಾರಂಭಿಸಿತು.

ಇದು ನೂರ ಅರುವತ್ತೆಂಟನೆಯ ಅಧ್ಯಾಯವು.



## ಸಂಕುಲಯುದ್ಧವು.

ರಾಜಾ! ನಕುಲಪುತ್ರನು ನಿನ್ನ ಸೈನ್ಯವನ್ನೆಲ್ಲ ಬಾಣಜ್ವಾಲೆಗಳಿಂದ ದಹಿಸುತ್ತಬರುವಾಗ, ನಿನ್ನ ಮಗನಾದ ಚಿತ್ರಸೇನನು ಅವನನ್ನು ಅಡ್ಡಗಟ್ಟಿ ತಡೆದನು. ನಕುಲನ ಮಗನು (ಶತಾನೀಕನು) ಐದು ಬಾಣಗಳನ್ನು ನಿನ್ನ ಮಗನಿಗೆ ಗುರಿಯಿಟ್ಟು ಹೊಡೆದನು. ನಿನ್ನ ಮಗನು ಒಂಭತ್ತು ಬಾಣಗಳನ್ನು ನಕುಲಪುತ್ರನ ಎದೆಗೆ ಗುರಿಯಿಟ್ಟು ಹೊಡೆದನು. ಶತಾನೀಕನು ಒಂದು ತೀವ್ರಬಾಣದಿಂದ ನಿನ್ನ ಮಗನ ಕವಚವನ್ನು ಭೇದಿಸಿದನು. ಅದು ಆಶ್ಚರ್ಯಕರವಾಯಿತು. ಆಗ ನಿನ್ನ ಮಗನು ಪರೆಯನ್ನು ಸುಲಿದ ಹಾವಿನಂತೆ ಕೋಪಾವಿಷ್ಟನಾಗಿ, ಶತಾನೀಕನ ಧ್ವಜವನ್ನೂ, ಧನುಸ್ಸನ್ನೂ ಬಾಣಗಳಿಂದ ತುಂಡುಮಾಡಿದನು. ಕವಚವೂ, ಧನುಸ್ಸೂ ಮುರಿದಮೇಲೆ ನಿನ್ನ ಮಗನು ಬೇರೊಂದು ಬಿಲ್ಲನ್ನು ಕೈಗೆತ್ತಿಕೊಂಡು, ಒಂಭತ್ತು ಬಾಣಗಳನ್ನು ಶತಾನೀಕನಮೇಲೆ ಬಿಟ್ಟನು. ಆಗ ಶತಾನೀಕನು ಮತ್ತಷ್ಟು ಆಕ್ರೋಶದಿಂದ ತೀವ್ರಬಾಣಗಳನ್ನು ಬಿಟ್ಟು ಚಿತ್ರಸೇನನ ಸಾರಥಿಯನ್ನೂ, ನಾಲ್ಕು ರಥಾಶ್ವಗಳನ್ನೂ ಕೊಂದನು. ಒಡನೆ ನಿನ್ನ ಮಗನು ರಥದಿಂದ ಕೆಳಕ್ಕೆ ಹಾರಿ, ಇಪ್ಪತ್ತೈದು ಬಾಣಗಳನ್ನು ನಕುಲಪುತ್ರನಮೇಲೆ ಪ್ರಯೋಗಿಸಿದನು. ಆಗ ನಕುಲಪುತ್ರನು ಒಂದು ಅರ್ಧಚಂದ್ರಬಾಣದಿಂದ ನಿನ್ನ ಮಗನ ಕೈಯಲ್ಲಿದ್ದ ಧನುಸ್ಸನ್ನು ತುಂಡುಮಾಡಿಬಿಟ್ಟನು. ರಥವೂ, ಶಸ್ತ್ರವೂ ಮುರಿದ ನಿನ್ನ ಮಗನು, ಸಮೀಪದಲ್ಲಿದ್ದ ಕೃತವರ್ಮನ ರಥವನ್ನೇರಿ ಹಿಂತಿರುಗಿಬಿಟ್ಟನು. ಇದು ಹೀಗಾಗಲು, ಅತ್ತಲಾಗಿ ಇನ್ನೊಂದುಕಡೆ ದ್ರೋಣನಿಗಿದಿರಾಗಿ ಹೋಗುತ್ತಿದ್ದ ದ್ರುಪದನನ್ನು ತಡೆಯಲು ಕರ್ಣಪುತ್ರನಾದ ವೃಷಸೇನನು ನೂರಾರು ಬಾಣಗಳನ್ನು ಬಿಡುತ್ತಬಂದನು. ದ್ರುಪದನು ಪ್ರತಿ

ಯಾಗಿ ಅರುವತ್ತು ಬಾಣಗಳನ್ನು ಆ ವೃಷಸೇನನ ಎದೆಗೂ, ತೋಳುಗಳಿಗೂ ಗುರಿಯಿಟ್ಟು ಹೊಡೆದನು. ಅದನ್ನು ಲಕ್ಷ್ಯಮಾಡದೆ ವೃಷಸೇನನು ಅನೇಕ ಬಾಣಗಳನ್ನು ದ್ರುಪದನ ಎದೆಗೆ ಗುರಿಯಿಟ್ಟು ಹೊಡೆದನು. ಇಬ್ಬರ ಮೈಯಲ್ಲಿಯೂ ಬಾಣಗಳು ನಾಟಿ, ಇಬ್ಬರೂ ಕೂದಲನ್ನು ನಿಗುರಿಸಿದ ಮುಳ್ಳುಹಂದಿಗಳಂತೆ ಕಾಣುತ್ತಿದ್ದರು. ಇಬ್ಬರ ಕವಚಗಳೂ ಛಿನ್ನಭಿನ್ನವಾದುವು. ಇಬ್ಬರ ಮೈಯಲ್ಲಿಯೂ ರಕ್ತವು ಸೋರುತ್ತಿದ್ದಿತು. ಇಬ್ಬರೂ ಪುಷ್ಪಿತಗಳಾದ ಮುತ್ತುಗದ ಮರಗಳಂತೆ ತೋರುತ್ತಿದ್ದರು. ವೃಷಸೇನನು ದ್ರುಪದನಮೇಲೆ ಮೊದಲು ಒಂಭತ್ತು, ಆಮೇಲೆ ಎಪ್ಪತ್ತು, ಆಮೇಲೆ ತಿರುಗಿ ಮೂರುಮೂರು, ಹೀಗೆ ಸಾವಿಸಾರು ಬಾಣಗಳನ್ನು ಬಿಡುತ್ತ, ಮಳೆಯನ್ನು ಕರೆಯುವ ಮೇಘದಂತೆ ಕಾಣಿಸುತ್ತಿದ್ದನು. ದ್ರುಪದನು ವೃಷಸೇನನ ಬಿಲ್ಲನ್ನು ತುಂಡುಮಾಡಿದನು. ಆಮೇಲೆ ವೃಷಸೇನನು ಬೇರೆ ಬಿಲ್ಲನ್ನೆತ್ತಿಕೊಂಡು ತೀವ್ರವಾದ ಭಲ್ಲವೊಂದನ್ನು ದ್ರುಪದನ ಎದೆಗೆ ಗುರಿಯಿಟ್ಟು ಹೊಡೆದನು. ಇದರಿಂದ ದ್ರುಪದನಿಗೆ ಪ್ರಜ್ಞೆತಪ್ಪಿದಂತಾಗಲು, ಸಾರಥಿಯು ಅವನ ರಥವನ್ನು ಹಿಂತಿರುಗಿಸಿಬಿಟ್ಟನು. ದ್ರುಪದನು ಹೀಗೆ ಪರಾಜಿತನಾಗಲು, ದ್ರುಪದಸೈನ್ಯವೆಲ್ಲ ಭಯದಿಂದ ಓಡಲಾರಂಭಿಸಿತು. ಆ ಗಾಢಾಂಧಕಾರದಲ್ಲಿ ಸೈನಿಕರು ದೀಪಗಳನ್ನು ಹಿಡಿದುಕೊಂಡು ಓಡುತ್ತಿದ್ದರು ಅದರ ಕಾಂತಿಯಿಂದ ರಣಭೂಮಿಯು ಗ್ರಹಗಳಿಂದ ತುಂಬಿದ ಆಕಾಶದಂತೆ ಕಾಣಿಸಿತು. ಎಷ್ಟೋ ರಾಜರ ಕಿರೀಟಾಂಗದಗಳೇ ಮೊದಲಾದ ಆಭರಣಗಳು ಕಳಚಿಬಿದ್ದು ಮಿಂಚಿನಂತೆ ಹೊಳೆಯುತ್ತಿದ್ದುವು. ಸೋಮಕರೆಲ್ಲರೂ ಭಯದಿಂದ ಓಡಿದರು. ಹೀಗೆ ಜಯಶೀಲನಾದ ವೃಷಸೇನನು ಮಧ್ಯಾಹ್ನಸೂರ್ಯನಂತೆ ತೇಜಸ್ಸಿನಿಂದ ಜ್ವಲಿಸುತ್ತಿದ್ದನು. ಅನೇಕ ಗ್ರಹಗಳ ನಡುವೆ ಸೂರ್ಯನಂತೆ ಆ ವೃಷಸೇನನೊಬ್ಬನೇ ಪ್ರಕಾಶಿಸುತ್ತಿದ್ದನು. ಹೀಗೆ ಜಯಶೀಲನಾದ ವೃಷಸೇನನು ಆಮೇಲೆ ಯುಧಿಷ್ಠಿರನನ್ನು ಇದಿರಿಸುವುದಕ್ಕಾಗಿ ಹೊರಟುಹೋದನು. ಅತ್ತಲಾಗಿ ಇನ್ನೊಂದುಕಡೆ ಪ್ರತಿವಿಂಧ್ಯನು ನಿನ್ನ ಸೈನ್ಯಗಳನ್ನೆಲ್ಲ ಧ್ವಂಸಮಾಡುತ್ತಿರುವುದನ್ನು ನೋಡಿ, ದುಶ್ಶಾಸನನು ಅವನಿಗಿದಿರಾಗಿ ಹೊರಟನು. ಅವರಿಬ್ಬರ ಸಮಾಗಮವು ಆಕಾಶದಲ್ಲಿ ಬುಧಸೂರ್ಯಗ್ರಹಗಳ ಸೇರುವೆಯಂತೆ ಆಶ್ಚರ್ಯಕರವಾಗಿದ್ದಿತು. ಆಗ ಪ್ರತಿವಿಂ

ಧ್ಯನ ಅದ್ಭುತಪರಾಕ್ರಮವನ್ನು ನೋಡಿ ನಿನ್ನ ಕಡೆಯ ಮಹಾರಥರುಕೂಡ ಅವನನ್ನು ಕೊಂಡಾಡಿದರು. ದುಶ್ಯಾಸನನು ಪ್ರತಿವಿಂಧ್ಯನ ಹಣೆಗೆ ಮೂರು ಬಾಣಗಳನ್ನು ನಾಟಿದನು. ಇದರಿಂದ ಪ್ರತಿವಿಂಧ್ಯನು ತ್ರಿಕೂಟಪರ್ವತದಂತೆ ಕಾಣಿಸುತ್ತ ಆ ನೋವನ್ನೂ ಲಕ್ಷ್ಯಮಾಡದೆ, ಒಂಭತ್ತು ಬಾಣಗಳನ್ನು ನಿನ್ನ ಮಗನಮೇಲೆ ಹೊಡೆದನು. ತಿರುಗಿ ಏಳು ಬಾಣಗಳನ್ನು ಪ್ರಯೋಗಿಸಿದನು. ಇದರಿಂದ ಕೋಪಾವಿಷ್ಟನಾದ ದುಶ್ಯಾಸನನು ಅದ್ಭುತವೇಗದಿಂದ ಪ್ರತಿವಿಂಧ್ಯನ ರಥಾಶ್ವಗಳನ್ನೂ, ಸಾರಥಿಯನ್ನೂ, ಧ್ವಜವನ್ನೂ ಮುರಿದು, ರಥವನ್ನು ಪುಡಿಪುಡಿಯಾಗಿ ಮಾಡಿಬಿಟ್ಟನು. ಅವನ ಧ್ವಜಪತಾಕೆಗಳು, ಬತ್ತಳಿಕೆಗಳು, ಕುದುರೆಯ ಹಗ್ಗಗಳು, ಇವುಗಳನ್ನೆಲ್ಲ ಎಳ್ಳುಕಾಳಿನಷ್ಟು ತುಂಡುಮಾಡಿಬಿಟ್ಟನು. ಇಷ್ಟಾದರೂ ಪ್ರತಿವಿಂಧ್ಯನು ಧನುರ್ಧಾರಿಯಾಗಿ ನಿಂತು, ನಿನ್ನ ಮಗನನ್ನು ನೂರಾರು ಬಾಣಗಳಿಂದ ಹೊಡೆದು, ಒಂದು ಕ್ಷುರಪ್ರದಿಂದ ಅವನ ಧನುಸ್ಸನ್ನು ಕತ್ತರಿಸಿದನು. ಹತ್ತು ಬಾಣಗಳಿಂದ ನಿನ್ನ ಮಗನನ್ನು ಬಲವಾಗಿ ನೋಯಿಸಿದನು. ಹೀಗೆ ವಿರಥನಾದ ದುಶ್ಯಾಸನನನ್ನು ನೋಡಿ, ಅವನ ಸಹೋದರರೆಲ್ಲರೂ ದೊಡ್ಡ ಸೇನೆಯೊಡನೆ ಅವನಿಗೆ ಬೆಂಬಲವಾಗಿ ಬಂದರು. ಇಷ್ಟರಲ್ಲಿ ಪ್ರತಿವಿಂಧ್ಯನು ಸುತಸೋಮನ ರಥವನ್ನೇರಿ ಕುಳಿತು, ನಿನ್ನ ಮಗನಮೇಲೆ ತಿರುಗಿ ಬಾಣಗಳನ್ನು ಬಿಡತೊಡಗಿದನು. ಇತ್ತಲಾಗಿ ನಿನ್ನ ಮಕ್ಕಳೆಲ್ಲರೂ ಗುಂಪಾಗಿ ಸೇರಿ ಅವನನ್ನಿದಿರಿಸುತ್ತಿದ್ದರು. ಆ ರಾತ್ರಿಯಲ್ಲಿ ಅವರಿಬ್ಬರಿಗೂ ಭಯಂಕರ ಯುದ್ಧವಾಯಿತು.

ಇದು ನೂರ ಅರುವತ್ತೊಂಭತ್ತನೆಯ ಅಧ್ಯಾಯವು.

---

## ನಕುಲನಿಂದ ಶಕುನಿಯೂ, ಕೃಪನಿಂದ ಶಿಖಂಡಿಯೂ, ಪರಾಜಿತರಾದುದು.

ರಾಜಾ! ಇನ್ನೊಂದು ಕಡೆ ನಿನ್ನ ಸೈನ್ಯವನ್ನು ಧ್ವಂಸಮಾಡುತ್ತಿದ್ದ ನಕುಲನನ್ನು ನಿನ್ನ ಮೈದುನನಾದ ಶಕುನಿಯು ಎಲಾ! ನಿಲ್ಲು ನಿಲ್ಲೆಂದು ಹೇಳುತ್ತಾ ಅಡ್ಡಗಟ್ಟಿದನು. ಪರಮವೈರಿಗಳಾದ ಅವರಿಬ್ಬರೂ, ಒಬ್ಬರ

ನ್ನೊಬ್ಬರು ಕೊಲ್ಲಬೇಕೆಂಬ ಆತುರದಿಂದ ತೀವ್ರಬಾಣಗಳನ್ನು ಪ್ರಯೋಗಿಸಿದರು. ನಕುಲನು ಹೇಗೆಹೇಗೆ ಬಾಣಪ್ರಯೋಗದಲ್ಲಿ ತನ್ನ ಲಾಘವವನ್ನು ತೋರಿಸುತ್ತಿದ್ದನೋ, ಅದಕ್ಕೆಮೇಲೆ ಶಕುನಿಯು ತನ್ನ ಶಸ್ತ್ರಚಾತುರ್ಯವನ್ನು ತೋರಿಸುತ್ತಿದ್ದನು. ಇಬ್ಬರ ಮೈಯಲ್ಲಿಯೂ ಬಾಣಗಳು ನಾಟಿದುವು. ಇಬ್ಬರ ಮೈಯ್ಯಲ್ಲಿಯೂ ರಕ್ತವು ಸುರಿಯುತ್ತಿದ್ದಿತು. ಇಬ್ಬರೂ ಮುಳ್ಳುಗಳಿಂದ ಆವೃತವಾದ ಶಾಲ್ಮಲಿವೃಕ್ಷಗಳಂತೆ ತೋರುತ್ತಿದ್ದರು. ಇಬ್ಬರೂ ಕೋಪದಿಂದ ದುರುದುರನೆ ಒಬ್ಬರನ್ನೊಬ್ಬರು ನೋಡುತ್ತಿದ್ದರು. ಈ ನಡುವೆ ಶಕುನಿಯು ಒಂದು ತೀಕ್ಷ್ಣಬಾಣವನ್ನು ನಕುಲನ ಎದೆಗೆ ಗುರಿಯಿಟ್ಟು ಹೊಡೆದನು. ನಕುಲನು ಇದರಿಂದ ಮೂರ್ಛಿತನಾಗಿ ರಥದ ಮೇಲೆ ಮಲಗಿಬಿಟ್ಟನು. ಶಕುನಿಯು ಸಂತೋಷದಿಂದ ಮೇಘದಂತೆ ದೊಡ್ಡ ಸಿಂಹನಾದವನ್ನು ಮಾಡಿದನು. ಇಷ್ಟರಲ್ಲಿ . ನಕುಲನು ಚೇತರಿಸಿಕೊಂಡು, ಕಾಲಯಮನಂತೆ ಕಾಣುತ್ತಾ ಶಕುನಿಯಮೇಲೆ ಮೊದಲು ಅರುವತ್ತು, ಆಮೇಲೆ ನೂರುಬಾಣಗಳನ್ನು ಬಿಟ್ಟು, ಅವನು ಬಾಣಸಂಧಾನ ಮಾಡಿ ಹಿಡಿದಿದ್ದ ಬಿಲ್ಲನ್ನು ಮುಷ್ಟಿಪ್ರದೇಶಕ್ಕೆ ಸರಿಯಾಗಿ ಕತ್ತರಿಸಿಬಿಟ್ಟನು. ಅವನ ಧ್ವಜವನ್ನು ತುಂಡುಮಾಡಿದನು. ಬೇಡನು ತನ್ನ ಬಾಣದಿಂದ ಆಕಾಶದಲ್ಲಿ ಹಾರುವ ಗಿಡುಗದ ಎರಡು ರೆಕ್ಕೆಗಳನ್ನೂ ಭೇದಿಸುವಂತೆ ಒಂದೇ ಬಾಣದಿಂದ ಶಕುನಿಯ ಎರಡು ತೊಡೆಗಳನ್ನೂ ಬಲವಾಗಿ ಭೇದಿಸಿದನು. ಇದರಿಂದ ಶಕುನಿಗೆ ಕಾಲುಮುರಿದಂತಾಗಿ, ಧ್ವಜದ ಕಂಬವನ್ನೊರಗಿದಹಾಗೆಯೇ ಮೂರ್ಛಿತನಾಗಿ ಮಲಗಿಬಿಟ್ಟನು. ಒಡನೆಯೇ ಸಾರಥಿಯು ಅವನನ್ನು ಬೇರೆಕಡೆಗೆ ಸಾಗಿಸಿಬಿಟ್ಟನು. ಆಗ ಪಾಂಡವರೂ, ಅವರ ಕಡೆಯವರೂ ಜಯೋತ್ಸಾಹದಿಂದ ಸಿಂಹನಾದಮಾಡಿದರು. ಆಮೇಲೆ ನಕುಲನು ತನ್ನ ಸಾರಥಿಯನ್ನು ಕುರಿತು ದ್ರೋಣನಬಳಿಗೆ ರಥವನ್ನು ನಡೆಸುವಂತೆ ಹೇಳಿದನು. ಅದರಂತೆ ಸಾರಥಿಯು ರಥವನ್ನು ದ್ರೋಣನ ಸೈನ್ಯವಿದ್ದ ಕಡೆಗೆ ಬಿಟ್ಟುಕೊಂಡು ಹೋದನು.

ಮಹಾರಾಜಾ! ಇನ್ನೊಂದು ಕಡೆ ದ್ರೋಣನಿಗಿದಿರಾಗಿ ಬರುತ್ತಿದ್ದ ಶಿಖಂಡಿಯನ್ನು ಕೃಪನು ತಡೆದನು. ಅವನನ್ನು ನೋಡಿ, ಶಿಖಂಡಿಯು

ನಗುತ್ತಾ, ಅವನಮೇಲೆ ಒಂಭತ್ತು ಭಲ್ಲಗಳನ್ನು ಬಿಟ್ಟನು. ಕೃಪನು ಆ ಬಾಣಗಳನ್ನೆಲ್ಲಾ ತನ್ನ ಐದುಬಾಣಗಳಿಂದ ಭಂಗಿಸಿ, ಶಿಖಂಡಿಯಮೇಲೆ ಇಪ್ಪತ್ತುಬಾಣಗಳನ್ನು ಬಿಟ್ಟನು. ಅವರಿಬ್ಬರಿಗೂ ಇಂದ್ರಶಂಬರರ ಯುದ್ಧದಂತೆ ಘೋರಯುದ್ಧವಾಯಿತು. ಆಕಾಶವೆಲ್ಲಾ ಅವರಿಬ್ಬರ ಬಾಣಗಳಿಂದ ಮೇಘಾವೃತವಾದಂತೆ ಮರೆಸಿಹೋಯಿತು. ಅವರ ಭಯಂಕರಯುದ್ಧವು ಆ ರಾತ್ರಿಯ ಸಂಬಂಧದಿಂದ ಇನ್ನಷ್ಟು ಭಯಂಕರವಾಗಿ, ಕಾಳರಾತ್ರಿಯಂತೆ ಯೋಧರಿಗೆಲ್ಲಾ ಭೀತಿಜನಕವಾಯಿತು. ಈ ನಡುವೆ ಶಿಖಂಡಿಯು ಕೃಪನ ಕೈಯಲ್ಲಿದ್ದ ಬಿಲ್ಲನ್ನು ಅರ್ಧಚಂದ್ರಬಾಣದಿಂದ ಕತ್ತರಿಸಿದನು. ಆಮೇಲೆ ಕೃಪನು ಸುವರ್ಣದಂಡವುಳ್ಳ ಭಯಂಕರ ಶಕ್ತಿಯೊಂದನ್ನು ಶಿಖಂಡಿಯ ಮೇಲೆ ಪ್ರಯೋಗಿಸಿದನು. ಶಿಖಂಡಿಯು ತನ್ನ ಬಾಣಗಳಿಂದ ನಡುದಾರಿಯಲ್ಲಿಯೇ ಅದನ್ನೂ ಭೇದಿಸಿಕೆಡಹಿದನು. ಇಷ್ಟರಲ್ಲಿಯೇ ಕೃಪನು ಒಂದು ಬಿಲ್ಲನ್ನು ಕೈಗೆತ್ತಿಕೊಂಡು, ಶಿಖಂಡಿಯನ್ನು ತನ್ನ ಬಾಣಸಮೂಹಗಳಿಂದ ಮುಚ್ಚಿದನು. ಆ ಬಾಣವೇಗಗಳಿಂದ ಶಿಖಂಡಿಯು ಬಹಳವಾಗಿ ನೊಂದು, ರಥದ ಹಲಗೆಯಮೇಲೆಯೇ ಪ್ರಜ್ಞೆತಪ್ಪಿದಂತೆ ಕುಳಿತುಬಿಟ್ಟನು. ಶಿಖಂಡಿಯು ಈ ಸ್ಥಿತಿಯಲ್ಲಿರುವಾಗಲೂ, ಕೃಪನು ಅವನನ್ನು ಅನೇಕಬಾಣಗಳಿಂದ ಪ್ರಹರಿಸುತ್ತಿದ್ದನು. ಶಿಖಂಡಿಯು ಯುದ್ಧದಿಂದ ಹಿಂತಿರುಗುತ್ತಿರುವುದನ್ನು ನೋಡಿ, ಪಾಂಚಾಲರೂ, ಸೋಮಕರೂ ಅವನ ಸಹಾಯಕ್ಕಾಗಿ ಓಡಿಬಂದು ಅವನಿಗೆ ಬೆಂಬಲವಾಗಿ ನಿಂತರು. ಅದನ್ನು ನೋಡಿ ನಿನ್ನ ಮಕ್ಕಳೆಲ್ಲರೂ, ದೊಡ್ಡ ಸೈನ್ಯದೊಡನೆ ಕೃಪನ ಸಹಾಯಾರ್ಥವಾಗಿ ಬಂದರು. ಉಭಯಪಕ್ಷದ ರಥಗಳಿಗೂ ಘೋರಯುದ್ಧವಾಯಿತು. ಅಲ್ಲಲ್ಲಿ ಸಂಚರಿಸುತ್ತಿರುವ ಆನೆಕುದುರೆಗಳ ಪದಘಾತಧ್ವನಿಯೂ, ವೀರರ ಸಿಂಹನಾದಧ್ವನಿಯೂ, ಮೇಘಗರ್ಜನೆಯಂತೆ ಪ್ರಬಲವಾಗಿ ಕೇಳಿಸಿತು. ಪದಾತಿಗಳ ಸಂಚಾರದಿಂದ ಭೂಮಿಯು ನಡುಗುವಂತಾಯಿತು. ರಥಿಕರು ರಥಗಳಲ್ಲಿ ವೇಗದಿಂದ ಸಂಚರಿಸುತ್ತಾ, ಪ್ರತಿಪಕ್ಷದ ರಥಗಳನ್ನೇರಿ, ಕಾಗೆಗಳು ಮಿಡಿತೆಗಳನ್ನು ಹಿಡಿಯುವಂತೆ ರಥಿಕರನ್ನು ಹಿಡಿದುತರುತ್ತಿದ್ದರು. ಹೀಗೆಯೇ ಆನೆಗಳು ಆನೆಗಳನ್ನು ಹಿಡಿದು ಭಂಗಿಸುತ್ತಿದ್ದುವು. ಅಶ್ವಯೋಧರು ಅಶ್ವಯೋಧರನ್ನೂ, ಕಾಲಾಳುಗಳು ಕಾಲಾಳುಗಳನ್ನೂ ಇದಿರಿಸಿ ಹೊಡೆಯುತ್ತಿ

ದ್ದರು. ಒಬ್ಬರಿಗೊಬ್ಬರು ಸೋಲದೆ ಸಮಬಲವಾಗಿ ಯುದ್ಧಮಾಡುತ್ತಿದ್ದರು. ಓಡುವುದು, ನೆಗೆಯುವುದು, ಹಿಂತಿರುಗಿ ಬರುವುದು, ಇಂತಹ ಸೈನ್ಯಗಳ ಗತಿವಿಶೇಷಗಳಿಂದ ಆ ರಾತ್ರಿಯಲ್ಲಿ ದೊಡ್ಡ ಗದ್ದಲವೆದ್ದಿತು. ರಥ ಗಜ ತುರಗಗಳ ಮುಂದೆ ಉರಿಯುತ್ತಿರುವ ದೀಪಗಳು ಆಕಾಶದಿಂದ ಬಿದ್ದ ದೊಡ್ಡ ಉಲ್ಕೆಗಳಂತೆ ಕಾಣುತ್ತಿದ್ದುವು. ಆ ದೀಪಜ್ವಾಲೆಗಳಿಂದ ರಾತ್ರಿಯೂ ಹಗಲಿನಂತೆ ಕಾಣಿಸುತ್ತಿದ್ದಿತು. ಆ ದೀಪಪ್ರಭೆಯು ಆಕಾಶದಲ್ಲಿ ಉದಿಸಿದ ಸೂರ್ಯನ ಪ್ರಭೆಯಂತೆ ಆ ರಾತ್ರಿಯಲ್ಲಿ ಕತ್ತಲೆಯ ಸುಳಿವೇ ಇಲ್ಲದಂತೆ ಮಾಡಿತು. ಭೂಮ್ಯಾಕಾಶ ದಿಕ್ಕು ವಿದಿಕ್ಕುಗಳೆಲ್ಲಾ ಮೊದಲು ಧೂಳಿನಿಂದಲೂ, ಕತ್ತಲೆಯಿಂದಲೂ, ಕಾಣಿಸದಿದ್ದು, ಈಗ ಅವೆಲ್ಲ ದೀಪಪ್ರಭೆಯಿಂದ ಸ್ಪಷ್ಟವಾಗಿ ಕಾಣುವಂತಾಯಿತು. ಆ ದೀಪಪ್ರಭೆಗಳು ಅಸ್ತ್ರಗಳಲ್ಲಿಯೂ, ಕವಚಗಳಲ್ಲಿಯೂ, ರತ್ನಾಭರಣಗಳಲ್ಲಿಯೂ ಪ್ರತಿಫಲಿಸಿ ಮತ್ತಷ್ಟು ಪ್ರಕಾಶವನ್ನು ಕೊಡುತ್ತಿದ್ದವು. ಆ ಭಯಂಕರರಾತ್ರಿಯಲ್ಲಿ ತನ್ನನ್ನೇ ತಾನು ತಿಳಿಯದೆ ಒಬ್ಬೊಬ್ಬನೂ ಸಿಕ್ಕಿದಕಡೆಯಲ್ಲಿ ಸಿಕ್ಕಿದವರನ್ನು ಕೊಲ್ಲುತ್ತಿದ್ದನು. ತಂದೆಯು ಮಗನೆಂದೂ, ಮಗನು ತಂದೆಯೆಂದೂ ನೋಡಲಿಲ್ಲ. ಸ್ನೇಹಿತನೆಂದು ಭಾವಿಸಲಿಲ್ಲ. ಮಾವನೆಂದೂ, ಅಳಿಯನೆಂದೂ ಯೋಚಿಸಲಿಲ್ಲ. ನಮ್ಮವರು ನಮ್ಮವರನ್ನೂ, ಶತ್ರುಗಳು ಶತ್ರುಗಳನ್ನೂ ವಧಿಸುತ್ತಿದ್ದರು. ಆಗಿನ ಯುದ್ಧದಲ್ಲಿ ಕಟ್ಟುಪಾಡೇ ಇಲ್ಲದಂತೆ ಭಯಂಕರವಾದ ಕೊಲೆಯು ನಡೆಯುತ್ತಿದ್ದಿತು.

ಇದು ನೂರ ಎಪ್ಪತ್ತನೆಯ ಅಧ್ಯಾಯವು.



## ದ್ರೋಣಧೃಷ್ಟದ್ಯುಮ್ನಾದಿಗಳ ಸಂಕುಲಯುದ್ಧವು.

ಮಹಾರಾಜಾ! ಹೀಗೆ ದಾರುಣಯುದ್ಧವು ನಡೆಯುತ್ತಿರುವಾಗ ಒಂದುಕಡೆ ಧೃಷ್ಟದ್ಯುಮ್ನನು ಬಿಲ್ಲಿಗೆ ನಾಣೇರಿಸಿ ಬಾಣಸಂಧಾನಮಾಡಿ ಬಾರಿಬಾರಿಗೂ ನಾಣನ್ನು ತಟ್ಟುತ್ತಾ, ಸುವರ್ಣಾಲಂಕೃತವಾದ ದ್ರೋಣನ ರಥವನ್ನು ಕುರಿತು ವೇಗದಿಂದ ಹೊರಟನು. ದ್ರೋಣವಧಕ್ಕಾಗಿ ಬರುತ್ತಿದ್ದ ಆ ಧೃಷ್ಟದ್ಯುಮ್ನನನ್ನು ನೋಡಿ ಪಾಂಚಾಲರೂ, ಪಾಂಡವರೂ ಅವನಿಗೆ ಬೆಂಬಲವಾಗಿ ಹೊರಟರು. ಇದನ್ನು ಕಂಡು ನಿನ್ನ ಮಕ್ಕಳೆಲ್ಲರೂ,

ದ್ರೋಣನನ್ನು ರಕ್ಷಿಸಿಕೊಳ್ಳುವುದಾಗಿ ಅವನ ಸುತ್ತಲೂ ಎಚ್ಚರಿಕೆಯಿಂದ ಕಾಯುತ್ತಿದ್ದರು. ಉಭಯಸೈನ್ಯಗಳೂ, ಬಿರುಗಾಳಿಯಿಂದ ಕ್ಷುಭಿತಗಳಾದ ಸಮುದ್ರಗಳಂತೆ ಒಂದಕ್ಕೊಂದು ತಾಗಿದುವು. ಧೃಷ್ಟದ್ಯುಮ್ನನು ಮುಂದೆ ಹೋಗಿ ದ್ರೋಣನ ಎದೆಗೆ ಗುರಿಯಿಟ್ಟು ಐದುಬಾಣಗಳನ್ನು ಹೊಡೆದು ಸಿಂಹನಾದಮಾಡಿದನು. ದ್ರೋಣನು ಇಪ್ಪತ್ತೊಂದು ಬಾಣಗಳಿಂದ ಧೃಷ್ಟದ್ಯುಮ್ನನ ಬಾಣಗಳನ್ನು ಭೇದಿಸಿ, ಅವನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿಕೆಡಹಿದನು. ಧೃಷ್ಟದ್ಯುಮ್ನನು ಕೋಪದಿಂದ ತುಟಿಗಳನ್ನು ಕಚ್ಚುತ್ತಾ, ಬೇರೊಂದುಬಿಲ್ಲನ್ನು ಕೈಗೆತ್ತಿಕೊಂಡು, ದ್ರೋಣನನ್ನು ಒಂದೇಸಲಕ್ಕೆ ಕೊನೆಮುಟ್ಟಿಸಬೇಕೆಂಬ ಆತುರದಿಂದ, ಒಂದು ತೀವ್ರಬಾಣವನ್ನು ಸಂಧಿಸಿ, ಕಿವಿಯವರೆಗೆ ನಾಣನ್ನೆಳೆದು ವೇಗದಿಂದ ಪ್ರಯೋಗಿಸಿದನು. ಆ ಭಯಂಕರಬಾಣವು ಸೂರ್ಯೋದಯವಾದಂತೆ ತನ್ನ ಕಾಂತಿಯಿಂದ ದಿಕ್ಕುಗಳನ್ನು ಬೆಳಗುತ್ತ ಬರುತ್ತಿದ್ದಿತು. ಅದನ್ನು ನೋಡಿ ಆಕಾಶದಲ್ಲಿ ದೇವ ಗಂಧರ್ವಾದಿಗಳೆಲ್ಲ ಭಯಪಟ್ಟು, "ದ್ರೋಣನಿಗೆ ಕ್ಷೇಮವುಂಟಾಗಲಿ" ಎಂದು ಹೇಳಿಕೊಳ್ಳುತ್ತಿದ್ದರು. ಇಷ್ಟರಲ್ಲಿಯೇ ಕರ್ಣನು ಆ ಧೃಷ್ಟದ್ಯುಮ್ನನ ಬಾಣವನ್ನು ತನ್ನ ಬಾಣದಿಂದ ಹನ್ನೆರಡು ತುಂಡಾಗಿ ಭೇದಿಸಿ ಕೆಡಹಿದನು. ಇದರಿಂದ ಧೃಷ್ಟದ್ಯುಮ್ನನ ಬಾಣವು ವಿಷಹೀನವಾದ ಸರ್ಪದಂತೆ ನಿಷ್ಫಲವಾಗಿ ಬಿದ್ದಿತು. ಆಮೇಲೆ ಕರ್ಣನು ಹತ್ತುಬಾಣಗಳಿಂದ ಧೃಷ್ಟದ್ಯುಮ್ನನನ್ನು ಪ್ರಹರಿಸಿದನು. ಇದೇ ಸಮಯದಲ್ಲಿ ಅಶ್ವತ್ಥಾಮನು ಐದು, ದ್ರೋಣನು ಏಳು, ಶಲ್ಯನು ಹತ್ತು, ದುಶ್ಶಾಸನನು ಮೂರು, ದುರ್ಯೋಧನನು ಹತ್ತು, ಶಕುನಿಯು ಐದು, ಹೀಗೆ ಎಲ್ಲರೂ ಏಕಕಾಲದಲ್ಲಿ ಧೃಷ್ಟದ್ಯುಮ್ನನಮೇಲೆ ಬಾಣಗಳನ್ನು ಪ್ರಯೋಗಿಸಿದರು. ಹೀಗೆ ಏಳುಮಂದಿ ಮಹಾರಥರೂ, ಏಕಕಾಲದಲ್ಲಿ ತನ್ನನ್ನಿದಿರಿಸಿ ಹೊಡೆಯುತ್ತಿದ್ದಾಗಲೂ, ಧೃಷ್ಟದ್ಯುಮ್ನನು ಸ್ವಲ್ಪವಾದರೂ ಧೈರ್ಯಗೆಡದೆ, ಅವರೊಬ್ಬೊಬ್ಬರನ್ನೂ ಮೂರುಮೂರು ಬಾಣಗಳಿಂದ ಬಲವಾಗಿ ಹೊಡೆದನು. ಅವರೂ ಧೃಷ್ಟದ್ಯುಮ್ನನ ಮೇಲೆ ಬೇರೆಬೇರೆಯಾಗಿ ಐದೈದು ಬಾಣಗಳನ್ನು ಪ್ರಯೋಗಿಸಿದರು. ಇಷ್ಟರಲ್ಲಿ ದ್ರುಮಸೇನನು ಒಂದು ಬಾಣವನ್ನು ಧೃಷ್ಟದ್ಯುಮ್ನನ ಮೇಲೆ ಪ್ರಯೋಗಿಸಿ, ನಿಲ್ಲು! ನಿಲ್ಲೆಂದು ಹೇಳುತ್ತಾ, ತಿರುಗಿ ಮೂರುಬಾಣಗ

ಳನ್ನು ಬಿಟ್ಟನು. ಧೃಷ್ಟದ್ಯುಮ್ನನು ಅವನ್ನೆಲ್ಲಾ ತನ್ನ ಬಾಣಗಳಿಂದ ಖಂಡಿಸಿ, ಬೇರೊಂದು ತೀವ್ರವಾದ ಭಲ್ಲದಿಂದ ಕಿರೀಟಕುಂಡಲಾಲಂಕೃತವಾದ ದ್ರುಮಸೇನನ ತಲೆಯನ್ನು ಕತ್ತರಿಸಿದನು. ಬಿರುಗಾಳಿಯ ವೇಗಕ್ಕೆ ಮರದಿಂದ ಉದಿರುಬಿದ್ದ ತಾಳೆಯ ಹಣ್ಣಿನಂತೆ ದ್ರುಮಸೇನನ ತಲೆಯು ಕೆಳಗೆಬಿದ್ದಿತು. ಕೋಪದಿಂದ ತುಟಿಯನ್ನು ಕಚ್ಚಿದ್ದಹಾಗೆಯೇ ಅವನ ರುಂಡವು ಕೆಳಗೆ ಉರುಳಾಡುತ್ತಿದ್ದಿತು. ಆಮೇಲೆ ಧೃಷ್ಟದ್ಯುಮ್ನನು ಕರ್ಣನ ಕೈಯಲ್ಲಿದ್ದ ಬಿಲ್ಲನ್ನು ತನ್ನ ತೀಕ್ಷ್ಣಬಾಣಗಳಿಂದ ಕತ್ತರಿಸಿ ಕೆಡಹಿದನು. ಸಿಂಹವು ತನ್ನ ಬಾಲವನ್ನು ಕತ್ತರಿಸಿದರೆ ಹೇಗೋ ಹಾಗೆ ಕರ್ಣನು ಅದನ್ನು ಸಹಿಸಲಾರದೆ, ಅತ್ಯಾಕ್ರೋಶದಿಂದ ಬುಸುಗುಟ್ಟುತ್ತ, ಬೇರೊಂದು ಧನುಸ್ಸನ್ನು ಎತ್ತಿಕೊಂಡು ಧೃಷ್ಟದ್ಯುಮ್ನನನ್ನು ಇದಿರಿಸಿ ಹೋದನು. ಇದನ್ನು ನೋಡಿ ದುರ್ಯೋಧನನು, ದುಶ್ಶಾಸನನು, ದ್ರೋಣನು, ಕರ್ಣನು, ಶಲ್ಯನು ಶಕುನಿ, ಈ ಆರುಮಂದಿ ರಥಿಕರೂ, ಆ ಧೃಷ್ಟದ್ಯುಮ್ನನನ್ನು ಕೊಲ್ಲಬೇಕೆಂದು ಅವನನ್ನು ಮುತ್ತಿಕೊಂಡರು. ಇವರ ನಡುವೆ ಸಿಕ್ಕಿಬಿದ್ದ ಧೃಷ್ಟದ್ಯುಮ್ನನನ್ನು ನೋಡಿ ನಾವು ಅವನು ಮೃತ್ಯುವಿನ ಬಾಯಿಗೆ ಸಿಕ್ಕಿಬಿದ್ದನೆಂದೇ ತಿಳಿದೆವು. ಇದೇ ಸಮಯದಲ್ಲಿ ಧೃಷ್ಟದ್ಯುಮ್ನನ ಸಹಾಯಕ್ಕಾಗಿ ಸಾತ್ಯಕಿಯು ಬಂದನು. ಇವನನ್ನು ಕಂಡೊಡನೆಯೇ ಕರ್ಣನು ಹತ್ತು ಬಾಣಗಳನ್ನು ಅವನಿಗೆ ಗುರಿಯಿಟ್ಟು ಹೊಡೆದನು. ಸಾತ್ಯಕಿಯು ತನ್ನ ಹತ್ತು ಬಾಣಗಳಿಂದ ಅವನ್ನೆಲ್ಲಾ ಭಂಗಿಸಿ, "ಕರ್ಣಾ! ಮುಂದೆ ಬಾ! ಓಡಿಹೋಗಬೇಡ" ಎಂದು ಅವನನ್ನು ಧಿಕ್ಕರಿಸಿ ಕರೆದನು. ಇಂದ್ರಬಲಿಗಳ ಯುದ್ಧದಂತೆ ಕರ್ಣಸಾತ್ಯಕಿಗಳ ಯುದ್ಧವು ಅತಿತೀವ್ರವಾಯಿತು. ಸಾತ್ಯಕಿಯು ತನ್ನ ರಥಘೋಷದಿಂದಲೇ ಶತ್ರುರಾಜರನ್ನೆಲ್ಲ ನಡುಗಿಸುವಂತೆ ಕರ್ಣನಿಗಿದಿರಾಗಿ ಬಂದನು. ಕರ್ಣನೂ ತನ್ನ ಜಯಘೋಷದಿಂದ ಭೂಮಿಯನ್ನೆಲ್ಲ ನಡುಗಿಸುತ್ತ ಅವನನ್ನಿದಿರಿಸಿದನು. ಆಗ ಸಾತ್ಯಕಿಯಮೇಲೆ ಕರ್ಣನು, ವಿಪಾಟ, ಕರ್ಣಿ, ನಾರಾಚ, ವತ್ಸದಂತ, ಕ್ಷುರವೇ ಮೊದಲಾದ ವಿವಿಧಬಾಣಗಳನ್ನು ಪ್ರಯೋಗಿಸಿದನು. ಸಾತ್ಯಕಿಯೂ ಅದೇತರದ ಪ್ರತಿಬಾಣಗಳನ್ನು ಕರ್ಣನಮೇಲೆ ವರ್ಷಿಸಿದನು. ಆಗ ನಿನ್ನ ಮಕ್ಕಳೂ, ಕರ್ಣನ ಮಗನಾದ ವೃಷಸೇನನೂ ತೀಕ್ಷ್ಣಬಾಣಗಳಿಂದ ಸಾತ್ಯಕಿಯನ್ನು

ಹೊಡೆಯುತ್ತಿದ್ದರು. ಸಾತ್ಯಕಿಯು ಅಷ್ಟುಮಂದಿಯ ಬಾಣಗಳನ್ನೂ ತನ್ನ ಶಸ್ತ್ರಗಳಿಂದ ನಿವಾರಿಸಿ, ವೃಷಸೇನನ ಎದೆಗೆ ಗುರಿಯಿಟ್ಟು ಒಂದು ಬಾಣವನ್ನು ಹೊಡೆದನು. ವೃಷಸೇನನು ಅದರಿಂದ ಮೂರ್ಛಿತನಾಗಿ ರಥದಲ್ಲಿ ಬಿದ್ದುಬಿಟ್ಟನು. ಅವನ ಕೈಯಲ್ಲಿದ್ದ ಬಿಲ್ಲು ಜಾರಿ ಬಿದ್ದಿತು. ಆಗ ಕರ್ಣನು, ತನ್ನ ಮಗನು ಮೃತನಾದನೆಂದೇ ತಿಳಿದು, ದುಃಖದಿಂದಲೂ, ಕೋಪದಿಂದಲೂ ಸಾತ್ಯಕಿಯ ಮೇಲೆ ಬಾಣಗಳನ್ನು ಪ್ರಯೋಗಿಸಿದನು. ಸಾತ್ಯಕಿಯು ಪ್ರತಿಯಾಗಿ ಕರ್ಣನನ್ನು ಅನೇಕ ಬಾಣಗಳಿಂದ ಪ್ರಹರಿಸಿದನು. ಮತ್ತು ಕರ್ಣನ ಮತ್ತು ವೃಷಸೇನನ ಕೈಚೀಲವನ್ನೂ ಬಿಲ್ಲನ್ನೂ ಕತ್ತರಿಸಿದನು. ತಿರುಗಿ ಅವರಿಬ್ಬರೂ ಬೇರೆ ಬಿಲ್ಲುಗಳನ್ನು ತೆಗೆದುಕೊಂಡು, ಸಾತ್ಯಕಿಯನ್ನು ಸುತ್ತಿಮುತ್ತಿ ತೀಕ್ಷ್ಣಬಾಣಗಳಿಂದ ಹೊಡೆಯುತ್ತಿದ್ದರು. ಹೀಗೆ ಇತ್ತಲಾಗಿ ಯುದ್ಧವು ನಡೆಯುತ್ತಿರುವಾಗ ಅರ್ಜುನನ ಗಾಂಡೀವಧ್ವನಿಯು ಅತಿ ಪ್ರಬಲವಾಗಿ ಕರ್ಣದುರ್ಯೋಧನರ ಕಿವಿಗೆ ಬಿದ್ದಿತು ಆಗ ಕರ್ಣನು ನಿನ್ನ ಮಗನನ್ನು ಕುರಿತು "ದುರ್ಯೋಧನಾ! ಅದೋ! ನೋಡು. ಅರ್ಜುನನು ನಮ್ಮ ಎಲ್ಲಾ ಸೈನ್ಯವನ್ನೂ, ಸೇನಾಪ್ರಮುಖರನ್ನೂ ಕೊಲೆಮಾಡುವಂತಿದೆ. ಅತ್ತಲಿಂದ ಪ್ರಬಲವಾದ ರಥಘೋಷವೂ, ಗಾಂಡೀವಧ್ವನಿಯೂ, ಕೇಳಿಸುತ್ತಿರುವುದು ನೋಡು. ಅರ್ಜುನನು ಅತ್ತಲಾಗಿ ಬಹಳ ಕಾರ್ಯವನ್ನು ನಡೆಸುವಂತಿದೆ. ನಮ್ಮ ಸೈನ್ಯಗಳೆಲ್ಲಾ ಚದರಿ ಪಲಾಯನಮಾಡುತ್ತಿರುವುದನ್ನು ನೋಡು. ಬಿರುಗಾಳಿಗೆ ಸಿಕ್ಕಿದ ಮೇಘಗಳಂತೆ ಎಲ್ಲವೂ ಓಡಿಹೋದುವು. ಒಬ್ಬನಾದರೂ, ಆ ಅರ್ಜುನನ ಮುಂದೆ ಎದೆಗೊಟ್ಟು ನಿಂತಹಾಗಿಲ್ಲ. ಸಮುದ್ರದಲ್ಲಿ ಒಡೆದುಹೋದ ನಾವೆಯಂತೆ ಕೌರವಸೈನ್ಯವೆಲ್ಲಾ ಶತಖಂಡವಾಗಿ ಕದಲಿಹೋಯಿತು. ನಮ್ಮ ಯೋಧರಲ್ಲಿ ಹಲವರು ಓಡುತ್ತಿರುವರು. ಬಾಣಘಾತಕ್ಕೆ ಗುರಿಯಾಗಿ ಅನೇಕರು ದೀನಧ್ವನಿಯಿಂದ ಕೂಗುತ್ತಿರುವರು. ಅರ್ಜುನನ ರಥವಿರುವ ಕಡೆಯಲ್ಲಿ ಜಯದುಂದುಭಿಧ್ವನಿಯು ಮೇಘಗಳ ಗುಡುಗಿನಂತೆ ಕೇಳಿಸುತ್ತಿರುವುದು. ಅಲ್ಲಲ್ಲಿ ಹಾಹಾಕಾರಗಳೂ, ಮತ್ತೊಂದು ಕಡೆಯಲ್ಲಿ ಸಿಂಹನಾದಗಳೂ ಕೇಳಿಬರುತ್ತಿರುವುದು ನೋಡು. ಇತ್ತಲಾಗಿ ಸಾತ್ಯಕಿಯು ನಡುವೆ ನಿಂತು ಯುದ್ಧಮಾಡುತ್ತಿರುವನು. ನಮ್ಮ ಬಾಣಕ್ಕೆ ಗುರಿಯಾದ ಇವನನ್ನು ನಾವು

ತೀರಿಸಿಬಿಟ್ಟರೆ, ಅಥವಾ ಸೆರೆಹಿಡಿದರೆ, ಬೇರೆ ಶತ್ರುಗಳನ್ನೆಲ್ಲ ನಾವು ಜಯಿಸಿದ ಹಾಗೆಯೇ! ಅದೋ! ಅಲ್ಲಿ ಧೃಷ್ಟದ್ಯುಮ್ನನು ಅನೇಕ ರಥಿಕರೊಡನೆ ಸೇರಿ ದ್ರೋಣನನ್ನು ಇದಿರಿಸುತ್ತಿರುವನು. ಈಗ ಮೊದಲು ನಾವು ಈ ಸಾತ್ಯಕಿಯನ್ನೂ, ಧೃಷ್ಟದ್ಯುಮ್ನನನ್ನೂ ತೀರಿಸಿಬಿಟ್ಟರೆ, ನಮಗೆ ಜಯವು ನಿಶ್ಚಯವು. ಸಂದೇಹವಿಲ್ಲ. ನಾವು ಹಿಂದೆ ಅಭಿಮನ್ಯುವನ್ನು ನಡುವೆ ಸೇರಿಸಿಕೊಂಡು ಕೊಂದಂತೆ, ಈ ಧೃಷ್ಟದ್ಯುಮ್ನ ಸಾತ್ಯಕಿಗಳಿಬ್ಬರನ್ನೂ, ಕೊಲ್ಲುವುದಕ್ಕೆ ಪ್ರಯತ್ನಿಸಬೇಕು. ಈ ಸಾತ್ಯಕಿಯೊಬ್ಬನು ನಮ್ಮೆಲ್ಲರೊಡನೆ ಹೆಣಗಾಡುತ್ತಿರುವುದನ್ನು ನೋಡಿ, ಅರ್ಜುನನು ಈ ಕಡೆಗೆ ಬರುವಂತಿದೆ ಆದುದರಿಂದ ಈಗಲೇ ನೀನು ಕೆಲವು ರಥಿಕರನ್ನು ಕಳುಹಿಸಿ, ಅರ್ಜುನನನ್ನು ಅಲ್ಲಿಯೇ ತಡೆಯುವಂತೆ ಮಾಡು. ಈ ಸಾತ್ಯಕಿಯನ್ನು ನಾವು ಕೊನೆಮುಟ್ಟಿಸುವವರೆಗೆ ಅರ್ಜುನನನ್ನು ಇಲ್ಲಿಗೆ ಬಿಡದಂತೆ ನಮ್ಮ ಕಡೆಯ ಶೂರರು ಬಾಣಗಳಿಂದ ಅವನನ್ನು ತಡೆಯುತ್ತಿರಲಿ" ಎಂದನು. ಕರ್ಣನ ಅಭಿಪ್ರಾಯವನ್ನು ತಿಳಿದು ನಿನ್ನ ಮಗನು ಶಕುನಿಯನ್ನು ಕರೆದು, ಇಂದ್ರನು ದೈತ್ಯವಧಕ್ಕಾಗಿ ಉಪೇಂದ್ರನನ್ನು ಉತ್ಸಾಹಗೊಳಿಸುವಂತೆ ಹೀಗೆಂದನು. "ಮಾವಾ! ಅದೋ! ಅರ್ಜುನನು ವೇಗದಿಂದ ಈ ಕಡೆಗೇ ಬರುತ್ತಿರುವನು. ನೀನು ಹತ್ತುಸಾವಿರ ಆನೆಗಳೊಡನೆಯೂ, ಹತ್ತುಸಾವಿರ ರಥಗಳೊಡನೆಯೂ ಹೊರಟು, ಆ ಅರ್ಜುನನನ್ನು ಮುಂದೆ ಬಾರದಂತೆ ತಡೆಯಬೇಕು. ದುಶ್ಶಾಸನನು, ದುರ್ಮರ್ಷಣನು, ಸುಬಾಹು, ದುಷ್ಪ್ರಧರ್ಷನು, ಈ ನಾಲ್ಕುಮಂದಿಯೂ ಅನೇಕ ಪದಾತಿಸೈನ್ಯಗಳೊಡನೆ ನಿನ್ನ ಸಹಾಯಕ್ಕಾಗಿ ನಿನ್ನನ್ನು ಹಿಂಬಾಲಿಸುವರು. ನೀನು ಈಗಲೇ ಈ ದೊಡ್ಡ ಸೈನ್ಯದೊಡನೆ ಹೊರಟು, ಆ ಕೃಷ್ಣಾರ್ಜುನರನ್ನೂ, ಧರ್ಮರಾಜನನ್ನೂ ನಕುಲಸಹದೇವರನ್ನೂ ಜಯಿಸಿಬರಬೇಕು. ದೇವತೆಗಳಿಗೆ ಮಹೇಂದ್ರನಲ್ಲಿ ಹೇಗೋಹಾಗೆ ನಿನ್ನಲ್ಲಿಯೇ ಈಗ ನಮಗೆ ಪೂರ್ಣವಾದ ಜಯಾಶೆಯಿರುವುದು. ಷಣ್ಮುಖನು ದೈತ್ಯಸೇನೆಯನ್ನು ಕೊಂದಂತೆ ಕುಂತೀಪುತ್ರರನ್ನು ನೀನು ಕೊಂದು ಬಾ" ಎಂದನು. ಆದರಂತೆಯೇ ಶಕುನಿಯು ನಿನ್ನ ನಾಲ್ವರು ಮಕ್ಕಳನ್ನೂ, ದೊಡ್ಡ ಸೈನ್ಯವನ್ನೂ ಕರೆದುಕೊಂಡು ಪಾಂಡವರಿಗಿದಿರಾದನು. ಅವನಿಗೆ ಅಲ್ಲಿ ಪಾಂಡವರೊಡನೆ ದೊಡ್ಡ ಯುದ್ಧವು ಆರಂ

ಭಿಸಿತು. ಇತ್ತಲಾಗಿ ಕರ್ಣನು ದೊಡ್ಡ ಸೈನ್ಯವನ್ನು ಸೇರಿಸಿಕೊಂಡು ಸಾತ್ಯಕಿಯನ್ನು ಬಾಣಗಳಿಂದ ಇದಿರಿಸುತ್ತಿದ್ದನು. ಇನ್ನೂ ಅನೇಕರಾಜರು ಸಾತ್ಯಕಿಯನ್ನು ಆವರಿಸಿಕೊಂಡರು. ಮತ್ತೊಂದುಕಡೆ ದ್ರೋಣನು ಧೃಷ್ಟದ್ಯುಮ್ನನನ್ನು ಇದಿರಿಸಿ ಯುದ್ಧಮಾಡುತ್ತಿದ್ದನು ಅವರಲ್ಲಿ ಪ್ರಬಲ ಯುದ್ಧವು ನಡೆಯುತ್ತಿದ್ದಿತು.

ಇದು ನೂರ ಎಪ್ಪತ್ತೊಂದನೆಯ ಅಧ್ಯಾಯವು.

{ ಸಂಕುಲಯುದ್ಧವು. ಧೃಷ್ಟದ್ಯುಮ್ನಾದಿಗಳು ಸಂತೋಷದಿಂದ ಸಿಂಹನಾದಮಾಡಿದುದು. }

ಮಹಾರಾಜಾ ! ಹೀಗೆ ನಮ್ಮಕಡೆಯ ಅನೇಕರಾಜರು ಕರ್ಣನನ್ನು ಮುಂದಿಟ್ಟುಕೊಂಡು, ಅಪರಿಮಿತವಾದ ಚತುರಂಗ ಸೈನ್ಯಗಳೊಡನೆ ಸಾತ್ಯಕಿಯನ್ನು ಸುತ್ತಲೂ ಆವರಿಸಿದರು. ಸಾತ್ಯಕಿಯನ್ನು ತಮ್ಮ ಸಿಂಹನಾದಗಳಿಂದಲೇ ಹೆದರಿಸುತ್ತ ವೇಗದಿಂದ ಸುತ್ತಲೂ ಬಾಣಗಳನ್ನು ಆವನಮೇಲೆ ಸುರಿಸುತ್ತಿದ್ದರು. ಸಾತ್ಯಕಿಯು ಸ್ವಲ್ಪವಾದರೂ ಹೆದರದೆ ಅವರನ್ನೆಲ್ಲಾ ತಾನೊಬ್ಬನೇ ತನ್ನ ಹಸ್ತವೇಗದಿಂದ ನಿವಾರಿಸುತ್ತಿದ್ದನು. ಅನೇಕವೀರರ ತಲೆಗಳನ್ನುರುಳಿಸಿದನು. ಆನೆಗಳ ಸುಂಡಿಲುಗಳನ್ನೂ, ಕುದುರೆಗಳ ಕಂಠಗಳನ್ನೂ, ಆಯುಧಸಹಿತಗಳಾದ ಪದಾತಿಗಳ ತೋಳುಗಳನ್ನೂ ಕತ್ತರಿಸಿದನು. ಅವರ ಚಾಮರಗಳನ್ನೂ, ಶ್ವೇತಚ್ಛತ್ರಗಳನ್ನೂ ಭೇದಿಸಿ ಕೆಡಹಿದನು. ಇವುಗಳಿಂದ ರಣಭೂಮಿಯೆಲ್ಲಾ ನಕ್ಷತ್ರಗಳಿಂದ ಕೂಡಿದ ಆಕಾಶದಂತೆ ಕಾಣಿಸುತ್ತಿದ್ದಿತು. ಸಾತ್ಯಕಿಯ ಕೊಲೆಗೀಡಾದ ನಮ್ಮ ಯೋಧರು ಪ್ರೇತಗಳಂತೆ ಕೂಗಿಡುತ್ತಿದ್ದರು. ಈ ರೋದನಧ್ವನಿಯಿಂದ ರಣಭೂಮಿಯೆಲ್ಲವೂ ತುಂಬಿಹೋಯಿತು. ಆ ರಾತ್ರಿಯು ಮತ್ತಷ್ಟು ಭಯಂಕರವಾಯಿತು. ಕೌರವಸೈನ್ಯವು ಸಾತ್ಯಕಿಯ ಕೊಲೆಯನ್ನು ತಡೆಯಲಾರದೆ ಓಡಲಾರಂಭಿಸಿತು. ಆಗ ದುರ್ಯೋಧನನು ತನ್ನ ಸಾರಥಿಯನ್ನು ಕುರಿತು ಸಾತ್ಯಕಿಯಿದ್ದ ಕಡೆಗೆ ರಥವನ್ನು ಬಿಡುವಂತೆ ಆಜ್ಞಾಪಿಸಿದನು. ರಥವು ಸಾತ್ಯಕಿಯಿದ್ದಕಡೆಗೆ ಬಂದಿತು. ಒಡನೆಯೇ ನಿನ್ನ ಮಗನು ತನ್ನ ಹಸ್ತ

ವೇಗದಿಂದ ಸಾತ್ಯಕಿಯಮೇಲೆ ಎಡೆಬಿಡದೆ ಬಾಣಗಳನ್ನು ಪ್ರಯೋಗಿಸತೊಡಗಿದನು. ಆಗ ಸಾತ್ಯಕಿಯು ಹನ್ನೆರಡು ಬಾಣಗಳನ್ನು ದುರ್ಯೋಧನನ ಮೇಲೆ ಪ್ರಯೋಗಿಸಿದನು. ದುರ್ಯೋಧನನು ಪ್ರತಿಯಾಗಿ ಹತ್ತು ಬಾಣಗಳನ್ನು ಬಿಟ್ಟನು. ಅಲ್ಲಿ ಪಾಂಚಾಲರಿಗೂ, ಕೌರವರಿಗೂ ಪ್ರಬಲಯುದ್ಧವಾಯಿತು. ಈ ನಡುವೆ ಸಾತ್ಯಕಿಯು ನಿನ್ನ ಮಗನ ಎದೆಗೆ ಗುರಿಯಿಟ್ಟು ಏಕಕಾಲದಲ್ಲಿ ಎಂಭತ್ತು ಬಾಣಗಳನ್ನು ಬಿಟ್ಟನು. ನಿನ್ನ ಮಗನ ರಥಾಶ್ವಗಳನ್ನೂ ಸಾರಥಿಯನ್ನೂ ಕೊಂದುಕೆಡಹಿದನು. ಕುದುರೆಗಳು ಸತ್ತರೂ, ನಿನ್ನ ಮಗನು ಅದೇ ರಥದಲ್ಲಿ ಕುಳಿತು ಸಾತ್ಯಕಿಯಮೇಲೆ ತೀಕ್ಷ್ಣಬಾಣಗಳನ್ನು ಬಿಡುತ್ತಿದ್ದನು. ನಿನ್ನ ಮಗನು ತನ್ನ ಹಸ್ತವೇಗದಿಂದ ಬಿಟ್ಟ ಐನೂರು ಬಾಣಗಳನ್ನೂ ಸಾತ್ಯಕಿಯು ನಿಮಿಷಮಾತ್ರದಲ್ಲಿ ಭಂಗಿಸಿದನು. ಅಲ್ಲದೆ ನಿನ್ನ ಮಗನ ಕೈಯಲ್ಲಿದ್ದ ಬಿಲ್ಲನ್ನು ತುಂಡುಮಾಡಿದನು. ಧನುಸ್ಸು ಮುರಿದು, ವಿರಥನೂ ಆಗಿದ್ದ ನಿನ್ನ ಮಗನು, ಸಮೀಪದಲ್ಲಿದ್ದ ಕೃತವರ್ಮನ ರಥವನ್ನೇರಿ ಕುಳಿತು ಹಿಂತಿರುಗಿಬಿಟ್ಟನು. ದುರ್ಯೋಧನನು ಯುದ್ಧದಿಂದ ಹಿಂತಿರುಗಿದಮೇಲೆ ಸಾತ್ಯಕಿಯು ನಿನ್ನ ಸೈನ್ಯವನ್ನು ಹೊಡೆದೋಡಿಸಲಾರಂಭಿಸಿದನು. ಇದು ಹೀಗಿರಲು, ಅತ್ತಲಾಗಿ ಶಕುನಿಯು ಅನೇಕ ಸಹಸ್ರ ರಥ ಗಜ ತುರಗ ಸೈನ್ಯಗಳೊಡನೆ ಅರ್ಜುನನನ್ನಿದಿರಿಸಿ ವಿವಿಧಶಸ್ತ್ರಗಳನ್ನು ಅವನಮೇಲೆ ಪ್ರಯೋಗಿಸುತ್ತಿದ್ದನು. ಇನ್ನೂ ಅನೇಕ ಕ್ಷತ್ರಿಯರೂ ಅರ್ಜುನನಮೇಲೆ ಬಾಣಗಳನ್ನು ಬಿಡುತ್ತ ಬಂದರು. ಆದರೇನು? ಅರ್ಜುನನು ತನ್ನ ಬಾಣಗಳಿಂದ ತನಗಿದಿರಾದ ಸೈನ್ಯಗಳನ್ನೆಲ್ಲಾ ತಡೆಯುತ್ತ, ಅನೇಕರನ್ನು ಯಮಪುರಿಗೆ ಸಾಗಿಸಿಬಿಟ್ಟನು. ಆಗ ಶಕುನಿಯು ಅರ್ಜುನನ ಮೇಲೆ ನೂರಾರು ಬಾಣಗಳನ್ನು ಪ್ರಯೋಗಿಸಿದನು. ಅರ್ಜುನನು ಅವನ್ನೆಲ್ಲಾ ತನ್ನ ಇಪ್ಪತ್ತುಬಾಣಗಳಿಂದ ಭೇದಿಸಿ, ತನಗಿದಿರಾದ ಧನುರ್ಧಾರಿಗಳೊಬ್ಬೊಬ್ಬರನ್ನೂ ನೂರುನೂರು ಬಾಣಗಳಿಂದ ಬಲವಾಗಿ ನೋಯಿಸಿದನು. ಆಗ ಅರ್ಜುನನು, ದೈತ್ಯರನ್ನು ವಜ್ರಪಾಣಿಯಾದ ದೇವೇಂದ್ರನಂತೆ ನಿನ್ನ ಕಡೆಯ ಯೋಧರನ್ನು ಸಂಹರಿಸುತ್ತಿದ್ದನು. ಆನೆಯ ಸುಂಡಿಲುಗಳಂತೆ ದುಂಡಗೆ ನೀಡಿದ ಯೋಧರ ತೋಳುಗಳು ಅಲ್ಲಲ್ಲಿ ತುಂಡಾಗಿ, ಐದು ಹೆಡೆಯ ಸರ್ಪಗಳಂತೆ ಕಾಣುತ್ತಿದ್ದಿತು. ಕಿರೀಟಕುಂಡಲಗಳೊಡನೆ ತಲೆ

ಗಳು ಉರುಳಾಡುತ್ತಿದ್ದುವು. ಕಚ್ಚಿದ ತುಟಿ! ಹೊರಬಿದ್ದ ಕಣ್ಣಾಲೆಗಳು! ಕದಲಿದ ಚೂಡಾಮಣಿಗಳು! ಇವುಗಳೊಡನೆ ಅನೇಕ ರಾಜರ ಶಿರಸ್ಸುಗಳು ಅಲ್ಲಲ್ಲಿ ಬಿದ್ದು ಕಮಲದ ಹೂಗಳನ್ನು ಎರಚಿದಂತೆ ಕಾಣುತ್ತಿದ್ದಿತು. ಹೀಗೆ ಅರ್ಜುನನು ಅದ್ಭುತಪರಾಕ್ರಮವನ್ನು ತೋರಿಸಿ, ತಿರುಗಿ ಶಕುನಿಗೆ ಐದುಬಾಣಗಳನ್ನೂ, ಉಲೂಕನಿಗೆ ಮೂರುಬಾಣಗಳನ್ನೂ ಹೊಡೆದನು. ಉಲೂಕನು ಕೋಪದಿಂದ ಮೊದಲಿಗಿಂತಲೂ ಇಮ್ಮಡಿಯಾದ ಪರಾಕ್ರಮದಿಂದ ಅರ್ಜುನನಮೇಲೆ ಅನೇಕ ಸಹಸ್ರಬಾಣಗಳನ್ನು ಹೊಡೆದನು. ಸಾರಥಿಯಾದ ಕೃಷ್ಣನಮೇಲೆಯೂ ಬಾಣಗಳನ್ನು ಬಿಟ್ಟು, ದೊಡ್ಡ ಸಿಂಹನಾದವನ್ನು ಮಾಡಿದನು. ಇಷ್ಟರಲ್ಲಿ ಅರ್ಜುನನು ಶಕುನಿಯ ಬಿಲ್ಲನ್ನು ಕತ್ತರಿಸಿ, ಅವನ ನಾಲ್ಕು ರಥಾಶ್ವಗಳನ್ನೂ ಕೊಂದುಬಿಟ್ಟನು. ಒಡನೆಯೇ ಶಕುನಿಯು ಥಟ್ಟನೆ ತನ್ನ ರಥದಿಂದ ಹಾರಿ, ತನ್ನ ಮಗನಾದ ಉಲೂಕನ ರಥದಲ್ಲಿ ಏರಿ ಕುಳಿತನು. ಮಹಾರಥರೆನಿಸಿದ ಆ ತಂದೆಮಕ್ಕಳಿಬ್ಬರೂ ಒಂದೇ ರಥದಲ್ಲಿ ಕುಳಿತು, ಅರ್ಜುನನಮೇಲೆ ಬಾಣಗಳ ಮಳೆಯನ್ನು ಕರೆದರು. ಆದರೇನು? ಅರ್ಜುನನು ತನ್ನಬಾಣಗಳಿಂದ ಅವರಿಬ್ಬರನ್ನೂ ಬಲವಾಗಿ ನೋಯಿಸಿ, ನಿನ್ನ ಸೈನ್ಯವನ್ನೆಲ್ಲಾ ಬಡಿದೋಡಿಸುತ್ತಿದ್ದನು. ಈ ಕೋಲೆಯನ್ನು ತಡೆಯಲಾರದೆ ನಿನ್ನ ಸೈನ್ಯಗಳು ಬಿರುಗಾಳಿಗೆ ಇದಿರಾದ ಮೇಘಗಳಂತೆ ಚದರುತ್ತಿದ್ದುವು. ಹೀಗೆ ಕೊಲೆಗೀಡಾಗಿ ದಿಕ್ಕುದಿಕ್ಕುಗಳಿಗೆ ಓಡುತ್ತಿದ್ದ ಆ ಸೈನ್ಯದಲ್ಲಿ ಅನೇಕರು ತಮ್ಮ ವಾಹನಗಳನ್ನೂ ಲಕ್ಷ್ಯಮಾಡದೆ, ತಾವು ಕಾಲೋಟದಿಂದ ಓಡುತ್ತಿದ್ದರು. ಇನ್ನು ಕೆಲವರು ವಾಹನಗಳನ್ನು ಬಲವಾಗಿ ಓಡಿಸುತ್ತಿದ್ದರು. ಆ ಭಯಂಕರವಾದ ಕಗ್ಗತ್ತಲೆಯಲ್ಲಿ ಅನೇಕರು ದಾರಿತಿಳಿಯದೆ ತತ್ತಳಿಸುತ್ತಿದ್ದರು. ಹೀಗೆ ಕೃಷ್ಣಾರ್ಜುನರಿಬ್ಬರೂ ಕೌರವಯೋಧರನ್ನು ಜಯಿಸಿ, ಸಂತೋಷದಿಂದ ಶಂಖಧ್ವನಿಯನ್ನು ಮಾಡಿದರು. ಇನ್ನೊಂದುಕಡೆ ಧೃಷ್ಟದ್ಯುಮ್ನನು ಮೂರುಬಾಣಗಳಿಂದ ದ್ರೋಣನನ್ನು ಬಲವಾಗಿ ಹೊಡೆದು, ಒಂದು ಬಾಣದಿಂದ ಅವನ ಧನುಸ್ಸಿನ ನಾಣನ್ನು ಕತ್ತರಿಸಿಬಿಟ್ಟನು. ಮುರಿದ ಧನುಸ್ಸನ್ನು ಬಿಸುಟು ದ್ರೋಣನು ಬೇರೆ ಬಿಲ್ಲನ್ನು ಕೈಗೆತ್ತಿಕೊಂಡು ಏಳು ಬಾಣಗಳನ್ನು ಧೃಷ್ಟದ್ಯುಮ್ನನಿಗೂ, ಐದು ಬಾಣಗಳನ್ನು ಅವನ ಸಾರಥಿಗೂ ಹೊಡೆದನು. ಮಹಾರಥನಾದ ಧೃಷ್ಟ

ದ್ಯುಮ್ನನು ಪ್ರತಿಬಾಣಗಳಿಂದ ಅವುಗಳನ್ನು ನಿವಾರಿಸಿ, ಕೌರವಸೈನ್ಯವನ್ನು ಕೊಲೆಮಾಡುತ್ತಿದ್ದನು. ಆಗ ಯಮಪುರಿಯ ಕಡೆಗೆ ಹೋಗುತ್ತಿರುವ ವೈತರಿಣಿಯಲ್ಲಿ ಉಭಯಸೈನ್ಯಗಳ ನಡುವೆ ದೊಡ್ಡ ರಕ್ತನದಿಯು ಹೊರಟಿತು. ಆ ಪ್ರವಾಹದಲ್ಲಿ ಗಜ ತುರಗ ಪದಾತಿಗಳೆಲ್ಲ ನಡುನಡುವೆ ತೇಲುತ್ತಿದ್ದುವು. ಹೀಗೆ ಧೃಷ್ಟದ್ಯುಮ್ನನು ನಿನ್ನ ಸೈನ್ಯವನ್ನು ಸೋಲಿಸಿದಮೇಲೆ, ಅವನೂ, ಅವನ ತಮ್ಮನಾದ ಶಿಖಂಡಿಯೂ, ಜಯೋತ್ಸಾಹದಿಂದ ಶಂಖಗಳನ್ನೂದಿದರು. ಇದರಂತೆಯೇ ನಕುಲಸಹದೇವರೂ, ಸಾತ್ಯಕಿಯೂ, ಯುಧಿಷ್ಠಿರನೂ, ಭೀಮನೂ, ನಿನ್ನ ಕಡೆಯ ಸಾವಿರಾರುಮಂದಿ ರಥಿಕರನ್ನು ಜಯಿಸಿ, ಕರ್ಣದುರ್ಯೋಧನರೂ, ದ್ರೋಣಾಶ್ವತ್ಥಾಮರೂ ಕಣ್ಣಿದಿರಿಗೆ ನೋಡುತ್ತಿರುವಾಗಲೇ ದೊಡ್ಡ ಸಿಂಹನಾದಗಳನ್ನು ಮಾಡಿದರು.

ಇದು ನೂರ ಎಪ್ಪತ್ತೆರಡನೆಯ ಅಧ್ಯಾಯವು.



### ದ್ರೋಣಕರ್ಣರಿಗೆ ಸಾತ್ಯಕಿಧೃಷ್ಟದ್ಯುಮ್ನರೊಡನೆ ಯುದ್ಧವು.

ಮಹಾರಾಜಾ! ಹೀಗೆ ಕೌರವಸೈನ್ಯವೆಲ್ಲಾ ಕೊಲೆಗೀಡಾಗಿ ಚದರಿಹೋಗುತ್ತಿರುವುದನ್ನು ಕಂಡು, ನಿನ್ನ ಮಗನಿಗೆ ದುಸ್ಸಹವಾದ ದುಃಖಾಕ್ರೋಶಗಳುಂಟಾದುವು. ಒಡನೆಯೇ ಅವನು ಕರ್ಣನ ಮತ್ತು ದ್ರೋಣನ ಬಳಿಗೆ ಬಂದು ಅತ್ಯಾಕ್ರೋಶದೊಡನೆ ಹೀಗೆಂದನು. “ಎಲೈ! ನೀವಿಬ್ಬರೂ ಅರ್ಜುನನಿಂದಾದ ಸೈಂಧವವಧವನ್ನು ನೋಡಿ ಕೋಪವಶರಾಗಿ ಯುದ್ಧವನ್ನಾರಂಭಿಸಿಬಿಟ್ಟಿರಿ! ಈಗಲಾದರೋ, ಪಾಂಡವರಿಂದ ನಮ್ಮ ಸೈನ್ಯವು ವಧಿಸಲ್ಪಡುತ್ತಿರುವುದನ್ನು ನೋಡಿಯೂ ನೀವು ಉದಾಸೀನರಾಗಿರುವಂತಿದೆ. ಶಕ್ತರಾದ ನೀವು ಅಶಕ್ತರಂತೆ ಈ ಅನರ್ಥಗಳನ್ನೆಲ್ಲ ನಿಂತು ನೋಡುವಿರಿ. ನಿಮಗೆ ನಾನು ಬೇಡವಾಗಿದ್ದಪಕ್ಷದಲ್ಲಿ, ಆಗಲೇ ನೀವು ನನಗೆ ಆ ಮಾತನ್ನು ಹೇಳಬಾರದಾಗಿತ್ತೇನು? “ನಾವಿಬ್ಬರೂ ಈಗಿನ ಯುದ್ಧದಲ್ಲಿ ಪಾಂಡವರನ್ನು ಜಯಿಸಿಬಿಡುವೆ”ವೆಂದು ಆಶೋತ್ತರವನ್ನು ಕೊಟ್ಟಿರಿ! ನಿಮ್ಮ ಮಾತನ್ನು ಕೇಳಿ ನಾನು ಪಾಂಡವರೊಡನೆ ಯುದ್ಧವನ್ನು ಮುಂದುವರಿಸಿದೆನು. ನಿಮ್ಮ ಅಭಿಪ್ರಾಯವನ್ನು ತಿಳಿದಿದ್ದರೆ, ನಾನು

ಪಾಂಡವರೊಡನೆ ಇಷ್ಟು ವೈರವನ್ನೇ ಬೆಳೆಸುತ್ತಿರಲಿಲ್ಲ. ಅನ್ಯಾಯವಾಗಿ ನಮ್ಮ ಅನೇಕ ಯೋಧರನ್ನು ಕಳೆದುಕೊಂಡೆನು. ಓ ಕರ್ಣಾ! ಓ ಆಚಾರ್ಯಾ! ಈಗಲೂ ನನ್ನನ್ನು ಕೈಬಿಡುವ ಅಭಿಪ್ರಾಯವು ನಿಮಗಿಲ್ಲವಿದ್ದರೆ ನಿಮ್ಮ ಪರಾಕ್ರಮಕ್ಕೆ ಅನುರೂಪವಾಗಿ ಮನಸ್ಸಿಟ್ಟು ಯುದ್ಧಮಾಡಿರಿ" ಎಂದನು. ದುರ್ಯೋಧನನ ಈ ಮಾತು ಅವರಿಗೆ ಅಂಕುಶದಿಂದ ತಿವಿದಂತಾಯಿತು. ಕಾಲಿಂದ ಮೆಟ್ಟಿದ ಕಾಲಸರ್ಪಗಳಂತೆ ಅವರಿಬ್ಬರೂ ಕೋಪಾವಿಷ್ಟರಾಗಿ, ಸಾತ್ಯಕಿ ಮೊದಲಾದ ಪಾಂಡವಸೈನ್ಯದ ಯೋಧರನ್ನು ಇದಿರಿಸುವುದಕ್ಕಾಗಿ ಹೊರಟುಬಿಟ್ಟರು. ಇದನ್ನು ನೋಡಿ ಪಾಂಡವರೂ ಅತ್ತಲಿಂದ ಎಲ್ಲಾ ಸೈನ್ಯಗಳೊಡಗೂಡಿ ಬಾರಿಬಾರಿಗೂ ಸಿಂಹನಾದಮಾಡುತ್ತಾ ಅವರನ್ನಿದಿರಿಸಿದರು. ದ್ರೋಣನು ಸಾತ್ಯಕಿಗೆ ಗುರಿಯಿಟ್ಟು ಹತ್ತುಬಾಣಗಳನ್ನು ಹೊಡೆದನು. ಇದೇಸಮಯದಲ್ಲಿ ಕರ್ಣನು ಹತ್ತು, ದುರ್ಯೋಧನನು ಏಳು, ಹೀಗೆ ಏಕಕಾಲದಲ್ಲಿ ಸಾತ್ಯಕಿಯಮೇಲೆ ಬಾಣಗಳನ್ನು ಪ್ರಯೋಗಿಸಿದರು. ದ್ರೋಣನು ಪಾಂಡವಸೈನ್ಯವನ್ನು ಇದಿರಿಸುತ್ತಿರುವುದನ್ನು ನೋಡಿ, ಸೋಮಕರು ನಾನಾಕಡೆಗಳಿಂದ ಬಾಣವರ್ಷಗಳನ್ನು ಕರೆಯುತ್ತಾ ದ್ರೋಣನನ್ನಿದಿರಿಸಿಬಂದರು. ಆಗ ದ್ರೋಣನು ಅನೇಕ ಕ್ಷತ್ರಿಯರನ್ನು ಕೊಂದು ಕೆಡಹಿದನು. ದ್ರೋಣನ ಕೊಲೆಗೀಡಾದ ಪಾಂಚಾಲಸೈನ್ಯದಲ್ಲಿ ದೊಡ್ಡ ಆಕ್ರಂದನಧ್ವನಿಯು ಕೇಳಿಸಿತು. ಆಗ ಆ ಸೈನ್ಯದಲ್ಲಿ "ಹಾ ತಂದೆ! ಹಾ ಸಹೋದರಾ! ಹಾ ಮಗನೇ! ಹಾ ಮಾತುಲಾ! ಹಾ ಮಿತ್ರರೇ! ಓ ಬಂಧುಗಳೇ" ಎಂದು ಮೃತರಾದ ತಮ್ಮತಮ್ಮ ಬಂಧುಗಳ ಹೆಸರನ್ನು ಹಿಡಿದು ಕೂಗುತ್ತಿರುವ ಶಬ್ದಗಳೇ ಕಿವಿಗೆ ಬೀಳುತ್ತಿದ್ದುವು. ಕೆಲವರು ತಾವು ಬದುಕಿದರೆ ಸಾಕೆಂದು ತಮ್ಮ ಕಡೆಯವರನ್ನೂ ಲಕ್ಷ್ಯಮಾಡದೆ ಓಡುತ್ತಿದ್ದರು. ಆಗ ದ್ರೋಣನ ಕೊಲೆಯನ್ನು ತಡೆಯಲಾರದೆ, ಪಾಂಡವಸೈನ್ಯದಲ್ಲಿ ದೀವಟಿಗೆಗಳನ್ನು ಹಿಡಿದಿದ್ದ ಪದಾತಿಗಳೆಲ್ಲ ಆ ದೊಂದಿಗಳನ್ನು ಕೆಳಗೆ ಬಿಸುಟು, ಪ್ರಾಣಭಯದಿಂದ ಓಡಿಹೋಗುತ್ತಿದ್ದರು. ಕೃಷ್ಣಾರ್ಜುನರೂ, ಭೀಮನೂ, ನಕುಲಸಹದೇವರೂ, ಯುಧಿಷ್ಠಿರನೂ, ಸಾತ್ಯಕಿಯೂ ನೋಡುತ್ತಿರುವಾಗಲೇ ಪಾಂಡವಸೈನ್ಯವೆಲ್ಲಾ ಅಲ್ಲಲ್ಲಿ ಚದರಿಹೋಯಿತು. ಆ ಸೈನ್ಯದಲ್ಲಿ ಬೆಳಕೂ ಇಲ್ಲದೆ, ಗಾಢಾಂಧಕಾರವು ಆವರಿಸಿ, ಯಾವುದೊಂದೂ ಕಣ್ಣಿಗೆ ಕಾ

ಣದಂತಾಯಿತು. ಕೌರವರ ಕಡೆಯಲ್ಲಿದ್ದ ದೀಪಪ್ರಕಾಶದಿಂದ ಅಲ್ಲಲ್ಲಿ ಓಡುತ್ತಿರುವ ಪಾಂಡವಯೋಧರನ್ನು ಕಂಡು ದ್ರೋಣಕರ್ಣರಿಬ್ಬರೂ, ಆ ಸೈನ್ಯಗಳನ್ನು ಬೆನ್ನಟ್ಟಿ ಹೋಗುತ್ತಿದ್ದರು. ಹೀಗೆ ಪಾಂಚಾಲರೆಲ್ಲಾ ದ್ರೋಣನ ಕೊಲೆಗೀಡಾಗಿ ಚದರಿಹೋದುದನ್ನು ನೋಡಿ, ಕೃಷ್ಣನು ಖೇದ ದಿಂದ ಅರ್ಜುನನನ್ನು ಕುರಿತು ಹೀಗೆಂದನು. "ಅರ್ಜುನಾ! ದ್ರೋಣ ಕರ್ಣರಿಬ್ಬರೂ ಧೃಷ್ಟದ್ಯುಮ್ನ ಸಾತ್ಯಕಿಗಳೊಡನೆ ಯುದ್ಧವನ್ನಾರಂಭಿಸಿ, ಅನೇಕ ಪಾಂಚಾಲರನ್ನು ಕೊಂದುಬಿಟ್ಟರು, ಅವರಿಬ್ಬರ ಬಾಣವರ್ಷದಿಂದ ನಮ್ಮ ಕಡೆಯಲ್ಲಿ ಅನೇಕ ಮಹಾರಥರು ಪರಾಜಿತರಾದರು. ನೀವು ಎಷ್ಟೆಷ್ಟು ತಡೆದರೂ, ನಮ್ಮ ಸೈನ್ಯವು ಯುದ್ಧಕ್ಕೆ ಬಂದು ನಿಲ್ಲುವಂತೆ ತೋರ ಲಿಲ್ಲ" ಎಂದನು. ಆಗ ಕೃಷ್ಣಾರ್ಜುನರಿಬ್ಬರೂ ಓಡುತ್ತಿರುವ ತಮ್ಮ ಸೈನ್ಯವನ್ನು ನೋಡಿ, "ಎಲೈ! ಓಡಬೇಡಿರಿ! ನಾವಿಬ್ಬರೂ ನಮ್ಮ ಎಲ್ಲಾ ಸೈನ್ಯಗಳೊಡನೆ ದೃಢವ್ಯೂಹಗಳನ್ನು ರಚಿಸಿ, ಆ ದ್ರೋಣಕರ್ಣರಿಬ್ಬರನ್ನೂ ಅಡಗಿಸುವುದಕ್ಕೆ ಪ್ರಯತ್ನಿಸುವೆವು. ಅವರೇನೋ ಬಲಾಢ್ಯರು! ಶೂರರು! ಅಸ್ತ್ರಗಳಲ್ಲಿ ಸುಶಿಕ್ಷಿತರು! ಈಗ ನಾವು ಉಪೇಕ್ಷೆಮಾಡಿದರೆ, ಈ ರಾತ್ರಿಯೊಳ ಗಾಗಿ ನಮ್ಮ ಸೈನ್ಯವನ್ನೆಲ್ಲಾ ನಿರ್ಮೂಲವಮಾಡಿಬಿಡುವರು" ಎಂದರು. ಹೀಗೆ ಕೂಗುತ್ತಿರುವಾಗಲೇ ಭೀಮನು ಸೈನ್ಯಗಳನ್ನೆಲ್ಲಾ ಹಿಂತಿರುಗಿಸಿ ಕೊಂಡು ಅಲ್ಲಿಗೆ ಬಂದು ಸೇರಿದನು. ಅದನ್ನು ಕಂಡು ಸಂತೋಷದಿಂದ ಕೃಷ್ಣನು ತಿರುಗಿ ಅರ್ಜುನನನ್ನು ಕುರಿತು, "ಅರ್ಜುನಾ! ಅದೋ! ನೋಡು. ಭೀಮನು ಎಲ್ಲಾ ಸೈನ್ಯಗಳನ್ನೂ ಹಿಂತಿರುಗಿಸಿಕೊಂಡು, ಸೋ ಮಕರೊಡಗೂಡಿ ದ್ರೋಣಕರ್ಣರನ್ನು ಇದಿರಿಸುವುದಕ್ಕಾಗಿ ಹೊರಟಿರು ವನು. ಈಗ ನೀನು ಅವನೊಡನೆಯೂ, ಪಾಂಚಾಲರೊಡನೆಯೂ ಕಲೆತು ಯುದ್ಧಮಾಡು. ಅದರಿಂದ ನಮ್ಮ ಸೈನ್ಯಗಳಿಗೆ ಧೈರ್ಯವುಂಟಾಗು ವುದು" ಎಂದನು. ಅದರಮೇಲೆ ಕೃಷ್ಣಾರ್ಜುನರು ದ್ರೋಣಕರ್ಣರೊಡನೆ ಯುದ್ಧಕ್ಕೆ ಹೊರಟರು. ತಿರುಗಿ ಯುಧಿಷ್ಠಿರನ ಸೈನ್ಯವೆಲ್ಲಾ ಒಂದಾಗಿ ಕೂಡಿ ದೊಡ್ಡ ಗುಂಪಾಗಿ ಯುದ್ಧಕ್ಕೆ ನಿಂತಿತು. ದ್ರೋಣಕರ್ಣರಿಬ್ಬರೂ ಸರ್ವಪ್ರಯತ್ನದಿಂದ ಪಾಂಡವಸೈನ್ಯವನ್ನು ಇದಿರಿಸಿ ಹೊಡೆಯುತ್ತಿದ್ದರು. ಮಹಾಸಮುದ್ರಗಳೆರಡೂ ಚಂದ್ರೋದಯಕಾಲದಲ್ಲಿ ಉಕ್ಕಿಬಂದು ಒಂದ

ಕ್ಕೊಂದು ತಾಗುವಂತೆ, ಆ ರಾತ್ರಿಯಲ್ಲಿ ಉಭಯಸೈನ್ಯಗಳೂ ತಾಗಿದುವು. ದಾರುಣಯುದ್ಧವಾಯಿತು. ಆಗ ನಿನ್ನಕಡೆಯ ಯೋಧರೂಕೂಡ ತಮ್ಮ ಕೈಯಲ್ಲಿದ್ದ ದೀಪಗಳನ್ನು ಬಿಸುಟು, ಪಾಂಡವರೊಡನೆ ಯುದ್ಧಕ್ಕೆ ನಿಂತರು. ಹುಚ್ಚುಹಿಡಿದವರಂತೆ ನಿನ್ನ ಸೈನಿಕರು ಪ್ರತಿಸೈನ್ಯಗಳನ್ನು ಇದಿರಿಸುತ್ತಿದ್ದರು. ಕತ್ತಲೆಯೊಂದುಕಡೆ! ಸೇನಾಧೂಳಿಯೊಂದುಕಡೆ! ಇವೆರಡರಿಂದ ಯಾರೂ ಕಣ್ಣಿಗೆ ಬೀಳದಂತಾಗಲು, ಬರೀನಾಮಗೋತ್ರಗಳನ್ನು ಹಿಡಿದು ಕರೆಯುತ್ತಾ, ಒಬ್ಬರಿಗೊಬ್ಬರು ಹೊಡೆದಾಡುತ್ತಿದ್ದರು. ಸ್ವಯಂವರಕಾಲದಲ್ಲಿ ಪ್ರತಿರಾಜರ ಕುಲಗೋತ್ರನಾಮಗಳಂತೆ ರಾಜರ ಹೆಸರುಗಳೇ ಕಿವಿಗೆ ಬೀಳುತ್ತಿದ್ದುವು. ಒಂದು ಕ್ಷಣದಲ್ಲಿ ಆ ಶಬ್ದವೆಲ್ಲಾ ಹಾಗೆಯೇ ಅಡಗಿಹೋಗುವುದು! ಉತ್ತರಕ್ಷಣದಲ್ಲಿಯೇ ತಿರುಗಿ ದೊಡ್ಡ ಗದ್ದಲವು ಕೇಳಿಸುವುದು! ಕೋಪಗೊಂಡ ಯೋಧರು ಒಬ್ಬರಿಗೊಬ್ಬರು "ಜಯಿಸಿರಿ! ಕೊಲ್ಲಿರಿ!" ಎಂದು ಕೂಗುತ್ತಿರುವರು. ಎಲ್ಲೆಲ್ಲಿ ದೀಪಗಳು ಕಾಣುವುವೋ, ಅಲ್ಲಲ್ಲಿಗೆ ಶೂರರು ಓಡಿಬಂದು, ಬೆಂಕಿಯಲ್ಲಿ ಬೀಳುವ ಮಿಡಿತೆಗಳಂತೆ ಯುದ್ಧದಲ್ಲಿ ಸಾಯುತ್ತಿರುವರು. ಆ ಭಯಂಕರವಾದ ಕಗ್ಗತ್ತಲೆಯಲ್ಲಿ, ಕೌರವಪಾಂಡವರ ಯುದ್ಧವು ಅತ್ಯಂತದಾರುಣವಾಯಿತು.

ಇದು ನೂರ ಎಪ್ಪತ್ತುಮೂರನೆಯ ಅಧ್ಯಾಯವು.

---

{ ಕರ್ಣನೊಡನೆ ಯುದ್ಧಕ್ಕಾಗಿ ಹೋಗಬೇಕೆಂದಿದ್ದ ಅರ್ಜುನನನ್ನು ಕೃಷ್ಣನು ತಡೆದುದು. ಕೃಷ್ಣಾರ್ಜುನರ ಪ್ರೇರಣೆಯಿಂದ ಘಟೋತ್ಕಚನು ಕರ್ಣನಿಗಿದಿರಾದುದು. }

ರಾಜೇಂದ್ರಾ! ಆಗ ಕರ್ಣನು ತನಗಿದಿರಾದ ಧೃಷ್ಟದ್ಯುಮ್ನನಮೇಲೆ ಮರ್ಮಭೇದಕಗಳಾದ ಹತ್ತು ಬಾಣಗಳನ್ನು ಹೊಡೆದನು. ಧೃಷ್ಟದ್ಯುಮ್ನನು ಕೋಪದಿಂದ ಕರ್ಣನನ್ನು "ನಿಲ್ಲು ನಿ"ಲ್ಲೆಂದು ಹೇಳಿ, ಅಷ್ಟೇ ಬಾಣಗಳನ್ನು ಅವನಮೇಲೆ ಬಿಟ್ಟನು. ಇಬ್ಬರೂ ಬಾಣಗಳಿಂದ ಒಬ್ಬರನ್ನೊಬ್ಬರು ಮರೆಸಿದರು. ಒಬ್ಬರನ್ನೊಬ್ಬರು ಅತಿತೀವ್ರವೇಗದಿಂದ ಹೊಡೆದಾಡುತ್ತಿದ್ದರು. ಇಷ್ಟರಲ್ಲಿ ಕರ್ಣನು ಧೃಷ್ಟದ್ಯುಮ್ನನ ಸಾರಥಿಯನ್ನೂ, ನಾಲ್ಕು ರಥಾಶ್ವಗ

ಳನ್ನೂ ಕೊಂದು, ಅವನ ಕೈಯಲ್ಲಿದ್ದ ಧನುಸ್ಸನ್ನು ಕತ್ತರಿಸಿಬಿಟ್ಟನು. ಒಡನೆ ಧೃಷ್ಟದ್ಯುಮ್ನನು ರಥದಿಂದ ಕೆಳಕ್ಕಿಳಿದು, ಒಂದು ಪರಿಘವನ್ನು ಬೀಸಿ, ಕರ್ಣನ ರಥಾಶ್ವಗಳನ್ನು ಬಲವಾಗಿ ನೋಯಿಸಿದನು. ಆದರೆ ಕರ್ಣನ ಬಾಣಗಳ ವೇಗವನ್ನು ತಡೆಯಲಾರದೆ ಧೃಷ್ಟದ್ಯುಮ್ನನು ಕಾಲ್ನಡೆಯಿಂದ ಓಡಿಹೋಗಿ, ಧರ್ಮರಾಜನ ಸೈನ್ಯದ ನಡುವೆ ಪ್ರವೇಶಿಸಿ, ಅಲ್ಲಿದ್ದ ಸಹದೇವನ ರಥವನ್ನೇರಿ ಕುಳಿತು, ತಿರುಗಿ ಕರ್ಣನೊಡನೆ ಯುದ್ಧಕ್ಕಾಗಿ ಆತುರದಿಂದ ಒರುತ್ತಿದ್ದನು. ಅಷ್ಟರಲ್ಲಿ ಧರ್ಮರಾಜನು ಅವನನ್ನು ಕರ್ಣನಿಗಿದಿರಾಗಿ ಹೋಗುವಂತೆ ನಿವಾರಿಸಿಬಿಟ್ಟನು. ಇದನ್ನು ನೋಡಿ ಅತ್ತಲಾಗಿ ಕರ್ಣನು ಜಯೋತ್ಸಾಹದಿಂದ ದೊಡ್ಡ ಸಿಂಹನಾದವನ್ನು ಮಾಡಿ, ಶಂಖವನ್ನೂದಿ, ದೊಡ್ಡ ಧನುಷ್ಟಂಕಾರವನ್ನೂ ಮಾಡುತ್ತಿದ್ದನು. ಧೃಷ್ಟದ್ಯುಮ್ನನ ಪರಾಜಯವನ್ನು ನೋಡಿ ಪಾಂಚಾಲಸೋಮಕವೀರರೆಲ್ಲ ಕೋಪದಿಂದ ಶಸ್ತ್ರಗಳನ್ನು ಹಿಡಿದು, "ಕರ್ಣನನ್ನು ಕೊಲ್ಲದೆ ಅಥವಾ ತಾವುಸಾಯದೆ ಹಿಂತಿರುಗುವುದಿಲ್ಲ"ವೆಂಬ ದೃಢಸಂಕಲ್ಪದಿಂದ ನಾನಾಕಡೆಗಳಿಂದ ಇದಿರಿಸಿಬಂದರು. ಇಷ್ಟರಲ್ಲಿ ಕರ್ಣನ ಸಾರಥಿಯು ಅವನ ರಥಕ್ಕೆ ಮಹಾವೇಗವುಳ್ಳ ಬಿಳೀ ಕುದುರೆಗಳನ್ನು ತಂದು ಹೂಡಿದನು. ಲಕ್ಷ್ಯಭೇದನದಲ್ಲಿ ಸಮರ್ಥನಾದ ಕರ್ಣನು, ತನ್ನ ತೀವ್ರಬಾಣಗಳಿಂದ ಪಾಂಚಾಲರಲ್ಲಿ ಅನೇಕಮಹಾರಥರನ್ನು ಹೊಡೆದೋಡಿಸುತ್ತಿದ್ದನು. ಸಿಂಹವನ್ನು ಕಂಡ ಮೃಗದಂತೆ ಪಾಂಚಾಲಸೈನ್ಯವೆಲ್ಲ ಭಯದಿಂದ ಓಡಲಾರಂಭಿಸಿತು. ಈ ಓಟದಲ್ಲಿ ರಥಗಳಿಂದಲೂ ಆನೆಗಳಿಂದಲೂ, ಕುದುರೆಗಳಿಂದಲೂ ಕೆಳಕ್ಕೆ ಬಿದ್ದು ಎಷ್ಟೋಮಂದಿ ಸತ್ತರು. ಇವರು ಓಡುತ್ತಿರುವಾಗಲೇ ಹಿಂದಿನಿಂದ ಕರ್ಣನು ತನ್ನ ಬಾಣಗಳಿಂದ ಕೆಲವರ ತೋಳುಗಳನ್ನೂ, ಕೆಲವರ ತಲೆಗಳನ್ನೂ, ಕೆಲವರ ತೊಡೆಗಳನ್ನೂ ಕತ್ತರಿಸಿ ಕೆಡಹುತ್ತಿದ್ದನು. ಆನೆ ಕುದುರೆಗಳಮೇಲೆ ಕುಳಿತು ಓಡುತ್ತಿದ್ದವರ, ಮತ್ತು ನೆಲದಮೇಲೆ ನಿಂತವರ ಕಾಲುಗಳನ್ನು ಕತ್ತರಿಸುತ್ತಿದ್ದನು. ಭಯಗ್ರಸ್ತರಾಗಿ ಅನೇಕ ಮಹಾರಥರು ತಮ್ಮ ದೇಹಾವಯವಗಳು ತುಂಡಾದುದನ್ನೂ, ವಾಹನಗಳು ಸತ್ತುಬಿದ್ದುದನ್ನೂ ತಿಳಿಯದೆ, ದಿಕ್ಕುಗೆಟ್ಟು ಓಡುತ್ತಿದ್ದರು. ಆಗ ಅವರು ಒಂದು ಹುಲ್ಲುಕಡ್ಡಿಯು ಅಲುಗಿದರೂ ಕರ್ಣನು ಬೆನ್ನಟ್ಟಿಬರುವನೆಂದು ಭ್ರಮಿಸಿ ಭಯದಿಂದ ನಡುಗುತ್ತಿದ್ದರು.

ಕೆಲವರು ಭಯದಿಂದೋಡುತ್ತಿದ್ದ ತಮ್ಮಕಡೆಯವನನ್ನೇ ಕರ್ಣನೆಂದು ತಿಳಿದು ಅವರನ್ನು ಬಿಟ್ಟು ಬೇರೆಕಡೆಗೆ ಓಡುತ್ತಿದ್ದರು. ಆಗಲೂ ಕರ್ಣನು ಅವರನ್ನು ಬೆನ್ನಟ್ಟಿಹೋಗುತ್ತಿದ್ದನು. ಪಾಂಚಾಲರು ಭಯದಿಂದ ಮೈಮೇಲೆ ಪ್ರಜ್ಞೆಯೇ ಇಲ್ಲದಂತಾಗಿ, ತಮ್ಮ ಸೇನಾಪತಿಗಳು ಕೂಗುತ್ತಿದ್ದರೂ ಕೇಳದೆ ಒಬ್ಬರ ಮುಖವನ್ನೊಬ್ಬರು ನೋಡುತ್ತ ಓಡಿಹೋಗುತ್ತಿದ್ದರು. ಕರ್ಣನ ಬಾಣಗಳೊಂದು ಕಡೆ! ದ್ರೋಣನ ಬಾಣಗಳೊಂದು ಕಡೆ! ಇವೆರಡರ ಪ್ರಹಾರದಿಂದ ಪಾಂಚಾಲರೆಲ್ಲ ದಿಕ್ಕುಗಳನ್ನು ತಿರುಗಿ ತಿರುಗಿ ನೋಡುತ್ತ ಚದರಿಹೋದರು. ಹೀಗೆ ಓಡಿಹೋಗುತ್ತಿರುವ ತನ್ನ ಸೈನ್ಯವನ್ನು ನೋಡಿ ಧರ್ಮರಾಜನು ಅರ್ಜುನನನ್ನು ಕುರಿತು "ಅರ್ಜುನಾ! ಅದೋ! ನೋಡು! ಈ ಭಯಂಕರರಾತ್ರಿಯಲ್ಲಿಯೂ, ತಪಿಸುವ ಸೂರ್ಯನಂತೆ ಕಾಣುತ್ತ, ಧನುರ್ಧಾರಿಯಾಗಿ ನಿಂತಿರುವ ಕರ್ಣನನ್ನು ನೋಡು. ಅದೋ! ಆ ಕರ್ಣನ ಬಾಣಪ್ರಹಾರದಿಂದ ನೊಂದು ನಮ್ಮ ಕಡೆಯವರು ಅನಾಥರಂತೆ ಕೂಗಿಡುತ್ತಿರುವುದನ್ನು ಕೇಳಿದೆಯಲ್ಲವೇ? ಧನಂಜಯಾ! ಆ ಕರ್ಣನು ಬಾಣಗಳನ್ನು ಸಂಧಾನಮಾಡುವುದಕ್ಕೂ, ಬಿಡುವುದಕ್ಕೂ ನಡುವೆ ಅವಕಾಶವೇ ತಿಳಿಯದಂತೆ ಹಸ್ತವೇಗದಿಂದ, ನಮ್ಮ ಸೈನ್ಯವನ್ನೆಲ್ಲ ನಾಶಗೊಳಿಸುತ್ತಿರುವನು. ಇದಕ್ಕಾಗಿ ನೀನು ಏನುಮಾಡಬೇಕೋ ಯೋಚಿಸು. ಕಾಲೋಚಿತವಾದುದನ್ನು ನಡೆಸು. ಕರ್ಣನನ್ನು ವಧಿಸುವುದಕ್ಕೆ ಈಗಲೇ ಮಾರ್ಗವನ್ನು ಯೋಚಿಸು" ಎಂದನು. ಈ ಮಾತನ್ನು ಕೇಳಿ ಅರ್ಜುನನು ತನ್ನ ಸಾರಥಿಯಾದ ಕೃಷ್ಣನನ್ನು ಕುರಿತು "ವಾಸುದೇವಾ! ಕರ್ಣನ ಪರಾಕ್ರಮವನ್ನು ನೋಡಿ ಅಣ್ಣನು ಬಹಳವಾಗಿ ಹೆದರಿಹೋಗಿರುವನು. ನಮ್ಮ ಸೈನ್ಯವೆಲ್ಲವೂ ನಡುಗುತ್ತಿರುವುದನ್ನು ನೋಡು. ಈಗ ಕಾಲೋಚಿತವಾದ ಕಾರ್ಯವೇನೆಂಬುದನ್ನು ನೀನೇ ನಿರ್ಣಯಿಸಬೇಕು. ದ್ರೋಣನ ಮತ್ತು ಕರ್ಣನ ಬಾಣಗಳ ಪ್ರಹಾರದಿಂದ ನಮ್ಮ ಸೈನ್ಯವು ಭಗ್ನವಾಗಿ ಹೋಯಿತು. ಸೈನ್ಯದಲ್ಲಿ ಯಾರೊಬ್ಬರೂ ಧೈರ್ಯದಿಂದ ನಿಲ್ಲಲಿಲ್ಲ. ಅದೋ! ಕರ್ಣನು ಓಡುತ್ತಿರುವ ನಮ್ಮ ರಥಸೈನ್ಯಗಳನ್ನು ನಿರ್ಭಯವಾಗಿ ಬೆನ್ನಟ್ಟಿ, ಬಾಣಗಳಿಂದ ಹೊಡೆಯುತ್ತಿರುವನು. ಇದನ್ನೆಲ್ಲ ನಾನು ಕಣ್ಣೆದಿರಿಗೆ ನೋಡಿ ಸಹಿಸಿಕೊಂಡಿರಲಾರೆನು.

ಕಾಲಿಂದ ಮೆಟ್ಟಿದ ಸರ್ಪಕ್ಕೆ ಹೇಗೋ ಹಾಗೆ ನನಗೆ ಕೋಪವು ಉಕ್ಕಿಬರುತ್ತಿರುವುದು. ಆದುದರಿಂದ ಕೃಷ್ಣಾ! ನೀನು ಶೀಘ್ರದಲ್ಲಿಯೇ ಆ ಕರ್ಣನ ಬಳಿಗೆ ರಥವನ್ನು ಬಿಡು. ಈಗಲೇ ಅವನನ್ನು ನಾನು ಕೊಲ್ಲಬೇಕು! ಅಥವಾ ಅವನಿಂದ ನಾನು ಸಾಯಬೇಕು!" ಎಂದನು. ಈ ಮಾತನ್ನು ಕೇಳಿ ಕೃಷ್ಣನು "ಅರ್ಜುನಾ! ಅದನ್ನೆಲ್ಲ ನಾನೂ ನೋಡುತ್ತಿರುವೆನು. ಆ ಕರ್ಣನು ಅತಿಮಾನುಷಪರಾಕ್ರಮವುಳ್ಳವನು! ಅವನು ಇಂದ್ರನಂತೆ ಯುದ್ಧದಲ್ಲಿ ನಿರಂಕುಶನಾಗಿ ಸಂಚರಿಸುತ್ತಿರುವನು. ಇವನನ್ನಿದಿರಿಸುವುದಕ್ಕೆ ನೀನೊಬ್ಬನುಹೊರತು ಬೇರೆ ಯಾವನೂ ಸಮರ್ಥನಿಲ್ಲ. ನಿನ್ನನ್ನು ಬಿಟ್ಟರೆ ರಾಕ್ಷಸನಾದ ಆ ಘಟೋತ್ಕಚನೊಬ್ಬನು ಅವನನ್ನು ಇದಿರಿಸಬಲ್ಲನು. ಧನಂಜಯಾ! ಆದರೆ ಒಂದು ರಹಸ್ಯವನ್ನು ಹೇಳುವೆನು ಕೇಳು. ಈಗ ನೀನು ಕರ್ಣನಿಗಿದಿರಾಗಿ ಯುದ್ಧಕ್ಕೆ ನಿಲ್ಲುವುದು ನನಗೆ ಉಚಿತವೆಂದು ತೋರಲಿಲ್ಲ. ಏಕೆಂದರೆ, ಅವನು ನಿನ್ನನ್ನು ಕೊಲ್ಲುವುದಕ್ಕಾಗಿಯೇ ಇಂದ್ರದತ್ತವಾದ ಶಕ್ತಿಯೊಂದನ್ನು ತನ್ನಲ್ಲಿಟ್ಟುಕೊಂಡಿರುವನು. ಆ ಶಕ್ತಿಯು ಸಮಯಕ್ಕೆ ತಕ್ಕಂತೆ ಭಯಂಕರರೂಪವನ್ನು ತಾಳುವುದು. ಆದುದರಿಂದ ಈಗ ನೀನು ಕರ್ಣನಿಗಿದಿರಾಗಿ ನಿಲ್ಲಬೇಡ! ಮಹಾಬಲಾಢ್ಯನಾದ ಘಟೋತ್ಕಚನು ಅವನನ್ನಿದಿರಿಸಲಿ! ಅವನು ಬಲಾಢ್ಯನಾದ ಭೀಮನಿಂದ ಹುಟ್ಟಿದವನು. ಇಂದ್ರಪರಾಕ್ರಮವುಳ್ಳವನು ಅವನಲ್ಲಿ ದಿವ್ಯ ದಾನವ ರಾಕ್ಷಸಾಸ್ತ್ರಗಳೆಲ್ಲ ಇರುವುವು. ಅವನಿಗೆ ಪಾಂಡವರಾದ ನಿಮ್ಮಲ್ಲಿ ನಿಜವಾದ ಪ್ರೇಮವುಂಟು. ಯಾವಾಗಲೂ ನಿಮಗೆ ಅವನು ಹಿತವನ್ನೇ ಕೋರತಕ್ಕವನು. ಅವನು ಯುದ್ಧದಲ್ಲಿ ಕರ್ಣನನ್ನು ಕೊಲ್ಲುವನೆಂಬುದರಲ್ಲಿ ಸಂದೇಹವಿಲ್ಲ" ಎಂದನು. ಈ ಮಾತನ್ನು ಕೇಳಿದೊಡನೆ ಅರ್ಜುನನು ಆ ರಾಕ್ಷಸನನ್ನು ನೆನೆಸಿಕೊಂಡನು. ಆಗಲೇ ಘಟೋತ್ಕಚನು ಖಡ್ಗ, ಕವಚ, ಧನುರ್ಬಾಣಗಳೊಡನೆ ಸಿದ್ಧನಾಗಿ ಬಂದು, ಕೃಷ್ಣಾರ್ಜುನರಿಗೆ ತಲೆಬಗ್ಗಿ ನಮಸ್ಕರಿಸಿ "ಪ್ರಭೂ! ಇದೋ! ನಾನು ಬಂದಿರುವೆನು. ಆಜ್ಞೆಯೇನು?" ಎಂದನು. ಆಗ ಕೃಷ್ಣನು ಹಸನ್ಮುಖದಿಂದ ಅವನನ್ನು ನೋಡಿ; "ವತ್ಸಾ! ಘಟೋತ್ಕಚಾ! ನನ್ನ ಮಾತನ್ನು ಲಾಲಿಸು. ಈಗ ನಿನ್ನ ಪರಾಕ್ರಮವನ್ನು ತೋರಿಸುವುದಕ್ಕೆ ತಕ್ಕಕಾಲವು ಒದಗಿದೆ. ಬೇರೊಬ್ಬರಿಗೆ ಅದು

ಸಾಧ್ಯವಲ್ಲ. ಯುದ್ಧದಲ್ಲಿ ಸಾಯುತ್ತಿರುವ ನಮ್ಮ ಬಂಧುಗಳಿಗೆಲ್ಲ ನೀನು ಈಗ ಆಪದ್ಬಂಧುವಾಗಿ ಅವರನ್ನು ರಕ್ಷಿಸಬೇಕು. ಕುಮಾರಾ! ನಿನ್ನಲ್ಲಿ ಯಾವಯಾವ ಮಹಾಸ್ತ್ರಗಳುಂಟೋ, ಎಂತೆಂತಹ ರಾಕ್ಷಸಮಾಯೆಗಳುಂಟೋ ಅವುಗಳ ಶಕ್ತಿಯನ್ನೆಲ್ಲ ತೋರಿಸುವುದಕ್ಕೆ ಇದೇ ಒಳ್ಳೇ ಸಮಯವು. ಅದೋ! ಪಾಂಡವರ ಸೈನ್ಯವು ಕರ್ಣನ ಕೊಲೆಗೀಡಾಗಿ ಓಡಿ ಹೋಗುತ್ತಿರುವುದನ್ನು ನೋಡು. ಮಹಾಧನುರ್ಧಾರಿಯೂ, ಧೀಮಂತನೂ ದೃಢವಿಕ್ರಮನೂ ಆದ ಆ ಕರ್ಣನು ನಮ್ಮ ಕ್ಷತ್ರಿಯವೀರರನೇಕರನ್ನು ಕೊಲ್ಲುತ್ತಿರುವನು. ನಮ್ಮವರು ಎಷ್ಟೆಷ್ಟೇ ಬಾಣವರ್ಷಗಳನ್ನು ಸುರಿಸಿದರೂ, ಕರ್ಣನ ಬಾಣಜ್ವಾಲೆಗೆ ತಡೆಯಲಾರದೆ ಓಡುತ್ತಿರುವರು. ಪಾಂಚಾಲರೆಲ್ಲರೂ, ಸಿಂಹವನ್ನು ಕಂಡ ಮೃಗಗಳಂತೆ ಪಲಾಯನಮಾಡಿದರು. ಆ ಕರ್ಣನ ಪ್ರಾಬಲ್ಯವನ್ನು ತಡೆಯುವುದಕ್ಕೆ ಈಗ ನಿನ್ನನ್ನು ಬಿಟ್ಟರೆ ನಮ್ಮಲ್ಲಿ ಬೇರೊಬ್ಬನೂ ಇಲ್ಲ. ಆದುದರಿಂದ ಓ ಮಹಾಬಾಹೂ! ಈಗ ನೀನು ನಿನ್ನ ಪರಾಕ್ರಮಕ್ಕೆ ಯೋಗ್ಯವಾದ ಕಾರ್ಯವನ್ನು ನಡೆಸಬೇಕು. ನಿನ್ನ ಮಾವಂದಿರ ಮತ್ತು ಪಿತೃಗಳ ತೇಜಸ್ಸಿಗೂ, ಅಸ್ತ್ರಬಲಕ್ಕೂ ತಕ್ಕ ಕಾರ್ಯವನ್ನು ನೀನು ತೋರಿಸಬೇಕು. ಮನುಷ್ಯರು ಮಕ್ಕಳನ್ನು ಪಡೆಯುವ ಉದ್ದೇಶವೇ ಇದು! ಮಕ್ಕಳು ತಮ್ಮನ್ನು ಹೇಗೆ ವಿಪತ್ತಿನಿಂದ ತಪ್ಪಿಸುವರೆಂದೇ ಅವರು ಕಾದಿರುವರು. ಅದರಂತೆ ನೀನು ನಿನ್ನ ಪಿತೃಗಳನ್ನು ಕಷ್ಟದಿಂದ ತಪ್ಪಿಸು. ಹೆತ್ತವರು ತಮ್ಮತಮ್ಮ ಮಕ್ಕಳು ಇಹಪರಗಳೆರಡರಲ್ಲಿಯೂ ಉದ್ಧರಿಸುವರೆಂಬ ಆಸೆಯಿಂದಲೇ ಕಾದಿರುವರು. ಆದುದರಿಂದ ಕುಮಾರಾ! ನಿನ್ನ ಭಯಂಕರಮಾಯೆಯನ್ನೂ, ಬಲವನ್ನೂ ಈಗಿನ ಯುದ್ಧದಲ್ಲಿ ತೋರಿಸಿ. ನಿನ್ನ ಬಂಧುಗಳನ್ನು ಉದ್ಧರಿಸುವವನಾಗು. ಈ ರಾತ್ರಿಯಲ್ಲಿ ಕರ್ಣನ ಬಾಣಗಳಿಂದ ನೊಂದು ವಿಪತ್ತಿನಲ್ಲಿ ಬೀಳುತ್ತಿರುವ ಪಾಂಡವರನ್ನು ನೀನು ಉದ್ಧರಿಸಬೇಕು. ಕೌರವಸೈನ್ಯವೆಂಬ ಸಮುದ್ರದಲ್ಲಿ ಮುಳುಗಿಹೋಗುತ್ತಿರುವ ಪಾಂಡವರನ್ನು ನೀನು ಕರೆಯೇರಿಸುವನಾಗು. ಇದರಮೇಲೆ ನಿನ್ನಂತಹ ರಾಕ್ಷಸರಿಗೆ ರಾತ್ರಿಯಲ್ಲಿ ಬಲವೀರ್ಯಗಳು ಹೆಚ್ಚು! ರಾತ್ರಿಯಲ್ಲಿ ರಾಕ್ಷಸರು ಇತರರಿಗೆ ದುರ್ಜಯರೆನಿಸಿರುವರು. ಆದುದರಿಂದ ಈ ರಾತ್ರಿಯಲ್ಲಿ ನೀನು ನಿನ್ನ ಮಾಯಾಬಲದಿಂದ ಕರ್ಣನನ್ನು ತೀರಿಸಿಬಿಡು.

ಧೃಷ್ಟದ್ಯುಮ್ನಾದಿಗಳೂ, ಪಾಂಡವರೂ ಇತ್ತಲಾಗಿ ದ್ರೋಣನನ್ನು ಕೊನೆಗಾಣಿಸುವರು" ಎಂದನು. ಈ ಮಾತನ್ನು ಅನುಮೋದಿಸುತ್ತ ಅರ್ಜುನನೂ ಕೂಡ "ಘಟೋತ್ಕಚಾ! ಎಲ್ಲಾ ಸೈನ್ಯಗಳಲ್ಲಿ ನೀನೊಬ್ಬನು, ಸಾತ್ಯಕಿಯೊಬ್ಬನು, ಇಬ್ಬರೂ ನನಗೆ ದೊಡ್ಡ ಸಹಾಯಕರು. ನೀವಿಬ್ಬರೇ ನನಗೆ ಅತ್ಯಂತ ಸಮ್ಮತರಾದವರು. ಭೀಮಸೇನನು ಇಂತಹ ಆಪತ್ಕಾಲಗಳಲ್ಲಿ ನನಗೆ ಅನುಕೂಲನಾದವನು! ಆದುದರಿಂದ ನೀನು ಈಗಲೇ ಕರ್ಣನೊಡನೆ ಯುದ್ಧಕ್ಕೆ ಹೊರಡು. ಮಹಾರಥನಾದ ಸಾತ್ಯಕಿಯು ನಿನಗೆ ಬೆಂಬಲವಾಗುವನು. ಷಣ್ಮುಖನ ಸಹಾಯದಿಂದ ಇಂದ್ರನು ತಾರಕಾಸುರನನ್ನು ಕೊಂದಂತೆ, ಅವನ ಸಹಾಯದಿಂದ ನೀನು ಈ ರಾತ್ರಿಯಲ್ಲಿಯೇ ಕರ್ಣನನ್ನು ಕೊನೆಮುಟ್ಟಿಸಬೇಕು" ಎಂದನು. ಅದಕ್ಕಾ ಘಟೋತ್ಕಚನು "ಪ್ರಭೂ! ನೀನು ಹೇಳಿದಂತೆಯೇ ಆಗಲಿ! ನಿನ್ನ ಆಜ್ಞೆಯಿಂದ ಕರ್ಣನ ವಧಕ್ಕಾಗಿ ನಾನು ಹೊರಡುವೆನು. ಕರ್ಣನನ್ನು ಕೊಲ್ಲುವುದಕ್ಕೆ ನಾನೊಬ್ಬನೇ ಸಾಕು! ಅಷ್ಟುಮಾತ್ರವೇ ಅಲ್ಲ. ಆ ದ್ರೋಣನನ್ನಾಗಲಿ, ಅಸ್ತ್ರವಿಶಾರದರಾದ ಇತರ ಕ್ಷತ್ರಿಯರನ್ನಾಗಲಿ ನಾನೊಬ್ಬನೇ ಇದಿರಿಸಿ ಜಯಿಸಬಲ್ಲೆನು. ಈ ರಾತ್ರಿಯಲ್ಲಿ ನಾನು ಆ ಕರ್ಣನೊಡನೆ ಯುದ್ಧವನ್ನು ನಡೆಸುವೆನು. ಈ ಭೂಮಿಯಿರುವವರೆಗೆ ನನ್ನ ಯುದ್ಧಚಮತ್ಕಾರವನ್ನು ಜನರೆಲ್ಲರೂ ವರ್ಣಿಸುವರು. ಪ್ರಭೂ! ನಾನು ಈಗಿನ ಯುದ್ಧದಲ್ಲಿ ಎಂತಹ ಶೂರರನ್ನೂ ಕೊಲ್ಲದೆ ಬಿಡುವವನಲ್ಲ. ಭಯಪಟ್ಟಿರಲಿ! ಕೈಮುಗಿದು ನಿಲ್ಲಲಿ! ನಾನು ಯಾರನ್ನೂ ಬಿಡದೆ, ರಾಕ್ಷಸಧರ್ಮವನ್ನೇ ಹಿಡಿದು, ಎಲ್ಲರನ್ನೂ ಕೊಂದು ಬರುವೆನು" ಎಂದನು. ಮಹಾರಾಜಾ! ಹೀಗೆಂದು ಹೇಳಿ ಘಟೋತ್ಕಚನು ಕೌರವಸೈನ್ಯವನ್ನೆಲ್ಲ ತನ್ನ ಹುಂಕಾರದಿಂದಲೇ ಹೆದರಿಸುತ್ತ ಮುಂದೆ ಹೊರಟನು. ಉರಿಯುವ ಬಾಯಿಯಿಂದಲೂ, ಜ್ವಲಿಸುವ ಕೂದಲುಗಳಿಂದಲೂ, ಕೋಪಗೊಂಡು ಬರುತ್ತಿದ್ದ ಆ ರಾಕ್ಷಸನನ್ನು ನೋಡಿ ಕರ್ಣನು ಹೆದರದೆ, ಅವನಿಗೆ ಎದೆಗೊಟ್ಟು ನಿಂತನು. ಇಂದ್ರ ಪ್ರಹ್ಲಾದರಿಗೆ ಹೇಗೋ ಹಾಗೆ ಅವರಿಬ್ಬರಿಗೂ ತುಮುಲಯುದ್ಧವು ಆರಂಭಿಸಿತು.

ಇದು ನೂರಎಪ್ಪತ್ತುನಾಲ್ಕನೆಯ ಅಧ್ಯಾಯವು.



## ಘಟೋತ್ಕಚನು ಜಟಾಸುರಪುತ್ರನಾದ ಅಲಂಬಲನೆಂಬ ರಾಕ್ಷಸನನ್ನು ಕೊಂದುದು.

ಮಹಾರಾಜಾ! ಕರ್ಣನನ್ನು ಕೊಲ್ಲಬೇಕೆಂದು ವೇಗದಿಂದ ಅವನ ರಥದಕಡೆಗೆ ಬರುತ್ತಿದ್ದ ಘಟೋತ್ಕಚನನ್ನು ನೋಡಿ, ನಿನ್ನ ಮಗನಾದ ದುರ್ಯೋಧನನು ಸಮೀಪದಲ್ಲಿದ್ದ ದುಃಶ್ಯಾಸನನನ್ನು ಕುರಿತು "ವತ್ಸ ದುಶ್ಶ್ಯಾಸನಾ! ಅದೋ! ಕರ್ಣನನ್ನು ಇದಿರಿಸುವುದಕ್ಕಾಗಿ ಆ ರಾಕ್ಷಸನು ಬರುತ್ತಿರುವನು. ನೀನು ಬೇಗನೆ ಹೋಗಿ ಅವನನ್ನು ನಿವಾರಿಸು. ದೊಡ್ಡ ಸೈನ್ಯವನ್ನು ಸೇರಿಸಿಕೊಂಡು ಹೊರಡು. ಕರ್ಣನು ಆ ರಾಕ್ಷಸರೊಡನೆ ಯುದ್ಧಕ್ಕೆ ನಿಲ್ಲುತ್ತಿರುವನು. ಆ ಭಯಂಕರ ರಾಕ್ಷಸನ ಮುಂದೆ ನಮ್ಮ ಕರ್ಣನು ಎಚ್ಚರತಪ್ಪಿ ಕೊಲೆಗೀಡಾಗದಂತೆ ಅವನನ್ನು ರಕ್ಷಿಸಬೇಕಾದ ಭಾರವು ನಿನ್ನದು" ಎಂದನು. ನಿನ್ನ ಮಕ್ಕಳಿಬ್ಬರೂ ಮಾತಾಡುತ್ತಿರುವ ಸಮಯದಲ್ಲಿಯೇ ಜಟಾಸುರನ ಮಗನಾದ ಅಲಂಬಲನೆಂಬ ರಾಕ್ಷಸನು ದುರ್ಯೋಧನನ ಬಳಿಗೆ ಬಂದು "ರಾಜಾ! ನನಗೆ ಅಜ್ಞೆಯನ್ನು ಕೊಡು! ಯುದ್ಧದಲ್ಲಿ ಹೆಮ್ಮೆಗೊಂಡ ನಿನ್ನ ವೈರಿಗಳಾದ ಪಾಂಡವರನ್ನೆಲ್ಲ ನಾನೇ ಕೊಲ್ಲಬೇಕೆಂದು ಆಶಿಸುವೆನು. ನನಗೆ ಪಾಂಡವರಲ್ಲಿ ಬದ್ಧವೈರವುಂಟು! ರಾಕ್ಷಸರಾಜನೆನಿಸಿದ ಜಟಾಸುರನೆಂಬವನು ನನ್ನ ತಂದೆ! ರಕ್ಷೋಘ್ನವೆಂಬ ಕರ್ಮಬಲದಿಂದ ನೀಚರಾದ ಪಾಂಡವರು ನನ್ನ ತಂದೆಯನ್ನು ಕೊಂದಿರುವರು. ಅದಕ್ಕೆ ತಕ್ಕ ಪ್ರತೀಕಾರವನ್ನು ಈಗ ನಾನು ಮಾಡಬೇಕೆಂದಿರುವೆನು. ಆ ಶತ್ರುಗಳ ರಕ್ತಮಾಂಸಗಳ ಪೂಜೆಯಿಂದ ನನ್ನ ತಂದೆಯ ಋಣವನ್ನು ನಾನು ತೀರಿಸಿಕೊಳ್ಳಬೇಕಾಗಿದೆ! ನನಗೆ ಅನುಜ್ಞೆಯನ್ನು ಕೊಡು" ಎಂದನು. ಈ ಮಾತನ್ನು ಕೇಳಿ ನಿನ್ನ ಮಗನು ಬಹಳ ಸಂತೋಷಪಟ್ಟು ಆ ರಾಕ್ಷಸನನ್ನು ಕುರಿತು "ಓ ಅಲಂಬಲಾ! ಸರಿ! ನೀನು ಹೋಗಿ ಯುದ್ಧದಲ್ಲಿ ಘಟೋತ್ಕಚನನ್ನು ವಧಿಸುವವನಾಗು. ನಾನು ಇತ್ತಲಾಗಿ ದ್ರೋಣ ಕರ್ಣಾದಿಗಳೊಡನೆ ಸೇರಿ ಶತ್ರುಗಳಾದ ಪಾಂಡವರನ್ನು ನೋಡಿಕೊಳ್ಳುವೆನು. ಮಾನವ ರಾಕ್ಷಸಜಾತಿಗಳ ಸಂಬಂಧದಿಂದ ಹುಟ್ಟಿ, ಕ್ರೂರ ಕರ್ಮಿಯೆನಿಸಿದ ಆ ಘಟೋತ್ಕಚನು ಪಾಂಡವರಿಗೆ ಯಾವಾಗಲೂ ಹಿತನಾಗಿರುವನು. ಆನೆ ಕುದುರೆಗಳನ್ನೂ, ರಥಗಳನ್ನೂ ಒಂದೊಂದೇ ಪ್ರಹಾ

ರದಿಂದ ಪುಡಿಮಾಡಬಲ್ಲವನು. ಆಕಾಶದಲ್ಲಿಯೇ ಯುದ್ಧಮಾಡಬಲ್ಲವನು. ಅಂತವನನ್ನು ನೀನು ಯಮಪುರಿಗೆ ಸಾಗಿಸಬೇಕು" ಎಂದನು. ಒಡನೆಯೇ ಆ ಅಲಂಬಲನು "ಅಪ್ಪಣೆ"ಯೆಂದು ಹೇಳಿ, ಘಟೋತ್ಕಚನಮೇಲೆ ವಿವಿಧಾ ಯುಧಗಳನ್ನು ಪ್ರಯೋಗಿಸಿದನು. ಅತ್ತಲಾಗಿ ಘಟೋತ್ಕಚನೂಕೂಡ ಅಸಹಾಯನಾಗಿ ನಿಂತು, ಅಲಂಬಲನನ್ನೂ, ಕರ್ಣನನ್ನೂ, ಇತರ ಕೌರವ ಸೈನ್ಯವನ್ನೂ ಇದಿರಿಸಿ, ಬಿರುಗಾಳಿಯು ಮೇಘಗಳನ್ನು ಹೇಗೋ ಹಾಗೆ ಬಡಿ ದೋಡಿಸುತ್ತಿದ್ದನು. ಘಟೋತ್ಕಚನು ತನ್ನ ಮಾಯಾಬಲದಿಂದ ಕೌರವಸೈನ್ಯ ವನ್ನು ಚದರಿಸುತ್ತಿರುವುದನ್ನು ನೋಡಿ, ಅಲಂಬಲನೂಕೂಡ ತನ್ನ ಮಾಯೆ ಯಿಂದ ನಾನಾಬಗೆಯ ಬಾಣಸಮೂಹಗಳನ್ನು ಘಟೋತ್ಕಚನಮೇಲೆ ಬಿಡುತ್ತಿದ್ದನು. ಅಲ್ಲದೆ ಪಾಂಡವಸೈನ್ಯವನ್ನು ಚದರಿಸುತ್ತಬಂದನು. ಪಾಂಡವಸೈನ್ಯಗಳು ರಾಕ್ಷಸನ ಕೊಲೆಯನ್ನು ತಡೆಯಲಾರದೆ ಅಲ್ಲಲ್ಲಿ ಚದರ ಲಾರಂಭಿಸಿತು. ಅದರಂತೆಯೇ ಕೌರವಸೈನ್ಯವೂ ಘಟೋತ್ಕಚನ ಕೊಲೆ ಯನ್ನು ತಡೆಯಲಾರದೆ ಕೈಯಲ್ಲಿದ್ದ ದೀವಟಿಗೆಗಳನ್ನೂ ಅಲ್ಲಲ್ಲಿ ಬಿಸುಟು, ಪಲಾಯನಮಾಡಲಾರಂಭಿಸಿತು. ಅಲಂಬಲನು ಘಟೋತ್ಕಚನಮೇಲೆ ಹತ್ತು ಬಾಣಗಳನ್ನು ಬಿಡಲು, ಅಂಕುಶದಿಂದ ತಿವಿಯಲ್ಪಟ್ಟ ಮದದಾನೆಯಂತೆ ಅವನು ಕುಪಿತನಾಗಿ, ಭಯಂಕರಧ್ವನಿಯಿಂದ ಕೂಗುತ್ತ, ಆ ಅಲಂಬಲನ ಕುದುರೆಗಳನ್ನೂ, ಸಾರಥಿಯನ್ನೂ, ಅವನ ಸರ್ವಾಯುಧಗಳನ್ನೂ ಬಡಿದು ಪುಡಿಪುಡಿಯಾಗಿ ಮಾಡಿದನು. ಹಾಗೆಯೇ ಕರ್ಣನನ್ನೂ, ಇತರ ಕುರುಗ ಳನ್ನೂ, ಅಲಂಬಲನನ್ನೂ ತನ್ನ ಬಾಣವರ್ಷದಿಂದ ಮುಚ್ಚಿದನು. ಈ ರಾಕ್ಷ ಸನ ಕೊಲೆಯನ್ನು ತಡೆಯಲಾರದೆ ತಿರುಗಿ ಕೌರವಸೈನ್ಯವು ದಿಕ್ಕುದಿಕ್ಕಿಗೆ ಚದರುತ್ತಿದ್ದಿತು. ಘಟೋತ್ಕಚನು ಮೇಲೆಮೇಲೆ ಬೆನ್ನಟ್ಟಿ ಹೊಡೆಯುತ್ತಿ ದ್ದನು. ವಿರಥನಾದ ಅಲಂಬಲನು ವೇಗದಿಂದ ಬಂದು ಘಟೋತ್ಕಚನನ್ನು ವಜ್ರಮುಷ್ಟಿಯಿಂದ ಅಪ್ಪಳಿಸಿದನು. ಭೂಕಂಪದಲ್ಲಿ ಪರ್ವತವು ಹೇಗೋ ಹಾಗೆ ಆ ಮುಷ್ಟಿಪ್ರಹಾರಕ್ಕೆ ಘಟೋತ್ಕಚನ ಮೈ ನಡುಗಿಹೋಯಿತು. ಆದರೆ ಒಡನೆಯೇ ಚೇತರಿಸಿಕೊಂಡು ಘಟೋತ್ಕಚನು, ಹೆಬ್ಬಾಗಿಲಗುಳಿ ಯಂತಿರುವ ತನ್ನ ತೋಳನ್ನೆತ್ತಿ, ಆ ಜಟಾಸುರಪುತ್ರನನ್ನು ಮುಷ್ಟಿಯಿಂದ ಬಲವಾಗಿ ಹೊಡೆದನು. ಒಡನೆಯೇ ಆ ಅಲಂಬಲನು ಪ್ರಜ್ಞೆತಪ್ಪಿ ಕೆಳಗೆ

ಬೀಳಲು, ಅವನ ದೇಹವನ್ನು ಎರಡು ತೋಳುಗಳಿಂದ ಹಿಡಿದು ನೆಲದ ಮೇಲೆ ಕುಕ್ಕಿದನು. ಆದರೇನು? ಅಲಂಬಲನು ಮೆಲ್ಲಗೆ ಆ ಘಟೋತ್ಕಚನ ಕೈಯಿಂದ ತಪ್ಪಿಸಿಕೊಂಡು, ಮೇಲೆದ್ದು ಇದಿರಾಗಿ ಬಂದು, ಅವನನ್ನು ಮೇಲಕ್ಕೆತ್ತಿ ನೆಲಕ್ಕೆ ಕುಕ್ಕಿ ಬಡಿದು, ಅವನ ಮೈಯನ್ನು ಕೈಯಿಂದ ತಿಕ್ಕಿದನು. ಇದೇ ವಿಧವಾಗಿ ಅವರಿಬ್ಬರೂ ಒಬ್ಬರನ್ನೊಬ್ಬರು ಹಿಡಿದೆತ್ತಿ ನೆಲಕ್ಕೆ ಬಡಿಯುತ್ತ, ಒಬ್ಬರಿಗೊಬ್ಬರು ಕಡಿಮೆಯಿಲ್ಲದೆ ಬಾಹುಯುದ್ಧವನ್ನು ಮಾಡಿದರು. ಇಬ್ಬರೂ ಆಗಾಗ ಆರ್ಭಟಿಸಿ ಕೂಗುವರು! ಮಾಯೆಯಲ್ಲಿ ಒಬ್ಬರನ್ನೊಬ್ಬರು ಮೀರಿಸುತ್ತಿರುವರು! ಅವರು ಮಾಯೆಯಿಂದ ಒಬ್ಬನು ಅಗ್ನಿಯಂತೆಯೂ, ಇನ್ನೊಬ್ಬನು ಸಮುದ್ರದಂತೆಯೂ ಕಾಣಿಸಿ ಹೋರಾಡುವರು. ಇನ್ನೊಮ್ಮೆ ಗರುಡತಕ್ಷಕರಂತೆಯೂ, ಮತ್ತೊಮ್ಮೆ ಮಹಾಮೇಘ ಮಹಾವಾತಗಳಂತೆಯೂ, ಇನ್ನೊಮ್ಮೆ ವಜ್ರಾಯುಧಪರ್ವತಗಳಂತೆಯೂ, ಆನೆಹುಲಿಗಳಂತೆಯೂ, ಸೂರ್ಯರಾಹುಗಳಂತೆಯೂ ಆಕಾರವನ್ನು ತಾಳಿ ಹೋರಾಡುವರು. ಹೀಗೆ ನೂರಾರು ಮಾಯೆಗಳನ್ನು ಪ್ರಯೋಗಿಸಿ, ಒಬ್ಬರನ್ನೊಬ್ಬರು ಕೊಲ್ಲುವ ಉದ್ದೇಶದಿಂದ ವಿಚಿತ್ರಯುದ್ಧಗಳನ್ನು ಮಾಡಿದರು. ಪರಿಘ, ಗದೆ, ಪ್ರಾಸ, ಪಟ್ಟಿಸ, ಮುದ್ಗರ, ಮುಸಲಾದ್ಯಾಯುಧಗಳಿಂದ ಒಬ್ಬರನ್ನೊಬ್ಬರು ಹೊಡೆಯುವರು! ಆಗಾಗ ಒಬ್ಬರಮೇಲೊಬ್ಬರು ಪರ್ವತಗಳನ್ನೂ, ಕುದುರೆಗಳನ್ನೂ, ಆನೆಗಳನ್ನೂ, ರಥಗಳನ್ನೂ, ಪದಾತಿಗಳನ್ನೂ, ಬೀಸಿ ಬಡಿಯುವರು. ಈ ನಡುವೆ ಘಟೋತ್ಕಚನು ಅತಿಕ್ರೋಧಾವಿಷ್ಟನಾಗಿ, ಅಲಂಬಲನನ್ನು ಒಂದೇ ಪ್ರಹಾರಕ್ಕೆ ತೀರಿಸಿಬಿಡಬೇಕೆಂಬ ಉದ್ದೇಶದಿಂದ, ಗಿಡುಗನಂತೆ ಹಾರಿ, ಆ ಅಲಂಬಲನ ಮೈಮೇಲೆ ಬಿದ್ದು ಅವನನ್ನು ಮೇಲಕ್ಕೆತ್ತಿ ನೆಲಕ್ಕೆ ಬಡಿದನು. ಆಮೇಲೆ ಅತಿತೀಕ್ಷ್ಣವಾದ ಒಂದು ಕತ್ತಿಯನ್ನು ಕೈಗೆತ್ತಿಕೊಂಡು, ಭಯಂಕರವಾಗಿ ಕೂಗುತ್ತಿರುವ ಆ ಅಲಂಬಲನ ತಲೆಯನ್ನು ಕಡಿದುಬಿಟ್ಟನು. ರಕ್ತವು ಸೋರುತ್ತಿರುವಹಾಗೆಯೇ ಆ ರಾಕ್ಷಸನ ಪಂದಲೆಯನ್ನು ಕೂದಲಿನಲ್ಲಿ ಹಿಡಿದುಕೊಂಡು, ವೇಗದಿಂದ ದುರ್ಯೋಧನನ ರಥದಬಳಿಗೆ ಬಂದು, ನಿಂತು, ಭಯಂಕರವಾದ ಬಾಯಿಯಿಂದಲೂ, ಕೂದಲುಗಳಿಂದಲೂ ಕೂಡಿದ ಆ ತಲೆಯನ್ನು ದುರ್ಯೋಧನನ ರಥದಲ್ಲಿಟ್ಟು, ವರ್ಷಾಕಾಲದಲ್ಲಿ ಮೇಘವು ಗುಡುಗಿದಂತೆ ಅವನ ಮುಂದೆ ದೊಡ್ಡ

ಸಿಂಹನಾದವನ್ನು ಮಾಡಿದನು. ಆಮೇಲೆ ದುರ್ಯೋಧನನನ್ನು ನೋಡಿ ನಗುತ್ತ "ಓ ಕೌರವಾಧಮಾ! ಇದೋ! ನಿನ್ನ ಪ್ರಿಯಬಂಧುವನ್ನು ತಂದಿರುವೆನು. ಇವನ ಪರಾಕ್ರಮವನ್ನು ನೀನು ನೋಡಿದುದಾಯಿತಲ್ಲವೆ? ಇದರಂತೆಯೇ ನೀನು ಕರ್ಣನ ಪರಾಕ್ರಮವನ್ನೂ ಶೀಘ್ರದಲ್ಲಿಯೇ ನೋಡುವೆ! ಮತ್ತು ನೀನೂ ಇದೇಸ್ಥಿತಿಯನ್ನು ಅನುಭವಿಸುವೆ! ಧರ್ಮಾರ್ಥಕಾಮುಗಳನ್ನು ಬಯಸತಕ್ಕವನು, ರಾಜನನ್ನೂ, ಬ್ರಾಹ್ಮಣನನ್ನೂ, ಹೆಂಗಸನ್ನೂ, ನೋಡುವುದಕ್ಕೆ ಬರೀ ಕೈಯಿಂದ ಹೋಗಬಾರದೆಂದು ನೀತಿಜ್ಞರು ಹೇಳಿರುವರು. ಆದರಿಂದಲೇ ನಾನು ಈ ರುಂಡವನ್ನು ರಾಜನಾದ ನಿನಗೆ ಕೈಕಾಣಿಕೆಯಾಗಿ ತಂದೆನು. ಶೀಘ್ರದಲ್ಲಿಯೇ ಕರ್ಣನನ್ನೂ ಕೊಂದು ತರುವೆನು. ಅದರಿಂದಲೂ ನೀನು ಸಂತೋಷಪಡು" ಎಂದನು. ಮಹಾರಾಜಾ! ಹೀಗೆಂದು ಹೇಳಿ ಘಟೋತ್ಕಚನು, ಯುದ್ಧಕ್ಕಾಗಿ ಕರ್ಣನ ಬಳಿಗೆ ಹೊರಟುಹೋದನು. ಅಲ್ಲಿ ಕರ್ಣನಿಗೂ, ಈ ರಾಕ್ಷಸನಿಗೂ ಭಯಂಕರ ಯುದ್ಧವು ಆರಂಭಿಸಿತು.

ಇದು ನೂರ ಎಪ್ಪತ್ತೈದನೆಯ ಅಧ್ಯಾಯವು.

---

## ಕರ್ಣ ಘಟೋತ್ಕಚರ ಯುದ್ಧವು.

ಆಗ ಧೃತರಾಷ್ಟ್ರನು "ಸಂಜಯಾ! ಆ ರಾಕ್ಷಸನಿಗೂ, ಕರ್ಣನಿಗೂ ರಾತ್ರಿಯಲ್ಲಿ ಆರಂಭಿಸಿದ ಯುದ್ಧವು ಹೇಗೆ ನಡೆಯಿತು? ಆಗ ಆ ಘೋರ ರಾಕ್ಷಸನ ರೂಪವು ಯಾವರೀತಿಯಿದ್ದಿತು? ಸೂರ್ಯಕುಮಾರನಾದ ಕರ್ಣನೂ ಕೂಡ ಅವನಿಗೆ ಸೋತನೆಂದರೆ ಆ ಬಲವೆಂತದು? ಅವನ ರಥವೆಂತದು? ಅವನ ಮಾಂಸುಗಳೆಂತವು? ಅವನ ಆಯುಧಗಳೆಲ್ಲ ಹೇಗಿದ್ದುವು? ಆ ರಾಕ್ಷಸನ ಕುದುರೆಗಳ, ಧ್ವಜದ, ಮತ್ತು ಬಿಲ್ಲಿನ ಪ್ರಮಾಣವೇನು? ಅವನ ಕವಚವೂ, ಶಿರಸ್ತ್ರಾಣವೂ ಯಾವ ವಿಧವಾಗಿದ್ದುವು?" ಎನಲು, ಸಂಜಯನು "ರಾಜೇಂದ್ರಾ! ಕೇಳು! ಆ ಘಟೋತ್ಕಚನ ರೂಪವು ಭಯಂಕರವಾಗಿ ವಿಚಿತ್ರವಾಗಿದ್ದಿತು. ಕೆಂಪಾದ ಕಣ್ಣುಗಳು! ದೊಡ್ಡ ಶರೀರಾಕೃತಿ!

ಕೆಂಪಾದ ಮೋರೆ! ಆಳಕ್ಕಿಳಿದ ಹೊಟ್ಟೆ! ಮೇಲುಮುಖವಾಗಿ ನಿಗುರಿ ನಿಂತ ಕೂದಲು! ಹಸುರಾದ ಮಿಾಸೆ! ಶಂಕ್ವಾಕಾರದ ಕಿವಿ! ಉಬ್ಬಿದ ದವಡೆ, ಕಿವಿಯವರೆಗೆ ಸೀಳಿದಂತಿರುವ ಬಾಯಿಗಳು, ಹರಿತವಾದ ಕೋರೆದಾಡೆಗಳು, ಉದ್ದವಾಗಿ ನೀಡಿದ ಕೆಂಪುವರ್ಣದ ನಾಲಗೆ, ತೂಂಗುತ್ತಿರುವ ಕೆಂಪಾದ ತುಟಿ, ತೂಂಗುತ್ತಿರುವ ಹುಬ್ಬುಗಳು, ದೊಡ್ಡ ಮೂಗು, ನೀಲವಾದ ಮೈ, ಕೆಂಪಾದ ಕೊರಳು, ಬೆಟ್ಟದಂತೆ ಆಕೃತಿ, ಭಯಂಕರನಾದ ರೂಪು, ದೊಡ್ಡ ತೋಳು, ದೊಡ್ಡ ತಲೆ, ವಿಕೃತಗಳಾದ ಅವಯವಗಳು, ಉಬ್ಬಿದ ಹಲ್ಲುಗಳು, ಕಠಿನಸ್ಪರ್ಶವುಳ್ಳ ಮೈ, ಕೆದರಿದ ಕೂದಲಿನಿಂದ ಕೂಡಿದ ದೃಢವಾದ ನೆತ್ತಿ, ದೊಡ್ಡ ಕಟಿಭಾಗಗಳು, ಆಳಕ್ಕಿಳಿದ ಹೊಕ್ಕುಳು, ಹಳ್ಳಕ್ಕಿಳಿದ ಸೊಂಟಗಳು, ಕೈಬಳೆ ತೋಳ್ಬಳೆ ಮುಂತಾದ ಆಭರಣಗಳೊಡನೆ ಅವನ ಎದೆಯಮೇಲೆ ಒಂದು ಸುವರ್ಣಹಾರವು ಬೆಟ್ಟದಮೇಲಿನ ಅಗ್ನಿಮಾಲೆಯಂತೆ ಕಾಣುತ್ತಿರುವುದು. ಅವನ ತಲೆಯಲ್ಲಿ ಸುವರ್ಣಮಯವಾಗಿ, ಅರಮನೆಯ ಹೊರಗಿನ ಹೆಬ್ಬಾಗಿಲಿನಂತೆ ವಿಚಿತ್ರವಾದ ಕಿರೀಟವು ಶೋಭಿಸುತ್ತಿರುವುದು. ಕಿವಿಯಲ್ಲಿ ಬಾಲಸೂರ್ಯರಂತೆ ಜ್ವಲಿಸುವ ಎರಡು ಕುಂಡಲಗಳು! ಮೈಮೇಲೆ ಕಂಚಿನ ಕವಚವನ್ನು ಧರಿಸಿರುವನು. ಚಂದ್ರನಿಗೂ, ನಕ್ಷತ್ರಗಳಿಗೂ ಸಮಾನವಾದ ದೊಡ್ಡ ಕಂಠಸೂತ್ರವು ಅವನ ಕತ್ತಿನಲ್ಲಿರುವುದು, ಇದರಿಂದ ಅವನು ಮಿಂಚಿನೊಡಗೂಡಿದ ಮೇಘದಂತೆ ಕಾಣುತ್ತಿರುವನು. ಅವನ ರಥಕ್ಕೆ ನೂರಾರು ಗಂಟೆಗಳು ಕಟ್ಟಲ್ಪಟ್ಟಿರುವುವು. ಕರಡಿಯ ಚರ್ಮವನ್ನು ಹೊದಿಸಿರುವುದು. ಎತ್ತರವಾದ ಧ್ವಜಪತಾಕೆಗಳನ್ನೇರಿಸಿರುವುದು. ಆ ರಥವು ನಾನೂರು ಮೊಳಗಳ ಚದುರವುಳ್ಳುದಾಗಿ, ಸರ್ವಾಯುಧಗಳಿಂದ ತುಂಬಿರುವುದು. ಧ್ವಜಗಳಿಂದಲೂ, ಮಾಲೆಗಳಿಂದಲೂ ಅಲಂಕೃತವಾಗಿ, ಅಷ್ಟಚಕ್ರಗಳಿಂದ ಕೂಡಿರುವುದು. ಮೇಘದಂತೆ ಗಂಭೀರಘೋಷವುಳ್ಳುದು. ಮದದಾನೆಗಳಂತೆ ಆಕಾರವುಳ್ಳವುಗಳಾಗಿ, ಕಪ್ಪಾದ ಮೈಯಿಂದಲೂ, ಕೆಂಪಾದ ಕಣ್ಣುಗಳಿಂದಲೂ, ಭಯಂಕರಗಳಾದ ನೂರು ಕುದುರೆಗಳು ಆ ರಥಕ್ಕೆ ಹೂಡಲ್ಪಟ್ಟಿರುವುವು. ಅವು ಆ ಭಯಂಕರರಾಕ್ಷಸನನ್ನು ನಿರಾಯಾಸವಾಗಿ ಎಳೆದುಕೊಂಡುಹೋಗುವ ಬಲವುಳ್ಳವುಗಳು. ಅವುಗಳಿಗೆ ವಿಸ್ತಾರವಾದ ಸಟೆಗಳು! ನಾನಾತರದ

ಆಕಾರವುಳ್ಳ ಮುಖಗಳು, ಇಂತಹ ನೂರು ಕುದುರೆಗಳು ಬಾರಿಬಾರಿಗೂ ಘೀಂಕರಿಸುತ್ತ ರಥವನ್ನೆಳೆಯುತ್ತಿದ್ದುವು. ಆ ರಾಕ್ಷಸನ ಸಾರಥಿಯೂ ಕೂಡ ವಿರೂಪವಾದ ಕಣ್ಣುಗಳುಳ್ಳವನು. ಅವನ ಬಾಯಲ್ಲಿ ಅಗ್ನಿಜ್ವಾಲೆಯು ಹೊರಡುತ್ತಿರುವುದು. ಅವನ ಕುಂಡಲವು ಧಗಧಗಿಸುತ್ತಿರುವುದು. ಸೂರ್ಯರಶ್ಮಿಗಳಂತಿರುವ ರಶ್ಮಿಗಳನ್ನು (ಲಗಾಮು) ಹಿಡಿದು, ಸೂರ್ಯರಥವನ್ನು ಅರುಣನು ಹೇಗೋ ಹಾಗೆ, ಆ ರಥವನ್ನು ನಡೆಸುತ್ತಿರುವನು. ಪರ್ವತಾಗ್ರದಮೇಲೆ ಮಹಾಮೇಘದಂತೆ ಅವನ ರಥದಮೇಲೆ ಆಕಾಶವನ್ನು ಮುಟ್ಟತಕ್ಕ ದೊಡ್ಡ ಧ್ವಜವು ನಿಲ್ಲಿಸಲ್ಪಡುವುದು. ಆ ಧ್ವಜದಲ್ಲಿ ಕೆಂಪು ತಲೆಯುಳ್ಳ ಮಾಂಸಾಹಾರಿಯಾದ ಭಯಂಕರ ಗೃಧ್ರವು ಅವನ ಧ್ವಜಚಿಹ್ನವಾಗಿ ಕಾಣಿಸುತ್ತಿರುವುದು. ಒಂದು ಮೊಳದ ಅಗಲವೂ, ಹನ್ನೆರಡು ಅಡಿಗಳ ಉದ್ದವೂ ಉಳ್ಳುದಾಗಿ, ದೃಢವಾದ ನಾಣುಳ್ಳ ಧನುಸ್ಸನ್ನು ಆ ಘಟೋತ್ಕಚನು ಆಗಾಗ ಟಂಕಾರಮಾಡುತ್ತಿರಲು, ಅದರ ಧ್ವನಿಯು ಸಿಡಿಲಿನ ಧ್ವನಿಯಂತೆ ಕೇಳಿಸುತ್ತಿರುವುದು. ಅವನು ಪ್ರಯೋಗಿಸತಕ್ಕ ಬಾಣಗಳು ರಥದ ಇರಿಚಿಗಳಂತಿರುವುವು. ಅಂತಹ ಬಾಣಗಳಿಂದ ದಿಕ್ಕುಗಳನ್ನೆಲ್ಲ ಮರೆಸುತ್ತ ಅವನು ಕರ್ಣನಿಗಿದಿರಾದನು. ಆಗಾಗ ಅವನ ಧನುರ್ಘೋಷವು ಸಿಡಿಲಿನಂತೆ ಕಿವಿಗೆ ಬೀಳುತ್ತಿರುವುದು. ಆ ಶಬ್ದವನ್ನು ಕೇಳಿದೊಡನೆ, ನಿನ್ನ ಸೈನ್ಯಗಳೆಲ್ಲ ಸಮುದ್ರದ ಅಲೆಗಳಂತೆ ನಡುಗಿಹೋದುವು. ಇಂತಹ ಭಯಂಕರರಾಕ್ಷಸನು ತನಗಿದಿರಾಗಿ ಬರುವುದನ್ನು ನೋಡಿಯೂ, ಸ್ವಲ್ಪವೂ ಹೆದರದೆ ನಗುಮುಖದಿಂದ ಕರ್ಣನು ತನ್ನ ಬಾಣಗಳಿಂದ ಅವನನ್ನು ನಿವಾರಿಸುತ್ತಿದ್ದನು. ಆನೆಯು ಆನೆಯನ್ನಿದಿರಿಸುವಂತೆ ಒಬ್ಬರನ್ನೊಬ್ಬರು ಬಾಣಗಳಿಂದ ಹೊಡೆಯುತ್ತಿದ್ದರು. ನಖಗಳಿಂದ ಹುಲಿಗಳೂ, ದಂತಗಳಿಂದ ಮಹಾಗಜಗಳೂ ಒಂದಕ್ಕೊಂದು ಹೋರಾಡುವಂತೆ, ಇಬ್ಬರೂ ಶಕ್ತ್ಯಾಯುಧಗಳಿಂದಲೂ, ಬಾಣಗಳಿಂದಲೂ ತಮ್ಮ ದೇಹಬಲಕ್ಕೆ ತಕ್ಕಂತೆ ಹೊಡೆದಾಡುತ್ತಿದ್ದರು. ಒಬ್ಬರ ಮೈಯನ್ನೊಬ್ಬರು ಭೇದಿಸುವರು. ಅತಿವೇಗವುಳ್ಳ ಬಾಣಗಳನ್ನು ಬಿಲ್ಲಿನಲ್ಲಿ ಜೋಡಿಸುವರು! ಬಾಣಜ್ವಾಲೆಗಳಿಂದ ಒಬ್ಬರನ್ನೊಬ್ಬರು ದಹಿಸುವಂತೆ ತೋರುವರು! ಹೀಗೆ ಇಬ್ಬರೂ ಅನ್ಯೋನ್ಯವಾಗಿ ಬಾಣಗಳನ್ನು ಹೊಡೆವರು. ಇಬ್ಬರಿಗೂ ಮೈಯಲ್ಲಿ ಪ್ರಬಲ

ವಾದ ಗಾಯಗಳುಂಟಾಗುವುವು. ಇಬ್ಬರ ಮೈಯಿಂದಲೂ ಪರ್ವತದಿಂದ ಸ್ರವಿಸುವ ಗೈರಿಕಧಾತುಗಳಂತೆ ರಕ್ತಪ್ರವಾಹವು ಸುರಿಯುತ್ತಿದ್ದಿತು. ಇಬ್ಬರೂ ಒಬ್ಬರನ್ನೊಬ್ಬರು ಸೋಲಿಸುವುದಕ್ಕೆ ಪ್ರಯತ್ನಪಟ್ಟರೂ, ಅವರಲ್ಲಿ ಯಾರೊಬ್ಬರೂ ಸ್ವಲ್ಪವಾದರೂ ಕದಲಲಿಲ್ಲ. ಈ ರಾತ್ರಿಯುದ್ಧವು ಬಹಳ ಹೊತ್ತಿನವರೆಗೆ ಸಮಬಲವಾಗಿಯೇ ಇದ್ದಿತು. ಇಬ್ಬರೂ ತಮ್ಮ ಪ್ರಾಣಗಳನ್ನೇ ಒತ್ತೆಯಿಟ್ಟು ಆ ಯುದ್ಧದ್ಯೂತವನ್ನು ನಡೆಸುತ್ತಿದ್ದರು. ಅವರ ಧನುರ್ಘೋಷದಿಂದಲೇ ಉಭಯಸೈನ್ಯವೂ ಭಯಪಟ್ಟು ನಡುಗುತ್ತಿದ್ದುವು. ಬಹಳ ಹೊತ್ತಿನವರೆಗೆ ಕರ್ಣನಿಗೆ ಘಟೋತ್ಕಚನನ್ನು ಭಂಗಿಸುವುದು ಸಾಧ್ಯವಿಲ್ಲದೆಹೋಗಲು, ಅಗ ಆ ಕರ್ಣನು ಪ್ರಬಲವಾದ ದಿವ್ಯಾಸ್ತ್ರವೊಂದನ್ನು ಬಿಲ್ಲಿನಲ್ಲಿ ಸಂಧಿಸಿದನು. ಇದನ್ನು ನೋಡಿ ಘಟೋತ್ಕಚನು ದೊಡ್ಡ ರಾಕ್ಷಸಮಾಯೆಯೊಂದನ್ನುಂಟುಮಾಡಿದನು ಶೂಲಮುದ್ಗರಗಳನ್ನೂ, ಗಿಡಮರಗಳನ್ನೂ ಕೈಯಲ್ಲಿ ಹಿಡಿದ ಭಯಂಕರರಾಕ್ಷಸರ ದೊಡ್ಡ ಸೇನೆಯೊಂದು ಕರ್ಣನನ್ನಿದಿರಿಸಿತು. ಆ ಸೈನ್ಯದ ನಡುವೆ ದೊಡ್ಡ ಬಿಲ್ಲನ್ನು ಎತ್ತಿಹಿಡಿದು ಕಾಲದಂಡವನ್ನು ಹಿಡಿದ ಯಮನಂತೆ ಬರುತ್ತಿರುವ ಆ ಘಟೋತ್ಕಚನನ್ನು ಕಂಡಾಗ ನಮ್ಮ ರಾಜರೆಲ್ಲರೂ ಭಯಗ್ರಸ್ತರಾದರು. ಆ ಘಟೋತ್ಕಚನ ಸಿಂಹನಾದಗಳನ್ನು ಕೇಳಿ ನಮ್ಮ ಸೈನ್ಯದಲ್ಲಿದ್ದ ಆನೆ ಕುದುರೆಗಳಿಗೆಲ್ಲ ಭಯದಿಂದ ಮಲಮೂತ್ರಗಳು ಸಡಿಲಿದುವು. ಕಾಲಾಳುಗಳು ಭಯಪಟ್ಟು ನಡುಗುತ್ತಿದ್ದರು. ಇಷ್ಟರಲ್ಲಿಯೇ ಆ ರಾಕ್ಷಸರಕಡೆಯಿಂದ ನಮ್ಮ ಸೈನ್ಯದಮೇಲೆ ಭಯಂಕರವಾದ ಕಲ್ಮಳೆಯು ಸುರಿಯಲಾರಂಭಿಸಿತು. ಆಮೇಲೆ ಉಕ್ಕಿನ ಚಕ್ರಗಳು ಸುರಿದುವು! ಆಮೇಲೆ ಭುಸುಂಡಿಗಳು, ಶಕ್ತಿಗಳು, ತೋಮರಗಳು, ಶೂಲ, ಶತಘ್ನಿ, ಪಟ್ಟಸ, ಮೊದಲಾದ ವಿವಿಧಾಯುಧಗಳೆಲ್ಲ ಮೇಲೆಮೇಲೆ ಎಡೆಬಿಡದೆ ದಟ್ಟವಾಗಿ ಸುರಿಯುತ್ತಿದ್ದುವು. ಈ ಭಯಂಕರ ಯುದ್ಧವನ್ನು ನೋಡಿ ನಿನ್ನ ಮಕ್ಕಳೂ, ನಿನ್ನಕಡೆಯ ಯೋಧರೂ ಭಯಪಟ್ಟು ಓಡಿದರು. ಆಗ ನಿನ್ನ ಕಡೆಯಲ್ಲಿ ಮಹಾಧೀರನೂ, ಮಾನಿಷ್ಠನೂ ಆದ ಕರ್ಣನೊಬ್ಬನೇ ಅದಕ್ಕೆ ಎದೆಗುಂದದೆ, ತನ್ನ ಬಾಣಗಳಿಂದ ಆ ಘಟೋತ್ಕಚನ ಮಾಯಾ ಶಸ್ತ್ರಗಳನ್ನೆಲ್ಲ ಭಂಗಿಸುತ್ತಬಂದನು. ತನ್ನ ಮಾಯೆಯು ಭಗ್ನವಾದುದನ್ನು ನೋಡಿ ಘಟೋತ್ಕಚನು ಘೋರಬಾಣಗಳನ್ನು

ಕರ್ಣನಮೇಲೆ ಪ್ರಯೋಗಿಸಿದನು. ಅವು ಕರ್ಣನ ಮೈಯಲ್ಲಿ ನಾಟಿ, ಅವನನ್ನು ಬಹಳವಾಗಿ ನೋಯಿಸಿ, ರಕ್ತದಿಗ್ಧಗಳಾಗಿ ಕೆಳಗೆ ಬಿದ್ದುವು. ಕರ್ಣನು ಕೋಪದಿಂದ ಘಟೋತ್ಕಚನಮೇಲೆ ಹತ್ತು ತೀವ್ರಬಾಣಗಳನ್ನು ಹೊಡೆದನು. ಅದರಿಂದ ಬಹಳವಾಗಿ ನೊಂದ ಘಟೋತ್ಕಚನು, ಸಾವಿರ ಅರಗಳುಳ್ಳುದಾಗಿ, ಸುತ್ತಲೂ ಕತ್ತಿಯಲಗುಗಳಿಂದ ಕೂಡಿದ ಒಂದು ದಿವ್ಯ ಚಕ್ರವನ್ನು ಕರ್ಣನಮೇಲೆ ಬೀಸಿದನು. ಅದೂಕೂಡ ಕರ್ಣನ ಬಾಣಗಳಿಂದ ಛಿನ್ನವಾಗಿ, ಭಾಗ್ಯಹೀನನ ಮನೋರಥದಂತೆ ವ್ಯರ್ಥವಾಗಿ ಕೆಳಗೆ ಬಿದ್ದಿತು. ಇದರಿಂದ ಘಟೋತ್ಕಚನು ಮತ್ತಷ್ಟು ರೇಗಿ, ಬಾಣಗಳಿಂದ ಕರ್ಣನನ್ನು ತಿರುಗಿ ಮುಚ್ಚಿದನು. ಕರ್ಣನೂ ತನ್ನ ಬಾಣಗಳಿಂದ ಆ ರಾಕ್ಷಸನ ರಥವನ್ನು ಮರೆಸಿದನು. ಆಮೇಲೆ ಘಟೋತ್ಕಚನು ಒಂದು ದೊಡ್ಡ ಗದೆಯನ್ನು ಪ್ರಯೋಗಿಸಿದನು. ಅದೂ ಕರ್ಣನಿಂದ ಭಗ್ನವಾಯಿತು. ಆಗ ಆ ರಾಕ್ಷಸನು ಥಟ್ಟನೆ ಗಗನಕ್ಕೆ ಹಾರಿ, ಮೇಘದಂತೆ ಗರ್ಜಿಸುತ್ತ, ತನ್ನ ಮಾಯೆಯಿಂದ ದೊಡ್ಡದೊಡ್ಡ ಮರಗಳನ್ನು ಕರ್ಣನಮೇಲೆ ವರ್ಷಿಸಿದನು. ಅವನ್ನೂ ಕರ್ಣನು ತನ್ನ ಬಾಣಗಳಿಂದ ಭೇದಿಸಿ, ಸೂರ್ಯನು ಕಿರಣಗಳಿಂದ ಮೇಘವನ್ನು ಮರೆಸುವಂತೆ ಆ ಮಾಯಾವಿ ರಾಕ್ಷಸನನ್ನೂ ಬಾಣಗಳಿಂದ ಮರೆಸಿದನು. ಘಟೋತ್ಕಚನ ನೂರು ರಥಾಶ್ವಗಳನ್ನು ಕೊಂದನು. ರಥವನ್ನು ಶತಖಂಡವಾಗಿ ಭೇದಿಸಿದನು. ಮೇಘವು ಮಳೆಯನ್ನು ಕರೆದಂತೆ ಘಟೋತ್ಕಚನಮೇಲೆ ಬಾಣಗಳನ್ನು ವರ್ಷಿಸಿದನು. ಒಂದು ಅಂಗುಲದಷ್ಟಾದರೂ ಸ್ಥಳವಿಲ್ಲದಂತೆ ಘಟೋತ್ಕಚನ ಮೈಯಲ್ಲೆಲ್ಲ ಮುಳ್ಳುಹಂದಿಯ ಮುಳ್ಳುಗಳಂತೆ ಬಾಣಗಳು ನಾಟಿದುವು. ಕರ್ಣನ ಬಾಣಗಳ ಮರೆಯಲ್ಲಿ ಘಟೋತ್ಕಚನಾಗಲಿ, ಅವನ ಕುದುರೆಯಾಗಲಿ, ರಥವಾಗಲಿ, ಧ್ವಜವಾಗಲಿ ಯಾವುದೂ ಜನರ ಕಣ್ಣಿಗೆ ಕಾಣಿಸಲಿಲ್ಲ. ಆದರೆ, ಘಟೋತ್ಕಚನು ಸ್ವಲ್ಪಹೊತ್ತಿನಲ್ಲಿಯೇ ತನ್ನ ಅಸ್ತ್ರದಿಂದ ಕರ್ಣನ ದಿವ್ಯಾಸ್ತ್ರವನ್ನು ಭಂಗಿಸಿ, ತಿರುಗಿ ಮಾಯೆಯಿಂದಲೂ, ತನ್ನ ಅದ್ಭುತಲಾಘವದಿಂದಲೂ ಬೇರೆ ತರದ ಯುದ್ಧವನ್ನು ಆರಂಭಿಸಿದನು. ಆಕಾಶದಲ್ಲಿ ಕಣ್ಣಿಗೆ ಕಾಣಿಸದಂತೆ ಸಂಚರಿಸುತ್ತ, ತನ್ನ ಬಾಣಗಳೂ ಜನರ ಕಣ್ಣಿಗೆ ಕಾಣಿಸದಂತೆ ವಿವಿಧಶಸ್ತ್ರಗಳನ್ನು ಸುರಿಸುತ್ತಿದ್ದನು. ಆಗ ನಮ್ಮವರಿಗೆ ಏನೊಂ

ದೂ ತಿಳಿಯದಂತಾಯಿತು. ಆಗ ಘಟೋತ್ಕಚನು ವಿರೂಪವಾಗಿಯೂ, ಅಸಭ್ಯವಾಗಿಯೂ ಇರುವ ಆಕಾರವುಳ್ಳ ಬಾಯನ್ನು ತೆರೆದು, ಕರ್ಣನ ದಿವ್ಯಾಸ್ತ್ರಗಳನ್ನೆಲ್ಲ ನುಂಗಿಬಿಡುತ್ತಿದ್ದನು. ಇಷ್ಟರಲ್ಲಿಯೇ ಕರ್ಣನ ಬಾಣಗಳಿಂದ ಆ ಘಟೋತ್ಕಚನ ದೇಹವು ಶತಖಂಡವಾಗಿ ಭೇದಿಸಿ, ರಣರಂಗದಲ್ಲಿ ಬಿದ್ದುಹೋದಂತೆ ಜನರ ಕಣ್ಣಿಗೆ ಕಾಣಿಸಿತು. ಆಗ ಕೌರವರೆಲ್ಲರೂ ಘಟೋತ್ಕಚನು ಸತ್ತನೆಂದೇ ತಿಳಿದು, ಸಂತೋಷದಿಂದ ಅಟ್ಟಹಾಸಮಾಡುತ್ತಿದ್ದರು. ಇಷ್ಟರಲ್ಲಿ ಆ ಘಟೋತ್ಕಚನ ಮಾಯೆಯಿಂದ ದಿಕ್ಕುಗಳಲ್ಲಿಯೂ, ಆಕಾಶದಲ್ಲಿಯೂ ಹೊಸಹೊಸ ಭೂತಾಕಾರಗಳು ಕಾಣಿಸಿಕೊಂಡುವು. ಉತ್ತರಕ್ಷಣದಲ್ಲಿಯೇ ಸಾವಿರ ತಲೆಗಳಿಂದಲೂ, ಸಾವಿರ ಹೊಟ್ಟೆಗಳಿಂದಲೂ ಭಯಂಕರವಾದ ದೊಡ್ಡ ಆಕೃತಿಯೊಂದು ಕಾಣಿಸಿತು. ಅದರಿಂದಾಚೆಗೆ ಆಕಾಶದಲ್ಲಿ ದೊಡ್ಡ ಮೈನಾಕಪರ್ವತನೇ ಬಂದು ನಿಂತಂತೆ ಕಾಣಿಸಿತು. ಆಮೇಲೆ ಒಂದು ಕ್ಷಣಮಾತ್ರದಲ್ಲಿ ಆ ರಾಕ್ಷಸನು ಒಂದು ಹೆಬ್ಬೆರಳಿನ ಗಾತ್ರವಾಗಿ ಕಾಣಿಸಿ, ಸಮುದ್ರದ ಉಬ್ಬಿದ ಅಲೆಗಳಂತೆ ಕೆಳಕ್ಕೂ, ಮೇಲಕ್ಕೂ ಅಡ್ಡಲಾಗಿಯೂ ಓಡುತ್ತಿದ್ದನು. ಆಮೇಲೆ ಒಮ್ಮೊಮ್ಮೆ ಭೂಮಿಯನ್ನು ಭೇದಿಸಿಕೊಂಡು ಹೋದಹಾಗೆಯೂ, ಇನ್ನೊಮ್ಮೆ ಸಮುದ್ರದಲ್ಲಿ ಮುಳುಗಿಹೋದಹಾಗೆಯೂ, ಇನ್ನೊಂದು ಕ್ಷಣಕ್ಕೆ ತಿರುಗಿ ಬೇರೊಂದುಕಡೆಯಲ್ಲಿ ಮೇಲೆದ್ದಹಾಗೆಯೂ ಕಾಣಿಸಿಕೊಂಡನು. ಆಮೇಲೆ ಆ ಘಟೋತ್ಕಚನು ಆಕಾಶದಿಂದ ಥಟ್ಟನೆ ಕೆಳಕ್ಕೆ ಇಳಿದು, ತನ್ನ ರಥವನ್ನೇರಿ ಕುಳಿತನು. ಹೀಗೆ ಆ ರಾಕ್ಷಸನು ಭೂಮ್ಯಾಕಾಶದಿಕ್ಕುಗಳಲ್ಲೆಲ್ಲ ತಿರುಗಿ, ಕರ್ಣನ ರಥದ ಬಳಿಗೆ ಬಂದು "ಎಲಾ ಸೂತಾ! ನಿಲ್ಲು! ನೀನು ನನ್ನಿಂದ ಹೇಗೆ ಬದುಕಿ ಹೋಗುವೆಯೋ ನೋಡುವೆನು! ನಿನ್ನ ಯುದ್ಧಾತುರವನ್ನು ಈಗಿನ ರಣರಂಗದಲ್ಲಿ ತೀರಿಸಿಬಿಡುವೆನು" ಎಂದು ಹೇಳಿ, ತಿರುಗಿ ಥಟ್ಟನೆ ಅಂತರಿಕ್ಷಕ್ಕೆ ಹಾರಿ, ಅಲ್ಲಿಂದ ದೊಡ್ಡ ಅಟ್ಟಹಾಸವನ್ನು ಮಾಡಿದನು. ತೇರಚ್ಚುಗಳಂತಿರುವ ದೊಡ್ಡ ಬಾಣಗಳನ್ನು ಕರ್ಣನಮೇಲೆ ಸುರಿಸಿದನು. ಆದರೇನು? ಕರ್ಣನು ಆ ಬಾಣವರ್ಷಗಳನ್ನೆಲ್ಲ ತನ್ನ ಅಸ್ತ್ರಪ್ರಭಾವದಿಂದ ಮುರಿದನು. ತನ್ನ ಬಾಣಗಳು ಭಗ್ನವಾದುದನ್ನು ನೋಡಿ ಘಟೋತ್ಕಚನು ತಿರುಗಿ ಬೇರೆವಿಧವಾದ ಮಾಯೆಯನ್ನು ಹಿಡಿದು, ಅದೃಶ್ಯನಾಗಿ ಅನೇಕ ಶಿಖರಗಳುಳ್ಳ

ದೊಡ್ಡ ಪರ್ವತದಂತೆ ಕಾಣಿಸಿಕೊಂಡು, ಆ ಬೆಟ್ಟದಿಂದ ಗಿರಿನದಿಗಳು ಪ್ರವಹಿಸುವಂತೆ, ಕತ್ತಿ, ಶೂಲ ಮೊದಲಾದ ಶಸ್ತ್ರಪ್ರವಾಹಗಳನ್ನೇ ಸುರಿಸುತ್ತಿದ್ದನು. ಆದರೂ ಕರ್ಣನು ಧೈರ್ಯಗೆಡದೆ ನಗುಮುಖದಿಂದಲೇ ದಿವ್ಯಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರದಿಂದ ಮಾಯಾಕಲ್ಪಿತವಾದ ಆ ಬೆಟ್ಟವು ಪುಡಿಪುಡಿಯಾಗಿ ಬಿದ್ದಿತು. ಆಮೇಲೆ ಘಟೋತ್ಕಚನು ಇಂದ್ರಾಯುಧದೊಡಗೂಡಿದ ಕರೀಮೇಘದ ಆಕಾರದಿಂದ ಕಲ್ಮಳೆಯನ್ನು ಕರೆಯಲಾರಂಭಿಸಿದನು. ಕರ್ಣನು ತನ್ನ ವಾಯವ್ಯಾಸ್ತ್ರದಿಂದ ಆ ಮಾಯಾಮೇಘಗಳನ್ನೂ ಕ್ಷಣಮಾತ್ರದಲ್ಲಿ ಚದರಿಸಿಬಿಟ್ಟನು. ಮತ್ತು ದಿಕ್ಕುಗಳನ್ನೆಲ್ಲ ತನ್ನ ಬಾಣಗಳಿಂದ ಮರೆಸಿ, ಘಟೋತ್ಕಚನ ಅಸ್ತ್ರಗಳನ್ನೆಲ್ಲ ಭಗ್ನಮಾಡಿದನು. ಆಗ ಘಟೋತ್ಕಚನು ಕೋಪದಿಂದ ಕರ್ಣನನ್ನು ನೋಡಿ ನಗುತ್ತ, ಅವನಮುಂದೆ ಇನ್ನೂ ಪ್ರಬಲವಾದ ಬೇರೆ ಮಾಯೆಯನ್ನುಂಟುಮಾಡಿದನು ಆಗ ಹುಲಿ, ಕರಡಿ, ಆನೆಗಳಿಗೆ ಸಮಾನಪರಾಕ್ರಮವುಳ್ಳವರಾಗಿ, ನಾನಾಶಸ್ತ್ರಗಳನ್ನೂ, ವಿಚಿತ್ರಕವಚಾಭರಣಗಳನ್ನೂ ಧರಿಸಿ, ಗಜ ರಥ ತುರಗಗಳನ್ನೇರಿದ ಅನೇಕ ಕ್ರೂರರಾಕ್ಷಸ ಸೈನ್ಯಗಳೊಡನೆ ಅವನೂ ಕರ್ಣನಿಗಿದಿರಾಗಿ ಬಂದನು. ಕರ್ಣನು ತನ್ನ ಬಾಣಗಳಿಂದ ಆ ರಾಕ್ಷಸರನ್ನೆಲ್ಲ ಚದರಿಸುತ್ತಿದ್ದನು. ಆಮೇಲೆ ಘಟೋತ್ಕಚನು ಕರ್ಣನನ್ನು ಐದು ತೀವ್ರಬಾಣಗಳಿಂದ ಹೊಡೆದು, ಭಯಂಕರಸಿಂಹನಾದವನ್ನು ಮಾಡಿದನು. ಒಂದು ಅಂಜುಲಿಕವೆಂಬ ಬಾಣದಿಂದ ಕರ್ಣನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿಕೆಡಹಿದನು. ಒಡನೆಯೇ ಕರ್ಣನು ಇಂದ್ರಾಯುಧಕ್ಕೆ ಸಮಾನವಾದ ಬೇರೊಂದು ಬಿಲ್ಲನ್ನು ಎತ್ತಿಕೊಂಡು, ಘಟೋತ್ಕಚನಮೇಲೆಯೂ, ಅವನ ಕಡೆಯ ರಾಕ್ಷಸರಮೇಲೆಯೂ ಬಾಣಗಳನ್ನು ಪ್ರಯೋಗಿಸತೊಡಗಿದನು. ಈ ಕೊಲೆಯನ್ನು ತಡೆಯಲಾರದೆ ರಾಕ್ಷಸಸೈನ್ಯವು ಸಿಂಹವನ್ನು ಕಂಡ ಆನೆಗಳ ಹಿಂಡಿನಂತೆ ಚಿದರಿಹೋಯಿತು. ಆಗ ಕರ್ಣನು ಬಿಟ್ಟ ಆಗ್ನೇಯಾಸ್ತ್ರದಿಂದ ರಾಕ್ಷಸಸೈನ್ಯವೆಲ್ಲ ದಗ್ಧವಾಯಿತು. ಪ್ರಳಯಕಾಲದಲ್ಲಿ ಸಮಸ್ತಭೂತಗಳನ್ನೂ ದಹಿಸುವ ಅಗ್ನಿಯೇ ಆಗ ತಲೆದೋರಿದಂತೆ ಕಾಣಿಸಿತು. ಹೀಗೆ ಕರ್ಣನು ರಾಕ್ಷಸಸೇನೆಯನ್ನೆಲ್ಲ ದಹಿಸಿ, ತ್ರಿಪುರದಹನವನ್ನು ಮಾಡಿದ ಮಹೇಶ್ವರನಂತೆ ಕಾಣುತ್ತಿದ್ದನು. ಆಗ ಅಲ್ಲಿ ನೆರೆದಿದ್ದ ರಾಜರಲ್ಲಿ ಮಹಾಬಲಾಢ್ಯನಾದ

ಘಟೋತ್ಕಚನೊಬ್ಬನು ಹೊರತು, ಕರ್ಣನನ್ನು ಕಣ್ಣಿಂದ ನೋಡುವುದಕ್ಕೂ ಯಾರೂ ಶಕ್ತರಾಗಲಿಲ್ಲ. ಭಯಂಕರ ವೀರ್ಯದಿಂದಲೂ, ಬಲದಿಂದಲೂ, ಕೋಪಗೊಂಡ ಕಾಲಯಮನಿಗೆ ಸಮಾನನಾದ ಆ ಘಟೋತ್ಕಚನೊಬ್ಬನೇ ಕರ್ಣನ ಅಸ್ತ್ರಕ್ಕೆ ಹೆದರದೆ ನಿಂತನು. ದೊಡ್ಡ ದೊಂದಿಗಳಿಂದ ಉರಿಯುವ ಎಣ್ಣೆಯ ತೊಟ್ಟುಗಳು ಬೀಳುವಂತೆ, ಕೋಪಗೊಂಡ ಅವನ ಕಣ್ಣುಗಳಿಂದ ಅಗ್ನಿಜ್ವಾಲೆಗಳು ಹೊರಡುತ್ತಿದ್ದುವು. ಆಗ ಅವನು ಆವೇಶದಿಂದ ಕೈಗಳನ್ನು ತಟ್ಟುತ್ತ ತುಟಿಗಳನ್ನು ಕಚ್ಚಿಕೊಂಡು, ತಿರುಗಿ ಮಾಯೆಯಿಂದ ನಿರ್ಮಿತವಾದ ಒಂದು ರಥವನ್ನೇರಿ ಕುಳಿತನು. ಪಿಶಾಚಮುಖವುಳ್ಳ ಮತ್ತು ಆನೆಗಳಿಗೆ ಸಮಾನವಾದ ಆಕಾರವುಳ್ಳ ಕತ್ತೆಗಳು ಅವನ ರಥಕ್ಕೆ ಹೂಡಿದ್ದುವು. ಆ ರಾಕ್ಷಸನು ಕರ್ಣನ ಬಳಿಗೆ ರಥವನ್ನು ಬಿಡುವಂತೆ ಸೂತನಿಗೆ ಹೇಳಿದನು. ಅದರಂತೆ ರಥವು ಕರ್ಣನ ಮುಂದೆ ಬಂದು ನಿಂತಿತು. ಒಡನೆಯೇ ಆ ಘಟೋತ್ಕಚನು ರುದ್ರನಿರ್ಮಿತವಾಗಿ ಮಹಾಭಯಂಕರವಾದ ಎಂಟು ಚಕ್ರಗಳುಳ್ಳ ವಜ್ರಾಯುಧವೊಂದನ್ನು ಕೈಗೆತ್ತಿಕೊಂಡನು. ಅದು ಒಂದು ಯೋಜನದ ಅಗಲವುಳ್ಳುದಾಗಿ, ಉದ್ದದಲ್ಲಿ ಎರಡು ಯೋಜನಗಳ ಪ್ರಮಾಣವುಳ್ಳುದಾಗಿ, ಉಕ್ಕಿನಿಂದ ನಿರ್ಮಿತವಾಗಿರುವುದು. ಎಲ್ಲಾ ಕಡೆಯೂ ಶೂಲಗಳು ನಾಟಿ, ಮಳೆಗಾಲದಲ್ಲಿ ಮೊಗ್ಗುಗಳಿಂದಕೂಡಿದ ಕದಂಬವೃಕ್ಷದಂತೆ ಕಾಣುವ ಆ ಗದೆಯನ್ನು ರಾಕ್ಷಸನು ಕರ್ಣನಮೇಲೆ ಬೀಸಿದನು. ಆ ಗದೆಯು ತನಗಿದಿರಾಗಿ ಬರುವುದನ್ನು ಕಂಡೊಡನೆ ಕರ್ಣನು ತನ್ನ ಧನುಸ್ಸನ್ನು ಕೆಳಗಿಟ್ಟು, ಆ ಗದೆಯನ್ನು ತನ್ನ ಕೈಗೆ ಆತುಕೊಂಡು, ಅದನ್ನೇ ತಿರುಗಿ ಘಟೋತ್ಕಚನಮೇಲೆ ಪ್ರಯೋಗಿಸಿದನು. ಇದನ್ನು ನೋಡಿ ಘಟೋತ್ಕಚನು ಥಟ್ಟನೆ ತನ್ನ ರಥದಿಂದ ಹಾರಿಬಿಟ್ಟನು. ಆ ಗದೆಯು ಘಟೋತ್ಕಚನ ರಥಕ್ಕೆ ತಗುಲಿ, ಅವನ ಸಾರಥಿಯನ್ನೂ, ವಾಹನಗಳನ್ನೂ, ಧ್ವಜವನ್ನೂ ಭಸ್ಮೀಭೂತವನ್ನಾಗಿಮಾಡಿ ನೆಲದಲ್ಲಿ ನಾಟಿತು. ಇದನ್ನು ನೋಡಿ ದೇವತೆಗಳೂ ಆಶ್ಚರ್ಯಪಟ್ಟರು. ದೇವನಿರ್ಮಿತವಾದ ಆ ಆಯುಧವನ್ನು ಕರ್ಣನು ಕೈಯಿಂದ ಆತುಕೊಂಡುದನ್ನು ನೋಡಿ, ಸಮಸ್ತಭೂತಗಳೂ ಕರ್ಣನನ್ನು ಬಹಳವಾಗಿ ಕೊಂಡಾಡಿದುವು. ಹೀಗೆ ಕರ್ಣನು ಅದ್ಭುತಕಾರ್ಯವನ್ನು ಮಾಡಿ, ತಿರುಗಿ ತನ್ನ ರಥವನ್ನೇರಿ ಕುಳಿತು ಬಾಣಗಳನ್ನು ಬಿಡಲಾರಂಭಿಸಿದನು. ಬೇರೊಬ್ಬರಿಗೆ

ಅಸಾಧ್ಯವಾದ ಕಾರ್ಯವನ್ನು ನಡೆಸುತ್ತಿರುವ ಕರ್ಣನ ಬಾಣಪ್ರಹಾರ ವನ್ನು ತಡೆಯಲಾರದೆ, ಘಟೋತ್ಕಚನು ತಿರುಗಿ ಕಣ್ಮರೆಯಾದನು. ಅವನು ತನ್ನ ಮಾಯೆಯಿಂದಲೂ, ಲಾಘವದಿಂದಲೂ ಗಂಧರ್ವನಗರದಂತೆ ವಿವಿಧಾಕಾರಗಳನ್ನು ತಾಳಿ ಕರ್ಣನ ದಿವ್ಯಾಸ್ತ್ರಗಳನ್ನೆಲ್ಲ ವಿಫಲಗೊಳಿಸುತ್ತಿದ್ದನು. ಕರ್ಣನು ಅವನ ಮಾಯೆಗೆ ಹೆದರದೆ ಮೇಲೆಮೇಲೆ ಆ ರಾಕ್ಷಸ ನನ್ನು ಬಾಣಗಳಿಂದ ನಿವಾರಿಸುತ್ತಲೇ ಇದ್ದನು. ಘಟೋತ್ಕಚನೂಕೂಡ ಕ್ಷಣಕ್ಷಣಕ್ಕೆ ಭಯಂಕರಗಳಾದ ವಿವಿಧಾಕಾರಗಳನ್ನು ತೋರಿಸಿ ನಮ್ಮ ಮಹಾರಥರನ್ನು ಭಯಗೊಳಿಸುತ್ತಿದ್ದನು. ಇಷ್ಟರಲ್ಲಿಯೇ ಈ ಘಟೋತ್ಕಚನ ಮಾಯೆಯಿಂದ ಸಿಂಹಗಳು, ಹುಲಿಗಳು, ಚಿರತೆಗಳು, ಉರಿಯುವ ನಾಲಗೆ ಯುಳ್ಳ ಸರ್ಪಗಳು, ಕಬ್ಬಿಣದ ಮೂತಿಯುಳ್ಳ ಪಕ್ಷಿಗಳು, ಇವೆಲ್ಲಾ ನಾನಾ ದಿಕ್ಕುಗಳಿಂದ ಹಿಂಡುಹಿಂಡಾಗಿ ಬಂದು ಕೌರವಸೈನ್ಯದಮೇಲೆ ಬಿದ್ದು ಕೊಲ್ಲ ಲಾರಂಭಿಸಿದುವು. ಆದರೇನು! ಕರ್ಣನ ಧನುಸ್ಸಿನಿಂದ ಹೊರಟ ಬಾಣ ಗಳು ಘಟೋತ್ಕಚನಮೇಲೆ ಎಡೆಬಿಡದೆ ಬೀಳುತ್ತಿದ್ದುವು. ಆಗ ಘಟೋ ತ್ಕಚನು ಕೋಪದಿಂದ ಕ್ರೂರಸರ್ಪದಂತೆ ಕಣ್ಣಿಂದ ನೋಡುವುದಕ್ಕೂ ಸಾಧ್ಯವಾಗದಷ್ಟು ಭಯಂಕರರೂಪವನ್ನು ತೋರಿಸಿ, ತಿರುಗಿ ಇದ್ದಕ್ಕಿದ್ದ ಹಾಗೆ ಅದೃಶ್ಯನಾದನು. ಕೂಡಲೇ ಅವನ ಮಾಯೆಯಿಂದ ಅನೇಕ ರಾಕ್ಷ ಸರೂ, ಪಿಶಾಚರೂ, ಯಾತುಧಾನರೂ, ಸಾಲಾವೃಕಗಳೆಂಬ ಕ್ರೂರಕಪಿ ಗಳೂ, ವಿಕೃತವಾದ ಮುಖವುಳ್ಳ ತೋಳಗಳೂ ನಾನಾಕಡೆಗಳಿಂದ ಬಂದು ಕರ್ಣನನ್ನು ಮುತ್ತಿದುವು. ಕ್ರೂರವಾಕ್ಯಗಳಿಂದ ಕರ್ಣನನ್ನು ಹೆದರಿಸಲಾ ರಂಭಿಸಿದುವು. ವಿವಿಧಾಯುಧಗಳನ್ನು ಮೇಲಕ್ಕೆತ್ತಿ ಕರ್ಣನನ್ನು ಕೊಲ್ಲುವು ದಾಗಿ ಹೆದರಿಸಿದುವು. ಆದರೆ ಕರ್ಣನು ಅವುಗಳಲ್ಲಿ ಒಂದೊಂದನ್ನೂ ಬೇರೆ ಬೇರೆ ಒಂದೊಂದು ಬಾಣಗಳಿಂದ ಹೊಡೆದಟ್ಟಿದನು. ತನ್ನ ದಿವ್ಯಾಸ್ತ್ರ ಪ್ರಭಾವದಿಂದ ರಾಕ್ಷಸನ ಮಾಯೆಗಳನ್ನೆಲ್ಲ ಭಂಗಿಸಿದನು. ಬೇರೆ ಬಾಣಗ ಳಿಂದ ಘಟೋತ್ಕಚನ ಕುದುರೆಗಳನ್ನು ಕೊಂದನು. ಆ ಕುದುರೆಗಳಿಗೆ ಬೆನ್ನು ಮುರಿದು, ಅಂಗಾಂಗಗಳೊಳಗೆಲ್ಲ ಗಾಯವಾಗಿ ನೆಲಕ್ಕುರುಳಿದುವು. ಕರ್ಣನ ಮುಂದೆ ತನ್ನ ಮಾಯೆಯೇನೂ ಸಾಗದೆಹೋದುದನ್ನು ನೋಡಿ

ಅತ್ಯಂತಕುಪಿತನಾದ ಘಟೋತ್ಕಚನು "ಇದೋ! ನಿನಗೆ ಮೃತ್ಯುವು ನನ್ನಿಂದಲೇ ಸಿದ್ಧವು" ಎಂದು ಹೇಳಿ ಅದೃಶ್ಯನಾದನು.

ಇದು ನೂರ ಎಪ್ಪತ್ತಾರನೆಯ ಅಧ್ಯಾಯವು.

ಬಕನೇ ಮೊದಲಾದ ತನ್ನ ಬಂಧುಗಳನ್ನು ಕೊಂದನೆಂಬ ಕೋಪಕ್ಕಾಗಿ ಅಲಾಯುಧನೆಂಬ ರಾಕ್ಷಸನು, ಭೀಮನೊಡನೆ ಯುದ್ಧಕ್ಕಾಗಿ ದುರ್ಯೋಧನನಿಂದ ಅನುಮತಿಯನ್ನು ಪಡೆದು, ಘಟೋತ್ಕಚನಿದ್ದಕಡೆಗೆ ಬಂದುದು.

ಮಹಾರಾಜಾ! ಹೀಗೆ ಕರ್ಣಘಟೋತ್ಕಚರಿಗೆ ಪ್ರಬಲಯುದ್ಧವು ನಡೆಯುತ್ತಿದ್ದಾಗಲೇ ಮಹಾಬಲಶಾಲಿಯಾದ ಅಲಾಯುಧನೆಂಬ ರಾಕ್ಷಸನೊಬ್ಬನು ವಿಕಾರರೂಪವುಳ್ಳ ದೊಡ್ಡ ರಾಕ್ಷಸಸೈನ್ಯದೊಡಗೂಡಿ ದುರ್ಯೋಧನನ ಬಳಿಗೆ ಬಂದನು. ಈ ಅಲಾಯುಧನು ಬಕ, ಕಿರ್ಮ್ಮೀರ, ಹಿಡಿಂಬಾದಿ ರಾಕ್ಷಸರಿಗೆ ಹಿತನೂ, ಸಖನೂ ಆಗಿದ್ದನು. ಮಾಯೆಯಿಂದ ನಾನಾರೂಪಗಳನ್ನು ಧರಿಸತಕ್ಕ ಅನೇಕ ರಾಕ್ಷಸವೀರರನ್ನು ತನ್ನ ವಶದಲ್ಲಿಟ್ಟುಕೊಂಡಿರುವನು. ಬ್ರಾಹ್ಮಣಭಕ್ಷಕನೆನಿಸಿದ ಬಕನು ಇವನಿಗೆ ಜ್ಞಾತಿಯಾಗಿದ್ದನು. ಕಿರ್ಮ್ಮೀರ ಹಿಡಿಂಬರಿಬ್ಬರೂ ಇವನಿಗೆ ಪರಮಸ್ನೇಹಿತರು. ಈ ಮೂವರೂ ಭೀಮನಿಂದ ಹತರಾದರೆಂಬ ಪೂರ್ವವೈರವನ್ನು ನೆನೆಸಿಕೊಂಡು, ಅವನು ಈ ರಾತ್ರಿಯುದ್ಧದಲ್ಲಿ ಭೀಮನನ್ನು ತೀರಿಸಿಬಿಡಬೇಕೆಂಬ ನಿಶ್ಚಯದಿಂದ ಮದಿಸಿದ ಮಹಾಗಜದಂತೆಯೂ, ಕೋಪಗೊಂಡ ಸರ್ಪದಂತೆಯೂ ಬಂದು ದುರ್ಯೋಧನನ ಮುಂದೆ ನಿಂತು ಹೀಗೆಂದನು. "ಮಹಾರಾಜಾ! ದುಷ್ಟನಾದ ಭೀಮನಿಂದ ನನ್ನ ಇಷ್ಟಬಂಧುಗಳಾದ ಬಕ ಹಿಡಿಂಬ ಕಿರ್ಮ್ಮೀರರು ವಧಿಸಲ್ಪಟ್ಟುದನ್ನು ನೀನೂ ಬಲ್ಲೆ! ಇದಲ್ಲದೆ ಮನುಷ್ಯಮಾತ್ರನಾದ ಅವನು ನಮ್ಮ ಜಾತಿಯ ಕನ್ಯೆಯಾದ ಹಿಡಿಂಬೆಯಮೇಲೆ ಕೈಯಿಟ್ಟನು. ರಾಕ್ಷಸರಾದ ನಮಗೆ ಇದಕ್ಕಿಂತಲೂ ಅವಮಾನವೇನಾಗಬೇಕು? ಈಗ ನಾನು ಆ ಭೀಮನನ್ನು ಅವನ ಸಮಸ್ತ ಚತುರಂಗದೊಡನೆ, ಮತ್ತು ಅವನ ಅಮಾತ್ಯಮಿತ್ರಬಂಧುಗಳೊಡನೆ, ಅವನ ಪುತ್ರನಾದ ಘಟೋತ್ಕಚನೊಡನೆ ಸೇರಿಸಿ ಎಲ್ಲರನ್ನೂ ಯಮಪುರಿಗೆ ಕಳುಹಿಸಬೇಕೆಂಬ ಸಂಕಲ್ಪದಿಂದ ಬಂದಿರುವೆನು.

ರಾಜಾ ! ಈಗಲೇ ನಾನು ಆ ವಾಸುದೇವನೊಡಗೂಡಿದ ಎಲ್ಲಾ ಪಾಂಡವ ರನ್ನೂ, ಅವರ ಅನುಚರರನ್ನೂ ಕೊಂದು ಭಕ್ಷಿಸಿಬಿಡುವೆನು. ಈಗ ನೀನು ನಿನ್ನ ಸೈನ್ಯವನ್ನೆಲ್ಲ ಹಿಂದಕ್ಕೆ ಬರಮಾಡು. ನಾವು ಹೋಗಿ ಪಾಂಡವರನ್ನಿ ದಿರಿಸುವೆವು" ಎಂದನು. ಈ ಮಾತನ್ನು ಕೇಳಿ ದುರ್ಯೋಧನನಿಗೆ ಪರಮ ಸಂತೋಷವಾಯಿತು. ನಿನ್ನ ಮಗನೂ, ಅವನ ಸಹೋದರರೂ ಆ ಅಲಾ ಯುಧನನ್ನು ಬಹಳವಾಗಿ ಆದರಿಸಿ ಪೂಜಿಸಿದರು. ಆಗ ದುರ್ಯೋಧನನು ಅವನನ್ನು ಕುರಿತು "ರಾಕ್ಷಸೇಂದ್ರಾ ! ಒಳ್ಳೆಯದು! ನಿನ್ನನ್ನೂ, ನಿನ್ನ ಕಡೆ ಯವರನ್ನೂ ಸೇರಿಸಿಕೊಂಡು. ನಾವೂ ಶತ್ರುಗಳೊಡನೆ ಯುದ್ಧಮಾಡುವೆವು. ಪಾಂಡವರಲ್ಲಿ ದೃಢವೈರವುಳ್ಳ ನನ್ನ ಸೈನಿಕರು ಈಗ ಸುಮ್ಮನಿರುವುದಕ್ಕೆ ಇಷ್ಟಪಡುವುದಿಲ್ಲ. ಅವರೂ ನಿನ್ನ ಸಹಾಯಕ್ಕೆ ಬರಲಿ" ಎಂದನು. ಅದಕ್ಕೆ ಆ ರಾಕ್ಷಸನು "ಹಾಗೆಯೇ ಆಗಲಿ" ಎಂದು ಹೇಳಿ, ತನ್ನ ರಾಕ್ಷಸರೊಡನೆ ಘಟೋತ್ಕಚನಿದ್ದಕಡೆಗೆ ಹೊರಟನು. ಘಟೋತ್ಕಚನ ರಥದಂತೆಯೇ ಈ ರಾಕ್ಷಸನ ರಥವೂ ಪಿಶಾಚಗಳಂತಿರುವ ವಾಹನಗಳಿಂದಕೂಡಿ, ಸೂರ್ಯತೇಜ ಸ್ಸಿನಿಂದ ಜ್ವಲಿಸುತ್ತಿದ್ದಿತು. ನಾನೂರು ಮೈಲಿಗಳ ವಿಸ್ತಾರವುಳ್ಳದಾಗಿ, ಕರ ಡಿಯ ಚರ್ಮದಿಂದ ಹೊದಿಸಲ್ಪಟ್ಟು, ವಿವಿಧರೀತಿಯಿಂದ ಚಿತ್ರಿತವಾಗಿದ್ದ ಆ ರಥವು ಭಯಂಕರಧ್ವನಿಯಿಂದ ಹೊರಟಿತು. ಆನೆಯಂತೆ ದೇಹವೂ, ಪಿಶಾ ಚಗಳಂತೆ ಮುಖವೂ ಉಳ್ಳ ನೂರು ಕುದುರೆಗಳು ಅದಕ್ಕೆ ಹೂಡಲ್ಪಟ್ಟಿದ್ದುವು. ಆ ಕುದುರೆಗಳು ರಕ್ತಮಾಂಸಗಳನ್ನೇ ಭುಜಿಸತಕ್ಕವುಗಳಾಗಿ, ಭಯಂಕರ ಧ್ವನಿಯುಳ್ಳವುಗಳಾಗಿದ್ದುವು. ಅವನಿಗೂ ಘಟೋತ್ಕಚನಂತೆಯೇ ಮಹ ತ್ತಾದ ಬಿಲ್ಲು, ತೇರಚ್ಚಿಗೆ ಸಮಾನಗಳಾದ ದೊಡ್ಡ ಬಾಣಗಳು, ಅವನೂ ಘಟೋತ್ಕಚನಂತೆ ಮಹಾಬಾಹುವೂ, ವೀರನೂ ಆಗಿದ್ದನು. ಈ ಅಲಾಯು ಧನೆಂಬ ರಾಕ್ಷಸನ ರಥದಮೇಲಿನ ಧ್ವಜದಲ್ಲಿ ನರಿಗಳ ಹಿಂಡಿನ ಆಕೃತಿಯು ಕಾಣಿಸುತ್ತಿರುವುದು. ಘಟೋತ್ಕಚನಂತೆ ರೂಪದಲ್ಲಿ ಇವನೂ ಯಮನಿಗೆ ಸಮಾನನೆನಿಸಿರುವನು. ಕಿರೀಟಾಂಗದಗಳೇ ಮೊದಲಾದ ಆಭರಣಗಳನ್ನೂ, ಕತ್ತಿನಲ್ಲಿ ಅಮೂಲ್ಯಹಾರವನ್ನೂ, ತಲೆಯಲ್ಲಿ ಉಷ್ಣೀಷವನ್ನೂ, ಸೊಂಟ ದಲ್ಲಿ ಕತ್ತಿಯನ್ನೂ ಕಟ್ಟಿರುವನು. ಗದೆ, ಭುಸುಂಡಿ, ಹಲ, ಬಿಲ್ಲು, ಬಾಣಗ ಳೆಂಬ ವಿವಿಧಾಯುಧಗಳನ್ನು ಸಿದ್ಧಮಾಗಿಟ್ಟಿರುವನು. ಆನೆಯಂತೆ ಆಕಾರ

ವುಳ್ಳವನು. ಇಂತಹ ಪರಿಕರವುಳ್ಳ ಆ ರಾಕ್ಷಸನು, ಯುದ್ಧಕ್ಕಾಗಿ ಬರುವಾಗಲೇ, ತನ್ನ ಕೂಗಿನಿಂದಲೂ, ರೂಪಿನಿಂದಲೂ ಪಾಂಡವಸೈನ್ಯವನ್ನು ಹೆದರಿಸುತ್ತ, ಕಾಂತಿಯುಕ್ತವಾದ ರಥದಲ್ಲಿ ಮಿಂಚಿನೊಡಗೂಡಿದ ಮೇಘದಂತೆ ಬರುತ್ತಿದ್ದನು. ಇದನ್ನು ನೋಡಿ ಪಾಂಡವಯೋಧರೂಕೂಡ ಯುದ್ಧೋತ್ಸಾಹದಿಂದ ಕವಚವನ್ನೂ, ಕತ್ತಿ ಗುರಾಣಿಗಳನ್ನೂ ಧರಿಸಿ ಯುದ್ಧಸನ್ನದ್ಧರಾಗಿ, ನಾಲ್ಕು ಕಡೆಗಳಿಂದ ಅವನನ್ನು ಮುತ್ತಿಕೊಂಡರು.

ಇದು ನೂರಎಪ್ಪತ್ತೇಳನೆಯ ಅಧ್ಯಾಯವು.



## ಭೀಮನಿಗೂ, ಅಲಾಯುಧನಿಗೂ ಯುದ್ಧವು.

ಮಹಾರಾಜಾ! ಅಲಾಯುಧನೆಂಬ ರಾಕ್ಷಸನು ಯುದ್ಧಕ್ಕೆ ಬರುವುದನ್ನು ನೋಡಿ ಕೌರವಸೈನ್ಯಕ್ಕೆಲ್ಲಾ ಬಹಳ ಸಂತೋಷವಾಯಿತು. ಅದರಂತೆಯೇ ನಿನ್ನ ಮಕ್ಕಳೆಲ್ಲರಿಗೂಕೂಡ, ಸಮುದ್ರದ ದಡವನ್ನು ಸೇರಬೇಕೆಂಬ ಆತುರವುಳ್ಳವನಿಗೆ ಅಕಸ್ಮಾತ್ತಾಗಿ ಹಡಗು ಸಿಕ್ಕಿದಂತೆ, ಅತ್ಯಂತಹರ್ಷವುಂಟಾಯಿತು. ತಾವು ಸತ್ತು ಬದುಕಿದವರಂತೆ ಸಂತೋಷದಿಂದ ನಿನ್ನ ಮಕ್ಕಳು ಆ ಅಲಾಯುಧನನ್ನು ಸ್ವಾಗತಪೂರ್ವಕವಾಗಿ ಆದರಿಸಿದರು. ಕರ್ಣಘಟೋತ್ಕಚರಿಬ್ಬರಿಗೂ ದಾರುಣಯುದ್ಧವು ನಡೆಯುತ್ತಿದ್ದ ಆ ರಾತ್ರಿಯಲ್ಲಿ ಕರ್ಣನೊಬ್ಬನು ಹೊರತು ಘಟೋತ್ಕಚನ ಮುಂದೆ ನಿಲ್ಲಲು ಯಾರಿಗೂ ಧೈರ್ಯವಿರಲಿಲ್ಲ. ಅಶ್ವತ್ಥಾಮನಾಗಲಿ, ಕೃಪನಾಗಲಿ, ದ್ರೋಣನಾಗಲಿ, ಶಲ್ಯನಾಗಲಿ, ಕೃತವರ್ಮನಾಗಲಿ ಯುದ್ಧಕ್ಕೆ ಬಂದು ನಿಲ್ಲಲಿಲ್ಲ. ಕರ್ಣನೊಬ್ಬನೇ ಅಸಹಾಯನಾಗಿ ಘಟೋತ್ಕಚನೊಂದಿಗೆ ಯುದ್ಧಮಾಡುತ್ತಿದ್ದನು. ಇದನ್ನು ನೋಡಿ ಪಾಂಚಾಲರೆಲ್ಲ ಸಂತೋಷದಿಂದ ಗರ್ವಿತರಾಗಿದ್ದರು. ನಿನ್ನವರೆಲ್ಲರೂ ಹಿಂದುಮುಂದು ತೋರದೆ ಭಯದಿಂದ ಅಲ್ಲಲ್ಲಿ ತಿರುಗುತ್ತಿದ್ದರು. ಯುದ್ಧದಲ್ಲಿ ಘಟೋತ್ಕಚನ ವೀರ್ಯಕಾರ್ಯಗಳನ್ನು ನೋಡಿ, ದ್ರೋಣಕೃಪಾಶ್ವತ್ಥಾಮಾದಿಗಳು "ಇದೇನೋ ನಮಗೆ ಉಳಿಯುವ ಕಾಲವಿಲ್ಲ"ವೆಂದು ಚಿಂತಾಕುಲರಾಗಿದ್ದರು. ಸೈನ್ಯವೆಲ್ಲಾ ವ್ಯಾಕುಲಗೊಂಡಿದ್ದಿತು. ಎಲ್ಲೆಲ್ಲಿಯೂ ಹಾಹಾಕಾರವುಂಟಾಯಿತು. ನಿನ್ನ ಸೈನ್ಯವೆಲ್ಲಾ

ಕರ್ಣನು ಬದುಕುವುದೇ ಸಂದೇಹವೆಂದು ನಿರಾಶೆಹೊಂದಿತು. ಆಗ ದುರ್ಯೋಧನನು ಕರ್ಣನ ಕಷ್ಟದಶೆಯನ್ನು ನೋಡಿ ಅಲಾಯುಧನನ್ನು ಕರೆದು, " ರಾಕ್ಷಸೇಂದ್ರಾ! ಈಗ ಕರ್ಣನು ಘಟೋತ್ಕಚನೊಡನೆ ಯುದ್ಧವನ್ನು ನಡೆಸುತ್ತಿರುವನು. ಅವನೇನೋ ತನ್ನಿಂದ ಸಾಧ್ಯವಾದಷ್ಟು ಮಹತ್ತಾದ ಕಾರ್ಯವನ್ನು ನಡೆಸುತ್ತಿರುವನು. ಆದರೇನು? ಆ ಘಟೋತ್ಕಚನಿಂದ ಹತರಾದ ನಮ್ಮ ಕಡೆಯ ರಾಜರನ್ನು ನೋಡು! ಆನೆಯು ವೃಕ್ಷಗಳನ್ನು ಮುರಿದಂತೆ ಆ ಘಟೋತ್ಕಚನು ನಮ್ಮವರನ್ನು ನಾನಾಶಸ್ತ್ರಗಳಿಂದ ಕೊಂದು ಕೆಡಹಿರುವನು. ಓ ಮಿತ್ರಾ! ನಮ್ಮ ಎಲ್ಲಾ ಬಂಧುಗಳ ನಡುವೆ ಈಗ ನಾನು ಈ ಯುದ್ಧಭಾರವನ್ನು ನಿನಗೆ ಒಪ್ಪಿಸಿರುವೆನು. ನೀನೂ ಮನಃಪೂರ್ವಕವಾಗಿ ಅನುಮತಿಸಿರುವೆ. ಈಗ ನಿನ್ನ ಪರಾಕ್ರಮವನ್ನೆಲ್ಲ ತೋರಿಸಿ, ಆ ಘಟೋತ್ಕಚನನ್ನು ನಿಗ್ರಹಿಸಬೇಕು. ಅಲ್ಲಿ ಘಟೋತ್ಕಚನು ತನ್ನ ಮಾಯಾಬಲವನ್ನು ಹಿಡಿದು ಕರ್ಣನನ್ನು ಕಷ್ಟಕ್ಕೀಡುಮಾಡಿರುವನು. ನೋಡು" ಎಂದನು. ಆದಕ್ಕಾ ಅಲಾಯುಧನು " ಇದೋ! ನಿನ್ನ ಇಷ್ಟದಂತೆಯೇ ನಡೆಸುವೆನು. ನೋಡು" ಎಂದು ಹೇಳಿ, ಒಡನೆಯೇ ಘಟೋತ್ಕಚನ ಕಡೆಗೆ ಹೊರಟನು. ಇವನನ್ನು ಕಂಡೊಡನೆ ಘಟೋತ್ಕಚನೂ, ಕೂಡ, ಕರ್ಣನನ್ನು ಬಿಟ್ಟು, ತನಗಿದಿರಾಗಿ ಯುದ್ಧಕ್ಕೆ ಬರುತ್ತಿದ್ದ ಅಲಾಯುಧನನ್ನೇ ಇದಿರಿಸತೊಡಗಿದನು. ಅವನಮೇಲೆ ಅನೇಕಬಾಣಗಳನ್ನು ಬಿಟ್ಟನು. ಒಂದು ಹೆಣ್ಣಾನೆಗಾಗಿ ಹೋರಾಡುವ ಮಹಾಗಜಗಳಂತೆ ಇಬ್ಬರೂ ಹಟದಿಂದ ಹೋರಾಡಿದರು. ಘಟೋತ್ಕಚನು ತನ್ನನ್ನು ಬಿಟ್ಟು ಹೋದೊಡನೆ, ಆತ್ತಲಾಗಿ ಕರ್ಣನು ಭೀಮನ ಬಳಿಗೆ ರಥವನ್ನು ಬಿಡಿಸಿಕೊಂಡು ವೇಗದಿಂದ ಬಂದನು. ಭೀಮನಾದರೋ ತನಗಿದಿರಾಗಿ ಬರುವ ಕರ್ಣನನ್ನು ಲಕ್ಷ್ಯಮಾಡದೆ, ಸಿಂಹದ ಕೈಗೆ ಸಿಕ್ಕಿದ ವೃಷಭದಂತೆ, ತನ್ನ ಮಗನಾದ ಘಟೋಚತ್ಕನು ಅಲಾಯುಧನಿಂದ ಇದಿರಿಸಲ್ಪಡುವುದನ್ನು ನೋಡಿ, ತಾನೂ ಆ ಅಲಾಯುಧನನ್ನು ತಡೆಯುವುದಕ್ಕಾಗಿ ದಾರಿಯುದ್ದಕ್ಕೂ ಬಾಣಗಳನ್ನು ಪ್ರಯೋಗಿಸುತ್ತಾ ಅಲ್ಲಿಗೆ ಬಂದನು. ಇದನ್ನು ನೋಡಿ ಅಲಾಯುಧನು ಘಟೋತ್ಕಚನನ್ನು ಬಿಟ್ಟು, ಭೀಮನಿಗಿದಿರಾಗಿ ನಿಂತನು. ಭೀಮನು ಅಲಾಯುಧನ ಮತ್ತು ಅವನ ಪರಿವಾರಗಳ ಮೇಲೆ

ಪರಂಪರೆಯಾಗಿ ಬಾಣವರ್ಷವನ್ನು ಸುರಿಸಿದನು. ಅಲಾಯುಧನೂ ಕೂಡ ಮೇಲೆಮೇಲೆ ಬಾಣಗಳಿಂದ ಭೀಮನನ್ನು ಮರೆಸುತ್ತಿದ್ದನು. ರಾಕ್ಷಸರೆಲ್ಲರೂ ಗುಂಪಾಗಿ ವಿವಿಧಾಯುಧಗಳನ್ನು ಹಿಡಿದು ಭೀಮನನ್ನು ಸುತ್ತಿಮುತ್ತಿ ಹೊಡೆಯಲಾರಂಭಿಸಿದರು. ಆಗಲೂ ಭೀಮನು ಎದೆಗುಂದದೆ, ಒಬ್ಬೊಬ್ಬನನ್ನೂ ಐದೈದು ಬಾಣಗಳಿಂದ ಬಲವಾಗಿ ನೋಯಿಸಿದನು. ಭೀಮನ ಪ್ರಹಾರದಿಂದ ನೊಂದು ರಾಕ್ಷಸರೆಲ್ಲರೂ ಆರ್ತಧ್ವನಿಯಿಂದ ಕೂಗುತ್ತಾ ದಿಕ್ಕುದಿಕ್ಕಿಗೆ ಓಡಲಾರಂಭಿಸಿದರು. ತನ್ನ ಸೈನ್ಯವು ಚದರುತ್ತಿರುವುದನ್ನು ನೋಡಿ ಅಲಾಯುಧನು ಕೋಪದಿಂದ ಭೀಮನನ್ನು ಇದಿರಿಸಿ ಬಂದು, ಅವನ ಮೇಲೆ ಅನೇಕ ಬಾಣಗಳನ್ನು ಸುರಿಸಿದನು. ಭೀಮನೂ ತೀಕ್ಷ್ಣಬಾಣಗಳಿಂದ ಆ ಬಾಣಗಳನ್ನೆಲ್ಲಾ ಭಂಗಿಸಿ, ಆ ರಾಕ್ಷಸನನ್ನು ಇದಿರಿಸುತ್ತಿದ್ದನು. ಭೀಮನ ಬಾಣಗಳನ್ನೆಲ್ಲ ಅಲಾಯುಧನು ಆಗಾಗಲೇ ಕತ್ತರಿಸಿ ಕೆಡಹುತ್ತಿದ್ದನು. ಆಗ ಭೀಮನು ವಜ್ರಸಮಾನವಾದ ಒಂದು ಗದೆಯನ್ನು ಆ ಅಲಾಯುಧನಮೇಲೆ ಬೀಸಿದನು. ಅದು ಅಗ್ನಿಜ್ವಾಲೆಗಳನ್ನು ಕೆದರುತ್ತ ಇದಿರಿಗೆ ಬರುತ್ತಿರುವಾಗಲೇ ಅಲಾಯುಧನು ತನ್ನ ಗದೆಯಿಂದ ಅದನ್ನು ಮುರಿದನು. ಆ ಅಲಾಯುಧನ 'ಗದೆಯು, ಭೀಮನಿಗೂ ಬಂದು ತಗುಲಿತು. ಭೀಮನು ಕೋಪದಿಂದ ಬಾಣವರ್ಷಗಳನ್ನು ಕರೆದನು. ಅವುಗಳನ್ನೂ, ರಾಕ್ಷಸನು ತನ್ನ ಬಾಣಗಳಿಂದ ಭಂಗಿಸಿ ವಿಫಲಮಾಡಿದನು. ಅಲಾಯುಧನ ಆಜ್ಞೆಗೆ ಬದ್ಧರಾದ ಭಯಂಕರರಾಕ್ಷಸರೆಲ್ಲರೂ ಆ ರಾತ್ರಿಯಲ್ಲಿ ಪಾಂಡವಸೈನ್ಯದ ಗಜತುರಗಗಳನ್ನೆಲ್ಲ ಬಡಿದು ಕೊಲ್ಲುತ್ತಿದ್ದರು. ಪಾಂಚಾಲರು, ಸೃಂಜಯರು, ಅವರ ರಥಗಳು, ಆನೆಗಳು, ಕುದುರೆಗಳು, ಎಲ್ಲವೂ ರಾಕ್ಷಸನ ಕೊಲೆಗೀಡಾಗಿ ತತ್ತಳಿಸುತ್ತಿದ್ದುವು. ಆಗ ಕೃಷ್ಣನು ಅರ್ಜುನನನ್ನು ನೋಡಿ “ಧನಂಜಯಾ! ಭೀಮನು ಅಲಾಯುಧನ ಕೈಗೆ ಸಿಕ್ಕುವಂತಿರುವನು ನೋಡು. ಈಗಲೇ ನೀನು ಅವನ ಸಹಾಯಕ್ಕೆ ಹೋಗಬೇಕು. ವಿಚಾರಮಾಡುತ್ತಿರಬಾರದು. ಬೇಗನೆ ನಡೆ. ಧೃಷ್ಟದ್ಯುಮ್ನನು, ಶಿಖಂಡಿ, ಯುಧಾಮನ್ಯು, ಉತ್ತಮೌಜಸ್ಸು, ಉಪಪಾಂಡವರು, ಇವರೆಲ್ಲಾ ಕರ್ಣನೊಡನೆ ಯುದ್ಧಕ್ಕೆ ಹೋಗಲಿ! ನಕುಲ, ಸಹದೇವ, ಸಾತ್ಯಕಿಗಳು ಇತರರಾಕ್ಷಸರನ್ನು ಇದಿರಿಸಿ ಅವರನ್ನಡಗಿಸಲಿ! ಈಗ ನೀನು ದ್ರೋಣನನ್ನು ಮುಂದಿ

ಟ್ಟುಕೊಂಡು ಬಂದಿರುವ ಈ ದೊಡ್ಡ ಕೌರವಸೈನ್ಯವನ್ನು ಸರ್ವಪ್ರಯತ್ನ ದಿಂದ ಅಡಗಿಸಬೇಕು. ಈಗ ನಮಗೆ ಮಹತ್ತಾದ ಭಯವು ಒದಗಿರುವುದು" ಎಂದನು. ಕೃಷ್ಣನ ಈ ಮಾತನ್ನು ಕೇಳಿದೊಡನೆ ಅವನು ನಿರ್ದೇಶಿಸಿದ ಮಹಾರಥರೆಲ್ಲಾ ಕರ್ಣನಿಗಿದಿರಾಗಿ ಹೊರಟರು. ಇತ್ತಲಾಗಿ ಅಲಾಯುಧನು ಭೀಮನ ಕೈಯಲ್ಲಿದ್ದ ಬಿಲ್ಲನ್ನು ತನ್ನ ಬಾಣಗಳಿಂದ ಕಡಿದುಬಿಟ್ಟನು. ಹಾಗೆಯೇ ಇನ್ನು ಕೆಲವು ಬಾಣಗಳಿಂದ ಭೀಮನ ರಥಾಶ್ವಗಳನ್ನೂ, ಸಾರಥಿಯನ್ನೂ, ಕೊಂದುಬಿಟ್ಟನು. ಭೀಮನ ಕಣ್ಣಿದಿರಿನಲ್ಲಿಯೇ ಇಷ್ಟೊಂದು ಕಾರ್ಯವು ನಡೆಯಿತು. ಒಡನೆಯೇ ವಿರಥನಾದ ಭೀಮನು ತನ್ನ ಪೀಠದಿಂದ ಹಾರಿ, ಭಯಂಕರವಾದ ದೊಡ್ಡ ಗದೆಯೊಂದನ್ನು ಕೈಗೆತ್ತಿಕೊಂಡು, ದೊಡ್ಡ ಸಿಂಹನಾದದೊಡನೆ ಆ ರಾಕ್ಷಸನಮೇಲೆ ಪ್ರಯೋಗಿಸಿದನು. ಅಲಾಯುಧನು ತನಗಿದಿರಾಗಿ ಬರುತ್ತಿದ್ದ ಭೀಮನ ಗದೆಯನ್ನು ತನ್ನ ಗದೆಯಿಂದ ಮುರಿದು, ದೊಡ್ಡ ಸಿಂಹನಾದಮಾಡಿದನು. ರಾಕ್ಷಸನ ಈ ಭಯಂಕರಕಾರ್ಯವನ್ನು ನೋಡಿ ಭೀಮನೂಕೂಡ ಮನಸ್ಸಿನಲ್ಲಿ ಸಂತೋಷಪಟ್ಟನು. ಆ ನರರಾಕ್ಷಸರಿಬ್ಬರಿಗೂ ತಿರುಗಿ ದೊಡ್ಡ ಗದಾಯುದ್ಧವು ಆರಂಭವಾಯಿತು. ಅವರಿಬ್ಬರ ಗದೆಯ ಪರಸ್ಪರ ತಾಡನೆಯಿಂದಲೂ, ಅವರ ಅಟ್ಟಹಾಸದಿಂದಲೂ. ಉಂಟಾದ ಧ್ವನಿಯು ಭೂಮಿಯನ್ನೆಲ್ಲ ನಡುಗಿಸುವಂತಿದ್ದಿತು. ಆಮೇಲೆ ಅವರಿಬ್ಬರೂ ಗದೆಯನ್ನು ಕೆಳಗಿಟ್ಟು ಒಬ್ಬರನ್ನೊಬ್ಬರು ವಜ್ರಮುಷ್ಟಿಗಳಿಂದ ಹೊಡೆಯಲಾರಂಭಿಸಿದರು. ಅಲ್ಲದೆ, ರಥದ ಚಕ್ರಗಳು, ನೊಗಗಳು, ಅಚ್ಚುಗಳು, ಆಸನಗಳು, ಇತರ ಸಾಧನಗಳು, ಇವುಗಳಲ್ಲಿ ಸಮಯಕ್ಕೆ ಯಾವುದು ಸಿಕ್ಕಿದರೆ ಅದನ್ನೇ ಕೈಯಿಂದೆತ್ತಿ ಒಬ್ಬರಮೇಲೊಬ್ಬರು ಬೀಸಿದರು. ಇಬ್ಬರ ಮೈಯಲ್ಲಿಯೂ, ರಕ್ತವು ಸುರಿಯುತ್ತಿದ್ದಿತು. ಇಬ್ಬರೂ ಮದದಾನೆಗಳಂತೆ ಒಬ್ಬರನ್ನೊಬ್ಬರು ಎಳೆದಾಡುತ್ತಿದ್ದರು.

ಇದು ನೂರ ಎಪ್ಪತ್ತೆಂಟನೆಯ ಅಧ್ಯಾಯವು.



## ಘಟೋತ್ಕಚನು ಅಲಾಯುಧನನ್ನು ಕೊಂದುದು.

ಮಹಾರಾಜಾ! ಹೀಗೆ ಭೀಮನು ರಾಕ್ಷಸನ ಕೈಗೆ ಸಿಕ್ಕಿಬಿದ್ದಿರುವುದನ್ನು ನೋಡಿ, ಕೃಷ್ಣನು ಘಟೋತ್ಕಚನನ್ನು ಕರೆದು, “ಓ ಕುಮಾರಾ! ನಾವೆಲ್ಲರೂ ನೋಡುತ್ತಿರುವಹಾಗೆಯೇ ಭೀಮನು ಆ ರಾಕ್ಷಸನ ಕೈಗೆ ಸಿಕ್ಕಿಬಿದ್ದಿರುವನು ಕಂಡೆಯಾ? ನೀನು ಕರ್ಣನೊಡನೆ ಯುದ್ಧವನ್ನು ಇಷ್ಟಕ್ಕೇ ನಿಲ್ಲಿಸಿ, ಆ ಅಲಾಯುಧನಿಗೆ ಇದಿರಾಗಿ ಹೋಗಿ, ಅವನನ್ನು ಮೊದಲು ವಧಿಸು. ಆಮೇಲೆ ಕರ್ಣನನ್ನು ವಧಿಸಬಹುದು” ಎಂದನು. ಕೃಷ್ಣನ ಈ ಮಾತನ್ನು ಕೇಳಿದೊಡನೆಯೇ ಘಟೋತ್ಕಚನು ಬಕಸಹೋದರನಾದ ಆ ಅಲಾಯುಧನನ್ನು ಇದಿರಿಸಿದನು. ಆ ರಾಕ್ಷಸರಿಬ್ಬರಿಗೂ ಭಯಂಕರಯುದ್ಧವು ಆರಂಭಿಸಿತು. ಇದೇಸಮಯದಲ್ಲಿ ಸಾತ್ಯಕಿ, ನಕುಲಸಹದೇವರು ಈ ಮೂವರೂ ಧನುರ್ಧಾರಿಗಳಾಗಿ ಬಂದಿದ್ದ ಅಲಾಯುಧನ ಕಡೆಯ ರಾಕ್ಷಸರನ್ನೆಲ್ಲಾ ತಮ್ಮ ಬಾಣಗಳಿಂದ ನಾಶಗೊಳಿಸುತ್ತಿದ್ದರು. ಅದರಂತೆಯೇ ಅರ್ಜುನನೂಕೂಡ ಅನೇಕ ರಾಜರನ್ನು ತನ್ನ ಬಾಣಗಳಿಂದ ಹೊಡೆದೋಡಿಸುತ್ತಿದ್ದನು. ಇತ್ತಲಿಂದ ಕರ್ಣನೂ, ಧೃಷ್ಟದ್ಯುಮ್ನ ಶಿಖಂಡಿ ಮೊದಲಾದ ಪಾಂಚಾಲವೀರರನ್ನೆಲ್ಲಾ ತನ್ನ ಬಾಣಗಳಿಂದ ಚದರಿಸುತ್ತಿದ್ದನು. ಮಹಾರಥಿಕರೆನಿಸಿದ ಪಾಂಚಾಲರೆಲ್ಲರೂ ಕರ್ಣನಿಗೆ ಭಯಪಟ್ಟು ಚದರುತ್ತಿರುವುದನ್ನು ನೋಡಿ, ಭೀಮನು ಬಾಣಗಳನ್ನು ಬಿಡುತ್ತಾ ಕರ್ಣನಿಗಿದಿರಾಗಿ ಬಂದನು. ಭೀಮನು ಬಂದುದನ್ನು ನೋಡಿ, ನಕುಲ ಸಹದೇವ ಸಾತ್ಯಕಿಗಳೂ ಅವನಿಗೆ ಬೆಂಬಲವಾಗಿ ಕರ್ಣನನ್ನಿದಿರಿಸುವುದಕ್ಕೆ ಓಡಿಬಂದರು. ಪಾಂಚಾಲರೆಲ್ಲಾ ದ್ರೋಣನಿಗಿದಿರಾದರು. ಅಲಾಯುಧನೂ, ಘಟೋತ್ಕಚನೂ ಯುದ್ಧವನ್ನಾರಂಭಿಸಿದರು. ಅಲಾಯುಧನು ದೊಡ್ಡ ಪರಿಘವೊಂದನ್ನು ಘಟೋತ್ಕಚನಮೇಲೆ ಬೀಸಲು, ಅದರಿಂದ ಘಟೋತ್ಕಚನಿಗೆ ಸ್ವಲ್ಪ ಪ್ರಜ್ಞೆತಪ್ಪಿದಂತಾಯಿತು. ಸ್ವಲ್ಪಹೊತ್ತಿನಲ್ಲಿಯೇ ತಿರುಗಿ ಚೇತರಿಸಿಕೊಂಡು, ಅಗ್ನಿಯಂತೆ ಜಾಜ್ವಲ್ಯಮಾನವಾಗಿ ಶತಘಂಟೆಗಳುಳ್ಳ ಗದೆಯೊಂದನ್ನು ಆ ಅಲಾಯುಧನಮೇಲೆ ಬೀಸಿದನು. ಆ ಗದೆಯು ಅಲಾಯುಧನ ರಥಾಶ್ವಗಳನ್ನೂ, ಸಾರಥಿಯನ್ನೂ ಕೊಂದು, ಅವನ ರಥ

ವನ್ನು ಪುಡಿಪುಡಿಮಾಡಿತು. ರಥದನೊಗ, ಮೂಕಿ, ಧ್ವಜ, ಇರಿಚಿ ಚಕ್ರಗಳೆಲ್ಲ ಛಿನ್ನಭಿನ್ನವಾದುವು. ಆಗ ಅಲಾಯುಧನು ಥಟ್ಟನೆ ರಥದಿಂದ ಹಾರಿ, ಮಾಯೆಯನ್ನವಲಂಬಿಸಿ ಯುದ್ಧವನ್ನು ತೊಡಗಿದನು. ಒಡನೆಯೇ ಆಕಾಶದಿಂದ ದೊಡ್ಡ ರಕ್ತದ ಮಳೆಯು ಸುರಿಯಿತು. ಆಕಾಶವೆಲ್ಲಾ ಮೇಘಗಳಿಂದ ಆವೃತವಾಗಿ, ಮಿಂಚುಗುಡುಗುಗಳೊಡನೆ ಭಯಂಕರವಾಗಿ ಆರ್ಭಟಿಸುತ್ತಿದ್ದಿತು. ಆಗಾಗ ಸಿಡಿಲುಗಳು ಬಡಿಯುತ್ತಿದ್ದುವು. ಭಯಂಕರವಾದ ಮೇಘಧ್ವನಿಗಳು ಕೇಳಿಸುತ್ತಿದ್ದುವು. ದೊಡ್ಡ ಛಟಛಟಾತ್ಕಾರವುಂಟಾಯಿತು. ಇದನ್ನು ನೋಡಿ ಘಟೋತ್ಕಚನು ಅವನ ಮಾಯೆಯನ್ನು ಅಡಗಿಸುವುದಕ್ಕಾಗಿ ಥಟ್ಟನೆ ಅಂತರಿಕ್ಷಕ್ಕೆ ಹಾರಿ, ಪ್ರತಿಮಾಯೆಯಿಂದ ಆ ಮಾಯೆಯನ್ನಡಗಿಸಿದನು. ಮಾಯಾವಿಯಾದ ಅಲಾಯುಧನು ತನ್ನ ಪ್ರಯತ್ನವು ವಿಫಲವಾದುದನ್ನು ನೋಡಿ, ತಿರುಗಿ ಬೇರೊಂದು ಮಾಯೆಯಿಂದ ದೊಡ್ಡ ಕಲ್ಮಳೆಯನ್ನು ಸುರಿಸಿದನು. ಅದನ್ನು ಘಟೋತ್ಕಚನು ತನ್ನ ಬಾಣವರ್ಷದಿಂದ ದಿಕ್ಕುದಿಕ್ಕುಗಳಿಗೆ ಹಾರಿಸಿಬಿಟ್ಟನು. ಇದು ಆಶ್ಚರ್ಯಕರವಾಯಿತು. ಆ ರಾಕ್ಷಸರಿಬ್ಬರೂ ಒಬ್ಬರಮೇಲೊಬ್ಬರು ಉಕ್ಕಿನ ಪರಿಘ, ಶೂಲ, ಗದೆ, ಮುಸಲ, ಮುದ್ಗರ, ಪಿನಾಕ, ಕರವಾಲ, ತೋಮರ, ಪ್ರಾಸ, ಕಂಪನ, ನಾರಾಚ, ಭಲ್ಲ, ಚಕ್ರ, ಕೊಡಲಿ, ಆಯೋಗುಡ, ಭಿಂಡಿವಾಲ, ಗೋಶೀರ್ಷ, ಉಲೂಖಲಗಳೆಂಬ ವಿವಿಧಾಯುಧಗಳನ್ನು ಪ್ರಯೋಗಿಸುತ್ತಿದ್ದರು. ಅಲ್ಲಲ್ಲಿ ಬೆಳೆದ ಬನ್ನಿ, ಪೀಲು, ಕಡವು, ಸಂಪಗೆ, ಇಂಗಳಿಕ, ಎಲಚಿ, ಕೋವಿದಾರ, ಮುತ್ತುಗ, ಅರಿಮೇಧ, ಆಲ, ಪಿಪ್ಪಲ ಮುಂತಾದ ದೊಡ್ಡದೊಡ್ಡ ವೃಕ್ಷಗಳನ್ನೂ, ವಿವಿಧ ಧಾತುಗಳಿಂದ ತುಂಬಿದ ಪರ್ವತಶಿಖರಗಳನ್ನೂ ಒಬ್ಬರಮೇಲೊಬ್ಬರು ಬೀಸಿ ಬಡಿಯುತ್ತಿದ್ದರು. ಇವುಗಳ ಸಂಘಟ್ಟನೆಯಿಂದುಂಟಾದ ಶಬ್ದವು ವಜ್ರಾಯುಧಗಳ ಪರಸ್ಪರ ತಾಡನದಂತೆ ಭಯಂಕರವಾಯಿತು. ವಾಲಿಸುಗ್ರೀವರೆಂಬ ವಾನರರ ಯುದ್ಧದಂತೆ ಅವರಿಬ್ಬರ ಯುದ್ಧವು ದಾರುಣವಾಯಿತು. ಅವರಿಬ್ಬರೂ ತಮ್ಮ ಕೈಯ್ಯಲ್ಲಿದ್ದ ಖಡ್ಗಗಳನ್ನು ಬಿಸುಟು, ಒಬ್ಬರನ್ನೊಬ್ಬರು ಸಮೀಪಿಸಿ, ಒಬ್ಬರ ಶಿಖೆಯನ್ನೊಬ್ಬರು ಹಿಡಿದರು. ಇಬ್ಬರಿಗೂ ಆ ಯುದ್ಧಶ್ರಮದಿಂದ ಮೈಯಲ್ಲಿ ಬೆವರುಕಿತ್ತುಕೊಂಡಿತು. ಆ ಹೊಡೆದಾಟದಲ್ಲಿ ಇಬ್ಬರ ಮೈಯ್ಯಲ್ಲಿಯೂ ರಕ್ತವು

ಸುರಿಯುತ್ತಿತ್ತು. ಹೀಗಿರುವಾಗ ಘಟೋತ್ಕಚನು ಥಟ್ಟನೆ ಆ ಅಲಾಯುಧನಮೇಲೆ ಬಿದ್ದು ಅವನನ್ನು ಮೇಲಕ್ಕೆತ್ತಿ, ಗರಗರನೆ ತಿರುಗಿಸಿ ನೆಲಕ್ಕೆ ಬಡಿದು, ಅವನ ತಲೆಯನ್ನು ಕಡಿದುಬಿಟ್ಟನು. ಹೀಗೆ ಘಟೋತ್ಕಚನು ಕುಂಡಲಾಲಂಕೃತವಾದ ಆ ರಾಕ್ಷಸನ ತಲೆಯನ್ನು ಶರೀರದಿಂದ ಬೇರ್ಪಡಿಸಿ ದೊಡ್ಡ ಸಿಂಹನಾದವನ್ನು ಮಾಡಿದನು. ಪಾಂಡವ ಪಾಂಚಾಲರು ಸಂತೋಷದಿಂದ ಸಿಂಹನಾದಮಾಡಿದರು. ಪಾಂಡವರಕಡೆಯಲ್ಲಿ ಸಾವಿರಾರು ಭೇರಿಗಳೂ, ಲಕ್ಷೋಪಲಕ್ಷಶಂಖಗಳೂ ಮೊಳಗಿದುವು. ಆ ರಾತ್ರಿಯು ಪಾಂಡವರಿಗೆ ಅತ್ಯಂತ ಜಯಪ್ರದವಾಯಿತು. ಎಲ್ಲೆಲ್ಲಿಯೂ ಉತ್ಸಾಹದಿಂದ ದೀಪಗಳು ಬೆಳಗಿಸಲ್ಪಟ್ಟುವು. ಘಟೋತ್ಕಚನು ಅಲಾಯುಧನ ತಲೆಯನ್ನು ತಂದು ದುರ್ಯೋಧನನ ಮುಂಭಾಗದಲ್ಲಿ ಬಿಸುಟನು. ದುರ್ಯೋಧನನೂ ಅವನ ಸೈನಿಕರೂ, ಅದನ್ನು ನೋಡಿ ಬಹಳ ಸಂಕಟಪಟ್ಟರು. ಏಕೆಂದರೆ ಆ ಅಲಾಯುಧನು ತಾನೇ ಭೀಮನನ್ನು ಕೊಂದುಬರುವುದಾಗಿಯೂ, ತನಗೆ ಅವನಲ್ಲಿ ಪೂರ್ವದಿಂದ ವೈರವುಂಟೆಂದೂ ಹೇಳಿ ಹೋಗಿದ್ದುದರಿಂದ, ಭೀಮನಿಗೆ ಅವನ ಕೈಯಿಂದ ಸಾವು ಸಿದ್ಧವೆಂದು ತಾನೂ, ತನ್ನ ಸಹೋದರರೂ ಚಿರಕಾಲದವರೆಗೆ ನಿಶ್ಚಿಂತವಾಗಿ ಬದುಕಿರಬಹುದೆಂದೂ ನಂಬಿದ್ದರು. ಈಗ ಅಂತಹ ರಾಕ್ಷಸನೇ ಭೀಮನ ಮಗನಿಂದ ಹತನಾದುದನ್ನು ನೋಡಿ, ಇನ್ನು ಭೀಮನ ಪ್ರತಿಜ್ಞೆಯು ಶೀಘ್ರದಲ್ಲಿಯೇ ನೆರವೇರಬಹುದೆಂದು ತಿಳಿದು ನಿನ್ನ ಮಗನು ಕೊರಗುತ್ತಿದ್ದನು.

ಇದು ನೂರ ಎಪ್ಪತ್ತೊಂಭತ್ತನೆಯ ಅಧ್ಯಾಯವು.



## ಕರ್ಣನಿಂದ ಘಟೋತ್ಕಚವಧವು.

ಮಹಾರಾಜಾ! ಹೀಗೆ ಘಟೋತ್ಕಚನು ಅಲಾಯುಧನನ್ನು ಕೊಂದು, ಆ ಜಯೋತ್ಸಾಹದಿಂದ ನಿನ್ನ ಸೈನ್ಯದ ಮುಂದೆ ನಾನಾವಿಧವಾಗಿ ಆರ್ಭಟಿಸಿ ಸಿಂಹನಾದಮಾಡುತ್ತಿದ್ದನು. ಎದೆಯನ್ನು ನಡುಗಿಸತಕ್ಕ ಈ ರಾಕ್ಷಸನ ಗರ್ಜನೆಯನ್ನು ಕೇಳಿ ನಿನ್ನವರಿಗೆಲ್ಲಾ ಮಹತ್ತಾದ ಭೀತಿ ಹುಟ್ಟಿತು. ಇದು ಹೀಗಿರಲು, ಘಟೋತ್ಕಚನು ಅಲಾಯುಧನೊಡನೆ ಕೈಕಲೆತು

ದನ್ನು ಕಂಡೊಡನೆ ಕರ್ಣನು ಪಾಂಚಾಲರೊಡನೆ ಯುದ್ಧಕ್ಕಾಗಿ ಹೊರಟು, ಅವರಲ್ಲಿ ಪ್ರಮುಖರಾದ ಧೃಷ್ಟದ್ಯುಮ್ನ ಶಿಖಂಡಿಗಳಿಬ್ಬರನ್ನೂ ಹತ್ತು ಹತ್ತು ಬಾಣಗಳಿಂದ ಹೊಡೆದನು. ಯುಧಾಮನ್ಯು, ಉತ್ತಮೌಜಸ್ಸು ಸಾತ್ಯಕಿ, ಈ ಮೂವರು ಮಹಾರಥಿಕರನ್ನೂ, ತನ್ನ ಬಾಣಗಳಿಂದ ನಡುಗಿಸಿದನು. ಅವರಿಬ್ಬರೂ ಎಡಬಲಪಾರ್ಶ್ವಗಳಿಂದ ಕರ್ಣನಮೇಲೆ ಬಾಣಗಳನ್ನು ಹೊಡೆಯುತ್ತಿದ್ದರು. ಆಗ ಎಲ್ಲಾ ಕಡೆಯೂ ಮಂಡಲಾಕಾರವಾದ ಬಿಲ್ಲುಗಳೇ ಕಾಣಿಸುತ್ತಿದ್ದುವು, ಧನುರ್ಧಾರಿಗಳ ಧನುಷ್ಟಂಕಾರಧ್ವನಿಯೂ, ರಥನೇಮಿಧ್ವನಿಯೂ ಮೇಘಗಳ ಗುಡುಗಿನಂತೆ ಕೇಳಿಸುತ್ತಿದ್ದಿತು. ಜಯಘೋಷ, ನೇಮಿಘೋಷಗಳೇ ಗುಡುಗುಗಳು! ಧನುಸ್ಸೇ ಮಿಂಚು! ಬಾಣವರ್ಷಗಳೇ ಜಲವರ್ಷಗಳು! ಹೀಗೆ ಆ ರಣರಂಗವು ಮೇಘೋದಯದಂತೆ ಕಾಣಿಸಿತು. ಜಲವರ್ಷವನ್ನು ಪರ್ವತವು ಹೇಗೋ ಹಾಗೆ, ಆ ರಥಿಕರ ಬಾಣವರ್ಷಗಳನ್ನೆಲ್ಲ ಕರ್ಣನು ನಿರ್ಲಕ್ಷ್ಯವಾಗಿ ತಡೆದು ಅವುಗಳನ್ನು ತನ್ನ ಬಾಣಗಳಿಂದ ನಿವಾರಿಸುತ್ತಿದ್ದನು. ನಿನ್ನ ಮಗನಿಗೆ ಹಿತವನ್ನುಂಟುಮಾಡಬೇಕೆಂಬ ಆತುರವುಳ್ಳ ಕರ್ಣನು, ವಜ್ರಸಮಾನಗಳಾದ ತೀಕ್ಷ್ಣಬಾಣಗಳಿಂದ ಶತ್ರುಗಳನ್ನು ಕೊಂದುಕೆಡಹುತ್ತಿದ್ದನು. ಆಗ ಕರ್ಣನ ಬಾಣಗಳಿಂದ ಕೆಲವರ ಧ್ವಜಗಳು ಛಿನ್ನಭಿನ್ನವಾಗಿ ಬಿದ್ದುವು. ಕೆಲವರ ಅಂಗಾಂಗಗಳೆಲ್ಲಾ ಬಾಣಘಾತಗಳಿಂದ ಛಿನ್ನವಾದುವು. ಕೆಲವರು ತಮ್ಮ ರಥ ರಥಾಶ್ವ ಸಾರಥಿಗಳನ್ನೆಲ್ಲಾ ಕಳೆದುಕೊಂಡು ಪರಾಜಿತರಾಗಿ ಓಡಿದರು. ಆ ಯುದ್ಧದಲ್ಲಿ ತಮಗೆ ಉಳಿಗಾಲವಿಲ್ಲವೆಂದು ತಿಳಿದು, ಅನೇಕರು ಅಲ್ಲಿಂದ ಪಲಾಯನಮಾಡಿ, ಯುಧಿಷ್ಠಿರನ ಸೈನ್ಯದೊಳಗೆ ಹೋಗಿ ಸೇರಿಕೊಂಡರು. ಹೀಗೆ ಪಾಂಡವಸೈನ್ಯವು ಭಗ್ನವಾಗಿ ಚದರಿಹೋಗುತ್ತಿರುವುದನ್ನು ನೋಡಿ ಘಟೋತ್ಕಚನು ಅತ್ಯಾಕ್ರೋಶದಿಂದ, ಸುವರ್ಣರತ್ನಚಿತ್ರಿತವಾದ ತನ್ನ ರಥವನ್ನೇರಿ ಕುಳಿತು, ಸಿಂಹನಾದಮಾಡುತ್ತಾ, ಕರ್ಣನಿಗಿದಿರಾಗಿಬಂದು, ವಜ್ರಸಮಾನಗಳಾದ ಬಾಣಗಳನ್ನು ಅವನಮೇಲೆ ಪ್ರಯೋಗಿಸಿದನು. ಕರ್ಣಿ, ನಾರಾಚ, ಶಿಲೀಮುಖ, ನಾಳೀಕ, ದಂಡಾಸನ, ವತ್ಸದಂತ, ವರಾಹಕರ್ಣ, ವಿಪಾಟ, ಶೃಂಗ, ಕ್ಷುರಪ್ರ ಮೊದಲಾದ ವಿವಿಧಬಾಣಗಳು ಎರಡುಕಡೆಗಳಿಂದಲೂ ಹೊರಟು, ಆಕಾಶವನ್ನೆಲ್ಲಾ ಮರೆಸಿ, ದೊಡ್ಡ

ಧ್ವನಿಯಿಂದ ಮೊರೆಯುತ್ತಿದ್ದುವು. ಚಿನ್ನದ ಹಿಡಿಗಳುಳ್ಳ ಬಾಣಪರಂಪರೆಗಳಿಂದ ಆಕಾಶವೆಲ್ಲ ವಿಚಿತ್ರ ಪುಷ್ಪಮಾಲಿಕೆಗಳಿಂದ ಅಲಂಕೃತವಾದಂತೆ ಕಾಣಿಸಿತು. ಎಣೆಯಿಲ್ಲದ ಮಹಿಮೆಯುಳ್ಳ ಅವರಿಬ್ಬರೂ ಉತ್ತಮಾಸ್ತ್ರಗಳಿಂದ ಹೊಡೆದಾಡುತ್ತಿದ್ದಾಗ, ಅವರಿಬ್ಬರಲ್ಲಿ ಹೆಚ್ಚುಕಡಿಮೆಯೇ ತಿಳಿಯಲಿಲ್ಲ. ಅವರಿಬ್ಬರ ಆಗಿನ ಶಸ್ತ್ರಯುದ್ಧವು ಆಕಾಶದಲ್ಲಿ ರಾಹುಸೂರ್ಯರ ಹೆಣಗಾಟದಂತೆ ಅತ್ಯಂತ ದಾರುಣವಾಯಿತು. ಆಗ ಕರ್ಣನು ಘಟೋತ್ಕಚನನ್ನು ತನ್ನಿಂದ ಮೀರಿಸುವುದಕ್ಕೆ ಸಾಧ್ಯವಿಲ್ಲದೆ ಹೋದುದನ್ನು ನೋಡಿ, ಪ್ರಬಲಮಂತ್ರಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರದಿಂದ ಘಟೋತ್ಕಚನ ರಥವನ್ನು ಮುರಿದು, ರಥಾಶ್ವಗಳನ್ನೂ, ಸಾರಥಿಯನ್ನೂ ಕೊಂದನು. ವಿರಥನಾದ ಘಟೋತ್ಕಚನು ಥಟ್ಟನೆ ಕಣ್ಮರೆಯಾಗಿಬಿಟ್ಟನು" ಎಂದನು. ಈ ಮಾತುಗಳನ್ನು ಕೇಳಿ, ಧೃತರಾಷ್ಟ್ರನು ಭಯಾತುರದಿಂದ "ಸಂಜಯಾ! ಮೋಸದಿಂದ ಯುದ್ಧಮಾಡತಕ್ಕ ಆ ರಾಕ್ಷಸನು ಅದೃಶ್ಯನಾದಮೇಲೆ, ನಮ್ಮವರ ಮುಂದಿನ ಆಲೋಚನೆಯೇನಾಯಿತು? ಅದನ್ನು ನನಗೆ ಬೇಗನೆ ತಿಳಿಸು" ಎಂದನು. ಆಗ ಸಂಜಯನು "ರಾಜಾ! ಕೇಳು. ಆ ರಾಕ್ಷಸನು ಅದೃಶ್ಯನಾದೊಡನೆಯೇ, ಕೌರವರೆಲ್ಲರೂ ಭಯದಿಂದ ತಮ್ಮೊಳಗೆ ಒಬ್ಬರಿಗೊಬ್ಬರು "ಮಾಯಾಯುದ್ಧವನ್ನು ಬಲ್ಲ ಈ ರಾಕ್ಷಸನು ಕರ್ಣನನ್ನು ಕೊಲ್ಲದೆ ಬಿಡುವನೇ? ಅದೃಶ್ಯನಾಗಿಯೇ ನಮ್ಮನ್ನೆಲ್ಲ ವಧಿಸದೆ ಬಿಡನು" ಎಂದು ಆಡಿಕೊಳ್ಳುತ್ತಿದ್ದರು. ಇಷ್ಟರಲ್ಲಿಯೇ ಹಸ್ತಲಾಘವದಿಂದ ಅಸ್ತ್ರಯುದ್ಧಗಳನ್ನು ಮಾಡಬಲ್ಲ ಕರ್ಣನು, ತನ್ನ ಬಾಣಸಮೂಹಗಳಿಂದ ಎಲ್ಲಾ ದಿಕ್ಕುಗಳನ್ನೂ, ಆಕಾಶವನ್ನೂ ಮುರೆಸಿಬಿಟ್ಟನು. ಕೇವಲ ತಮೋಮಯವಾದ ಅಂತರಿಕ್ಷದಲ್ಲಿ ಯಾವುದೊಂದು ಭೂತವೂ ಸುಳಿಯಲು ಅವಕಾಶವಿರಲಿಲ್ಲ. ಕರ್ಣನ ಹಸ್ತಲಾಘವದಿಂದ ಅವನು ಬಾಣಗಳನ್ನು ಬತ್ತಳಿಕೆಯಿಂದ ತೆಗೆಯುವುದಾಗಲಿ, ಬಿಲ್ಲಿಗೆ ತೊಡಿಸುವುದಾಗಲಿ ಯಾವುದೊಂದೂ ತಿಳಿಯುತ್ತಿರಲಿಲ್ಲ. ಅಂತರಿಕ್ಷವೆಲ್ಲಾ ಬಾಣಗಳಿಂದ ಮಾತ್ರ ಮರೆಸಿಹೋಯಿತು. ಇಷ್ಟರಲ್ಲಿಯೇ ರಾಕ್ಷಸಮಾಯೆಯಿಂದ ಕೆಂಪುಮೇಘದಂತೆಯೂ, ಅಗ್ನಿಜ್ವಾಲೆಯಂತೆಯೂ ಒಂದು ಭಯಂಕರಕಾಂತಿಯು ಆಕಾಶದಲ್ಲಿ ಕಾಣಿಸಿತು. ಆಕಾಶವನ್ನೆಲ್ಲಾ ರಕ್ತಮೇಘವು ಆವರಿಸಿದಂತೆ ತೋರಿತು.

ಆದರಿಂದ ಮಿಂಚುಗಳೂ, ಉರಿಯುವ ಕೊಳ್ಳಿಗಳೂ ನಾನಾದಿಕ್ಕುಗಳಿಂದ ಬೀಳತೊಡಗಿದುವು. ಸಹಸ್ರ ದುಂದುಭಿಗಳು ಏಕಕಾಲದಲ್ಲಿ ಮೊಳಗಿದಂತೆ ಭಯಂಕರ ಧ್ವನಿಯುಂಟಾಯಿತು. ಆಮೇಲೆ ಪರಂಪರೆಯಾಗಿ ಬಾಣ, ಶಕ್ತಿ, ಋಷ್ಟಿ, ಪ್ರಾಸ, ಮುಸಲ, ಪರಶು, ಎಣ್ಣೆತೀಡಿದ ಕತ್ತಿಗಳು, ಉಕ್ಕಿನಕಟ್ಟುಳ್ಳ ಪರಿಘಗಳು, ವಿಚಿತ್ರ ಗದೆಗಳು, ಶೂಲಗಳು, ಚಿನ್ನದ ಪಟ್ಟಿಗಳುಳ್ಳ ದಂತಗಳು, ಶತಘ್ನಿಗಳು, ಈ ಮುಂತಾದ ವಿವಿಧಾಯುಧಗಳು ನಾನಾಕಡೆಗಳಿಂದ ಬಂದು ಬೀಳುತ್ತಿದ್ದುವು. ಆಮೇಲೆ ದೊಡ್ಡದೊಡ್ಡ ಕಲ್ಲುಬಂಡೆಗಳೂ, ಸಾವಿರಾರು ವಜ್ರಾಶನಿಗಳೂ, ಚಕ್ರಗಳೂ, ನೂರುಸಹಸ್ರಕ್ಷುರಗಳೂ ಮೇಲೆ ಬೀಳಲಾರಂಭಿಸಿದುವು. ಉರಿಯನ್ನು ಕಾರುತ್ತ ಬರುತ್ತಿರುವ ಈ ಮಾಯಾಪ್ರಯುಕ್ತಗಳಾದ ಶಕ್ತಿ, ಗದೆ, ಖಡ್ಗ ಮೊದಲಾದ ಆಯುಧಗಳ ವರ್ಷವನ್ನು ಅಡಗಿಸುವುದಕ್ಕಾಗಿ, ಕರ್ಣನು ತನ್ನಿಂದಾದಷ್ಟು ಪ್ರಯತ್ನಮಾಡಿದನು. ಅವನಿಗೂ ಅದು ಸಾಧ್ಯವಾಗಲಿಲ್ಲ. ಬಾಣಗಳಿಂದ ಹತವಾದ ಕುದುರೆಗಳೂ, ವಜ್ರಾಹತಗಳಾದ ಆನೆಗಳೂ, ಶಿಲೆಗಳಿಂದ ಚೂರ್ಣಮಾಡಲ್ಪಟ್ಟ ಮಹಾರಥಗಳೂ ಕೆಳಗೆ ಬೀಳುತ್ತಿದ್ದ ಶಬ್ದವೇ ಅತಿ ಪ್ರಬಲವಾಗಿ ಕೇಳಿಸುತ್ತಿದ್ದಿತು. ಘಟೋತ್ಕಚನ ಈ ಮಾಯಾಸ್ತ್ರದಿಂದ ದುರ್ಯೋಧನನ ಸೈನ್ಯವೆಲ್ಲವೂ ಬಹಳಮಟ್ಟಿಗೆ ನಾಶಹೊಂದಿತು. ಅನೇಕಸೈನ್ಯಗಳು ದೈನ್ಯದಿಂದ ಕೂಗಿಡುತ್ತಿದ್ದುವು. ಹಿಂದುಮುಂದು ತೋರದೆ ಕೆಲವು ಸಿಕ್ಕಿದಕಡೆಗೆ ಓಡುತ್ತಿದ್ದುವು. ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಕೆಲವು ಸೈನಿಕರು ಅಲ್ಲಲ್ಲಿಯೇ ಅಡಗಿಕೊಂಡರು. ಆದರೆ ನಮ್ಮಲ್ಲಿ ಕೆಲವುವೀರರು ಕ್ಷತ್ರಿಯಧರ್ಮವನ್ನು ಬಲ್ಲ ಸಜ್ಜನರಾದುದರಿಂದ, ಆಗಲೂ ಹಿಂತಿರುಗದೆ ಎದೆಗೊಟ್ಟು ನಿಂತರು. ಶಸ್ತ್ರವರ್ಷರೂಪವಾದ ಈ ಭಯಂಕರ ರಾಕ್ಷಸಮಾಯೆಯನ್ನೂ, ಅದರಿಂದ ತಂಡತಂಡವಾಗಿ ತಮ್ಮ ಸೈನ್ಯಗಳು ಸತ್ತುಬೀಳುವುದನ್ನೂ ನೋಡಿ ನಿನ್ನ ಮಕ್ಕಳಿಗೆಲ್ಲ ಮಹತ್ತಾದ ಭಯವುಂಟಾಯಿತು. ಇದಲ್ಲದೆ, ಬೆಂಕಿಯುರಿಯಂತೆ ಜ್ವಲಿಸುವ ನಾಲಗೆಗಳನ್ನು ನೀಡಿ, ಭಯಂಕರಧ್ವನಿಯಿಂದ ಊಳಿಡುತ್ತಿರುವ ನರಿಗಳು ಅಲ್ಲಲ್ಲಿ ನೂರಾರುಸಂಖ್ಯೆಯಿಂದ ಕಾಣಿಸಿಕೊಂಡುವು. ಭಯಂಕರಧ್ವನಿಯಿಂದ ಆರ್ಭಟಿಸುತ್ತಿರುವ ರಾಕ್ಷಸಗಣಗಳು ನಿನ್ನ ಸೈನ್ಯದ ಸುತ್ತಲೂ ಆವರಿಸಿಕೊಂಡುವು. ಆ ರಾಕ್ಷಸ

ರಿಗೋ ಉರಿಯುವ ನಾಲಗೆ! ಹರಿತವಾದ ಕೋರೆದಾಡೆಗಳು! ಪರ್ವತಾಕಾರವಾದ ದೊಡ್ಡ ಮೈ! ಅವರು, ಶಸ್ತ್ರಾಯುಧಗಳನ್ನು ಕೈಯಲ್ಲಿ ಹಿಡಿದು, ಆಕಾಶದಿಂದ ಮೇಘಗಳು ಮಳೆಯನ್ನು ಕರೆಯುವಂತೆ ಆಯುಧಗಳನ್ನು ವರ್ಷಿಸಿದರು. ಶಕ್ತಿ, ಶೂಲ, ಗದೆ, ಪರಿಘ, ವಜ್ರ, ಪಿನಾಕ, ಶತಘ್ನಿ, ಚಕ್ರಗಳೇ ಮೊದಲಾದ ಅಯುಧವರ್ಷಗಳಿಂದ ಅನೇಕ ಯೋಧರು ಸತ್ತುಬಿದ್ದರು, ಭುಸುಂಡಿಗಳು, ಕಲ್ಲುಗಳು, ದಂಡಗಳು, ಉಕ್ಕಿನಕಟ್ಟುಳ್ಳ ದೊಡ್ಡದೊಡ್ಡ ಶತಘ್ನಿಗಳು, ಇವುಗಳನ್ನು ಬೀಸಿ, ನಿನ್ನ ಸೈನ್ಯಗಳನ್ನೆಲ್ಲಾ ಅವರು ಕೊಲ್ಲುತ್ತಿದ್ದಾಗ ನಿನ್ನ ಸಮಸ್ತಸೈನ್ಯಕ್ಕೂ ಮೂರ್ಛೆಬಂದಂತಾಯಿತು. ಅನೇಕರು ತಲೆಮುರಿದು ಬಿದ್ದರು. ಅನೇಕರಿಗೆ ಮೈ ನರಗಳೆಲ್ಲ ಹೊರಕ್ಕೆ ಕಿತ್ತುಕೊಂಡುವು. ಹಲವರಿಗೆ ಶರೀರಾವಯುಗಳು ತುಂಡಾಗಿಬಿದ್ದುವು. ಆನೆಗಳು, ಕುದುರೆಗಳು, ಇವೆಲ್ಲಾ ಅಸಂಖ್ಯಾತವಾಗಿ ಸತ್ತುಬಿದ್ದುವು. ಭಯದಿಂದ ಕೈಮುಗಿದು ಬೇಡಿಕೊಂಡರೂ ಬಿಡದೆ ರಾಕ್ಷಸರು ಕೊಲ್ಲುತ್ತಿದ್ದರು. ಮಹಾರಾಜಾ! ಹೀಗೆ ಘಟೋತ್ಕಚನ ಮಾಯೆಯಿಂದ ಅನೇಕ ರಾಕ್ಷಸರು ಸುತ್ತಲೂ ಆವರಿಸಿಕೊಂಡು ಶಸ್ತ್ರವರ್ಷವನ್ನು ಕರೆಯುತ್ತಿರುವಾಗ, ಕೌರವಸೈನ್ಯಕ್ಕೆ ಉಳಿಗಾಲವಿಲ್ಲದಂತಾಯಿತು. ಕ್ಷತ್ರಿಯರಿಗೆಲ್ಲಾ ಅದೇ ಕೊನೆಗಾಲವೆಂದೂ ತೋರಿತು. ಅನೇಕಕೌರವರು ದೈನ್ಯದಿಂದ ಮೊರೆಯಿಡುತ್ತ ಓಡಲಾರಂಭಿಸದರು. ಕೆಲವರು ಅಲ್ಲಲ್ಲಿ ನಿಂತು, "ಓ ಕೌರವರೇ! ಓಡಿಹೋಗಿರಿ! ಇನ್ನು ನಾವು ಉಳಿಯುವಹಾಗಿಲ್ಲ! ಪಾಂಡವರಿಗಾಗಿ ಇಂದ್ರಾದಿದೇವತೆಗಳೇ ಬಂದು ನಮ್ಮನ್ನು ಕೊಲ್ಲುವಂತಿದೆ" ಎಂದು ಕೂಗಿಡುತ್ತಿದ್ದರು. ಹೀಗೆ ಮಹಾವಿಪತ್ತಿನಲ್ಲಿ ಮುಳುಗಿಹೋಗುತ್ತಿದ್ದ ಕೌರವಸೈನ್ಯಗಳಿಗೆ, ಸಮುದ್ರಮಧ್ಯದಲ್ಲಿ ದ್ವೀಪವಂತೆ ಕರ್ಣನು ಬೆಂಬಲವಾಗಿ ಬಂದು, ಅಭಯವನ್ನು ಕೊಟ್ಟನು. ಹೀಗೆ ಯುದ್ಧವು ಪ್ರಬಲವಾಗಿ ಕೌರವಸೈನ್ಯವೆಲ್ಲಾ ಅಲ್ಲಲ್ಲಿ ಚದರಿಹೋಗುತ್ತಿರುವಾಗ, ನಮ್ಮವರಾರು, ಶತ್ರುಗಳಾರು, ಎಂಬ ಭೇದವೇ ತಿಳಿಯಲಿಲ್ಲ. ಕಟ್ಟುಪಾಡಿಲ್ಲದೆ ಸಿಕ್ಕಿದವರು ಸಿಕ್ಕಿದಕಡೆಗೆ ಓಡುತ್ತಿದ್ದರು. ದಿಕ್ಕುಗಳೆಲ್ಲಾ ಶೂನ್ಯಪ್ರಾಯವಾಗಿ ಕಂಡುಬಂದಿತು. ಆ ಶಸ್ತ್ರವರ್ಷಕ್ಕೆ ಕರ್ಣನೊಬ್ಬನು ಮಾತ್ರ ಎದೆಗೊಟ್ಟು ನಿಂತಿದ್ದುದನ್ನು ನಾವು ಕಂಡೆವು. ಆ ರಾಕ್ಷಸನ ಮಾಯೆಯನ್ನಡಗಿಸಬೇಕೆಂದು, ಅವನು

ತನ್ನ ಬಾಣಗಳಿಂದ ಆಕಾಶವನ್ನೆಲ್ಲ ಮುಚ್ಚಿದನು. ಅಂತಹ ಭಯಂಕರ ಸ್ಥಿತಿಯಲ್ಲಿಯೂ ಎದೆಗುಂದದೆ, ಆ ಸೂತಪುತ್ರನು ದುಷ್ಕರವಾದ ಕಾರ್ಯವನ್ನು ನಡೆಸುತ್ತಿದ್ದನು. ಕರ್ಣನ ಈ ಧೈರ್ಯವನ್ನು ನೋಡಿ, ಸೈಂಧವರೂ, ಬಾಹ್ಲೀಕರೂ, ಮುಂದೇನಾಗುವುದೋ ಎಂದು ಭಯದಿಂದ ತತ್ತಳಿಸುತ್ತಿದ್ದರು. ಕರ್ಣನು ಆ ಸ್ಥಿತಿಯಲ್ಲಿಯೂ ಎದೆಗೆಡದೆ ಇದಿರಿಸಿ ನಿಂತ ಸಾಹಸವನ್ನು ಅವರು ಕೊಂಡಾಡುತ್ತಿದ್ದರೂ, ರಾಕ್ಷಸನಿಗೇ ಜಯವೆಂಬ ನಂಬಿಕೆಯು ಅವರಿಗೆ ಪೂರ್ಣವಾಗಿದ್ದಿತು ಇಷ್ಟರಲ್ಲಿ ಘಟೋತ್ಕಚನು ಚಕ್ರಗಳಿಂದ ಕೂಡಿದ ಒಂದು ದೊಡ್ಡ ಶತಘ್ನಿಯನ್ನು ಕರ್ಣನಮೇಲೆ ಪ್ರಯೋಗಿಸಿದನು. ಅದರಿಂದ ಕರ್ಣನ ನಾಲ್ಕು ರಥಾಶ್ವಗಳಿಗೂ ಹಲ್ಲುಮುರಿದು, ಕಣ್ಣು ನಾಲಗೆಗಳು ಹೊರಬಿದ್ದು, ಆ ಕುದುರೆಗಳು, ಮಂಡಿಯನ್ನೂರಿ ಕೆಳಗೆ ಬಿದ್ದು ಪ್ರಾಣವನ್ನು ಬಿಟ್ಟುವು. ಒಡನೆಯೇ ಕರ್ಣನು ತನ್ನ ರಥದಿಂದ ಕೆಳಕ್ಕೆ ಹಾರಿಬಿಟ್ಟನು. ತನ್ನ ದಿವ್ಯಾಸ್ತ್ರಗಳೆಲ್ಲಾ ರಾಕ್ಷಸಮಾಯೆಯಿಂದ ಭಗ್ನವಾಗಿ, ಕೌರವರೆಲ್ಲರೂ ತನ್ನನ್ನು ಕೈಬಿಟ್ಟು ಓಡಿಹೋದಾಗಲೂ, ಆ ಕರ್ಣನು ಸ್ವಲ್ಪವಾದರೂ ಹೆದರದೆ, ಆ ಕಾಲಕ್ಕೆ ತನಗೆ ಉಚಿತಕಾರ್ಯವೇನೆಂದು ಯೋಚಿಸುತ್ತಿದ್ದನು. ಇಷ್ಟರಲ್ಲಿಯೇ ಕೆಲವು ಕೌರವಪ್ರಧಾನರು ಕರ್ಣನನ್ನು ಕುರಿತು, "ಅಂಗರಾಜಾ! ನಮ್ಮ ಸೈನ್ಯಗಳೆಲ್ಲಾ ಅಪರಿಮಿತವಾಗಿ ಸಾಯುತ್ತಿರುವುವು. ನೀನು ನಿನ್ನಲ್ಲಿ ಇಟ್ಟುಕೊಂಡಿರುವ ಶಕ್ತ್ಯಾಯುಧದಿಂದ ಈ ರಾಕ್ಷಸನನ್ನು ಈಗಲೇ ಕೊಂದುಬಿಡು. ಇಲ್ಲದಿದ್ದರೆ ನಮಗೆ ಉಳಿಗಾಲವಿಲ್ಲ. ಭೀಮಾರ್ಜುನರಿಂದಲೂ ನಮಗೆ ಅಷ್ಟೇನೂ ಭಯವಿಲ್ಲ. ಅವರು ಇಷ್ಟನ್ನೇನೂ ಮಾಡಲಾರರು. ಆದುದರಿಂದ, ನಮ್ಮನ್ನೆಲ್ಲಾ ಕೊಲೆಮಾಡುತ್ತಿರುವ ಈ ಪಾಪಿರಾಕ್ಷಸನನ್ನು ಈ ರಾತ್ರಿಯಲ್ಲಿಯೇ ಕೊಂದುಬಿಡು. ಈಗಿನ ಭಯಂಕರಯುದ್ಧದಿಂದ ತಲೆತಪ್ಪಿಸಿಕೊಂಡರೆ, ಮುಂದೆ ಪಾರ್ಥರನ್ನೂ, ಅವರ ಸೈನ್ಯಗಳನ್ನೂ ಇದಿರಿಸಬಹುದು! ಕರ್ಣಾ! ನೀನು ನಿನಗೆ ಇಂದ್ರನಿಂದ ಲಭಿಸಿರುವ ಶಕ್ತ್ಯಾಯುಧದಿಂದ ಮೊದಲು ಈ ಭಯಂಕರ ರಾಕ್ಷಸನನ್ನು ತೀರಿಸಿಬಿಡು. ಈ ರಾಕ್ಷಸನ ಕೊಲೆಯಿಂದ ಈ ರಾತ್ರಿಯೊಳಗಾಗಿಯೇ ಕೌರವರೆಲ್ಲರೂ ಸಾಯದಂತೆ ತಪ್ಪಿಸು" ಎಂದರು. ಅತ್ತಲಾಗಿ ಆ ರಾಕ್ಷಸನ ಕೊಲೆಯೊಂದು,

ಕೌರವಸೈನ್ಯವು ಭಯದಿಂದೋಡುತ್ತಿರುವುದೊಂದು, ಇನ್ನೊಂದುಕಡೆ ಕೌರವರೆಲ್ಲರೂ ಇಂದ್ರದತ್ತವಾದ ಶಕ್ತಿಯನ್ನು ಪ್ರಯೋಗಿಸುವಂತೆ ತನ್ನವುಂದೆ ಕೂಗಿಡುತ್ತಿರುವುದೊಂದು, ಇವನ್ನೆಲ್ಲಾ ನೋಡಿ ಕರ್ಣನು ಬೇರೆ ಉಪಾಯವೇನೂ ತೋರದೆ, ಆ ಘಟೋತ್ಕಚನಮೇಲೆ ಶಕ್ತಿಯನ್ನು ಪ್ರಯೋಗಿಸುವುದಾಗಿಯೇ ನಿಶ್ಚಯಿಸಿಕೊಂಡನು. ಕೋಪಗೊಂಡ ಸಿಂಹದಂತೆ ಅವನು ಆಕ್ರುಷ್ಟನಾಗಿ, ಆ ಯುದ್ಧದಲ್ಲಿ ತನ್ನ ಸೈನ್ಯಕ್ಕಾದ ಪರಾಭವವನ್ನು ಸಹಿಸಲಾರದೆ, ಘಟೋತ್ಕಚನನ್ನು ಆಗಲೇ ವಧಿಸಬೇಕೆಂದು ನಿಶ್ಚಯಿಸಿ, ವೈಜಯಂತಿಯೆಂಬ ಹೆಸರುಳ್ಳ ಇಂದ್ರದತ್ತವಾದ ಶಕ್ತಿಯನ್ನು ಕೈಗೆತ್ತಿಕೊಂಡನು. ಓ ಮಹಾರಾಜಾ! ಯಾವ ಶಕ್ತಿಯನ್ನು ಕರ್ಣನು ಅರ್ಜುನನ ವಧಕ್ಕಾಗಿಯೇ ಅನೇಕವರ್ಷಗಳಿಂದ ಕಾಪಾಡಿ ಇಟ್ಟಿದ್ದನೋ, ಯಾವುದನ್ನು ಅವನು ಇಂದ್ರನಿಂದ ತನ್ನ ಕರ್ಣಕುಂಡಲಗಳಿಗೆ ಬದಲಾಗಿ ಪಡೆದನೋ, ಅಂತಹ ಶಕ್ತಿಯನ್ನು ಕರ್ಣನು ಕೈಗೆತ್ತಿಕೊಂಡನು. ಆ ಶಕ್ತಿಯೋ, ಅಗ್ನಿಜ್ವಾಲೆಯಿಂದ ಲೋಕವನ್ನೆಲ್ಲಾ ನುಂಗಿಬಿಡುವಂತಿರುವುದು. ಪಾಶಗಳಿಂದ ಬಿಗಿಯಲ್ಪಟ್ಟಿರುವುದು. ಅಂತಕನ ನಾಲಗೆಯಂತೆ ಭಯಂಕರವಾಗಿರುವುದು. ಮೃತ್ಯುದೇವತೆಯ ಸಹೋದರಿಯಂತೆಯೂ, ಉರಿಯುವ ಆಕಾಶದ ಕೊಳ್ಳಿಯಂತೆಯೂ ಇರುವ ಆ ಶಕ್ತಿಯನ್ನು ಕರ್ಣನು ಕೈಯ್ಯಿಂದೆತ್ತಿದಾಗ, ಜ್ವಲಿಸುತ್ತಿರುವ ಆ ಆಯುಧವನ್ನು ಕಂಡಾಗಲೇ ಘಟೋತ್ಕಚನ ಎದೆಯು ನಡುಗಿತು. ಒಡನೆಯೇ ಅವನು ಅಲ್ಲಿದ್ದರೆ ತನಗೆ ಉಳಿಗಾಲವಿಲ್ಲವೆಂದು ನಿಶ್ಚಯಿಸಿ, ವಿಂಧ್ಯಪರ್ವತಕ್ಕೆ ಸಮಾನವಾದ ಆಕಾರವನ್ನು ತಾಳಿ, ಓಡುವುದಕ್ಕಾರಂಭಿಸಿದನು. ಕರ್ಣನ ಕೈಯಲ್ಲಿದ್ದ ಆ ಶಕ್ತಿಯನ್ನು ಕಂಡು ಭೂವ್ಯಂತರಿಕ್ಷದಲ್ಲಿರುವ ಭೂತಗಳೆಲ್ಲವೂ ಹಾಹಾಕಾರಮಾಡಿದುವು. ದೊಡ್ಡ ಬಿರುಗಾಳಿಯು ಬೀಸಿತು! ಭಯಂಕರವಾದ ಸಿಡಿಲು ಆಕಾಶದಿಂದ ನೆಲಕ್ಕೆ ಬಡಿದಂತಾಯಿತು? ಆ ಶಕ್ತಿಯು ರಾಕ್ಷಸಮಾಯೆಯನ್ನೆಲ್ಲಾ ಭಂಗಿಸಿ, ನೆಟ್ಟಗೆ ಬಂದು ಘಟೋತ್ಕಚನ ಎದೆಗೆ ತಾಗಿ ಅವನ ಹೃದಯವನ್ನು ಭೇದಿಸಿತು. ತಿರುಗಿ ದೊಡ್ಡಜ್ವಾಲೆಯೊಡನೆ ಅಂತರಿಕ್ಷಮಾರ್ಗವಾಗಿ ಹೊರಟು ನಕ್ಷತ್ರಗಳ ನಡುವೆ ಅದೃಶ್ಯವಾಯಿತು. ಓ ಮಹಾರಾಜಾ! ಆಗ ಆ ಶಕ್ತಿಯು ಪ್ರಭಾವದಿಂದ ಹೊರಟ ದಿವ್ಯ, ನಾಗ, ಮಾನುಷಾದ್ಯಸ್ತ್ರಸಮೂಹಗಳಿಂದ ಭೇದಿಸ

ಲ್ಪಟ್ಟ ದೇಹವುಳ್ಳವನಾಗಿ ಘಟೋತ್ಕಚನು ಭೈರವಧ್ವನಿಯಿಂದ ಕೂಗುತ್ತ ಪ್ರಾಣಗಳನ್ನು ತೊರೆದನು. ಘಟೋತ್ಕಚನು ಆ ಶಕ್ತಿಯಿಂದ ಮೈಮುರಿದು ಬಿದ್ದಮೇಲೆಯೂ, ತನ್ನ ಶತ್ರುಗಳ ನಾಶಕ್ಕಾಗಿ ಇನ್ನೂ ವಿಚಿತ್ರವೂ, ಆಶ್ಚರ್ಯಕರವೂ ಆದ ರೂಪಗಳನ್ನು ತೋರಿಸುತ್ತ ಸರ್ಪದಂತೆಯೂ, ಮೇಘದಂತೆಯೂ ಕಾಣಿಸಿದನು. ಆ ಶಕ್ತಿಯಿಂದ ತಾಡಿತನಾದಮೇಲೆ ಅವನು ಮೇಲೆ ಹಾರಿ, ಅಂತರಿಕ್ಷದಿಂದ ಗತಪ್ರಾಣನಾಗಿ ಬಿದ್ದನು. ಅವನ ಶರೀರವು ನಿಶ್ಚೇಷ್ಟವಾಯಿತು. ನಾಲಗೆಯು ಕಿತ್ತುಹೋಯಿತು. ಅವನು ಕಾಲು ಮೇಲಾಗಿ ತಲೆಕೆಳಗಾಗಿ ಅಂತರಿಕ್ಷದಿಂದ ಮಹತ್ತಾದ ಭೂತಾಕಾರದೊಡನೆ ನೆಲಕ್ಕೆ ಬಿದ್ದನು. ರಾಜಾ! ಭಯಂಕರಕಾರ್ಯವುಳ್ಳ ಆ ಘಟೋತ್ಕಚನು, ತಾನು ಸತ್ತಮೇಲೆಯೂ ಪಾಂಡವರಿಗೆ ಹಿತವನ್ನುಂಟುಮಾಡಬೇಕೆಂಬ ಉದ್ದೇಶದಿಂದಲೇ ಹಾಗೆ ತನ್ನ ಆಕಾರವನ್ನು ಮಿತಿಮೀರಿದ ಪ್ರಮಾಣಕ್ಕೆ ದೊಡ್ಡದಾಗಿಸಿ, ನಿನ್ನ ಸೈನ್ಯದಲ್ಲಿ ಆಕ್ಷೋಹಿಣಿಯಷ್ಟು ಸೈನ್ಯವು ತನ್ನ ದೇಹದ ಕೆಳಗೆ ಸಿಕ್ಕಿ ಸಾಯುವಂತೆ ಕೆಳಕ್ಕೆ ಬಿದ್ದನು. ಘಟೋತ್ಕಚನ ಮಾಯೆಯೆಲ್ಲವೂ ಭಗ್ನವಾಗಿ, ಆ ರಾಕ್ಷಸನು ಹತನಾದುದನ್ನು ನೋಡಿ, ಕೌರವರೆಲ್ಲರೂ ಸಂತೋಷದಿಂದ ದೊಡ್ಡ ಸಿಂಹನಾದಗಳನ್ನು ಮಾಡಿದರು. ಭೇರಿ, ಶಂಖ, ಮುರಜ, ಮೊದಲಾದ ವಾದ್ಯಗಳು ಮೊಳಗಿದುವು. ವೃತ್ರವಧವಾದಮೇಲೆ ಇಂದ್ರನು ದೇವತೆಗಳಿಂದ ಪೂಜಿಸಲ್ಪಡುವಂತೆ, ಕರ್ಣನು ಕುರುಗಳಿಂದ ಪೂಜಿಸಲ್ಪಡುತ್ತ, ನಿನ್ನ ಮಗನ ರಥವನ್ನೇರಿ ಸಂತೋಷದಿಂದ ತನ್ನ ಸೈನ್ಯವಿದ್ದಕಡೆಗೆ ಹೊರಟುಹೋದನು.

ಇದು ನೂರಎಂಭತ್ತನೆಯ ಅಧ್ಯಾಯವು.



ಘಟೋತ್ಕಚವಧಕ್ಕಾಗಿ ಪಾಂಡವರು ಕಡೆಯುವರೆಲ್ಲರೂ, ಮಹತ್ತಾದ ದುಃಖಕ್ಕೊಳಗಾಗಿರುವಾಗ, ಕೃಷ್ಣನುಮಾತ್ರ ಸಂತೋಷದಿಂದ ಬಂದು ಅರ್ಜುನನನ್ನು ಆಲಿಂಗಿಸಿಕೊಂಡುದು. ಅರ್ಜುನನು ಆ ಸಂತೋಷಕ್ಕೆ ಕಾರಣವೇನೆಂದು ಕೇಳಲು, ಕೃಷ್ಣನು ಅದಕ್ಕೆ ಪ್ರತ್ಯುತ್ತರವಾಗಿ ಕರ್ಣನ ಪ್ರಭಾವವನ್ನು ತಿಳಿಸಿದುದು.

ಆಗ ಧೃತರಾಷ್ಟ್ರನು ಸಂಜಯನನ್ನು ಕುರಿತು "ಮಹಾ ತೇಜಸ್ವಿಯೂ, ಮಹಾಮಾಯಾವಿಯೂ ಆದ ಆ ರಾಕ್ಷಸನ ವಧದಿಂದ ಕುಪಿತರಾದ ಪಾಂಡವರು ಅನಂತರ ಮಾಡಿದುದೇನು? ಅಲ್ಲದೆ, ಆ ಯುದ್ಧದಲ್ಲಿ ಕರ್ಣನಿಂದ ತಮ್ಮ ಸೈನ್ಯವೆಲ್ಲವೂ ಭಗ್ನವಾದುದನ್ನು ನೋಡಿ, ಅವರ ಮುಂದಿನ ಆಲೋಚನೆಯೇನಾಯಿತು? ಸೇನಾವ್ಯೂಹವನ್ನು ರಚಿಸಿ ಯುದ್ಧಕ್ಕೆ ಸಿದ್ಧನಾಗಿದ್ದ ದ್ರೋಣನನ್ನು ಇದಿರಿಸುವುದಕ್ಕಾಗಿ ಹೋದ ಪಾಂಚಾಲರೂ, ಸೃಂಜಯರೂ ಏನನ್ನು ಮಾಡಿದರು? ಭೂರಿಶ್ರವಸ್ಸಿನ ಮತ್ತು ಸೈಂಧವನ ವಧದಿಂದ ಕುಪಿತನಾಗಿ, ತನ್ನ ಪ್ರಾಣದಮೇಲೆಯೂ ಆಸೆಯನ್ನು ಬಿಟ್ಟು, ಪಾಂಡವಸೈನ್ಯವನ್ನು ಧ್ವಂಸಮಾಡುವುದಕ್ಕಾಗಿ, ಆಕಳಿಸುವ ಹುಲಿಯಂತೆಯೂ, ಬಾಯನ್ನು ತೆರೆದು ಬರುವ ಕಾಲಯಮನಂತೆಯೂ ಭಯಂಕರನಾದ ಆ ದ್ರೋಣನನ್ನು ಪಾಂಡವಸೃಂಜಯರು ಹೇಗೆ ಇದಿರಿಸಿದರು? ಆ ಆಚಾರ್ಯನಿಗೆ ಬೆಂಬಲವಾಗಿ ಹೋದ ಕರ್ಣದುರ್ಯೋಧನರೂ, ಕೃಪಾಶ್ವತ್ಥಾಮರೂ ಯುದ್ಧದಲ್ಲಿ ಮಾಡಿದುದೇನು? ದ್ರೋಣನನ್ನು ಕೊಲ್ಲಬೇಕೆಂಬ ಸಂಕಲ್ಪದಿಂದ ಹೊರಟ ಭೀಮಾರ್ಜುನರು ಯುದ್ಧದಲ್ಲಿ ನಮ್ಮವರನ್ನು ಹೇಗೆ ಇದಿರಿಸಿದರು? ಸೈಂಧವವಧದಿಂದ ನಮ್ಮವರೂ, ಘಟೋತ್ಕಚವಧದಿಂದ ಪಾಂಡವರೂ ಸಮಾನವಾದ ಕೋಪಾವೇಶದಿಂದ ಬಂದಿರಬೇಕಲ್ಲವೆ? ಆ ಕೋಪದಿಂದ ಅವರು ಯುದ್ಧಮಾಡಿದ ರೀತಿಯನ್ನೆಲ್ಲಾ ನನಗೆ ತಿಳಿಸು" ಎಂದನು. ಅದಕ್ಕಾ ಸಂಜಯನು "ರಾಜಾ! ಕೇಳು. ಪರ್ವತವು ಭಿನ್ನವಾಗಿ ಬಿದ್ದಂತೆ, ಘಟೋತ್ಕಚನ ದೇಹವು ಬಿದ್ದುಹೋದುದನ್ನು ನೋಡಿ, ಪಾಂಡವರೆಲ್ಲರೂ ದುಸ್ಸಹವಾದ ವ್ಯಸನದಿಂದ ಕಣ್ಣೀರನ್ನು ಬಿಡುತ್ತಿದ್ದರು. ಹೀಗೆ ಎಲ್ಲರೂ ಅಳುತ್ತಿರುವಾಗ, ಶ್ರೀಕೃಷ್ಣನೊಬ್ಬನುಮಾತ್ರ ಮಹತ್ತಾದ ಸಂತೋಷದಿಂದ

ಬೇರೆ ಎಲ್ಲರ ಮನಸ್ಸಿಗೂ ಸಂಕಟವುಂಟಾಗುವಂತೆ ದೊಡ್ಡ ಸಿಂಹನಾದವನ್ನು ಮಾಡಿದನು. ಹೀಗೆ ಸಿಂಹನಾದವನ್ನು ಮಾಡಿ, ತನ್ನ ಕೈಯಲ್ಲಿದ್ದ ಕುದುರೆಯ ಹಗ್ಗವನ್ನೂ, ಚಾಟಿಯನ್ನೂ ರಥದಲ್ಲಿ ಸಿಕ್ಕಿಸಿ, ಥಟ್ಟನೆ ಬಂದು ಅರ್ಜುನನನ್ನಾಲಿಂಗಿಸಿಕೊಂಡನು. ಪಾಂಡವರೆಲ್ಲರ ಮುಂದೆ ಸಂತೋಷದಿಂದ ಮೈತಿಳಿಯದೆ ಕುಣಿಯಲಾರಂಭಿಸಿದನು. ಆಗಾಗ ಸಿಂಹನಾದವನ್ನು ಮಾಡುವನು! ಬಾರಿಬಾರಿಗೂ ಅರ್ಜುನನ ಬೆನ್ನನ್ನು ತಟ್ಟಿ, ಅವನನ್ನು ಅಪ್ಪಿಕೊಳ್ಳುವನು! ಹೀಗೆ ಕೃಷ್ಣನು ಸಂತೋಷದಿಂದ ಕುಣಿದಾಡುತ್ತಿರುವುದನ್ನು ನೋಡಿ, ಅರ್ಜುನನು ಕಾರಣವನ್ನು ತಿಳಿಯದೆ, ಮನಸ್ಸಿನಲ್ಲಿ ಕೊರಗುತ್ತ, ಅವನನ್ನು ಹೀಗೆಂದು ಪ್ರಶ್ನೆಮಾಡುವನು. "ಓ ವಾಸುದೇವಾ! ಘಟೋತ್ಕಚನ ವಧದಿಂದ ನಮ್ಮವರೆಲ್ಲರೂ ದುಃಖಿಸುತ್ತಿರುವಾಗ, ನೀನು ಮಾತ್ರ ಹೀಗೆ ಅತ್ಯಂತಹರ್ಷಿತನಾದುದೇಕೆ? ಇಂತಹ ಮಹಾದುಃಖವು ನಮಗೆ ಪ್ರಾಪ್ತವಾಗಿರುವಾಗ, ಅಕಾಲದಲ್ಲಿ ನಿನಗೆ ಇಷ್ಟು ಸಂತೋಷವೇಕೆ? ಘಟೋತ್ಕಚನ ವಧವನ್ನು ನೋಡಿ, ನಮ್ಮ ಸೈನ್ಯವೆಲ್ಲಾ ಯುದ್ಧದಿಂದ ಹಿಂತಿರುಗುತ್ತಿರುವುವು! ನಾವೂ ನಮ್ಮ ಪುತ್ರವಧಕ್ಕಾಗಿ ಮಹತ್ತಾದ ಸಂಕಟದಿಂದ ಕೊರಗುತ್ತಿರುವೆವು. ಈ ಸ್ಥಿತಿಯಲ್ಲಿ ನೀನು ಇಷ್ಟು ಸಂತೋಷಪಡುವುದಕ್ಕೆ ಏನೋ ಪ್ರಬಲಕಾರಣವಿರಬೇಕು! ಓ ಪ್ರಭೂ! ಇದರಲ್ಲಿ ರಹಸ್ಯವೇನೂ ಇಲ್ಲದಿದ್ದರೆ, ಅದನ್ನು ನನಗೆ ಹೇಳಬಹುದಾಗಿದ್ದರೆ, ಇದರ ನಿಜಾಂಶವನ್ನು ನನಗೆ ತಿಳಿಸಬೇಕು. ನಮ್ಮ ಕಡೆಗೆ ಇಂತಹ ಅಪಜಯವುಂಟಾಗಿರುವಾಗ ನೀನು ಇಷ್ಟು ಹರ್ಷವನ್ನು ತೋರಿಸಿ, ನಮ್ಮ ಧೈರ್ಯವನ್ನು ಕುಂದಿಸುವ ಕಾರಣವೇನು? ಓ ಜನಾರ್ದನಾ! ಈಗ ನಿನ್ನ ಈ ವಿಪರೀತ ವರ್ತನವು ಸಮುದ್ರಶೋಷಣದಂತೆಯೂ, ಮೇರುವಿನ ಚಲನದಂತೆಯೂ ನಮಗೆ ಆಶ್ಚರ್ಯವನ್ನುಂಟುಮಾಡುತ್ತಿದೆ" ಎಂದನು. ಆಗ ಕೃಷ್ಣನು "ಧನಂಜಯಾ! ಅದು ವಾಸ್ತವವೇ! ಈಗ ನನ್ನ ಸಂತೋಷಕ್ಕೆ ಪಾರವೇ ಇಲ್ಲದಂತಿದೆ. ನನ್ನ ಮನಸ್ಸಿಗೆ ಅತ್ಯಂತ ಪ್ರಸನ್ನತೆಯುಂಟಾಗಿದೆ. ನಾನು ಮಾಡಿದ ತಂತ್ರವೂ ಇದಕ್ಕಾಗಿಯೇ! ನಿನ್ನ ವಧಕ್ಕಾಗಿ ಕರ್ಣನು ಕಾಪಾಡಿಟ್ಟಿದ್ದ ಶಕ್ತಿಯನ್ನು ಘಟೋತ್ಕಚನಮೇಲೆ ಬಿಡುವಂತೆ ಮಾಡಿದುದರಿಂದ, ಈಗ ನನ್ನ ಮನಸ್ಸಿಗೆ ಶಾಂತಿಯುಂಟಾಯಿತು. ಅರ್ಜುನಾ! ಇನ್ನು ನಿನ್ನಿಂದ

ಕರ್ಣನು ಹತನಾದಂತೆಯೇ ತಿಳಿ! ಶಕ್ತಿಧರನಾದ ಕಾರ್ತಿಕೇಯನಂತೆ, ಆ ಕರ್ಣನು ಆ ಶಕ್ತಿಯನ್ನು ಹಿಡಿದು ಯುದ್ಧದಲ್ಲಿ ನಿಂತಿದ್ದಾಗ, ಈ ಲೋಕದಲ್ಲಿ ಅವನ ಮುಂದೆ ನಿಲ್ಲತಕ್ಕ ಸಮರ್ಥನೊಬ್ಬನೂ ಇಲ್ಲವೆಂದು ತಿಳಿ. ಅಂತಹ ಶಕ್ತಿಯು ದೈವಯೋಗದಿಂದ ಆ ಘಟೋತ್ಕಚನಮೇಲೆ ಬೀಳುವಂತಾಯಿತು. ಇದಲ್ಲದೆ ಆ ಕರ್ಣನು ತನಗೆ ಜನ್ಮಸಿದ್ಧಗಳಾದ ಕವಚಕುಂಡಲಗಳೊಡನೆ ಯುದ್ಧಕ್ಕೆ ಬಂದಿದ್ದರೂ, ದೇವತೆಗಳಿಂದೊಡಗೂಡಿದ ಮೂರು ಲೋಕಗಳನ್ನೂ ಅವನೊಬ್ಬನೇ ಜಯಿಸಿಬಿಡುತ್ತಿದ್ದನು. ದೈವಯೋಗದಿಂದ ಅವನು ಆ ಕವಚಕುಂಡಲಗಳನ್ನೂ ಅಗಲುವಂತಾಯಿತು. ಅರ್ಜುನಾ! ಇಂದ್ರನಾಗಲಿ, ಕುಬೇರನಾಗಲಿ, ವರುಣನಾಗಲಿ, ಯಮನಾಗಲಿ ಆ ಕರ್ಣನಿಗಿದಿರಾಗಿ ನಿಂತು ಜಯಿಸಲಾರರು. ಅಷ್ಟೇಕೆ? ನೀನು ಗಾಂಡೀವವನ್ನೂ, ನಾನು ನನ್ನ ಸುದರ್ಶನಚಕ್ರವನ್ನೂ ಹಿಡಿದು ಯುದ್ಧದಲ್ಲಿ ಅವನಿಗಿದಿರಾದರೂ, ಆ ಕವಚಕುಂಡಲಗಳೊಡಗೂಡಿದ ಕರ್ಣನನ್ನು ಜಯಿಸುವುದು ನಮಗೂ ಸಾಧ್ಯವಿರುತ್ತಿರಲಿಲ್ಲ. ನಿನ್ನ ಹಿತಕ್ಕಾಗಿಯೇ ಇಂದ್ರನು ತಂತ್ರದಿಂದ ಕರ್ಣನ ಕವಚಕುಂಡಲಗಳನ್ನು ಅವನಿಂದ ತೆಗೆದುಕೊಂಡು, ಅವನನ್ನು ಕವಚಹೀನನನ್ನಾಗಿ ಮಾಡಿಟ್ಟನು. ತನ್ನ ದೇಹದೊಡನೆಯೇ ಚರ್ಮದಂತೆ ಅಂಟಿಕೊಂಡಿದ್ದ ಕವಚಕುಂಡಲಗಳನ್ನು ಅವನು ದೇಹದಿಂದ ಕತ್ತರಿಸಿ ಸುಲಿದುಕೊಟ್ಟುದುದರಿಂದಲೇ, ಅವನಿಗೆ ವೈಕರ್ತನನೆಂಬ ಹೆಸರು ಪ್ರಸಿದ್ಧವಾಯಿತು. ಈಗ ಅವನು ಮಂತ್ರಶಕ್ತಿಯಿಂದ ಸ್ತಂಭಿಸಲ್ಪಟ್ಟ ಸರ್ಪದಂತೆಯೂ, ಉರಿಯಡಗಿ ಶಾಂತವಾದ ಅಗ್ನಿಯಂತೆಯೂ ಆಗಿರುವನು. ಆದರೆ, ಓ ಅರ್ಜುನಾ! ಆ ಕರ್ಣನು ಇಂದ್ರನಿಗೆ ತಾನು ಕೊಟ್ಟ ಕವಚಕುಂಡಲಗಳಿಗೆ ಪ್ರತಿಯಾಗಿ, ಅವನಿಂದ ಯಾವಾಗ ಶಕ್ತಿಯನ್ನು ಗ್ರಹಿಸಿದನೋ, ಅದುಮೊದಲು "ನೀನು ತನ್ನ ಕೈಯ್ಯಿಂದ ಹತನಾದಂತೆಯೇ" ಎಂದು ಅವನು ಬಹಳ ನಂಬಿಕೆಯಿಂದಿದ್ದನು. ಆ ಶಕ್ತಿಯು ಈಗ ಘಟೋತ್ಕಚನಲ್ಲಿ ಪ್ರಯೋಗಿಸಲ್ಪಟ್ಟಿತು. ಈಗ ಅವನಿಗೆ ಇಂದ್ರದತ್ತವಾದ ಶಕ್ತಿಯೂ ಹೋಯಿತು. ಕವಚಕುಂಡಲಗಳೂ ಹೋದುವು. ಈ ಸ್ಥಿತಿಯಲ್ಲಿದ್ದರೂ, ಈಗಲೂ ಅವನನ್ನು ಕೊಲ್ಲುವುದಕ್ಕೆ ನಿನ್ನಿಂದಹೊರತು ಬೇರೆ ಯಾವನಿಂದಲೂ ಸಾಧ್ಯವಿಲ್ಲ. ಅರ್ಜುನಾ! ನಾನು ಸತ್ಯವಾಗಿ

ಹೇಳುವೆನು. ಆ ಕರ್ಣನಂತೆ ಬಲಶಾಲಿಯಿಲ್ಲ! ಅವನಂತೆ ಗುಣಾಢ್ಯನೂ ಇಲ್ಲ! ಅವನು ಬ್ರಾಹ್ಮಣಪ್ರಿಯನು! ತಪಸ್ವಿ! ವ್ರತನಿಷ್ಠನು! ಶತ್ರುಗಳಲ್ಲಿಯೂ ದಯೆಯುಳ್ಳವನು! ಅದರಿಂದಲೇ ಅವನು ವೃಷನೆಂದು(ಧರ್ಮಸ್ವರೂಪನೆಂದು) ಕೀರ್ತಿಸಲ್ಪಡುವನು. ಅವನು ಯುದ್ಧಸಮರ್ಥನು! ಮಹಾಬಾಹುವುಳ್ಳವನು! ಯಾವಾಗಲೂ ಧನುಸ್ಸನ್ನು ಧರಿಸಿದವನು! ಕಾಡಿನಲ್ಲಿ ತನ್ನ ಗರ್ಜನೆಯಿಂದ ಮದದಾನೆಗಳನ್ನೆಲ್ಲ ನಡುಗಿಸುವ ಸಿಂಹದಂತೆ, ಅವನು ಯುದ್ಧದಲ್ಲಿ ಮಹಾರಥಿಕರನ್ನೆಲ್ಲ ಅಡಗಿಸತಕ್ಕವನು. ಬಾಣಗಳೆಂಬ ಸಹಸ್ರಕಿರಣಗಳಿಂದ ಕೂಡಿ, ಆ ಕರ್ಣನು ಶರತ್ಕಾಲದಲ್ಲಿ ಮಧ್ಯಾಹ್ನಗತನಾದ ಸೂರ್ಯನಂತೆ ಜ್ವಲಿಸುವನು. ಅಂತವನನ್ನು ನಿನ್ನಕಡೆಯ ಯೋಧರು ಕಣ್ಣಿಂದ ನೋಡುವುದಕ್ಕೂ ಅಶಕ್ತರೆಂದು ತಿಳಿ. ಬೇಸಗೆಯು ಮುಗಿದಮೇಲೆ ವರ್ಷಾರಂಭದಲ್ಲಿ ಮೇಘವು ಜಲಧಾರೆಯನ್ನು ಕರೆಯುವಂತೆ ಆ ಕರ್ಣನು ದಿವ್ಯಾಸ್ತ್ರಗಳೆಂಬ ವೃಷ್ಟಿಯನ್ನು ಕರೆಯುವನು. ದೇವತೆಗಳು ಗುಂಪಾಗಿ ಬಂದು ನಾನಾಕಡೆಗಳಿಂದ ಶರವರ್ಷವನ್ನು ಕರೆದರೂ, ಅವನನ್ನು ಜಯಿಸಲು ಸಾಧ್ಯವಿಲ್ಲ. ರಕ್ತಮಾಂಸಗಳನ್ನೇ ವರ್ಷಿಸತಕ್ಕ ರಾಕ್ಷಸರಿಂದಲೂ ಅವನನ್ನು ಜಯಿಸಲು ಸಾಧ್ಯವಲ್ಲ. ಆದರೆ ಅರ್ಜುನಾ! ಆ ಕರ್ಣನಿಗೆ ಸಹಜವಾದ ಕವಚಕುಂಡಲಗಳೆರಡೂ ಅಗಲಿಹೋದುದರಿಂದ ಈಗ ಅವನು ಮನುಷ್ಯತ್ವವನ್ನು ಹೊಂದಿರುವನು ಇಂದ್ರದತ್ತವಾದ ಶಕ್ತಿಯೂ ಈಗ ಅವನ ಕೈಬಿಟ್ಟುಹೋಯಿತು. ಈ ಸ್ಥಿತಿಯಲ್ಲಿಯೂ ಅವನನ್ನು ನೀನು ಸಾಮಾನ್ಯಯುದ್ಧದಲ್ಲಿ ಜಯಿಸಲಾರೆ. ಅವನನ್ನು ಕೊಲ್ಲುವುದಕ್ಕೆ ಒಂದೇ ಉಪಾಯವುಂಟು. ಅವನು ಯುದ್ಧಕಾರ್ಯದಿಂದ ಎಚ್ಚರತಪ್ಪಿದ್ದ ಕಾಲದಲ್ಲಿ ನೀನು ಅತ್ಯಂತಜಾಗರೂಕತೆಯಿಂದ ಅವನನ್ನು ವಧಿಸಬೇಕು. ಆ ಕರ್ಣನ ರಥಚಕ್ರವು ಭೂಮಿಯಲ್ಲಿ ಹೂತುಹೋಗುವ ಸಂಭವವುಂಟು. ಅಂತಹ ಸಮಯವನ್ನು ನೋಡಿ ನೀನು ಅವನನ್ನು ವಧಿಸಬೇಕು. ಅರ್ಜುನಾ! ಅವನು ಅಂತಹ ಕಷ್ಟಕ್ಕೆ ಸಿಕ್ಕಿರುವ ಸಮಯದಲ್ಲಿ ನಾನು ಸಂಜ್ಞೆಯನ್ನು ಮಾಡುವೆನು. ಬಲವೈರಿಯಾದ ಇಂದ್ರನು ವಜ್ರಪಾಣಿಯಾಗಿ ಬಂದರೂ, ಯುದ್ಧದಲ್ಲಿ ಅಸ್ತ್ರಧಾರಿಯಾದ ಆ ಕರ್ಣನನ್ನು ಕೊಲ್ಲಲಾರನು. ಅವನು ಎಂಥವರಿಗೂ ಜಯಿಸಲಸಾಧ್ಯನು. ಧನಂಜಯ

ಯಾ! ಜರಾಸಂಧನು, ಶಿಶುಪಾಲನು, ಬೇಡನಾದ ಏಕಲವ್ಯನು, ಇವರನ್ನೆಲ್ಲಾ ನಾನು ನಿನ್ನ ಹಿತಕ್ಕಾಗಿ ಬೇರೆಬೇರೆ ಉಪಾಯಗಳಿಂದ ಕೊಲ್ಲಬೇಕಾಯಿತು. ಅವರನ್ನು ಪ್ರತ್ಯೇಕಪ್ರತ್ಯೇಕವಾಗಿ ನಾನೇ ತಂತ್ರದಿಂದ ಕೊಲ್ಲಿಸಿದೆನು. ಇದರಂತೆಯೇ ಬಕ, ಕಿಮ್ಮೀರ, ಹಿಡಿಂಬಾದಿ ರಾಕ್ಷಸರೂ, ಅಲಾಯುಧನೂ, ಘಟೋತ್ಕಚನೂ, ಆಯಾ ಕಾಲಕ್ಕೆ ತಕ್ಕಂತೆ ಒಂದೊಂದುನೆವದಿಂದ ವಧಿಸಲ್ಪಟ್ಟರೆಂದು ತಿಳಿ" ಎಂದನು.

ಇದು ನೂರ ಎಂಭತ್ತೊಂದನೆಯ ಅಧ್ಯಾಯವು.

---

ಶ್ರೀ ಕೃಷ್ಣನು ಜರಾಸಂಧಾದಿಗಳ ಅಸಾಧಾರಣ ಪರಾಕ್ರಮವನ್ನು ಅರ್ಜುನನಿಗೆ ತಿಳಿಸಿ, ಅವರ ವಧಕ್ಕಾಗಿ ತಾನು ಮಾಡಿದ ಬೇರೆಬೇರೆ ತಂತ್ರಗಳನ್ನು ವಿವರವಾಗಿ ತಿಳಿಸಿದುದು.

ಆಗ ಅರ್ಜುನನು ಕೃಷ್ಣನನ್ನು ಕುರಿತು, "ವಾಸುದೇವಾ! ನನ್ನ ಹಿತಕ್ಕಾಗಿ ನೀನು ಜರಾಸಂಧಾದಿಗಳನ್ನು ಬೇರೆಬೇರೆಯಾಗಿ ಕೊಂದೆನೆಂದು ಹೇಳಿದೆಯಲ್ಲವೆ? ಅವರನ್ನು ಕೊಲ್ಲುವುದರಿಂದ ನಮಗೆ ಹೇಗೆ ಹಿತವೆಂಬುದನ್ನೂ, ನೀನು ಆಗಾಗ ನಡೆಸಿದ ತಂತ್ರಗಳನ್ನೂ ತಿಳಿಸಬೇಕು" ಎನಲು, ಕೃಷ್ಣನು "ಅರ್ಜುನಾ! ಜರಾಸಂಧನೂ, ಶಿಶುಪಾಲನೂ, ಏಕಲವ್ಯನೂ, ಈಗ ಬದುಕಿದ್ದರೆ, ನಿನಗೆ ಅವರಿಂದ ತಪ್ಪದೆ ಮಹಾಭಯವುಂಟಾಗುತ್ತಿದ್ದಿತು. ಆ ಮೂವರೂ ಮಹಾರಥಿಕರು. ದುರ್ಯೋಧನನು ಈಗಿನ ಯುದ್ಧದಲ್ಲಿ ಅವರನ್ನು ತನ್ನ ಕಡೆಗೆ ಸೆಳೆದುಕೊಳ್ಳದೆ ಬಿಟ್ಟಿರಲಾರನು. ಆ ಮೂವರೂ ನಮ್ಮಲ್ಲಿ ನಿತ್ಯದ್ವೇಷವುಳ್ಳವರಾಗಿದ್ದರು. ನಮಗೆ ವಿರುದ್ಧವಾಗಿ ಅವರು ಕೌರವರನ್ನು ಸೇರುತ್ತಲಿದ್ದರು. ಅವರೋ ಮಹಾಧನುರ್ಧಾರಿಗಳು. ಎಲ್ಲಾ ಅಸ್ತ್ರಗಳಲ್ಲಿಯೂ ಪರಿಶ್ರಮವುಳ್ಳವರು. ಧೃಢವಾಗಿ ನಿಂತು ಯುದ್ಧ ಮಾಡತಕ್ಕವರು. ಅವರು ಕೌರವಸೈನ್ಯವನ್ನು ದೇವತೆಗಳಂತೆ ನಿರಪಾಯವಾಗಿ ರಕ್ಷಿಸದೆ ಬಿಟ್ಟಿರಲಾರರು. ಕರ್ಣನೊಡನೆ ಸೇರಿ ಆ ಮೂವರೂ, ದುರ್ಯೋಧನನ ಹಿತಕ್ಕಾಗಿ ಈ ಸಮಸ್ತಭೂಮಿಯನ್ನೂ ತಮ್ಮ ಪರಾಕ್ರಮ

ದಿಂದ ತಾಪಗೊಳಿಸಬಲ್ಲರು. ಧನಂಜಯಾ! ಅವರನ್ನು ತಂತ್ರದಿಂದಲ್ಲದೆ ಬೇರೆ ವಿಧವಾಗಿ ಜಯಿಸಲು ದೇವತೆಗಳಿಂದಲೂ ಸಾಧ್ಯವಿಲ್ಲ. ಆ ನಾಲ್ವರಲ್ಲಿ ಒಬ್ಬೊಬ್ಬರೇ ಬೇರೆಬೇರೆಯಾಗಿ ಸಮಸ್ತ ಶತ್ರುಸೈನ್ಯಗಳನ್ನೂ ನಾಶಮಾಡಬಲ್ಲವರು. ಲೋಕಪಾಲರಿಂದ ರಕ್ಷಿತವಾಗಿದ್ದ ಸೈನ್ಯಗಳೂ ಅವರ ಮುಂದೆ ನಿಲ್ಲಲಾರವು. ಅವರನ್ನೆಲ್ಲಾ ನಾನು ಯಾವಯಾವ ಉಪಾಯಗಳಿಂದ ಕೊಲ್ಲಿಸಿದೆನೆಂದು ತಿಳಿಸುವೆನು ಕೇಳು. ಬಲರಾಮನಿಂದ ತಿರಸ್ಕೃತನಾಗಿ ಕೋಪಗೊಳಿಸಲ್ಪಟ್ಟ ಜರಾಸಂಧನು, ನಮ್ಮನ್ನು ಕೊಲ್ಲುವುದಕ್ಕಾಗಿ ಸರ್ವಸಂಹಾರಕವಾದ ಒಂದು ಗದೆಯನ್ನು ಪ್ರಯೋಗಿಸಿದನು. ಇಂದ್ರಪ್ರಯುಕ್ತವಾದ ವಜ್ರಾಯುಧದಂತೆ, ಆ ಗದೆಯು ತನ್ನ ಜ್ವಾಲೆಯಿಂದ ಆಕಾಶವನ್ನೇ ಸೀಳುವಂತೆ, ನಮಗಿದಿರಾಗಿ ವೇಗದಿಂದ ಬರುತ್ತಿದ್ದಿತು. ಆಗ ಬಲರಾಮನು ಆ ಗದೆಯನ್ನು ಮುರಿಯಬೇಕೆಂದು ಸ್ಥೂಣಾಕರ್ಣವೆಂಬ ಒಂದು ಮಹಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರದ ವೇಗದಿಂದ ಪ್ರತಿಹತವಾಗಿ ಆ ಗದೆಯು ಭೂಮಿಯನ್ನು ಭೇದಿಸುವಂತೆಯೂ, ಪರ್ವತಗಳನ್ನು ನಡುಗಿಸುವಂತೆಯೂ ಕೆಳಗೆ ಬಿದ್ದಿತು. ಅರ್ಜುನಾ! ಅದರಲ್ಲಿ ಮಹಾಬಲವುಳ್ಳ ಜರೆಯೆಂಬ ಘೋರರಾಕ್ಷಸಿಯೊಬ್ಬಳು ಅಡಗಿದ್ದಳು. ಇಬ್ಬರು ತಾಯಿಯರ ಹೊಟ್ಟೆಯಿಂದ ಬೇರೆಬೇರೆ ಅರ್ಧಭಾಗಗಳಾಗಿ ಹುಟ್ಟಿದ ಒಂದು ಶಿಶುವಿನ ದೇಹದ ಹೋಳುಗಳನ್ನು ಒಂದಾಗಿ ಸೇರಿಸಿ, ಒಂದು ಶಿಶುವನ್ನಾಗಿ ಮಾಡಿಟ್ಟವಳೇ ಆ ಜರೆಯೆಂಬ ರಾಕ್ಷಸಿ! ಆದರಿಂದಲೇ ಅವನಿಗೆ ಜರಾಸಂಧನು" ಎಂದರೆ, "ಜರೆಯಿಂದ ಜೋಡಿಸಲ್ಪಟ್ಟವನು" ಎಂಬ ಹೆಸರಾಯಿತು. ಆ ಗದೆಯೊಡನೆ ರಾಕ್ಷಸಿಯು ಕೆಳಗೆ ಬಿದ್ದು, ಸ್ಥೂಣಾಕರ್ಣವೆಂಬ ಅಸ್ತ್ರದ ಹತಿಯಿಂದಲೂ, ತನ್ನ ಪುತ್ರಬಂಧುಪರಿವಾರಗಳೊಡನೆ ಹತಳಾದಳು. ಆ ಗದೆಯಿಂದ ಅಗಲಿಸಲ್ಪಟ್ಟುದರಿಂದಲೇ, ಭೀಮನು ಅವನನ್ನು ನಮ್ಮ ಕಣ್ಣಿದಿರಾಗಿಯೇ ಸುಲಭವಾಗಿ ಕೊಲ್ಲಬಹುದಾಯಿತು. ಜರಾಸಂಧನು ಆ ಗದೆಯನ್ನು ಕೈಯಲ್ಲಿ ಹಿಡಿದು ನಿಂತಿದ್ದರೆ, ಸಮಸ್ತ ದೇವತೆಗಳೊಡಗೂಡಿದ ಇಂದ್ರನಿಂದಾದರೂ ಅವನನ್ನು ಕೊಲ್ಲಲು ಸಾಧ್ಯವಿರುತ್ತಿರಲಿಲ್ಲ. ಅರ್ಜುನಾ! ನಿಮ್ಮ ಹಿತಕ್ಕಾಗಿಯೇ ನಾನು ಬಲರಾಮನಮೂಲಕವಾಗಿ ಆ ಜರಾಸಂಧನನ್ನು ಗದಾಹೀನನನ್ನಾಗಿ ಮಾಡಿದೆನು, ಇದರಂತೆಯೇ ಏಕಲವ್ಯನೆಂಬ ಬೇಡ

ನೂಕೂಡ ನಿಮಗೆ ಅಜೇಯನಾಗಿದ್ದನೆಂದು ತಿಳಿ. ಸತ್ಯಪರಾಕ್ರಮವುಳ್ಳ ಆ ಬೇಡನಿಗೆ ದ್ರೋಣನನ್ನು ಆಚಾರ್ಯನನ್ನಾಗಿ ಮಾಡಿ, ತಂತ್ರದಿಂದ ಆ ದ್ರೋಣನ ಮೂಲಕವಾಗಿಯೇ ಅವನ ಹೆಬ್ಬೆರಳನ್ನು ಕತ್ತರಿಸಿ ಕೊಡುವಂತೆ ಮಾಡಿದೆನು. ಆ ಬೇಡನು ದೃಢಪರಾಕ್ರಮವುಳ್ಳವನು. ಬಹಳ ಅಭಿಮಾನವುಳ್ಳವನು. ಅಸ್ತ್ರವಿದ್ಯೆಯಲ್ಲಿ ಬೇರೊಬ್ಬ ಪರಶುರಾಮನಂತೆ ತೋರುತ್ತಿದ್ದವನು. ಅವನು ಅಂಗಹೀನತೆಯಿಲ್ಲದೆ ಕೈಚೀಲವನ್ನು ತೊಟ್ಟು ಯುದ್ಧಕ್ಕೆ ನಿಂತಪಕ್ಷದಲ್ಲಿ, ದೇವ ದಾನವ ರಾಕ್ಷಸ ಪನ್ನಗರೆಲ್ಲರೂ ಒಂದಾಗಿ ಸೇರಿದರೂ ಏಕಲವ್ಯನೆಂಬ ಆ ಬೇಡನನ್ನು ಜಯಿಸಲಾರರು. ಇನ್ನು ಕೇವಲ ಮನುಷ್ಯಮಾತ್ರನಾದ ನಿನ್ನಂತವನ ಪಾಡೇನು? ಅವನನ್ನು ಯುದ್ಧದಲ್ಲಿ ಕಣ್ಣೆದಿರಾಗಿ ನೋಡುವುದಕ್ಕೂ ನಿಮಗೆ ಶಕ್ತಿಯಿರದು. ಅವನು ಮಹಾ ಧೀಮಂತನು! ದೃಢಮುಷ್ಟಿಯುಳ್ಳವನು! ಪ್ರತಿದಿನವೂ ಹಗಲು ರಾತ್ರಿ ಅಸ್ತ್ರಶಿಕ್ಷೆಯನ್ನು ಅಭ್ಯಸಿಸುತ್ತಿದ್ದವನು. ನಿನ್ನ ಹಿತಕ್ಕಾಗಿಯೇ ಯುದ್ಧದಲ್ಲಿ ನಾನು ಅವನನ್ನು ಕೊಂದೆನು. ಇದೇ ರೀತಿಯಲ್ಲಿ ಚೇದಿದೇಶಾಧಿಪತಿಯಾದ ಶಿಶುಪಾಲನು ಮಹಾಪರಾಕ್ರಮಿ! ನಿನ್ನ ಕಣ್ಣೆದಿರಾಗಿಯೇ ಅವನನ್ನು ನಾನೇ ಕೊಂದೆನು. ಅವನ ಮತ್ತು ಅವನಂತಿರುವ ದೇವವೈರಿಗಳನ್ನು ಕೊಲ್ಲುವುದಕ್ಕಾಗಿಯೇ ನಾನು ಈ ಲೋಕದಲ್ಲಿ ಅವತರಿಸಿರುವೆನು. ಅವನನ್ನುಕೂಡ ದೇವಾಸುರರಿಂದಲೂ ಜಯಿಸುವುದಕ್ಕೆ ಸಾಧ್ಯವಲ್ಲ. ಇದರಂತೆಯೇ ಹಿಡಿಂಬ, ಬಕ, ಕಿರ್ಮೀರಾದಿ ರಾಕ್ಷಸರೂ ಈ ಯುದ್ಧಕ್ಕೆ ಮೊದಲೇ ಭೀಮಸೇನನಿಂದ ವಧಿಸಲ್ಪಟ್ಟರು. ಅದೂ ಕೂಡ ನಿನ್ನ ಹಿತಕ್ಕಾಗಿಯೇ! ಅವರೆಲ್ಲರೂ ರಾವಣನಿಗೆ ಸಮಾನವಾದ ಶಕ್ತಿಯುಳ್ಳವರು! ಯಾವಾಗಲೂ ಬ್ರಾಹ್ಮಣರ ಯಜ್ಞಾದಿ ಕರ್ಮಗಳನ್ನು ನಾಶಗೊಳಿಸುತ್ತಿದ್ದವರು. ಲೋಕಹಿತಕ್ಕಾಗಿ ನಾನೇ ಅವರನ್ನೆಲ್ಲ ಕೊಲ್ಲಿಸಿದೆನು. ಇದರಂತೆಯೇ ಘಟೋತ್ಕಚನಿಂದ ಅಲಾಯುಧನೆಂಬ ರಾಕ್ಷಸನನ್ನೂ ನಾನೇ ಕೊಲ್ಲಿಸಿದೆನು. ಈಗ ಆ ಘಟೋತ್ಕಚನನ್ನೂ ಕರ್ಣನ ಮೂಲಕವಾಗಿ ತಂತ್ರದಿಂದ ಕೊಲ್ಲಿಸಿದವನೂ ನಾನೇ! ಈಗ ಕರ್ಣನು ತಾನಿಟ್ಟಿದ್ದ ಶಕ್ತಿಯಿಂದ ಆ ಘಟೋತ್ಕಚನನ್ನು ಕೊಲ್ಲದೆ ಇದ್ದಿದ್ದ ಪಕ್ಷದಲ್ಲಿ, ನಾನೆಯಾದರೂ ಅವನನ್ನು ಕೊಲ್ಲಬೇಕಾಗಿ ಬರುತ್ತಿದ್ದಿತು. ಆದರೆ, ಅವನಿಂದ ನಿಮಗೆ

ಆಗಾಗ ನಿಮ್ಮ ಕಷ್ಟಕಾಲದಲ್ಲಿ ಪ್ರಿಯವುಂಟಾಗುತ್ತಿದ್ದುದನ್ನು ನೋಡಿ, ಅವನನ್ನು ನಾನು ಕೊಲ್ಲದೆ, ಬಿಟ್ಟಿದ್ದು, ಈಗ ಕರ್ಣನ ಮೂಲಕವಾಗಿ ಕೊಲ್ಲಿಸಿದೆನು. ಆ ಘಟೋತ್ಕಚನು ಭೀಮಪುತ್ರನಾದರೂ, ರಾಕ್ಷಸಸ್ವಭಾವಕ್ಕೆ ತಕ್ಕಂತೆ, ಬ್ರಾಹ್ಮಣರನ್ನೂ, ಯಜ್ಞಗಳನ್ನೂ ದ್ವೇಷಿಸತಕ್ಕವನಾಗಿ, ಧರ್ಮಗಳನ್ನು ಕೆಡಿಸತಕ್ಕವನಾಗಿದ್ದನು. ಅವನನ್ನು ಅದಕ್ಕಾಗಿಯೇ ನಾನು ಕೊಲ್ಲಿಸಬೇಕಾಯಿತು. ಆ ಮೂಲಕವಾಗಿ ನಿನ್ನ ವಧಕ್ಕಾಗಿ ಕರ್ಣನು ಕಾಪಾಡಿಟ್ಟಿದ್ದ ಶಕ್ತಿಯನ್ನೂ ಅವನಿಂದ ಅಗಲಿಸಿದಂತಾಯಿತು. ಅರ್ಜುನಾ! ಯಾರು ಧರ್ಮಕ್ಕೆ ಲೋಪವನ್ನು ತರುವರೋ, ಅಂಥವರೆಲ್ಲ ನನಗೆ ವಧಾರ್ಹರೇ! ಧರ್ಮಸಂಸ್ಥಾಪನಕ್ಕಾಗಿಯೇ ನಾನು ಪ್ರತಿಜ್ಞೆಯನ್ನು ಮಾಡಿ ಅವತರಿಸಿದವನು. ವೇದವೂ, ಸತ್ಯವೂ, ಇಂದ್ರಿಯನಿಗ್ರಹವೂ, ಶೌಚವೂ, ಧರ್ಮವೂ, ಲಜ್ಜೆ, ಧೈರ್ಯ, ತಾಳ್ಮೆ, ಸಂಪತ್ತು ಇವುಗಳೆಲ್ಲ ಎಲ್ಲಿರುವುವೋ, ಅಲ್ಲಲ್ಲಿ ನಾನು ನಿತ್ಯವಾಸಮಾಡುವೆನು. ಸತ್ಯವಾಗಿ ನಾನು ನಿನಗೆ ತಿಳಿಸುವೆನು. ಅರ್ಜುನಾ! ಕರ್ಣನನ್ನು ವಧಿಸುವ ವಿಷಯದಲ್ಲಿ ಇನ್ನುಮೇಲೆ ನೀನು ಚಿಂತಿಸಬೇಕಾದುದಿಲ್ಲ. ಅವನನ್ನು ಕೊಲ್ಲುವ ಉಪಾಯವನ್ನೂ ನಾನು ನಿನಗೆ ತಿಳಿಸುವೆನು. ಭೀಮನು ಸುಯೋಧನನನ್ನು ಕೊಲ್ಲುವುದಕ್ಕೆ ತಕ್ಕ ಉಪಾಯವನ್ನೂ ಮುಂದೆ ನಾನು ಹೇಳಿಕೊಡುವೆನು. ಧನಂಜಯಾ! ಇದು ಹೀಗಿರಲಿ! ಅದೋ! ಶತ್ರುಸೈನ್ಯದಲ್ಲಿ ದೊಡ್ಡ ಕೋಲಾಹಲವು ಕೇಳಿಸುತ್ತಿರುವುದು. ನಿನ್ನ ಸೈನ್ಯಗಳೆಲ್ಲಾ ಭಯದಿಂದ ಹೆದರಿ ದಿಕ್ಕುದಿಕ್ಕಿಗೆ ಪಲಾಯನಮಾಡುತ್ತಿರುವುವು. ನಿಮ್ಮಲ್ಲಿ ಕಣ್ಣಿಟ್ಟಿರುವ ಕೌರವರು ನಿನ್ನ ಸೈನ್ಯವನ್ನೆಲ್ಲಾ ತೂರಿಬಿಡುವರು. ಅದೋ! ದ್ರೋಣನೂ ಕೂಡ ನಿಮ್ಮ ಸೈನ್ಯಗಳನ್ನು ಬಾಣಜ್ವಾಲೆಗಳಿಂದ ದಹಿಸುತ್ತಿರುವನು" ಎಂದನು.

ಇದು ನೂರಎಂಭತ್ತೆರಡನೆಯ ಅಧ್ಯಾಯವು.



ಧೃತರಾಷ್ಟ್ರನು ಸಂಜಯನನ್ನು ಕುರಿತು, ಅರ್ಜುನನಮೇಲೆ ಕರ್ಣನು ಇದುವರೆಗೆ ಆ ಶಕ್ತಿಯನ್ನು ಪ್ರಯೋಗಿಸದಿದ್ದುದಕ್ಕೆ ಕಾರಣವನ್ನು ಕೇಳಲು, ಹಿಂದೆ ಇದೇ ಪ್ರಶ್ನೆಗೆ ಕೃಷ್ಣನು ಸಾತ್ಯಕಿಗೆ ಹೇಳಿದ ಉತ್ತರವನ್ನು ಅವನು ತಿಳಿಸಿದುದು.

ಆಗ ಧೃತರಾಷ್ಟ್ರನು "ಸಂಜಯಾ! ಒಬ್ಬ ಪ್ರಬಲವೀರನನ್ನು ತಪ್ಪದೆ ಕೊಲ್ಲುವುದಕ್ಕಾಗಿ ಕರ್ಣನು ಆ ದಿವ್ಯ ಶಕ್ತಿಯನ್ನು ಸಂಪಾದಿಸಿಟ್ಟಿದ್ದನಲ್ಲವೆ? ಅದನ್ನು ಅವನು ಎಲ್ಲರಿಗಿಂತಲೂ ಮೊದಲೇ ಆ ಅರ್ಜುನನ ಮೇಲೆ ಪ್ರಯೋಗಿಸದಿದ್ದ ಕಾರಣವೇನು? ಕರ್ಣನು ಆ ಶಕ್ತಿಯಿಂದ ಅರ್ಜುನನೊಬ್ಬನನ್ನು ಮೊದಲೇ ಕೊಂದುಬಿಟ್ಟಿದ್ದರೆ, ಪಾಂಡವ ಸೃಂಜಯಾದಿಗಳೆಲ್ಲರೂ ಹತರಾದಂತೆಯೇ ಅಲ್ಲವೇ? ಆ ಒಬ್ಬ ವೀರನನ್ನು ಕೊಂದುದರಿಂದ ಅವನು ಸಂಪೂರ್ಣಜಯವನ್ನು ಹೊಂದಬಹುದಾಗಿದ್ದಾಗ, ಏತಕ್ಕಾಗಿ ಅವನು ಅದನ್ನು ಸಾಧಿಸಲಿಲ್ಲ? ಯುದ್ಧಕ್ಕೆ ಕರೆಯಲ್ಪಟ್ಟಾಗ ತಾನು ಹಿಂಜರಿಯುವುದಿಲ್ಲವೆಂಬುದು ಅರ್ಜುನನ ಮಹಾವ್ರತವು. ಇದರಿಂದ ಕರ್ಣನು ತಾನೇ ಅರ್ಜುನನನ್ನು ಹುಡುಕಿಕೊಂಡು ಹೋಗಿ, ಅವನನ್ನು ಯುದ್ಧಕ್ಕೆ ಸೆಳೆದು ನಿಲ್ಲಿಸಿ, ಇಂದ್ರದತ್ತವಾದ ಆ ಶಕ್ತಿಯಿಂದ ಅವನನ್ನು ಆಗಲೇ ತೀರಿಸಿಬಿಡಬಹುದಾಗಿದ್ದಿತಲ್ಲವೆ? ಹೀಗಿರುವಾಗಲೂ, ಅವನು ಅರ್ಜುನನನ್ನು ವಧಿಸದೆ ಬಿಟ್ಟ ಕಾರಣವೇನು? ಸಂಜಯಾ! ಮುಖ್ಯವಾಗಿ ನನ್ನ ಮಗನು ಬುದ್ಧಿಗೆಟ್ಟು ಈ ಕಾರ್ಯಕ್ಕೆ ಪ್ರಯತ್ನಿಸಿದನು. ಅವನಿಗೆ ತಕ್ಕ ಸಹಾಯವೂ ಇಲ್ಲದೆಹೋಯಿತು. ಶತ್ರುಗಳಿಂದ ಅವನ ಶಕ್ತಿಯೆಲ್ಲವೂ ಉಡುಗಿಸಲ್ಪಟ್ಟಿತು. ಅವನು ಹೇಗೆತಾನೇ ಶತ್ರುಗಳನ್ನು ಜಯಿಸುವನೋ ತಿಳಿಯದು! ಕರ್ಣನೇನೋ ಅವನಿಗೆ ನಿಜವಾದ ಮಿತ್ರನೇ! ಅವನಲ್ಲಿ ನಮ್ಮ ಜಯಕ್ಕೆ ಕಾರಣವಾಗಿದ್ದ ಶಕ್ತಿಯೂಕೂಡ ಕೃಷ್ಣನಿಂದ ಅಗಲಿಸಲ್ಪಟ್ಟಿತು. ಕೃಷ್ಣನೇ ಉಪಾಯದಿಂದ ಘಟೋತ್ಕಚನಮೇಲೆ ಅದನ್ನು ಪ್ರಯೋಗಿಸುವಂತೆ ಮಾಡಿದನು. ಕೈ ಸ್ವಾಧೀನವಿಲ್ಲದವನು ತನ್ನಲ್ಲಿಟ್ಟುಕೊಂಡಿರುವ ಫಲವನ್ನು ಬಲಾಢ್ಯನೊಬ್ಬನು ಸುಲಭವಾಗಿ ಅಪಹರಿಸಿಕೊಂಡು ಹೋಗುವಂತೆ, ಕರ್ಣನಲ್ಲಿದ್ದ ಆ ಶಕ್ತಿಯು, ಘಟೋತ್ಕಚನನ್ನು ಕೊಲ್ಲಿಸುವ

ನೆವದಿಂದ ವಿಫಲವಾಗಿ ಮಾಡಲ್ಪಟ್ಟಿತು. ಹಂದಿಯನ್ನೂ, ನಾಯನ್ನೂ, ಜಗ ಳಕ್ಕೆ ಬಿಟ್ಟು, ಒಂದನ್ನೊಂದು ಕಚ್ಚಿ ಕೊಂದಮೇಲೆ, ಅದರಿಂದ ಶ್ವಪಚನಿಗೆ ಹೇಗೆ ಲಾಭವೋ, ಅದರಂತೆ ಕರ್ಣ ಘಟೋತ್ಕಚರ ಯುದ್ಧದಿಂದ ಆ ಕೃಷ್ಣ ನಿಗೆ ಒಳ್ಳೆಯ ಲಾಭವು ದೊರೆತಂತಾಯಿತು. ಕೃಷ್ಣನು ಬಹಳ ತಂತ್ರಿ! ಕರ್ಣಘಟೋತ್ಕಚರನ್ನು ಮೊದಲು ಯುದ್ಧಕ್ಕೆ ತಂದೊಡ್ಡಿದ ಆ ಕೃಷ್ಣನ ಬುದ್ಧಿಯೇ ಬುದ್ಧಿ! ಒಂದುವೇಳೆ ಆ ಘಟೋತ್ಕಚನಿಂದ ಕರ್ಣನೇ ಸತ್ತಿ ದ್ದರೂ ಪಾಂಡವರಿಗೆ ಅದರಿಂದ ಪರಮಲಾಭವೇ! ಹಾಗಿಲ್ಲದೆ ಘಟೋ ತ್ಕಚನೇ ಕರ್ಣನಿಂದ ವಧಿಸಲ್ಪಡುವುದಾದರೆ, ಕರ್ಣನಲ್ಲಿರುವ ಶಕ್ತಿಯನ್ನು ಅಗಲಿಸಿದಂತಾಗುವುದು. ಇದರಿಂದಲೂ ಪಾಂಡವರಿಗೆ ಪರಮಲಾಭ ವುಂಟು. ಇದನ್ನೆಲ್ಲಾ ಯೋಚಿಸಿಯೇ ತಂತ್ರಿಯಾದ ಕೃಷ್ಣನು, ಪಾಂಡ ವರಿಗೆ ಹಿತವನ್ನುದ್ದೇಶಿಸಿ, ಕರ್ಣನಿಂದ ಘಟೋತ್ಕಚನನ್ನು ಕೊಲ್ಲಿಸಿದನು. ಆಹಾ! ಆ ಕೃಷ್ಣನ ಅದ್ಭುತ ಮಹಿಮೆಯೇ ಮಹಿಮೆ!" ಎಂದನು. ಆಗ ಸಂಜಯನು "ರಾಜಾ! ಕರ್ಣನ ಈ ಉದ್ದೇಶವನ್ನು ಯೋಚಿಸಿಯೇ ಅಪಾರ ಬುದ್ಧಿಯುಳ್ಳ ಶ್ರೀಕೃಷ್ಣನು ಕರ್ಣನಲ್ಲಿದ್ದ ಅಮೋಘಶಕ್ತಿಯನ್ನು ವಿಫಲಮಾ ಡುವುದಕ್ಕಾಗಿ ಘಟೋತ್ಕಚನನ್ನು ಅದಕ್ಕೆ ಆಹುತಿಯನ್ನಾಗಿ ಮಾಡಿ ದನು. ಇವೆಲ್ಲವೂ ನಿನ್ನ ದುರ್ಮಂತ್ರದ ಫಲವೇ ಎಂದು ತಿಳಿ! ಆಗ ಕರ್ಣ ನಿಂದ ಕೃಷ್ಣನು ಅರ್ಜುನನನ್ನು ರಕ್ಷಿಸಿಕೊಳ್ಳದಿದ್ದರೆ, ನಾವು ಆಗಲೇ ಕೃತ ಕೃತ್ಯರಾಗುತ್ತಿದ್ದೆವು. ಆಗಲೇ ಅರ್ಜುನನು ಕರ್ಣನಲ್ಲಿದ್ದ ಆ ಶಕ್ತಿಯಿಂದ ರಥ, ರಥಾಶ್ವ, ಸಾರಥಿಗಳೊಡನೆ ಸತ್ತು ಬೀಳುತ್ತಿದ್ದನು. ಯೋಗೀಶ್ವರನಾದ ಆ ಕೃಷ್ಣನೊಬ್ಬ ನಿಲ್ಲದಿದ್ದರೆ, ಅರ್ಜುನನು ಯುದ್ಧದಲ್ಲಿ ನಿಮಿಷಮಾತ್ರವೂ ಬದುಕಿರುವ ಸಂಭವವಿಲ್ಲ. ಆ ಕೃಷ್ಣನ ವಿವಿಧತಂತ್ರಗಳಿಂದಲೇ ಅರ್ಜುನನು ಶತ್ರುಗಳಿಗಿದಿರಾಗಿ ನಿಂತು ಅವರನ್ನು ಜಯಿಸುತ್ತಿರುವನು. ಅಪ್ರಮೇ ಯಮಹಿಮೆಯುಳ್ಳ ಆ ಕೃಷ್ಣನು ಅರ್ಜುನನನ್ನು ರಕ್ಷಿಸಿಕೊಳ್ಳದಿದ್ದರೆ ಆಗಲೇ ಅವನು ಆ ಶಕ್ತಿಗೆ ಬಲಿಯಾಗಿ ಸಿಡಿಲುಬಡಿದ ಮರದಂತೆ ಹತನಾಗಿ ಬೀಳು ತ್ತಿದ್ದನು" ಎಂದನು. ಆಗ ಧೃತರಾಷ್ಟ್ರನು "ಸಂಜಯಾ! ಅದೆಲ್ಲವೂ ಸರಿಯೆ! ನನ್ನ ಮಗನೋ ತಾನೇ ಪ್ರಾಜ್ಞನೆಂಬ ಗರ್ವವುಳ್ಳವನು. ಕುತ್ಸಿ ತಜನರನ್ನೇ ಮಂತ್ರಾಲೋಚನೆಗೆ ಇಟ್ಟುಕೊಂಡಿರತಕ್ಕವನು. ಪಾಂಡವ

ರಲ್ಲಿ ಯಾವಾಗಲೂ ವಿರೋಧಬುದ್ಧಿಯುಳ್ಳವನು. ಅರ್ಜುನನನ್ನು ಜಯಿಸಬೇಕೆಂದು ಅವನು ಮಾಡಿದ್ದ ಉಪಾಯವೆಲ್ಲಾ ಕೈಮಾರಿಹೋಯಿತು. ಕರ್ಣನು ಹಾಗಲ್ಲ. ಅವನು ಮಹಾಬುದ್ಧಿವಂತನು! ಎಲ್ಲಾ ಶಸ್ತ್ರಧಾರಿಗಳಲ್ಲಿ ಮೇಲೆನಿಸಿದವನು. ಅವನು ಅರ್ಜುನನಿಗಾಗಿಯೇ ರಕ್ಷಿಸಿಟ್ಟಿದ್ದ ಆ ಶಕ್ತಿಯನ್ನು ಅವನಮೇಲೆ ಆಗಲೇ ಬಿಡದೆಹೋದ ಕಾರಣವೇನು? ಓ ಗಾವಲ್ಗಣೀ! ಇದು ನಿನಗಾದರೂ ತಿಳಿಯದೆ ಹೋದ ಕಾರಣವೇನು? ಮಹಾಧೀಮಂತನಾದ ನೀನಾದರೂ ಅವನನ್ನು ಎಚ್ಚರಿಸದೆ ಹೋದುದೇಕೆ?" ಎನಲು, ಸಂಜಯನು "ರಾಜೇಂದ್ರಾ! ಅದು ಹಾಗಲ್ಲ! ದುರ್ಯೋಧನ ಶಕುನಿ ದುಶ್ಶಾಸನರಿಗೂ, ನನಗೂ ಒದೊಂದು ರಾತ್ರಿಯೂ ಇದೇವಿಷಯವಾದ ಚಿಂತೆ! ಇದೇವಿಧವಾದ ಸಲ್ಲಾಪವೂ ನಡೆಯುತ್ತಿದ್ದಿತು. ನಿನ್ನ ಮಗನು ಸಮಯವು ಬಂದಾಗಲೆಲ್ಲಾ ಕರ್ಣನನ್ನು ಕುರಿತು "ಕರ್ಣಾ! ನೀನು ಸಮಸ್ತಸೈನ್ಯಗಳನ್ನೂ ಬಿಟ್ಟು, ಆ ಧನಂಜಯನೊಬ್ಬನನ್ನು ಕೊಂದುಬಿಟ್ಟರೆ ಸಾಕು! ಆದರಮೇಲೆ ನಾವು ಇತರಪಾಂಡವ ಪಾಂಚಾಲರನ್ನೆಲ್ಲಾ ನಮ್ಮ ಸೇವಕರಂತೆ ಮೆಟ್ಟಿ ಆಳಬಲ್ಲೆವು. ಒಂದುವೇಳೆ ಅರ್ಜುನನು ವಧಿಸಲ್ಪಟ್ಟರೂ ಕೃಷ್ಣನು ಪಂಚಪಾಂಡವರಲ್ಲಿ ಯಾವನಾದರೂ ಒಬ್ಬನನ್ನು ರಾಜ್ಯದಲ್ಲಿರಿಸಬಹುದು. ಆದುದರಿಂದ ನೀನು ಕೃಷ್ಣನನ್ನಾದರೂ ನಿನ್ನ ಅಮೋಘಶಕ್ತಿಯಿಂದ ಕೊಂದುಬಿಡು! ಪಾಂಡವರಿಗೆಲ್ಲಾ ಆ ಕೃಷ್ಣನೇ ತಾಯಿಬೇರಂತಿರುವನು. ಅರ್ಜುನನು ಆ ಬೇರಿನಿಂದ ಹೊರಟ ಅಡಿಮರದಂತಿರುವನು. ಇತರ ಪಾಂಡವರು ಆ ಮರದ ಶಾಖೆಗಳಂತಿರುವರು. ಪಾಂಚಾಲರು ಆ ಮರದಲ್ಲಿ ಎಲೆಗಳಂತೆ ಅಂಟಿರುವರು. ಮುಖ್ಯವಾಗಿ ಪಾಂಡವರಿಗೆ ಕೃಷ್ಣನೇ ಬಲವು! ಕೃಷ್ಣನೇ ಅವರಿಗೆ ಮುಖ್ಯಾಶ್ರಯವು! ಕೃಷ್ಣನೇ ಅವರಿಗೆ ಮುಖ್ಯವಾದ ದಿಕ್ಕು! ಅವರಿಗೆ ಕೃಷ್ಣನೇ ಪರಮಗತಿ! ಎಲ್ಲಾ ಗ್ರಹಗಳಿಗೆ ಚಂದ್ರನು ಹೇಗೋ ಹಾಗೆ, ಆ ಶ್ರೀ ಕೃಷ್ಣನೇ ಪಾಂಡವಪಕ್ಷಕ್ಕೆಲ್ಲಾ ಆಧಾರವೆನಿಸಿರುವನು. ಆದುದರಿಂದ ನಮ್ಮ ಶತ್ರುಪಕ್ಷವೆಂಬ ಮರದ ಅಡಿದಿಂಡನ್ನೂ, ಕೊಂಬೆಗಳನ್ನೂ, ಅದರ ಎಲೆಗಳನ್ನೂ ಬಿಟ್ಟು, ಅದಕ್ಕೆ ತಾಯಿಬೇರಂತಿರುವ ಕೃಷ್ಣನನ್ನು ಕೊಂದುಬಿಟ್ಟರೆ, ಮೂಲನಾಶವನ್ನು ಮಾಡಿದಂತಾಗುವುದು. ಕೃಷ್ಣನು ಹತನಾನೆಂದರೆ ಪರ್ವ

ತಾರಣ್ಯಸಮುದ್ರಗಳೊಡಗೂಡಿದ ಸಮಸ್ತಭೂಮಿಯೂ ಕೌರವರ ವಶವಾ ದಂತೆಯೇ, ಎಂದು ನಿಶ್ಚಯಿಸಿಕರ್ಣನೂ ಹಾಗೆಯೇ ನಡೆಸುವುದಾಗಿದ್ದನು. ಆದರೇನು? ದೇವದೇವನೂ, ಅಪ್ರಮೇಯ ಮಹಿಮನೂ, ಇಂದ್ರಿಯ ಗಳಿಗೆಲ್ಲಾ ಅಧಿಪತಿಯೂ ಆದ ಆ ಕೃಷ್ಣನು ಎಚ್ಚರಗೊಂಡಿದ್ದುದರಿಂದ, ಯುದ್ಧಕಾಲದಲ್ಲಿ ಕರ್ಣನಿಗೂ ಆ ನಿಶ್ಚಯಬುದ್ಧಿಯು ಹೋಗಿ ಮಂಕು ಕವಿ ದಂತಾಯಿತು. ಕೃಷ್ಣನು ಕರ್ಣನಿಂದ ಅರ್ಜುನನನ್ನು ರಕ್ಷಿಸಿಕೊಳ್ಳುವು ದರಲ್ಲಿ ಯಾವಾಗಲೂ ಎಚ್ಚರಿಕೆಯಿಂದಿದ್ದನು. ಕರ್ಣನ ಮುಂದೆ ಅರ್ಜುನ ನನ್ನು ನಿಲ್ಲಿಸುವುದಕ್ಕೇ ಅವನು ಇಷ್ಟಪಡುತ್ತಿರಲಿಲ್ಲ. ಕರ್ಣನಲ್ಲಿರುವ ಇಂದ್ರ ದತ್ತವಾದ ಅಮೋಘಶಕ್ತಿಯನ್ನು ಹೇಗಾದರೂ ವ್ಯರ್ಥಮಾಡಬೇಕೆಂಬ ಉದ್ದೇಶದಿಂದ, ಕೃಷ್ಣನು ಬೇರೆಬೇರೆ ರಥಿಕರನ್ನೇ ಯುದ್ಧಕ್ಕಾಗಿ ಕರ್ಣನ ಮುಂದೆ ನಿಲ್ಲಿಸುತ್ತಿದ್ದನು. ಹೀಗೆ ಕೃಷ್ಣನು ಆ ಅರ್ಜುನನನ್ನೇ ಅಷ್ಟು ಎಚ್ಚರದಿಂದ ರಕ್ಷಿಸುತ್ತಿದ್ದಾಗ, ಅವನು ತನ್ನನ್ನು ತಾನು ರಕ್ಷಿಸಿಕೊಳ್ಳಲಾ ರನೆ? ರಾಜೇಂದ್ರಾ! ಚಕ್ರಾಯುಧನೂ, ಶತ್ರುಸೂದನನೂ, ಜನಾರ್ದ ನನೂ ಆದ ಆ ಶ್ರೀಕೃಷ್ಣನನ್ನು ಜಯಿಸಬಲ್ಲವನು ಮೂರುಲೋಕದ ಲ್ಲಿಯೂ ಯಾವನಿರುವನೆಂದು ನನಗೆ ತೋರಲಿಲ್ಲ. ಇದೇ ವಿಷಯವಾಗಿ ಒಮ್ಮೆ ಸಾತ್ಯಕಿಯೂ ಕೃಷ್ಣನನ್ನು ಪ್ರಶ್ನೆಮಾಡುತ್ತ, "ಕೃಷ್ಣಾ! ಕರ್ಣನ ಲ್ಲಿ ಅಮೋಘವಾದ ಶಕ್ತಿಯಿರುವುದಾಗಿ ಎಲ್ಲರಿಗೂ ನಂಬಿಕೆಯಿತ್ತಲ್ಲವೆ? ಅದನ್ನು ಅವನು ಅರ್ಜುನನಮೇಲೆ ಪ್ರಯೋಗಿಸದಿದ್ದ ಕಾರಣವೇನು?" ಎಂದು ಕೇಳಲು, ಕೃಷ್ಣನು "ಸಾತ್ಯಕೀ! ದುಶ್ಶಾಸನ, ಶಕುನಿ, ಜಯದ್ರ ಥಾದಿಗಳೆಲ್ಲರೂ, ದುರ್ಯೋಧನನನ್ನು ಮುಂದಿಟ್ಟುಕೊಂಡು ಕರ್ಣನೊಡನೆ "ಕರ್ಣಾ! ನೀನು ನಿನ್ನಲ್ಲಿರುವ ಅಮೋಘಶಕ್ತಿಯನ್ನು ಅರ್ಜುನನಮೇ ಲೆಹೊರತು ಬೇರೊಬ್ಬರ ಮೇಲೆ ಬಿಡಬಾರದು. ದೇವತೆಗಳಲ್ಲಿ ಅವನೇ ಶಕ್ತಿಯಲ್ಲಿಯೂ, ಬಲದಲ್ಲಿಯೂ ಪ್ರಖ್ಯಾತಿಗೊಂಡವನು. ಆ ಪಾರ್ಥನನ್ನು ಕೊಂದುಬಿಟ್ಟರೆ, ಅಗ್ನಿಯನ್ನು ಕಳೆದುಕೊಂಡ ದೇವತೆಗಳಂತೆ ಪಾಂಡವ ಸೃಂಜಯರೆಲ್ಲ ಮೃತಪ್ರಾಯರಾಗುವರು" ಎಂದು ಹೇಳುತ್ತಿದ್ದರು. ಕರ್ಣನೂ ಹಾಗೆಯೇ ಆಗಲೆಂದು ಪ್ರತಿಜ್ಞೆಮಾಡಿಕೊಟ್ಟು ಅರ್ಜುನನನ್ನು ಕೊಲ್ಲುವ ಚಿಂತೆಯಲ್ಲಿಯೇ ಸದಾ ಇರುತ್ತಿದ್ದನು. ಆದರೆ ಕರ್ಣನಿಗೆ ನಾನೇ ಆ ಯುದ್ಧ

ಕಾಲದಲ್ಲಿ ಮೋಹವನ್ನುಂಟುಮಾಡಿ ಆ ಕಾರ್ಯವನ್ನು ತಪ್ಪಿಸಿದೆನು. ಕರ್ಣನಲ್ಲಿದ್ದ ಶಕ್ತಿಯು ಅರ್ಜುನನಿಗೆ ಮೃತ್ಯುಕಾರಣವೆಂಬುದನ್ನು ನಾನು ಬಲ್ಲೆನು. ನಾನು ಅಹೋರಾತ್ರವೂ ಅದನ್ನು ಕುರಿತೇ ಚಿಂತಿಸುತ್ತಿದ್ದೆನು. ಆ ಚಿಂತೆಯಿಂದ ನನಗೆ ರಾತ್ರಿಯಲ್ಲಿ ನಿದ್ರೆಯಿಲ್ಲ! ನನ್ನ ಮನಸ್ಸಿಗೆ ಹರ್ಷವೂ ಇಲ್ಲದಂತಿದ್ದಿತು. ಅದು ಈಗ ಘಟೋತ್ಕಚನಲ್ಲಿ ಪ್ರಯೋಗಿಸಲ್ಪಟ್ಟುದನ್ನು ನೋಡಿದಮೇಲೆ, ನನ್ನ ಮನಸ್ಸಿಗೆ ಆಪ್ಯಾಯನವುಂಟಾಯಿತು. ಅರ್ಜುನನು ಈಗ ಮೃತ್ಯುವಿನ ಬಾಯಿಂದ ತಪ್ಪಿಸಿಕೊಂಡಂತಾಯಿತು. ಸಾತ್ಯಕೀ! ಹೆಚ್ಚುಮಾತಿನಿಂದೇನು? ನನಗೆ ತಂದೆಯಾಗಲಿ, ತಾಯಿಯಾಗಲಿ, ನೀವಾಗಲಿ, ನನ್ನ ಸಹೋದರರಾಗಲಿ, ಕೊನೆಗೆ ನನ್ನ ಪ್ರಾಣವೇ ಆಗಲಿ ಆ ಅರ್ಜುನನಷ್ಟು ಪ್ರೀತಿಪಾತ್ರವಲ್ಲ. ಅರ್ಜುನನನ್ನು ರಕ್ಷಿಸುವುದರಲ್ಲಿರುವ ಅಕ್ಕರೆಯು ಇವರಾರಲ್ಲಿಯೂ ನನಗಿಲ್ಲ. ತ್ರೈಲೋಕ್ಯರಾಜ್ಯಕ್ಕಿಂತಲೂ ಅತಿಶಯವಾದ ಮತ್ತು ದುರ್ಲಭವಾದ ಬೇರೆ ಯಾವ ಶ್ರೇಯಸ್ಸಿದ್ದರೂ, ಅರ್ಜುನನನ್ನು ಬಿಟ್ಟು ನಾನು ಅದನ್ನು ಬಯಸಲಾರೆನು. ಈ ಕಾರಣದಿಂದಲೇ ಆ ಘಟೋತ್ಕಚನ ವಧದಿಂದ ನೀವೆಲ್ಲರೂ ವ್ಯಸನಪಡುವಾಗ, ನಾನು ಅಷ್ಟು ಸಂತೋಷಪಡುವಂತಾಯಿತು. ಈಗ ಅರ್ಜುನನು ಸತ್ತು ಬದುಕಿದಂತಾಯಿತು. ಈ ಕಾರಣಕ್ಕಾಗಿಯೇ ನಾನು ಘಟೋತ್ಕಚನನ್ನು ಕರ್ಣನಮುಂದೆ ಯುದ್ಧಕ್ಕೆ ನಿಲ್ಲಿಸಿದೆನು. ರಾತ್ರಿಯುದ್ಧದಲ್ಲಿ ಆ ಘಟೋತ್ಕಚನುಹೊರತು ಕರ್ಣನಮುಂದೆ ಯುದ್ಧಕ್ಕೆ ನಿಲ್ಲಲು ಬೇರೊಬ್ಬನು ಸಮರ್ಥನಲ್ಲ" ಎಂದನು. ಧೃತರಾಷ್ಟ್ರಮಹಾರಾಜಾ! ಕೃಷ್ಣನು ಸಾತ್ಯಕಿಗೆ ಯಾವ ಉತ್ತರವನ್ನು ಹೇಳಿದನೋ, ಅದನ್ನೇ ನಿನಗೆ ಯಥಾವತ್ತಾಗಿ ತಿಳಿಸಿದೆನು" ಎಂದನು.

ಇದು ನೂರ ಎಂಭತ್ತುಮೂರನೆಯ ಅಧ್ಯಾಯವು.



ಕರ್ಣನ ಶಕ್ತಿಯು ವಿಫಲವಾದುದಕ್ಕಾಗಿ ಧೃತರಾಷ್ಟ್ರನು ದುಃಖಿಸಿದುದು. ಧರ್ಮರಾಜನು ಘಟೋತ್ಕಚನಿಂದ ತಮಗೆ ಆದ ಉಪಕಾರವನ್ನು ಸ್ಮರಿಸಿಕೊಂಡು, ಅವನಿಗಾಗಿ ದುಃಖಿಸುತ್ತ, ಕರ್ಣನನ್ನು ಕೊಲ್ಲಬೇಕೆಂಬ ಆತುರದಿಂದ ಹೊರಟುದು. ವ್ಯಾಸನು ಬಂದು ಅವನಿಗೆ ಸಮಾಧಾನ ಹೇಳಿ ತಡೆದುದು.

ಆಗ ಧೃತರಾಷ್ಟ್ರನು ಸಂಜಯನನ್ನು ಕುರಿತು "ಸಂಜಯಾ! ನೀವೆಲ್ಲರೂ ಇದ್ದುಕೊಂಡು, ನಮ್ಮ ಮಹತ್ತಾದ ಪ್ರಯೋಜನವನ್ನು ಕೆಡಿಸಿಬಿಟ್ಟಿರಿ! ಕರ್ಣನು, ದುರ್ಯೋಧನನು, ಶಕುನಿ, ಇವರೆಲ್ಲರಿಗಿಂತಲೂ ಧೀಮಂತನೆನಿಸಿದ ನೀನು, ಇಷ್ಟುಮಂದಿಯೂ ಇರುವಾಗ, ಹೀಗಾದುದು ನಿಮ್ಮ ಅನೀತಿಯೇಹೊರತು ಬೇರೆಯಲ್ಲ. ಕರ್ಣನಲ್ಲಿದ್ದ ಆ ಶಕ್ತಿಯು ಒಬ್ಬನನ್ನು ತಪ್ಪದೆ ಕೊಲ್ಲುವುದೆಂಬ ಸಂಗತಿಯನ್ನೂ, ಇಂದ್ರಾದಿದೇವತೆಗಳಿಗೂ ಆ ಶಕ್ತಿಯನ್ನು ತಡೆಯಲಸಾಧ್ಯವೆಂಬುದನ್ನೂ ನೀವು ತಿಳಿದವರಾಗಿದ್ದು, ಆ ಶಕ್ತಿಯನ್ನು ಮೊದಲೇ ಕೃಷ್ಣನಮೇಲೆಯೋ, ಅರ್ಜುನನ ಮೇಲೆಯೋ ಪ್ರಯೋಗಿಸುವಂತೆ ಮಾಡದಿದ್ದುದೇಕೆ?" ಎನಲು, ಸಂಜಯನು "ರಾಜೇಂದ್ರಾ! ಯುದ್ಧರಂಗದಿಂದ ನಾವು ಹಿಂತಿರುಗಿಬಂದಾಗಲೆಲ್ಲ ಪ್ರತಿದಿನವೂ ರಾತ್ರಿಯ ಹೊತ್ತು ನಮ್ಮ ಆಲೋಚನೆಯೇ ಇದು! ನಾವೆಲ್ಲರೂ ಆಗಾಗ ಕರ್ಣನನ್ನು ಕರೆದು, ನಾಳೆ ಬೆಳಗಾದೊಡನೆ ನೀನು ನಿನ್ನಲ್ಲಿರುವ ಶಕ್ತಿಯನ್ನು ಆ ಕೃಷ್ಣನ ಮೇಲೆಯೋ, ಅರ್ಜುನನಮೇಲೆಯೋ ಪ್ರಯೋಗಿಸಿಬಿಡಬೇಕೆಂದು ಪ್ರತಿದಿನವೂ ಎಚ್ಚರಿಸುತ್ತಿದ್ದೆವು. ಅವನೂ ಹಾಗೆಯೇ ಸಮ್ಮತಿಸುತ್ತಿದ್ದನು. ಅದರೇನು? ರಾತ್ರಿಯು ಕಳೆದು ಬೆಳಗಾದೊಡನೆ ಕರ್ಣನಿಗಾಗಲಿ, ಇತರ ಯೋಧರಿಗಾಗಲಿ ಆ ಯೋಚನೆಯೇ ಮನಸ್ಸಿಗೆ ಹತ್ತದೆ, ದೈವಮಾಯೆಯಿಂದ ಅದರ ಸ್ಮರಣೆಯೇ ತಪ್ಪಿಹೋಗುತ್ತಿದ್ದಿತು. ಕರ್ಣನು ತನ್ನ ಕೈಯಲ್ಲಿ ಅದಕ್ಕಾಗಿಯೇ ಸಿದ್ಧವಾಗಿಟ್ಟಿದ್ದ ಶಕ್ತಿಯಿಂದ ಕೃಷ್ಣನನ್ನಾಗಲಿ, ಅರ್ಜುನನನ್ನಾಗಲಿ ಕೊಲ್ಲದೆ ಬಿಟ್ಟನೆಂದಮೇಲೆ, ಇನ್ನು ದೈವಕ್ಕಿಂತಲೂ ಪ್ರಬಲವಾವುದುಂಟು? ಕಾಳರಾತ್ರಿಯಂತಿರುವ ಆ ಘೋರಶಕ್ತಿಯು ತನ್ನ ಕೈಯಲ್ಲಿರುವಾಗಲೂ, ಕರ್ಣನು ಬುದ್ಧಿಗೆಟ್ಟವನಾಗಿ ಅದರ ಸ್ಮರಣೆಯೇ ಇಲ್ಲದಂತಾಗಬೇಕಾದರೆ ಇನ್ನು ದೈವಕ್ಕಿಂತಲೂ ಮೇಲಾದುದುಂಟೆ? ದೈವಮಾಯೆಯಿಂದ ಮೋಹಿತನಾದ

ಕರ್ಣನು ಆ ದಿವ್ಯಶಕ್ತಿಯನ್ನು ಅರ್ಜುನನಲ್ಲಿಯೂ ಬಿಡಲಿಲ್ಲ! ಕೃಷ್ಣನಲ್ಲಿಯೂ ಬಿಡಲಿಲ್ಲ! ಇದೆಲ್ಲ ದೈವವ್ಯಾಪಾರವೇ" ಎಂದನು. ಆಗ ಧೃತರಾಷ್ಟ್ರನು "ಸಂಜಯಾ! ದೈವವೂ ನಿಮ್ಮನ್ನು ಕೆಡಿಸಿತು! ನಿಮ್ಮ ಸ್ವಬುದ್ಧಿಯಿಂದಲೂ ನೀವು ಕೆಟ್ಟಿರಿ! ಕೃಷ್ಣನ ತಂತ್ರದಿಂದಲೂ ನೀವು ಮೋಸಹೋದಿರಿ! ಅಂತಹ ದೊಡ್ಡ ಶಕ್ತಿಯನ್ನು ಹುಲ್ಲಿಗೆ ಸಮಾನನಾದ ಘಟೋತ್ಕಚನಮೇಲೆ ಉಪಯೋಗಿಸಲು ಅವಕಾಶಕೊಟ್ಟಿರಿ. ಈಗ ಅದರಿಂದ ಕರ್ಣನೂ, ನನ್ನ ಪುತ್ರರೂ, ನಮ್ಮಕಡೆಯ ಎಲ್ಲಾ ರಾಜರೂ ಯಮಪುರಿಗೆ ಹೋದಂತೆಯೇ! ಸಂಜಯಾ! ಆದುದಾಯಿತು! ಮುಂದಿನ ಯುದ್ಧಕ್ರಮವೇನೆಂಬುದನ್ನು ನನಗೆ ತಿಳಿಸು. ಆ ಘಟೋತ್ಕಚನು ಸತ್ತಮೇಲೆ, ಸೃಂಜಯ ಪಾಂಚಾಲರಲ್ಲಿ ಸೇನಾವ್ಯೂಹದೊಡನೆ ದ್ರೋಣನನ್ನು ಇದಿರಿಸಿದವರಾರು? ಅವರು ಏನೇನನ್ನು ಮಾಡಿದರು? ಹೇಗೆ ಯುದ್ಧಮಾಡಿದರು? ಉಭಯಪಕ್ಷದವರೂ ಆ ರಾತ್ರಿಯಲ್ಲಿ ನಡೆಸಿದ ಯುದ್ಧಕ್ರಮವನ್ನೆಲ್ಲ ನನಗೆ ವಿವರಿಸಿ ತಿಳಿಸು" ಎಂದನು. ಸಂಜಯನು "ರಾಜಾ! ಆ ರಾತ್ರಿಯಲ್ಲಿ ಕರ್ಣನಿಂದ ಘಟೋತ್ಕಚನು ಹತನಾದನಷ್ಟೆ? ಆದರಿಂದ ನಿಮ್ಮವರೆಲ್ಲರೂ ಸಂತೋಷದಿಂದ ಸಿಂಹನಾದಮಾಡುತ್ತ ಯುದ್ಧೋತ್ಸಾಹದಿಂದ ಮುಂದುವರಿದು, ಪಾಂಡವಸೈನ್ಯವನ್ನು ಸಿಕ್ಕಿದ ಕಡೆಯಲ್ಲಿ ಕೊಲ್ಲುತ್ತಿದ್ದರು. ಆ ಭಯಂಕರ ರಾತ್ರಿಯಲ್ಲಿ ಈ ಅನರ್ಥವನ್ನು ನೋಡಿ ಧರ್ಮರಾಜನು ಮಹತ್ತಾದ ಭಯದಿಂದಲೂ, ಚಿಂತೆಯಿಂದಲೂ ಭೀಮನನ್ನು ಕರೆದು ಹೀಗೆಂದನು. "ವತ್ಸ ಭೀಮಾ! ಅದೋ! ಈಗಲೇ ನೀನು ಹೋಗಿ ಆ ಕೌರವಸೈನ್ಯವನ್ನು ಇದಿರಿಸಬೇಕು. ನಮ್ಮ ಸೈನ್ಯದ ವಿನಾಶದಿಂದಲೂ, ಘಟೋತ್ಕಚನ ಮರಣದಿಂದಲೂ ನನ್ನ ಮನಸ್ಸಿಗೆ ಏನೂ ತೋರದಂತಾಗಿದೆ. ನನ್ನ ಹೃದಯವು ದುಃಖದಿಂದ ತಪಿಸುತ್ತಿದೆ" ಎಂದನು. ಹೀಗೆಂದು ಭೀಮನಿಗೆ ಹೇಳಿ ಧರ್ಮರಾಜನು ತನ್ನ ರಥದಮೇಲೆ ಹೋಗಿ ಕುಳಿತನು. ಅವನಿಗೆ ವ್ಯಸನದಿಂದ ಕಣ್ಣುಗಳಲ್ಲಿ ನೀರು ಉಕ್ಕಿಬರುತ್ತಿದ್ದಿತು. ಬಾರಿಬಾರಿಗೂ ನಿಟ್ಟುಸಿರನ್ನು ಬಿಡುತ್ತಿದ್ದನು. ಕರ್ಣನ ಪರಾಕ್ರಮವನ್ನು ನೆನೆಸಿಕೊಂಡಹಾಗೆ ಅವನ ಮನಸ್ಸಿಗೆ ಮಹತ್ತಾದ ಚಿಂತೆ ಹುಟ್ಟಿ ಮಂಕುಹಿಡಿದಂತೆ ಕುಳಿತಿದ್ದನು. ಆ ಸ್ಥಿತಿಯನ್ನು ನೋಡಿ ಕೃಷ್ಣನು ಅವನನ್ನು ಕುರಿತು "ಧರ್ಮರಾಜಾ! ನೀನು ಹೀಗೆ ವ್ಯಥೆಪಡಬಾರದು.

ಪ್ರಾಕೃತಮನುಷ್ಯರಂತೆ ನೀನು ಇಂತಹ ಚಿಂತೆಗೆ ಅವಕಾಶಕೊಡುವುದು ಸರಿಯಲ್ಲ. ನಿನ್ನಂತವನಿಗೆ ಇದು ಯೋಗ್ಯವಲ್ಲ. ರಾಜಾ! ಎದ್ದು ನಿಲ್ಲು! ಯುದ್ಧಕ್ಕೆ ಹೊರಡು! ನಿನ್ನಮೇಲೆ ಬಿದ್ದಿರುವ ದೊಡ್ಡ ಭಾರವನ್ನು ನೀನು ವಹಿಸದೆ ತೀರದು. ನೀನೇ ಹೀಗೆ ಧೈರ್ಯಗೆಟ್ಟು ಕುಳಿತರೆ, ನಮಗೆ ಜಯವು ಸಂಶಯಾಸ್ಪದವಾಗುವುದು" ಎಂದನು. ಕೃಷ್ಣನ ಈ ಸಮಾಧಾನವಾಕ್ಯವನ್ನು ಕೇಳಿ ಧರ್ಮರಾಜನು ಕೈಗಳಿಂದ ಕಣ್ಣನ್ನೊರೆಸಿಕೊಂಡು "ಮಹಾಬಾಹೂ! ಕೃಷ್ಣಾ! ನಾನು ಧರ್ಮಗಳ ಉತ್ತಮಮಾರ್ಗಗಳನ್ನೆಲ್ಲ ಕೇಳಿ ಬಲ್ಲೆನು. ಇತರರು ಮಾಡಿದ ಉಪಕಾರವನ್ನು ನೆನೆಸದೆ ಇರತಕ್ಕವನು ಬ್ರಹ್ಮಹತ್ಯಾಪಾತಕದ ಫಲಕ್ಕೆ ಗುರಿಯಾಗುವನು. ಈಗ ನಮ್ಮ ಸ್ಥಿತಿಯೂ ಅದೇ ವಿಧವಾಯಿತು. ನಾವು ಕಾಡಿನಲ್ಲಿದ್ದಾಗ, ಮಹಾತ್ಮನಾದ ಆ ಘಟೋತ್ಕಚನು ಇನ್ನೂ ಸಣ್ಣ ಬಾಲಕನಾಗಿದ್ದರೂ, ನಮಗೆ ಎಷ್ಟೋವಿಧದಲ್ಲಿ ಸಹಾಯ ಮಾಡಿದನು. ಅರ್ಜುನನು ದಿವ್ಯಾಸ್ತ್ರಗಳನ್ನು ಪಡೆಯುವುದಕ್ಕಾಗಿ ನಮ್ಮನ್ನು ಬಿಟ್ಟು ಅಗಲಿಹೋಗಿದ್ದಾಗ, ಘಟೋತ್ಕಚನೇ ಕಾಮ್ಯಕವನದಲ್ಲಿ ನಮ್ಮೊಡನೆ ಇದ್ದುಕೊಂಡು, ಅರ್ಜುನನು ಹಿಂತಿರುಗಿ ಬರುವವರೆಗೆ ನಮಗೆ ಸಹಾಯಕನಾಗಿದ್ದನು. ಅದರಿಂದಾಚೆಗೆ ನಾವು ಗಂಧಮಾದನಕ್ಕೆ ಪ್ರಯಾಣ ಹೊರಟಾಗ, ಅಲ್ಲಿನ ದುರ್ಗಪ್ರದೇಶಗಳನ್ನೆಲ್ಲ ದಾಟಿಸಿದನು. ದ್ರೌಪದಿಯು ದಾರಿನಡೆದು ಬಹಳ ಆಯಾಸಪಟ್ಟಿದ್ದಾಗ ಈ ಘಟೋತ್ಕಚನೇ ತನ್ನ ಬೆನ್ನಿನಮೇಲೆ ಅವಳನ್ನು ಹೊತ್ತುಕೊಂಡು ಕಾಡುಮಾರ್ಗಗಳನ್ನೆಲ್ಲ ದಾಟಿಸಿದನು. ಯುದ್ಧಕಾಲದಲ್ಲಿಕೂಡ ನಮಗಾಗಿ ಅವನು ಎಷ್ಟೋ ದುಷ್ಕರಕಾರ್ಯಗಳನ್ನು ನಡೆಸಿದನು. ಕೃಷ್ಣಾ! ನಿಜವಾಗಿ ಹೇಳುವುದಾದರೆ, ನನಗೆ ನನ್ನ ತಮ್ಮನಾದ ಸಹದೇವನಲ್ಲಿ ಎಷ್ಟು ಪ್ರೇಮವೋ, ಅದಕ್ಕೆ ಇಮ್ಮಡಿಯಾದ ಪ್ರೇಮವು ಘಟೋತ್ಕಚನಲ್ಲಿದ್ದಿತು. ಮಹಾಬಾಹುವಾದ ಆ ರಾಕ್ಷಸನು ನನಗೆ ಪರಮಭಕ್ತನು. ನನಗೆ ಅವನು ಅತ್ಯಂತಪ್ರಿಯನು. ಅದರಂತೆ ಅವನೂ ನನ್ನನ್ನು ಪ್ರೀತಿಸುತ್ತಿದ್ದನು. ಈ ಕಾರಣದಿಂದಲೇ ನನಗೆ ಅವನನ್ನು ನೆನೆಸಿಕೊಂಡು ಮನಸ್ಸು ಮೋಹಾಕುಲವಾಗುತ್ತಿದೆ. ಕೃಷ್ಣಾ! ಅದೋ! ನೋಡು! ಆ ಘಟೋತ್ಕಚನ ವಧದಿಂದ ಉತ್ಸಾಹಿತರಾದ ಕೌರವರು ನಮ್ಮ ಸೈನ್ಯಗಳನ್ನು ಬಡಿದೋಡಿಸುತ್ತಿರುವರು. ಕರ್ಣದ್ರೋಣರೂಕೂಡ ಈ

ರಾತ್ರಿಯುದ್ಧದಲ್ಲಿ ಮದಿಸಿದ ಆನೆಗಳು ಹೊಡಕೆಯ ತೋಟವನ್ನು ತುಳಿದು ಮೆಟ್ಟುವಂತೆ ನಮ್ಮ ಸೈನ್ಯಗಳನ್ನೆಲ್ಲ ಧ್ವಂಸಮಾಡುತ್ತಿರುವರು. ಭೀಮಸೇನನ ಬಾಹುಬಲವನ್ನೂ, ಅರ್ಜುನನ ಅಸ್ತ್ರಚಾತುರ್ಯವನ್ನೂ ಲಕ್ಷ್ಯಮಾಡದೆ, ಕೌರವರು ಹೇಗೆ ಅತಿಕ್ರಮಿಸಿಹೋಗುತ್ತಿರುವರೋ ನೋಡು. ಆದೋ! ಅಲ್ಲಿ ದ್ರೋಣನೂ, ಕರ್ಣನೂ, ದುರ್ಯೋಧನನೂ ಯುದ್ಧದಲ್ಲಿ ಆ ರಾಕ್ಷಸನನ್ನು ಕೊಂದ ಸಂತೋಷದಿಂದ ಹೇಗೆ ಸಿಂಹನಾದಮಾಡುತ್ತಿರುವರೋ ನೋಡು. ಅಯ್ಯೋ ಕೃಷ್ಣಾ! ಪಾಂಡವರಾದ ನಾವೂ, ನೀನೂ ಬದುಕಿರುವಾಗಲೇ, ಆ ಸೂತಪುತ್ರನಿಂದ ಹಿಡಿಂಬಾಕುಮಾರನು ಹೇಗೆತಾನೇ ಮೃತ್ಯುವಿಗೀಡಾದನು? ನಮ್ಮೆಲ್ಲರನ್ನೂ ಲಕ್ಷ್ಯಮಾಡದೆ, ಅರ್ಜುನನೂ ಕಣ್ಣೆದಿರಾಗಿ ನಿಂತು ನೋಡುತ್ತಿರುವಾಗ, ಶತ್ರುಗಳು ಘಟೋತ್ಕಚನನ್ನು ಕೊಂದುಬಿಟ್ಟರು. ವಾಸುದೇವಾ! ದುರಾತ್ಮರಾದ ಆ ಧೃತರಾಷ್ಟ್ರಪುತ್ರರು ಹಿಂದೆ ಅಭಿಮನ್ಯುವನ್ನು ಕೊಂದುದೇನೂ ಅಷ್ಟು ವಿಶೇಷವಲ್ಲ. ಆಗ ಅರ್ಜುನನು ಎಲ್ಲಿಯೋ ಬೇರೆಕಡೆಯಿದ್ದನು. ಅಲ್ಲದೆ ಸೈಂಧವನು ನಮ್ಮೆಲ್ಲರನ್ನೂ ವ್ಯೂಹದೊಳಕ್ಕೆ ಹೋಗದಂತೆ ದ್ವಾರದಲ್ಲಿ ತಡೆದುಬಿಟ್ಟನು. ಆ ಸಮಯದಲ್ಲಿ ಏಕಾಕಿಯಾಗಿ ಸಿಕ್ಕಿದ ಅಭಿಮನ್ಯುವನ್ನು ಅವರು ಸುಲಭವಾಗಿ ಕೊಲ್ಲಬಹುದಾಯಿತು. ಆ ಕಾರ್ಯದಲ್ಲಿ ದ್ರೋಣನೂ, ಅವನ ಮಗನಾದ ಅಶ್ವತ್ಥಾಮನೂ, ಮುಖ್ಯನಿಮಿತ್ತವೆನಿಸಿದರು. ಆಗ ದ್ರೋಣನೇ ಕರ್ಣನಿಗೆ ಅಭಿಮನ್ಯುವನ್ನು ಕೊಲ್ಲತಕ್ಕ ಉಪಾಯವನ್ನು ತಿಳಿಸಿದನು. ಅಭಿಮನ್ಯುವು ಕತ್ತಿಯನ್ನು ಹಿಡಿದು ನಿಂತಿದ್ದಾಗ, ಆ ಕತ್ತಿಯನ್ನು ಒಬ್ಬನು ಕತ್ತರಿಸಿದನು. ಕೃತವರ್ಮನು ಘಾತುಕಕೃತ್ಯದಿಂದ ಅವನ ಕುದುರೆಗಳನ್ನೂ, ಅವನ ಪಕ್ಕದ ಇಬ್ಬರು ಸಾರಥಿಗಳನ್ನೂ ಕೊಂದುಬಿಟ್ಟನು. ಅದೇಸಮಯದಲ್ಲಿ ಬೇರೆ ಕೆಲವು ಧನುರ್ಧಾರಿಗಳು ಆ ಸುಭದ್ರಾಪುತ್ರನನ್ನು ಕೊಂದುಕೆಡಹಿದರು. ಹೀಗೆ ಅನೇಕರು ಸೇರಿ, ನಾವೂ ಇಲ್ಲದಿದ್ದಾಗ, ಅಭಿಮನ್ಯುವನ್ನು ಕೊಂದರು. ಆ ಅಭಿಮನ್ಯುವಧದಲ್ಲಿ ಸೈಂಧವನು ನಡೆಸಿದ ಕಾರ್ಯವೇನೂ ಅಷ್ಟು ದೊಡ್ಡದಲ್ಲ. ಆ ಅಲ್ಪಕಾರಣವನ್ನು ಹಿಡಿದು ಅರ್ಜುನನು ಸೈಂಧವನನ್ನು ಕೊಂದುಬಿಟ್ಟನು. ಅದೂ ನನ್ನ ಮನಸ್ಸಿಗೆ ಅಷ್ಟಾಗಿ ಒಪ್ಪಲಿಲ್ಲ. ಅಭಿಮನ್ಯುವಧದಿಂದ ಕುಪಿತರಾದ ನಾವು,

ಶತ್ರುಗಳಮೇಲೆ ಹಗೆಯನ್ನು ತೀರಿಸಿಕೊಳ್ಳುವುದಾಗಿದ್ದರೆ, ಮೊದಲು ಆ ಕರ್ಣದ್ರೋಣರಿಬ್ಬರನ್ನೇ ಕೊಲ್ಲಬೇಕಾಗಿತ್ತೆಂಬುದು ನನ್ನ ಅಭಿಪ್ರಾಯವು. ನಮ್ಮ ದುಃಖಗಳಿಗೆಲ್ಲ ಅವರಿಬ್ಬರೇ ಮೂಲವು. ಅವರ ಬಲದಿಂದಲೇ ದುರ್ಯೋಧನನು ಯುದ್ಧದಲ್ಲಿ ಉತ್ಸಾಹಗೊಂಡಿರುವನು. ಆ ಕರ್ಣದ್ರೋಣರಿಬ್ಬರನ್ನೂ ನಾವು ವಧಿಸಬೇಕಾಗಿದ್ದ ಸಂದರ್ಭದಲ್ಲಿ, ಅದನ್ನು ಬಿಟ್ಟು ಅರ್ಜುನನು, ಎಲ್ಲಿಯೋ ದೂರದಲ್ಲಿದ್ದ ಸೈಂಧವನನ್ನು ಹುಡುಕಿಕೊಂಡು ಹೋಗಿ ಅವನನ್ನು ಕೊಂದುಬಿಟ್ಟನು. ಕೃಷ್ಣಾ! ಈಗ ಆ ಕರ್ಣನನ್ನು ಕೊಲ್ಲುವುದಕ್ಕಾಗಿ ಇದೋ ಈಗ ನಾನೇ ಹೊರಡುವೆನು. ಈಗ ಭೀಮನು ದ್ರೋಣನ ಸೈನ್ಯದೊಡನೆ ಯುದ್ಧಮಾಡುತ್ತಿರುವನು. ನಾನು ಆ ಕರ್ಣನಿಗೆ ಇದಿರಾಗುವೆನು" ಎಂದು ಹೇಳಿ, ಆತುರದಿಂದ ದೊಡ್ಡ ಶಂಖಧ್ವನಿಯನ್ನು ಮಾಡಿದನು. ಮಹಾಧನುಸ್ಸನ್ನು ಕೈಗೆತ್ತಿಕೊಂಡು ಟಂಕಾರ ಮಾಡುತ್ತ ವೇಗದಿಂದ ಹೊರಟುಬಿಟ್ಟನು. ಇದನ್ನು ನೋಡಿ ಶಿಖಂಡಿಯು ಸಾವಿರರಥಗಳನ್ನೂ, ಮುನ್ನೂರು ಆನೆಗಳನ್ನೂ, ಐದುಸಾವಿರ ಅಶ್ವಯೋಧರನ್ನೂ ಪಾಂಚಾಲ ಪ್ರಭದ್ರಕರನ್ನೂ ಕೂಡಿಸಿಕೊಂಡು, ಧರ್ಮರಾಜನ ಹಿಂದೆ ಹೊರಟನು. ಪಾಂಚಾಲರೂ, ಪಾಂಡವರೂ ನಾನಾಕಡೆಗಳಲ್ಲಿ ಯುದ್ಧ ಸೂಚಕವಾದ ಭೇರಿಗಳನ್ನೂ, ಪಣವ, ಆನಕ, ಗೋಮುಖಾದಿ ವಾದ್ಯಗಳನ್ನೂ, ಶಂಖಗಳನ್ನೂ ನುಡಿಸಿದರು. ಒಬ್ಬೊಬ್ಬರೂ ಯುದ್ಧಕವಚಗಳನ್ನು ಧರಿಸಿ, ತೋಳುಗಳನ್ನೂ, ಕೈಗಳನ್ನೂ ತಟ್ಟುತ್ತ ಹೊರಟರು. ಹೀಗೆ ಧರ್ಮರಾಜನು ಆತುರದಿಂದ ಯುದ್ಧಕ್ಕೆ ಹೋಗುತ್ತಿರುವುದನ್ನು ನೋಡಿ ಕೃಷ್ಣನು ಅರ್ಜುನನನ್ನು ಕುರಿತು "ಪಾರ್ಥಾ! ಅದೋ! ನೋಡು! ನಿನ್ನ ಅಣ್ಣನು ಕೋಪವಶನಾಗಿ ಕರ್ಣನನ್ನು ಕೊಲ್ಲಬೇಕೆಂದು ತಾನೇ ಹೊರಟುಬಿಟ್ಟಿರುವನು. ಈಗ ನೀನು ಅವನನ್ನು ಉಪೇಕ್ಷೆಮಾಡುವುದು ಯುಕ್ತವಲ್ಲ. ಅವನನ್ನು ಈಗ ಕರ್ಣನ ಮುಂದೆ ಬಿಡಬಾರದು" ಎಂದು ಹೇಳಿ, ಒಡನೆಯೇ ತನ್ನ ರಥವನ್ನು ಬಿಟ್ಟುಕೊಂಡು ಧರ್ಮರಾಜನನ್ನು ಹಿಂಬಾಲಿಸುವುದಕ್ಕಾಗಿ ಹೊರಟನು. ಇದು ಹೀಗಿರಲು ಶೋಕಾಗ್ನಿಯಿಂದ ದಹಿಸಲ್ಪಡುವಂತೆ ಚಿಂತಾಕುಲನಾಗಿ ಕರ್ಣನನ್ನು ಕೊಲ್ಲಬೇಕೆಂಬುದ್ದೇಶಿಸಿ ಹೊರಟಿರುವ ಧರ್ಮರಾಜನ ಉದ್ದೇಶವನ್ನು ತಿಳಿದು, ವ್ಯಾಸಮಹರ್ಷಿಯು ಥಟ್ಟನೆ ಅವ

ನಿಗಿದಿರಾಗಿ ಕಾಣಿಸಿಕೊಂಡು ಹೀಗೆಂದನು. “ಓ ಧರ್ಮಪುತ್ರಾ! ನೀನು ಇಷ್ಟೇಕೆ ಆತುರಪಡುತ್ತಿರುವೆ? ಈಗ ಅರ್ಜುನನು ಕರ್ಣನ ಕೈಯಿಂದ ಸಾಯದೆ ಬದುಕಿದುದೇ ನಿನ್ನ ಭಾಗ್ಯವೆಂದು ತಿಳಿ. ಅರ್ಜುನನ ವಧವನ್ನು ದ್ದೇಶಿಸಿಯೇ ಕರ್ಣನು ಆ ಅಮೋಘಶಕ್ತಿಯನ್ನು ತನ್ನಲ್ಲಿ ರಕ್ಷಿಸಿಟ್ಟಿದ್ದನು. ಈ ಸ್ಥಿತಿಯಲ್ಲಿ ಅರ್ಜುನನು ಅವನಿಗಿದಿರಾಗಿ ಯುದ್ಧಕ್ಕೆ ನಿಲ್ಲದಿದ್ದುದೇ ನಿಮ್ಮೆಲ್ಲರ ಭಾಗ್ಯವು. ಕರ್ಣಾರ್ಜುನರಿಬ್ಬರೂ ಸಮಾನಬಲವುಳ್ಳವರು. ಇಬ್ಬರೂ ಎಲ್ಲಾ ದಿವ್ಯಾಸ್ತ್ರಗಳನ್ನೂ ಬಲ್ಲವರು. ಇಬ್ಬರೂ ಅನ್ಯೋನ್ಯ ಸ್ಪರ್ಧೆಯುಳ್ಳವರು. ತನ್ನ ಅಸ್ತ್ರಗಳೆಲ್ಲ ಅರ್ಜುನನಿಂದ ಭಗ್ನವಾದರೆ, ಆಗ ಕರ್ಣನು ತನಗೆ ಇಂದ್ರದತ್ತವಾಗಿದ್ದ ಶಕ್ತಿಯನ್ನು ಆ ಅರ್ಜುನನಮೇಲೆ ಬಿಡುವುದಾಗಿ ನಿಶ್ಚಯಿಸಿದ್ದನು. ಅವನು ತಪ್ಪದೆ ಹಾಗೆಯೇ ನಡೆಸುತ್ತಿದ್ದನು. ಆಗ ನಿನಗೆ ಇದಕ್ಕಿಂತಲೂ ಅತಿಭಯಂಕರವಾದ ವ್ಯಸನವು ಪ್ರಾಪ್ತವಾಗುತ್ತಿದ್ದಿತು. ದೈವಾಧೀನದಿಂದ ಈಗ ಅದು ತಪ್ಪಿತು. ಕರ್ಣನು ನಿಮ್ಮ ಭಾಗ್ಯವಶದಿಂದ ಆ ಶಕ್ತಿಯನ್ನು ಘಟೋತ್ಕಚನಮೇಲೆ ಉಪಯೋಗಿಸಿ, ಆ ರಾಕ್ಷಸನನ್ನು ಕೊಲ್ಲುವಂತಾಯಿತು. ಆ ಘಟೋತ್ಕಚನು ಕಾಲದಿಂದಲೇ ಮೊದಲು ಹತನಾಗಿದ್ದವನು. ಈಗ ಇಂದ್ರದತ್ತವಾದ ಶಕ್ತಿಯು ಅದರಲ್ಲಿ ಕೇವಲ ನಿಮಿತ್ತಮಾತ್ರವಾಯಿತು. ಯುಧಿಷ್ಠಿರಾ! ಹೆಚ್ಚೇಕೆ? ನಿನ್ನ ಕ್ಷೇಮಕ್ಕಾಗಿಯೇ ಆ ರಾಕ್ಷಸನು ಹತನಾದನೆಂದು ತಿಳಿ. ನೀನು ಕರ್ಣನಮೇಲೆ ಕೋಪಿಸದೆ, ದುಃಖವಶನಾಗದೆ ಸಮಾಧಾನದಿಂದಿರು. ಹುಟ್ಟಿದ ಪ್ರಾಣಿಗಳಿಗೆಲ್ಲ ಹೇಗಿದ್ದರೂ ಇದೇವಿಧವಾದ ಗತಿಯು ಸಿದ್ಧವು. ನಿನ್ನ ಸಹೋದರರೊಡನೆಯೂ, ಇತರ ರಾಜರೊಡನೆಯೂ ಸೇರಿ ಯುದ್ಧಮಾಡು. ಇಲ್ಲಿಂದ ಐದನೆಯ ದಿನದಲ್ಲಿ ಭೂಮಿಯು ನಿನ್ನದಾಗುವುದು. ಸದಾ ಧರ್ಮರತನಾಗಿ ರಾಜ್ಯವನ್ನು ನಡೆಸು. ಅಹಿಂಸೆ, ತಪಸ್ಸು, ದಾನ, ತಾಳ್ಮೆ, ಸತ್ಯವೆಂಬೀ ಧರ್ಮಗಳನ್ನು ಬಿಡದೆ ಅನುಸರಿಸುತ್ತಿರು. ಎಲ್ಲಿ ಧರ್ಮವೋ ಅಲ್ಲಿ ಜಯವು” ಎಂದು ಹೇಳಿ ವ್ಯಾಸಮುನಿಯು ಅಲ್ಲಿಯೇ ಕಣ್ಮರೆಯಾದನು.

ಇದು ನೂರ ಎಂಭತ್ತುನಾಲ್ಕನೆಯ ಅಧ್ಯಾಯವು.

**ಇಲ್ಲಿಗೆ ಘಟೋತ್ಕಚವಧಪರ್ವವು ಮುಗಿದುದು.**

# ದ್ರೋಣವಧಪರ್ವವು

---

—{ ನಿದ್ರಾವಶವಾಗಿದ್ದ ತನ್ನ ಸೈನ್ಯಗಳಿಗೆ ಅರ್ಜುನನು ನಿದ್ರೆಗಾಗಿ ವಿಶ್ರಾಂತಿಯನ್ನು ಕೊಟ್ಟುದು. ಚಂದ್ರೋದಯವಾದ ಮೇಲೆ ತಿರುಗಿ ಯುದ್ಧಾರಂಭವು. }—

ಮಹಾರಾಜಾ! ವ್ಯಾಸನ ಹೇಳಿಕೆಯಮೇಲೆ ಯುಧಿಷ್ಠಿರನು ಕರ್ಣನನ್ನು ತಾನು ಕೊಲ್ಲಬೇಕೆಂಬ ಉದ್ದೇಶವನ್ನು ಬಿಟ್ಟು ಹಿಂತಿರುಗಿದನು. ಆದರೆ, ಆ ರಾತ್ರಿಯೆಲ್ಲಾ ಅವನು ಘಟೋತ್ಕಚನ ಮರಣವನ್ನುಕುರಿತು ದುಃಖಾಕ್ರೋಶಗಳಿಂದ ಕೊರಗುತ್ತಿದ್ದನು. ಇಷ್ಟರಲ್ಲಿ ಅತ್ತಲಾಗಿ ಭೀಮನೊಬ್ಬನೇ ದ್ರೋಣನ ಸೈನ್ಯವನ್ನು ಇದಿರಿಸುತ್ತಿರುವುದನ್ನು ನೋಡಿ ಅವನು ಧೃಷ್ಟದ್ಯುಮ್ನನನ್ನು ಕರೆದು "ಓ ಪಾಂಚಾಲಕುಮಾರಾ! ನೀನು ಹೋಗಿ ದ್ರೋಣನನ್ನು ಇದಿರಿಸು! ಭೀಮನಿಗೆ ವಿಶ್ರಾಂತಿಯನ್ನು ಕೊಡು. ನೀನು ಆ ದ್ರೋಣನ ವಧಕ್ಕಾಗಿಯೇ ಅಗ್ನಿಯಿಂದ ಹುಟ್ಟಿದವನು. ನೀನು ಈಗಲೇ ಧನುರ್ಬಾಣ ಖಡ್ಗ ಕವಚಗಳನ್ನೆಲ್ಲ ಧರಿಸಿ ಹೊರಡು! ನಿನಗೆ ದ್ರೋಣನಿಂದ ಹೇಗೂ ಮರಣಭಯವಿಲ್ಲ. ಉತ್ಸಾಹದಿಂದ ಹೊರಡು. ಜನಮೇಜಯನು, ಶಿಖಂಡಿ, ದೌರ್ಮುಖಿ, ಯಶೋಧರನು, ನಕುಲ ಸಹದೇವರು, ಉಪಪಾಂಡವರು, ಪ್ರಭದ್ರಕರು, ತಮ್ಮ ಪುತ್ರಸಹೋದರರೊಡಗೂಡಿದ ದ್ರುಪದವಿರಾಟರು, ಸಾತ್ಯಕಿ, ಕೇಕಯರು, ಅರ್ಜುನನು, ನೀವೆಲ್ಲರೂ ಒಂದಾಗಿ ಸೇರಿಯಾದರೂ, ದ್ರೋಣನನ್ನಿದಿರಿಸಿ ಅವನನ್ನು ಕೊಲ್ಲುವ ಪ್ರಯತ್ನಮಾಡಬೇಕು. ನಮ್ಮಲ್ಲಿರುವ ರಥ ಗಜ ತುರಗ ಪದಾತಿಗಳೆಲ್ಲ ಸಾಕಲ್ಯವಾಗಿ ಯುದ್ಧಕ್ಕೆ ಹೊರಡಲಿ" ಎಂದನು. ಎಲ್ಲರೂ ಹಾಗೆಯೇ ಯುದ್ಧಸನ್ನದ್ಧರಾಗಿ ಹೊರಟರು. ಇವರನ್ನು ನೋಡಿ ದ್ರೋಣನೂ ಯುದ್ಧಸನ್ನದ್ಧನಾಗಿ ಇವರನ್ನಿದಿರಿಸಿದನು. ನಿನ್ನ ಮಗನಾದ ದುರ್ಯೋಧನನು ದ್ರೋಣನಿಗೆ ಅಪಾಯವಿಲ್ಲದಂತೆ ರಕ್ಷಿಸುವುದಕ್ಕಾಗಿ, ತನ್ನ ಸರ್ವಸೈನ್ಯಸನ್ನಾಹದೊಡನೆ ಪಾಂಡವರನ್ನಿದಿರಿಸಿಬಂದನು. ದೊಡ್ಡ ಯುದ್ಧವು ಆರಂಭವಾಯಿತು. ಇಷ್ಟರಲ್ಲಿ ಸೈನಿಕರೂ, ವಾಹನಗಳೂ ಬಹಳ ಆಯಾಸಪಟ್ಟು

ಹೋದುವು. ಪಾಂಡವರೂ, ಕೌರವರೂ ಬಹುಪ್ರಯತ್ನದಿಂದ ವೀರಗರ್ಜನೆಗಳೊಡನೆ ಹೊಡೆದಾಡುತಿದ್ದರು. ಕೊನೆಗೆ ಆ ರಾತ್ರಿಯುದ್ಧದಿಂದ ಸೈನ್ಯಗಳಿಗೆ ಮೇಲಿಮೇಲಿ ಆಯಾಸವು ಹೆಚ್ಚಿ, ನಿದ್ರೆಯಿಂದ ಎಲ್ಲರಿಗೂ ಕಣ್ಣು ಬಿಗಿಯುತ್ತಿದ್ದಿತು. ಆವರಿಗೆ ಯುದ್ಧದಲ್ಲಿ ಕೈಕಾಲುಗಳೇ ಸರಿಯಾಗಿ ನಡೆಯುತ್ತಿರಲಿಲ್ಲ. ಮಹಾರಥರೆಲ್ಲರೂ ಬಳಲಿಹೋದರು. ಮೂರು ಯಾಮಗಳುಳ್ಳ ರಾತ್ರಿಯು ಅವರಿಗೆ ಸಾವಿರಯಾಮಗಳಂತೆ ದೀರ್ಘವಾಗಿ, ಮತ್ತು ಭಯಂಕರವಾಗಿ ತೋರಿತು. ನಿದ್ದೆಗಣ್ಣಿನಿಂದಲೇ ಒಬ್ಬರನ್ನೊಬ್ಬರು ಕೊಲ್ಲುತ್ತ, ಶತ್ರುಗಳಿಂದ ಗಾಯಹೊಂದುತ್ತ, ಬಹುಕಷ್ಟದಿಂದ ಕಾಲವನ್ನು ತಳ್ಳುತ್ತಿದ್ದರು. ಉಭಯಸೈನ್ಯಗಳ ಸೈನಿಕರುಗಳಿಗೂ ಯುದ್ಧೋತ್ಸಾಹವು ತಗ್ಗಿತು. ಆವರ ಮನಸ್ಸು ಮೇಲಿಮೇಲಿ ಬೇಸರಗೊಂಡಿತು. ಅನೇಕರಿಗೆ ಕೈಯಲ್ಲಿದ್ದ ಧನುರ್ಬಾಣಗಳು ಜಾರಿಬಿದ್ದುವು. ಅಸ್ತ್ರಗಳೂ ಮರೆತುಹೋದುವು. ನಿದ್ರೆಯಿಂದ ಯಾವ ಕಾರ್ಯವೂ ನಡೆಯದೆ, ಸುಮ್ಮನೆ ಅಲ್ಲಲ್ಲಿ ತಿರುಗಾಡುತ್ತ ಕಾಲವನ್ನು ಕಳೆಯುತ್ತಿದ್ದರು. ಆಗಲೂ ಕೆಲವರು ತಮ್ಮ ಕ್ಷತ್ರಿಯಧರ್ಮವನ್ನು ಯೋಚಿಸಿ, ಸೈನ್ಯವನ್ನು ಬಿಟ್ಟುಹೋಗದೆ ಅಲ್ಲಿಯೇ ನಿಂತಿದ್ದರು. ಕೆಲವರು ಕೈಯಲ್ಲಿದ್ದ ಅಸ್ತ್ರಗಳನ್ನು ಬಿಸುಟು, ನಿದ್ರೆಯಿಂದ ಮೈಮರೆತರು. ರಥ, ಗಜ, ತುರಗಗಳಮೇಲೆ ಯುದ್ಧಮಾಡುತ್ತಿದ್ದವರು ಅಲ್ಲಲ್ಲಿಯೇ ನಿದ್ರೆಯಿಂದ ಮಲಗಿಬಿಟ್ಟರು. ಆ ರಣಾಂಗಣದಲ್ಲಿ ನಡೆಯತಕ್ಕ ವ್ಯಾಪಾರವೇನೆಂಬುದೇ ಯಾರಿಗೂ ತಿಳಿಯಲಿಲ್ಲ. ಹೀಗೆ ಮೈಮರೆತು ಮಲಗಿದ್ದವರನ್ನೂ, ನಿದ್ರೆಯಿಂದ ಕನವರಿಸುತ್ತಿದ್ದವರನ್ನೂ ಬಿಡದೆ ಯೋಧರು ಬಂದು ವಧಿಸುತ್ತಿದ್ದರು. ನಿದ್ರೆಯ ಕಣ್ಣಿನಲ್ಲಿ ಕೆಲವರು ತಮ್ಮವರೆಂದೂ, ಶತ್ರುಗಳೆಂದೂ ತಿಳಿಯದೆ ಹೊಡೆಯುತ್ತಿದ್ದರು. ಕೆಲವುವೇಳೆ ತಮ್ಮನ್ನೇ ತಾವು ಹೊಡೆದುಕೊಳ್ಳುತ್ತಿದ್ದರು. ಅನೇಕರು ನಿದ್ರಾವಶರಾಗಿ ಸಿಕ್ಕಿದಹಾಗೆ ಮಾತಾಡುತ್ತಿದ್ದರು. ಕೆಲವರು ನಿದ್ರೆಯಿಂದ ಕೆಂಪೇರಿದ ಕಣ್ಣುಳ್ಳವರಾಗಿ ಅಲ್ಲಲ್ಲಿ ಸುತ್ತುತ್ತ, ಯುದ್ಧಮಾಡಬೇಕಲ್ಲಾ, ಎಂಬ ಸಂಕಟದಿಂದ ನಿಲ್ಲುತ್ತಿದ್ದರು. ಒಮ್ಮೊಮ್ಮೆ ನಿದ್ರೆಯ ಕಣ್ಣಿನಿಂದಲೇ ಇದಿರಾಳಿಗಳನ್ನು ಹೊಡೆಯುವುದಕ್ಕಾಗಿ ಮುಂದುವರಿಯುತ್ತಿದ್ದರು. ಆ ಭಯಂಕರವಾದ ಕತ್ತಲೆಯಲ್ಲಿ ನಿದ್ರೆಯಿಂದ ಪ್ರಜ್ಞೆಯೇ ಇಲ್ಲದ ಕೆಲವರಿಗೆ, ಶತ್ರುಗಳು ಬಂದು ತಮ್ಮಮೇಲೆ ಬಿದ್ದು ಹೊಡೆ

ಯುವುದೂಕೂಡ ತಿಳಿಯದಂತಾಯಿತು. ಉಭಯಸೈನ್ಯಗಳ ಈ ಸ್ಥಿತಿಯನ್ನು ನೋಡಿ ಅರ್ಜುನನು, ಆ ರಣಭೂಮಿಗೆಲ್ಲಾ ಕೇಳಿಸುವಂತೆ ಉಚ್ಚಧ್ವನಿಯಿಂದ ಹೀಗೆಂದು ಹೇಳಿದನು. "ಎಲೈ ಸೈನಿಕರೇ! ನೀವೆಲ್ಲರೂ ಬಹಳವಾಗಿ ಬಳಲಿದಂತಿದೆ! ನಿಮಗೂ, ನಿಮ್ಮ ವಾಹನಗಳಿಗೂ ನಿದ್ರೆಯು ಬಹಳವಾಗಿ ಬಾಧಿಸುವಂತಿದೆ! ಸೇನಾಧೂಳಿಯಿಂದಲೂ, ಕತ್ತಲೆಯಿಂದಲೂ ಯಾವುದೂ ಕಣ್ಣಿಗೆ ಬೀಳದಂತಾಗಿದೆ. ನಿಮಗೆ ಇಷ್ಟವಿದ್ದಪಕ್ಷದಲ್ಲಿ, ನೀವೆಲ್ಲರೂ ಸ್ವಲ್ಪಹೊತ್ತು ಯುದ್ಧವನ್ನು ನಿಲ್ಲಿಸಿ, ವಿಶ್ರಾಂತಿಯನ್ನು ತೆಗೆದುಕೊಳ್ಳಬಹುದು. ಈ ರಣರಂಗದಲ್ಲಿಯೇ ಮುಹೂರ್ತಕಾಲದವರೆಗೆ ಕಣ್ಣುಮುಚ್ಚಿ ಮಲಗಿರಿ. ನಿಮ್ಮ ದಣಿವಾರಿಸಿಕೊಂಡು, ನಿದ್ರೆಯು ತಿಳಿದಮೇಲೆ, ಚಂದ್ರೋದಯವಾದಕೂಡಲೆ ತಿರುಗಿ ನೀವು ಯುದ್ಧಸನ್ನದ್ಧರಾಗಿ ಬಂದು, ನಿಮ್ಮನಿಮ್ಮ ಪರಾಕ್ರಮವನ್ನು ತೋರಿಸಿ ಸ್ವರ್ಗಸಾಧನೆಗೆ ಪ್ರಯತ್ನಿಸಿರಿ" ಎಂದನು.

ಈ ಮಾತನ್ನು ಕೇಳಿ ಸೈನ್ಯಗಳಿಗೆಲ್ಲ ಪರಮಸಂತೋಷವಾಯಿತು. ತಮ್ಮೊಳಗೆ ಒಬ್ಬೊಬ್ಬರೂ ಅರ್ಜುನನನ್ನು ಕೊಂಡಾಡುತ್ತಿದ್ದರು. ಇದನ್ನು ನೋಡಿ ನಮ್ಮ ಸೈನಿಕರೂ ಕೂಡ "ಕರ್ಣಾ! ಕರ್ಣಾ! ಓ ದುರ್ಯೋಧನಾ! ನೀವೂ ಯುದ್ಧವನ್ನು ನಿಲ್ಲಿಸಿರಿ! ಪಾಂಡವಸೈನ್ಯವು ಯುದ್ಧದಿಂದ ವಿಮುಖವಾಗಿ ವಿಶ್ರಾಂತಿಯನ್ನು ಹೊಂದಿದೆ" ಎಂದರು. ಅದರಂತೆ ನಿನ್ನ ಸೈನ್ಯವೂ ಯುದ್ಧವನ್ನು ನಿಲ್ಲಿಸಿತು. ಅರ್ಜುನನ ದಯಾಬುದ್ಧಿಗಾಗಿ ದೇವತೆಗಳೂ, ಋಷಿಗಳೂ, ಉಭಯಸೈನ್ಯಗಳೂ ಬಹಳ ಸಂತೋಷದಿಂದ ಅವನನ್ನು ಕೊಂಡಾಡಿದುವು. ಅದರಂತೆ ಎಲ್ಲಾ ಸೈನ್ಯಗಳೂ ತಾವಿದ್ದಕಡೆಯಲ್ಲಿಯೇ ಸುಖವಾಗಿ ಮಲಗಿದುವು. ತಮಗೆ ವಿಶ್ರಾಂತಿಯು ದೊರತುದಕ್ಕಾಗಿ ಕೌರವಸೈನ್ಯಗಳೂ ಅರ್ಜುನನನ್ನು ಬಹಳವಾಗಿ ಕೊಂಡಾಡುತ್ತಿದ್ದುವು. ಆಗ ಕೆಲವರು ಅರ್ಜುನನನ್ನು ಕುರಿತು "ಓ ಮಹಾತ್ಮಾ! ಎಲ್ಲಾ ವೇದಗಳೂ, ಎಲ್ಲಾ ಅಸ್ತ್ರಗಳೂ ನಿನ್ನಲ್ಲಿ ನೆಲೆಗೊಂಡಿರುವುವು. ಬುದ್ಧಿಯೂ, ಪರಾಕ್ರಮವೂ, ಧರ್ಮವೂ, ಭೂತದಯೆಯೂ ನಿನ್ನಲ್ಲಿ ಪೂರ್ಣವಾಗಿರುವುವು. ನೀನು ನಮಗೆ ಈ ಸುಖವನ್ನು ಕೊಟ್ಟಂತೆ, ನಿನಗೂ ಸಂಪೂ

ರ್ಣಸುಖವುಂಟಾಗಲಿ. ನಿನ್ನ ಮನಸ್ಸಿಗೆ ಇಷ್ಟವಾದ ಕೋರಿಕೆಗಳೆಲ್ಲ ನಿನಗೆ ಶೀಘ್ರವಾಗಿ ಕೈಗೂಡಲಿ" ಎಂದು ಅರ್ಜುನನನ್ನು ಸ್ತೋತ್ರಮಾಡುತ್ತ ಹಾಗೆಯೇ ನಿದ್ರಾವಶರಾಗಿ ಮಲಗಿಬಿಟ್ಟರು. ಯುದ್ಧಕೋಲಾಹಲವೆಲ್ಲವೂ ಶಾಂತವಾಯಿತು. ರತಿಶ್ರಾಂತರಾದ ಪುರುಷರು ತಮ್ಮ ಪತ್ನಿಯರ ಸ್ತನಾಗ್ರಗಳಮೇಲೆ ಮಲಗುವಂತೆ, ಗಜಯೋಧರು ಆನೆಗಳ ಕುಂಭಸ್ಥಳಗಳನ್ನೇ ಅಪ್ಪಿಕೊಂಡು ಸುಖವಾಗಿ ಮಲಗಿದ್ದರು. ಕುದುರೆಯಮೇಲಿದ್ದವರು ಕುದುರೆಯಮೇಲೆಯೇ ಮಲಗಿದರು. ಪದಾತಿಗಳು ತಾವು ಕೈಯಲ್ಲಿ ಹಿಡಿದಿದ್ದ ಖಡ್ಗ ಗದಾಯುಧಗಳೊಡನೆ ನೆಲದಲ್ಲಿ ಮಲಗಿದರು. ಆನೆಗಳು ಮಹಾಸರ್ಪಗಳಂತಿದ್ದ ಸುಂಡಿಲುಗಳನ್ನು ನೀಡಿ, ದೀರ್ಘಶ್ವಾಸಗಳನ್ನು ಬಿಡುತ್ತ, ನೆಲದಮೇಲೆ ಮಲಗಿದಾಗ, ದೊಡ್ಡದಾಗಿ ಉಸಿರನ್ನೆಳೆದುಬಿಡುತ್ತಿರುವ ಹೆಬ್ಬಾವುಗಳಿಂದಕೂಡಿದ ಪರ್ವತಗಳಂತೆ ಕಾಣಿಸುತ್ತಿದ್ದುವು. ಕುದುರೆಗಳು ತಮ್ಮ ಬಾಯಲ್ಲಿ ಕಡಿವಾಣವೂ, ಬೆನ್ನಿನಮೇಲೆ ನೊಗವೂ ಇದ್ದಹಾಗೆಯೇ, ತಮ್ಮ ಖುರಘಾತಗಳಿಂದ ವಿಷಮಪ್ರದೇಶವನ್ನು ಸಮಭೂಮಿಯನ್ನಾಗಿ ಮಾಡಿಕೊಂಡು ಮಲಗಿದುವು. ಹೀಗೆ ಚತುರಂಗಸೈನ್ಯಗಳೂ ವಿಶ್ರಾಂತಿಯನ್ನು ಹೊಂದಿ ನಿಶ್ಚೇಷ್ಟವಾಗಿ ಮಲಗಿರುವಾಗ, ರಣಭೂಮಿಯು ಸ್ವಲ್ಪಕಾಲದವರೆಗೆ ಚಿತ್ರದಲ್ಲಿ ಬರೆಯಲ್ಪಟ್ಟಂತೆ ಕಾಣಿಸಿತು. ಯುದ್ಧದಲ್ಲಿ ಗಾಯಹೊಂದಿ ಕಷ್ಟಪಡುತ್ತಿದ್ದ ರಾಜಕುಮಾರರೂ ಸುಖವಾಗಿ ಮಲಗಿದ್ದು, ತಮ್ಮ ಆಯಾಸವನ್ನು ಕಳೆದುಕೊಂಡರು. ಇಷ್ಟರಲ್ಲಿಯೇ ಸ್ತ್ರೀಯರ ಕಪೋಲದಂತೆ ಪಾಂಡುವರ್ಣದಿಂದ ನೇತ್ರಾನಂದಕರನಾದ ಚಂದ್ರನು ಪೂರ್ವದಿಕ್ಕಿನಲ್ಲಿ ಕಾಣಿಸಿಕೊಂಡನು. ಉದಯಪರ್ವತದಮೇಲೆ ಕಿರಣಗಳೆಂಬ ಕೇಸರಗಳಿಂದ ಶೋಭಿತನಾದ ಚಂದ್ರನೆಂಬ ಮೃಗರಾಜನು, ಅಂಧಕಾರವೆಂಬ ಆನೆಗಳ ಹಿಂಡನ್ನು ಭೇದಿಸಲು, ಆಗಲೇ ಪೂರ್ವದಿಶೆಯೆಂಬ ಗುಹೆಯಿಂದ ಹೊರಟು ಬಂದಂತೆ ಆ ಪರ್ವತಾಗ್ರದಮೇಲೆ ಕಾಣಿಸಿದನು. ರುದ್ರನ ವೃಷಭವನ್ನೂ, ಮನ್ಮಥನ ಪುಷ್ಪಬಾಣವನ್ನೂ, ಯುವತಿಯ ಮಂದಹಾಸವನ್ನೂ ಹೋಲುವ ಮನೋಹರ ವರ್ಣವುಳ್ಳ ಚಂದ್ರನು ಪೂರ್ವದಿಕ್ಕಿನಲ್ಲಿ ತನ್ನ ಕಿರಣವನ್ನು ಮುಹೂರ್ತಕಾಲದವರೆಗೆ ಕೆಂಪಾಗಿ ಕಾಣಿಸುತಿದ್ದು, ಸುವರ್ಣಚ್ಛಾಯೆಯುಳ್ಳ ಆ ಕಾಂತಿಯನ್ನು ಮೆಲ್ಲಮೆಲ್ಲಗೆ ನೀಗಿ, ಆಮೇಲೆ ಭೂಮ್ಯಾಕಾಶ

ದಿಕ್ಕುಗಳನ್ನೆಲ್ಲ ತನ್ನ ಸ್ವಚ್ಛಕಾಂತಿಯಿಂದ ಬೆಳಗುತ್ತಿದ್ದನು. ಮುಹೂರ್ತ ಕಾಲದಲ್ಲಿಯೇ ಜಗತ್ತೆಲ್ಲ ಜ್ಯೋತಿರ್ಮಯವಾಗಿ, ತಮಸ್ಸಿನ ಸುಳಿವೇ ಕಾಣದಂತೆ ಎಲ್ಲಿಯೋ ಅಡಗಿಹೋಯಿತು. ಚಂದ್ರಕಿರಣದಿಂದ ಲೋಕ ವೆಲ್ಲವೂ ಪ್ರಕಾಶಮಾನವಾಗಿ ಹಗಲಿನಂತೆ ಕಾಣಿಸುತ್ತಿದ್ದಿತು. ರಾಕ್ಷಸರ ಸಂಚಾರವು ತಗ್ಗಿತು. ಆಗಲೂ ರಾತ್ರಿಯಹೊತ್ತಾದುದರಿಂದ ಕೆಲವು ರಾಕ್ಷಸರು ಕಂಡೂಕಾಣದಹಾಗೆ ಮರೆಯಾದರು. ಚಂದ್ರಕಿರಣಗಳ ವ್ಯಾಪ್ತಿಯಿಂದ ಸೈನ್ಯಗಳಿಗೆಲ್ಲ ಮೆಲ್ಲಮೆಲ್ಲಗೆ ನಿದ್ರೆ ತಿಳಿಯುತ್ತಬಂದಿತು. ಸೂರ್ಯ ಕಿರಣವು ತಾಗಿದೊಡನೆ, ತಾವರೆಹೂಗಳು ಅರಳುವಂತೆ, ಸೈನಿಕರ ಕಣ್ಣುಗಳು ತೆರೆದುವು. ಚಂದ್ರೋದಯದಿಂದ ಸಮುದ್ರವು ಹೇಗೋ ಹಾಗೆ ಸೇನಾಸಮುದ್ರವು ಯುದ್ಧೋತ್ಸಾಹದಿಂದ ಮೇಲೆದ್ದಿತು. ತಿರುಗಿ ದಾರುಣ ಯುದ್ಧವು ಆರಂಭಿಸಿತು.

ಇದು ನೂರ ಎಂಭತ್ತೈದನೆಯ ಅಧ್ಯಾಯವು.



{ ದುರ್ಯೋಧನನು ಮನಸ್ಸಿಟ್ಟು ಯುದ್ಧಮಾಡಲಿಲ್ಲವೆಂದು ದ್ರೋಣನನ್ನು ನಿಂದಿಸಿದುದು. ದ್ರೋಣನು ಆ ಮಾತಿಗೆ ಕೋಪಗೊಂಡು ಅರ್ಜುನನ ಮಹಿಮೆಯನ್ನು ವರ್ಣಿಸುತ್ತ, ತನ್ನ ಪ್ರಾಣದಾಸೆಯನ್ನು ಬಿಟ್ಟು ಯುದ್ಧಕ್ಕೆ ಹೊರಟುದು. }

ಧೃತರಾಷ್ಟ್ರಮಹಾರಾಜಾ! ಇಷ್ಟರಲ್ಲಿ ದುರ್ಯೋಧನನು ಮಹತ್ತಾದ ಕೋಪದಿಂದ ದ್ರೋಣನ ಬಳಿಗೆ ಬಂದು, ಅವನ ವೀರ್ಯೋತ್ಸಾಹಗಳನ್ನು ವೃದ್ಧಿಗೊಳಿಸುವಂತೆ ಅವನನ್ನು ರೇಗಿಸುತ್ತ ಹೀಗೆಂದನು. "ಆಚಾರ್ಯಾ! ಏನಿದು? ವಿಶ್ರಾಂತಿಗಾಗಿ ಹೋದ ಶತ್ರುಗಳನ್ನು, ಅಂತಹ ಸಮಯದಲ್ಲಿ ಉಪೇಕ್ಷೆಮಾಡಿಬಿಡುವುದು ಯಾವ ನೀತಿ? ಅದರಲ್ಲಿಯೂ ನಮ್ಮಲ್ಲಿ ಕಣ್ಣಿಟ್ಟ ಶತ್ರುಗಳು ಬಳಲಿ ಬೇಸರಗೊಂಡಿರುವಾಗ, ಆ ಸಮಯದಲ್ಲಿ ಅವರನ್ನು ಅಲಕ್ಷ್ಯವಾಗಿ ಬಿಡುವುದುಂಟೇ? ನಿನ್ನ ಪ್ರಿಯಕ್ಕಾಗಿ ನಾವು ಅವೆಲ್ಲವನ್ನೂ ಸಹಿಸಿಕೊಂಡಿದ್ದೆವು. ಶತ್ರುವೀರರು ಈಗ ಚೆನ್ನಾಗಿ ವಿಶ್ರಾಂತಿಯನ್ನು ಹೊಂದಿ, ಮೊದಲಿಗಿಂತಲೂ ಉತ್ಸಾಹಿತರಾಗಿ ಬಂದು

ನಿಂತಿರುವರು. ಮುಖ್ಯವಾಗಿ ನಮ್ಮ ತೇಜಸ್ಸೂ, ಬಲವೂ ಸರ್ವವಿಧದಿಂದಲೂ ತಗ್ಗಿಹೋಯಿತು. ಪಾಂಡವವೀರರು ನಿನ್ನ ದಶೆಯಿಂದಲೇ ಮೇಲೆಮೇಲೆ ವೃದ್ಧಿಗೆ ಬಂದುಬಿಟ್ಟರು. ಆಚಾರ್ಯಾ! ಬ್ರಹ್ಮಾದಿ ದಿವ್ಯಾಸ್ತ್ರಗಳೆಲ್ಲವೂ ಪೂರ್ಣವಾಗಿರುವುದು ನಿನ್ನೊಬ್ಬನಲ್ಲಿಯೇ. ಪಾಂಡವರಾಗಲಿ, ನಾವಾಗಲಿ, ಬೇರೆ ಧನುರ್ಧಾರಿಗಳಾಗಲಿ ಯುದ್ಧಕ್ಕೆ ನಿಂತ ನಿನ್ನನ್ನು ಇದಿರಿಸಲು ಸಮರ್ಥರಲ್ಲ. ಯುದ್ಧದಲ್ಲಿ ನಿನಗೆ ಸಮಾನರಿಲ್ಲ. ಸತ್ಯವಾಗಿ ಹೇಳುವೆನು. ದೇವಾಸುರಗಂಧರ್ವಸಹಿತವಾದ ಎಲ್ಲಾ ಲೋಕಗಳನ್ನೂ ನೀನು ನಿನ್ನ ದಿವ್ಯಾಸ್ತ್ರಗಳಿಂದ ಸಂಹರಿಸಬಲ್ಲೆಯೆಂಬುದು ನಿಶ್ಚಯವು. ಅಂತಹ ನೀನು ಪಾಂಡವರನ್ನು ನಿಗ್ರಹಿಸದೆ, ಅವರನ್ನು ಯುದ್ಧದಲ್ಲಿ ನಿನಗೆ ಸರಿಗಟ್ಟಿಕೊಂಡು, ಅವರ ಅಟ್ಟುಳಿಗಳನ್ನೆಲ್ಲ ಸಹಿಸಿಕೊಂಡಿರುವೆ! ಇದು ಅವರಲ್ಲಿ ನಿನಗಿರುವ ಶಿಷ್ಯತ್ವಾಭಿಮಾನದಿಂದಲೋ, ಅಥವಾ ನನ್ನ ದೌರ್ಭಾಗ್ಯದಿಂದಲೋ ತಿಳಿಯದು!" ಎಂದನು. ಹೀಗೆ ಮರ್ಮೋದ್ಘಾಟಕವಾಗಿ ದುರ್ಯೋಧನನು ನುಡಿದ ತಿರಸ್ಕಾರವಾಕ್ಯದಿಂದ ದ್ರೋಣನು ಕೋಪಾವಿಷ್ಟನಾಗಿ, ನಿನ್ನ ಮಗನನ್ನು ಕುರಿತು "ದುರ್ಯೋಧನಾ! ನಾನು ವಯಸ್ಸಿನಲ್ಲಿ ಬಹಳ ವೃದ್ಧನಾದರೂ, ನನ್ನ ಶಕ್ತಿಮೀರಿ ಯುದ್ಧಮಾಡುತ್ತಿರುವೆನು. ಇದಕ್ಕೆಮೇಲೆ ಇನ್ನೂ ಜಯಾತುರವಿದ್ದವನು ಯುದ್ಧದಲ್ಲಿ ಅತಿಕ್ರೂರಕಾರ್ಯವನ್ನೇ ಮಾಡಬೇಕಾಗುವುದು. ನೀನು ಹೇಳಿದಂತೆ ಸರ್ವಾಸ್ತ್ರಗಳನ್ನೂ ತಿಳಿದ ನಾನು ಅಸ್ತ್ರಜ್ಞರಲ್ಲದ ಜನರನ್ನೆಲ್ಲ ಸಿಕ್ಕಿದಂತೆ ಕೊಲ್ಲಬೇಕಾಗುವುದು. ಅದು ಉಚಿತವೋ, ಅನುಚಿತವೋ, ಹೇಗಿದ್ದರೂ ನೀನು ಹೀಗೆಯೇ ಮಾಡಬೇಕೆಂದು ಹೇಳಿದಪಕ್ಷದಲ್ಲಿ, ನಾನು ಅದರಂತೆ ನಡೆಸುವೆನು. ನಿನ್ನ ಮಾತಿಗೆ ವಿರುದ್ಧವಾಗಿ ನಾನು ಹೋಗತಕ್ಕವನಲ್ಲ. ದುರ್ಯೋಧನಾ! ಇದೇ ಶಪಥದಿಂದ ನಾನು ಈಗ ಯುದ್ಧವನ್ನಾರಂಭಿಸುವೆನು. ಅದರಲ್ಲಿ ನನ್ನಿಂದಾದಷ್ಟು ಪರಾಕ್ರಮವನ್ನು ತೋರಿಸಿ, ಎಲ್ಲಾ ಪಾಂಚಾಲರನ್ನೂ ಕೊಂದಹೊರತು ಈ ಯುದ್ಧಕವಚವನ್ನು ನಾನು ನನ್ನ ಮೈಯಿಂದ ಕಳೆಯುವುದಿಲ್ಲ. ಅರ್ಜುನನು ಹಿಂದಿನ ಯುದ್ಧದಲ್ಲಿ ಬಳಲಿದ್ದುದಾಗಿ ನೀನು ಹೇಳಿದೆಯಲ್ಲವೆ? ಅವನಿಗೆ ಬಳಲಿಕೆಯೆಂದರೇನು? ಅವನ ವೀರ್ಯವೆಷ್ಟೆಂಬುದನ್ನು ನಿನಗೆ ಸತ್ಯವಾಗಿ ಹೇಳುವೆನು ಕೇಳು. ಕೋಪ

ಗೊಂಡ ಆ ಸವ್ಯಸಾಚಿಯನ್ನು ದೇವ ಗಂಧರ್ವ ಯಕ್ಷ ರಾಕ್ಷಸರಲ್ಲಿ ಯಾರೂ ಯುದ್ಧದಲ್ಲಿ ಜಯಿಸಲಾರರು. ಹಿಂದೆ ಖಾಂಡವವನದಹನದಲ್ಲ ಅಪರಿಮಿತ ವಾದ ಮಳೆಯನ್ನು ಸುರಿಸುತ್ತ ಬಂದು, ಇವನನ್ನಿದಿರಿಸಿದ ದೇವೇಂದ್ರನು ಇವನ ಬಾಣಗಳಿಂದ ತಡೆಯಲ್ಪಡಲಿಲ್ಲವೇ? ಬಲಗರ್ವಿತರಾದ ದೈತ್ಯ ಯಕ್ಷ ನಾಗರೆಲ್ಲರೂ ಅರ್ಜುನನಿಂದ ಪರಾಜಿತರಾದುದನ್ನು ನೀನೂ ಚೆನ್ನಾಗಿ ಬಲ್ಲೆ. ಘೋಷಯಾತ್ರೆಯ ಕಾಲದಲ್ಲಿ ನಿಮ್ಮನ್ನೆಲ್ಲಾ ಚಿತ್ರಸೇನಾದಿ ಗಂಧ ರ್ವರು ಸೆರೆಹಿಡಿದುಕೊಂಡುಹೋಗುತ್ತಿರುವಾಗ, ಅವರನ್ನು ಜಯಿಸಿ ನಿಮ್ಮ ನ್ನು ಬಿಡಿಸಿದವನೇ ಆ ಅರ್ಜುನನಲ್ಲವೇ? ದೇವತೆಗಳಿಗೆ ಪರಮಶತ್ರುಗ ಳಾಗಿ, ಅವರಿಂದಲೂ ಜಯಿಸುವುದಕ್ಕೆ ಸಾಧ್ಯವಿಲ್ಲದಿದ್ದ ನಿವಾತಕವಚರೆಂಬ ದೈತ್ಯರನ್ನು ಕೊಂದವನೂ ಆ ಅರ್ಜುನನಲ್ಲವೇ? ಹಿರಣ್ಯಪುರವಾಸಿಗಳಾದ ಇನ್ನೂ ಸಾವಿರಾರುಮಂದಿ ದೈತ್ಯರನ್ನು ಆ ಅರ್ಜುನನು ಜಯಿಸಲಿಲ್ಲವೇ? ಅಂತಹ ಪುರುಷಶ್ರೇಷ್ಠನನ್ನು ಮನುಷ್ಯಮಾತ್ರದವರು ಹೇಗೆತಾನೇ ಜಯಿ ಸಬಲ್ಲರು? ರಾಜಕುಮಾರಾ! ಅಷ್ಟೇಕೆ? ನೀನು ನಾವೆಲ್ಲ ಈಗಿನ ಯುದ್ಧ ದಲ್ಲಿ ಎಷ್ಟೇ ಪ್ರಯತ್ನಮಾಡುತ್ತಿದ್ದರೂ, ಆ ಅರ್ಜುನನಿಂದ ನಮ್ಮ ಸೈನ್ಯವೇ ಬಹಳಮಟ್ಟಿಗೆ ಕ್ಷೀಣಿಸಿಹೋದುದನ್ನು ಪ್ರತ್ಯಕ್ಷವಾಗಿ ನೀನೇ ನೋಡಿರುವೆ" ಎಂದನು. ರಾಜಾ! ದ್ರೋಣನ ಬಾಯಿಂದ ಹೊರಟ ಅರ್ಜುನನ ಈ ಪ್ರಶಂಸಾವಾಕ್ಯಗಳನ್ನು ಕೇಳಿ ನಿನ್ನ ಮಗನು ಮತ್ತಷ್ಟು ರೇಗಿ, "ಓ ಬ್ರಾಹ್ಮಣೋತ್ತಮಾ! ಹಾಗಿದ್ದರೆ ನೀನು ತಟಸ್ಥನಾಗಿರು! ಅರ್ಜುನನು ನಿನಗೆ ಯಾವಾಗಲೂ ಪ್ರಿಯಶಿಷ್ಯನೆಂಬುದನ್ನು ನಾವು ಬಲ್ಲೆವು. ನಾನು, ದುಶ್ಶಾಸನನು, ಕರ್ಣನು, ನನ್ನ ಮಾವನಾದ ಶಕುನಿ, ಈ ನಾಲ್ವರೇ ಕೌರ ವಸೈನ್ಯವನ್ನು ಎರಡುಶಾಖೆಯಾಗಿ ವಿಭಾಗಿಸಿಕೊಂಡು ಹೋಗಿ, ಪಾಂಡವ ರೊಡನೆ ಯುದ್ಧಮಾಡುವೆವು. ನೀನು ಯುದ್ಧದಿಂದ ನಿವೃತ್ತನಾಗು" ಎಂದನು. ಈ ಮಾತನ್ನು ಕೇಳಿ ದ್ರೋಣನು ನಗುತ್ತ "ಕುಮಾರಾ! ಸರಿ! ಹಾಗೆಯೇ ಆಗಲಿ! ನಿನಗೆ ಮಂಗಳವಾಗಲಿ!" ಎಂದು ಹೇಳಿ ತಿರುಗಿ ದುರ್ಯೋಧನನನ್ನು ಕುರಿತು "ಧೃತರಾಷ್ಟ್ರಕುಮಾರಾ! ಗಾಂಡೀವಧಾರಿ ಯಾಗಿ, ತೇಜಸ್ಸಿನಿಂದ ಜ್ವಲಿಸುತ್ತಿರುವ ಆ ಅರ್ಜುನನನ್ನು ಲೋಕದಲ್ಲಿ ಯಾವ ಕ್ಷತ್ರಿಯನುತಾನೇ ಜಯಿಸುವನೆಂದು ತಿಳಿದಿರುವೆ? ಇಂದ್ರ, ವರುಣ,

ಯಮ, ಕುಬೇರರಲ್ಲಿ ಯಾರೊಬ್ಬರಾಗಲಿ, ದಾನವ ರಾಕ್ಷಸ ಪನ್ನಗರಾಗಲಿ, ಅವನನ್ನು ಜಯಿಸಲಾರರು. ಈಗ ನೀನು ಹೇಳಿದ ಮಾತುಗಳು ಬುದ್ಧಿಯಿಲ್ಲದವರು ಹೇಳತಕ್ಕ ಮಾತುಗಳೇಹೊರತು ಬೇರೆಯಲ್ಲ. ಯುದ್ಧದಲ್ಲಿ ಅರ್ಜುನನನ್ನಿದಿರಿಸಿ ಕ್ಷೇಮದಿಂದ ಮನೆಗೆ ಹಿಂತಿರುಗಿ ಹೋಗತಕ್ಕವನೊಬ್ಬನೂ ಇಲ್ಲ. ನೀನಾದರೋ ಎಲ್ಲರಲ್ಲಿಯೂ ಸಂದೇಹಿಸುತ್ತಿರುವೆ. ದುರಾಲೋಚನೆಯಲ್ಲಿಯೇ ನಿಶ್ಚಯಬುದ್ಧಿಯುಳ್ಳವನಾಗಿ, ಎಲ್ಲರಲ್ಲಿಯೂ ಕಠಿನಸ್ವಭಾವವನ್ನೇ ತೋರಿಸುತ್ತಿರುವೆ. ನಿನ್ನ ಶ್ರೇಯಸ್ಸಿಗಾಗಿಯೇ ಪಾಡುಪಡುತ್ತಿರುವ ಹಿರಿಯರನ್ನೂ ಬಾಯಿಗೆ ಬಂದಹಾಗೆ ನುಡಿಯುತ್ತಿರುವೆ. ದುರ್ಯೋಧನಾ! ನಿನಗಿಷ್ಟವಿದ್ದರೆ ನಿನ್ನ ಕೆಲಸಕ್ಕಾಗಿ ನೀನೇ ಹೊರಡು! ಶೀಘ್ರದಲ್ಲಿಯೇ ಅರ್ಜುನನ್ನು ಕೊಂದು ಕ್ಷೇಮದಿಂದ ಬಾ! ನೀನು ಉತ್ತಮಕ್ಷತ್ರಿಯಕುಲದಲ್ಲಿ ಹುಟ್ಟಿದವನು! ಅದರಿಂದ ಯುದ್ಧಮಾಡಲು ಉತ್ಸಾಹಗೊಂಡಿರುವುದು ಯುಕ್ತವೇ. ಆದರೆ ನಿರಪರಾಧಿಗಳಾದ ಇತರ ಕ್ಷತ್ರಿಯರನ್ನೆಲ್ಲ ಅರ್ಜುನನ ಮುಂದೆ ತಂದೊಡ್ಡಿ ಅವರನ್ನೇಕೆ ಕೊಲ್ಲಿಸಬೇಕು? ಈ ವೈರಕ್ಕೆಲ್ಲ ನೀನೇ ಮೂಲವಾದುದರಿಂದ, ಅರ್ಜುನನಿಗಿದಿರಾಗಿ ಹೋಗುವುದು ನಿನಗೆ ನ್ಯಾಯವೇ! ಈ ಶಕುನಿಯು ನಿನಗೆ ಮಾವನು. ಬಹಳ ಪ್ರಾಜ್ಞನು. ಕ್ಷತ್ರಿಯಧರ್ಮವನ್ನನುಸರಿಸತಕ್ಕವನು. ಮೋಸದಿಂದ ಜೂಜಾಡಿ ಪಾಂಡವರನ್ನು ಜಯಿಸಿದವನು ಕುಟಿಲಸ್ವಭಾವವುಳ್ಳವನು. ಯಾವಾಗಲೂ ಇತರರಲ್ಲಿ ದೋಷವನ್ನೇ ಆರೋಪಿಸತಕ್ಕವನು. ದ್ಯೂತಾಸಕ್ತನಾಗಿ ಅದರ ಮೋಸವನ್ನೆಲ್ಲ ಬಲ್ಲವನು. ಇವನೂ ನಿನ್ನ ಇಷ್ಟದಂತೆ ಅರ್ಜುನನಿಗಿದಿರಾಗಲಿ! ಯುದ್ಧದಲ್ಲಿ ತಪ್ಪದೆ ಇವನು ಪಾಂಡವರನ್ನು ಜಯಿಸುವನು. ಈ ಕರ್ಣನು ನಿನಗೆ ಪರಮಾಪ್ತನು. ಹಿಂದೆ ನೀನೂ ಈ ಕರ್ಣನನ್ನು ನಿನ್ನ ತಂದೆಗಿದಿರಾಗಿ ಎಷ್ಟೋ ಉತ್ಸಾಹದಿಂದ ಕೊಂಡಾಡಿರುವೆ. ನೀನೂ, ದುಶ್ಶಾಸನನೂ, ಕರ್ಣನೂ, ಒಂದಾಗಿ ಸೇರಿ, ಪಾಂಡವರನ್ನೆಲ್ಲ ಕೊಂದುಬಿಡುವೆವೆಂದು ನೀನು ನಿನ್ನ ತಂದೆಯಮುಂದೆ ಆಗಾಗ ಹೇಳುತ್ತಿದ್ದವನು. ಪ್ರತಿಯೊಂದು ಸಭೆಯಲ್ಲಿಯೂ ಈ ನಿನ್ನ ಜಂಭದ ಮಾತುಗಳನ್ನು ನಾನೂ ಕಿವಿಯಿಂದ ಕೇಳಿರುವೆನು. ದುರ್ಯೋಧನಾ! ಆ ನಿನ್ನ ಮಾತನ್ನು ಸತ್ಯವಾಗಿ ಮಾಡು. ನಿನ್ನ ಪ್ರತಿಜ್ಞೆಯನ್ನು ನೆರವೇರಿಸಿ ಬಾ!

ಅದೋ! ಅರ್ಜುನನು ಆಗಲೇ ನಿಶ್ಶಂಕೆಯಿಂದ ಯುದ್ಧಕ್ಕೆ ಸಿದ್ಧನಾಗಿ ಕಾದಿರುವನು. ಕುಮಾರಾ! ಕ್ಷತ್ರಿಯಧರ್ಮವನ್ನು ಅನುಸರಿಸು! ಆದರೆ ಈಗ ನಿನಗೆ ಜಯಕ್ಕಿಂತಲೂ ವಧವೇ ಮೇಲಾದುದು. ನೀನು ಇಷ್ಟವಾದ ಐಶ್ವರ್ಯವನ್ನೆಲ್ಲ ಪಡೆದುದಾಯಿತು! ದಾನಮಾಡಿದುದಾಯಿತು! ಬೇಕಾದುದನ್ನೆಲ್ಲ ಅನುಭವಿಸಿದುದಾಯಿತು. ಇನ್ನು ನೀನು ಕೃತಕೃತ್ಯನು. ಋಣವಿಮುಕ್ತನು! ಇನ್ನು ನೀನು ಸಾವಿಗಾಗಿ ಹೆದರಬೇಕಾಗಿಲ್ಲ. ನಡೆ! ಅರ್ಜುನನೊಡನೆ ಯುದ್ಧಮಾಡು!" ಎಂದು ಹೇಳಿ, ದ್ರೋಣನು ಥಟ್ಟನೆ ಅಲ್ಲಿಂದ ಹಿಂತಿರುಗಿ ಶತ್ರುಗಳಿಗಿದಿರಾಗಿ ಹೊರಟನು. ಆಮೇಲೆ ಕೌರವಸೈನ್ಯವು ಎರಡು ಶಾಖೆಯಾಗಿ ವಿಭಾಗಿಸಲ್ಪಟ್ಟಿತು. ತಿರುಗಿ ಯುದ್ಧಾರಂಭವಾಯಿತು.

ಇದು ನೂರ ಎಂಭತ್ತಾರನೆಯ ಅಧ್ಯಾಯವು.

---

{ ದ್ರೋಣನು ದ್ರುಪದ ವಿರಾಟಾದಿಗಳನ್ನು ಕೊಂದುದು. ಭೀಮನು ಧೃಷ್ಟದ್ಯುಮ್ನನನ್ನು ರೇಗಿಸಿ, ದ್ರೋಣನಿಗಿದಿರಾಗಿ ಕಳುಹಿಸಿದುದು. ಹದಿನಾಲ್ಕನೆಯ ದಿನದ ರಾತ್ರಿಯುದ್ಧವು ಮುಗಿದುದು }

ಮಹಾರಾಜಾ! ಮೂರನೆಯ ಒಂದುಭಾಗವುಮಾತ್ರ ಉಳಿದಿದ್ದಿತು. ಆಗ ತಿರುಗಿ ಯುದ್ಧವು ಪ್ರಾರಂಭವಾಯಿತು. ಯುದ್ಧವು ನಡೆಯುತ್ತಿರುವಾಗಲೇ ಚಂದ್ರನ ಕಾಂತಿಯು ತಗ್ಗುತ್ತಬಂದು ಅರುಣೋದಯವಾಯಿತು. ಅರುಣಕಿರಣಗಳಿಂದ ಆಕಾಶವೆಲ್ಲ ಕೆಂಪುಬಣ್ಣಕ್ಕೆ ತಿರುಗಿತು. ಆಮೇಲೆ ಸ್ವಲ್ಪಸ್ವಲ್ಪವಾಗಿ ಸೂರ್ಯಪ್ರಕಾಶವು ಕಾಣಿಸಿಕೊಂಡು ಸಂಧ್ಯಾರಾಗವು ತಗ್ಗುತ್ತಬಂದಿತು. ಸೂರ್ಯಬಿಂಬವುಮಾತ್ರ ಒಂದು ಸುವರ್ಣಚಕ್ರದಂತೆ ಕಾಣಿಸಿತು. ಸೂರ್ಯೋದಯವಾದುದನ್ನು ನೋಡಿ ಕೌರವ ಪಾಂಡವ ಯೋಧರೆಲ್ಲಾ ತಮ್ಮ ವಾಹನಗಳಿಂದಿಳಿದು, ಸೂರ್ಯನಿಗಿದಿರಾಗಿ ಕೈಮುಗಿದು ಸಂಧ್ಯಾಜಪವನ್ನು ನಡೆಸಿದರು. ತಿರುಗಿ ಸೈನ್ಯಗಳು ಎರಡಾಗಿ ವಿಭಾಗಿಸಲ್ಪಟ್ಟು ಯುದ್ಧಾರಂಭವಾಯಿತು. ದ್ರೋಣನು ದುರ್ಯೋಧನಾದಿಗಳೊಡಗೂಡಿ ಸೋಮಕ ಪಾಂಡವ ಪಾಂಚಾಲರನ್ನೆಲ್ಲ ಇದಿರಿಸಿದನು. ಕೌರವ

ಸೈನ್ಯವು ಎರಡು ಶಾಖೆಯಾಗಿ ಯುದ್ಧಕ್ಕೆ ಸಿದ್ಧವಾಗಿರುವುದನ್ನು ನೋಡಿ, ಕೃಷ್ಣನು ಅರ್ಜುನನನ್ನು ಕುರಿತು " ಕುರುಗಳನ್ನು ನಾವು ಎಡಗಡೆಗೆ ಬಿಟ್ಟು ಕೊಂಡು ಹೋಗಬೇಕು " ಎಂದನು. ಅರ್ಜುನನು ಹಾಗೆಯೇ ರಥವನ್ನು ಬಿಡೆಂದು ಅನುಮತಿಸಲು, ದ್ರೋಣಕರ್ಣರನ್ನು ಎಡಗಡೆಗೆ ಬಿಟ್ಟುಕೊಂಡು ಅರ್ಜುನನ ರಥವು ಮುಂದೆ ಹೋಯಿತು. ಕೃಷ್ಣನ ಅಭಿಪ್ರಾಯ ವನ್ನು ತಿಳಿದು ಭೀಮನೂ " ಅರ್ಜುನಾ ! ಅರ್ಜುನಾ ! ಕ್ಷತ್ರಿಯರಮಣಿ ಯರು ಯಾವ ಉದ್ದೇಶದಿಂದ ಪುತ್ರರನ್ನು ಪಡೆಯುವರೋ, ಆ ಉದ್ದೇಶದ ಸಿದ್ಧಿಗೆ ಈಗ ಕಾಲವು ಬಂದೊದಗಿದೆ. ಇಂತಹ ಕಾಲದಲ್ಲಿ ನೀನು ಶ್ರೇಯ ಸ್ಸಿನ ಮಾರ್ಗವನ್ನು ತಿಳಿದು ನಡೆಯದೆ ಹೋದರೆ, ಇದರಿಂದ ನಿನ್ನ ಗೌರವ ವನ್ನು ಕೆಡಿಸಿಕೊಳ್ಳುವೆ. ಆಗ ನೀನು ದೊಡ್ಡ ಅನುಚಿತಕಾರ್ಯವನ್ನು ಮಾಡಿದಂತಾಗುವುದು. ಸತ್ಯ, ಸಂಪತ್ತು, ಧರ್ಮ, ಕೀರ್ತಿ, ಇವುಗಳ ವಿಷ ಯದಲ್ಲಿ ನೀನು ನಿನ್ನ ವೀರ್ಯದಿಂದ ಆನೃಣ್ಯವನ್ನು ಹೊಂದಬೇಕು. ಈಗಲೇ ನೀನು ಶತ್ರುಸೈನ್ಯವನ್ನು ಭೇದಿಸಿ, ನಿನ್ನ ಪ್ರತಿಜ್ಞೆಯನ್ನು ಸಫಲ ಮಾಡು " ಎಂದನು. ಹೀಗೆ ಅರ್ಜುನನು ಭೀಮನಿಂದಲೂ, ಕೃಷ್ಣನಿಂ ದಲೂ ಪ್ರೇರಿತನಾಗಿ, ಕರ್ಣ ದ್ರೋಣರನ್ನು ತನ್ನ ಪರಾಕ್ರಮದಿಂದ ಮೀರಿ ಸುತ್ತ, ನಿನ್ನ ಸೈನ್ಯವನ್ನು ಸುತ್ತಲೂ ಬಾಣಗಳಿಂದ ಆವರಿಸಿದನು. ಮೇಲೆ ಮೇಲೆ ಜ್ವಾಲೆಗಳನ್ನು ಕೆದರುವ ಅಗ್ನಿಯಂತೆ, ಪರಾಕ್ರಮದಿಂದ ವೃದ್ಧಿಹೊಂ ದುತ್ತಿರುವ ಆ ಅರ್ಜುನನನ್ನು ತಡೆಯಲು, ಆಗ ಯಾರಿಗೂ ಸಾಧ್ಯವಾಗ ಲಿಲ್ಲ. ಕರ್ಣ ಶಕುನಿ ದುರ್ಯೋಧನರು ಮೂವರೂ ಎಡೆಬಿಡದೆ ಅರ್ಜು ನನಮೇಲೆ ಬಾಣಗಳನ್ನು ಸುರಿಸಿದರು. ಅರ್ಜುನನೂ ತನ್ನ ಅಸ್ತ್ರಚಾತುರ್ಯ ದಿಂದಲೂ, ಹಸ್ತಲಾಘವದಿಂದಲೂ ಅವರ ಶಸ್ತ್ರಾಸ್ತ್ರಗಳನ್ನೆಲ್ಲ ಭೇದಿಸಿದು ದಲ್ಲದೆ, ಆ ಮೂವರನ್ನೂ ಹತ್ತುಹತ್ತು ಬಾಣಗಳಿಂದ ಬಲವಾಗಿ ನೋಯಿಸಿ ದನು. ಎಲ್ಲೆಲ್ಲಿಯೂ ರಣಧೂಳಿಯೆದ್ದಿತು. ಎಡೆಬಿಡದೆ ಬಾಣವರ್ಷವು ಸುರಿ ಯುತ್ತಿದ್ದಿತು. ದೊಡ್ಡ ಅಂಧಕಾರವು ಕವಿಯಿತು. ಭಯಂಕರಶಬ್ದವುಂಟಾ ಯಿತು. ಆ ಕತ್ತಲೆಯಲ್ಲಿ ಭೂವ್ಯಾಕಾಶ ದಿಕ್ಕುಗಳೊಂದೂ ತಿಳಿಯಲಿಲ್ಲ ಎಲ್ಲರೂ ಕಣ್ಣುಕಾಣದ ಕುರುಡರಂತಿದ್ದರು. ತಮ್ಮವರು, ಶತ್ರುಗಳೆಂಬ ಭೇದವೇ ಯಾರಿಗೂ ತಿಳಿಯದೆ, ಕೇವಲ ಶಬ್ದಮಾತ್ರದಿಂದ ಒಬ್ಬರನೊ

ಬ್ಬರು ಅನುಮಾನಿಸಿ ಕೊಲ್ಲುತ್ತಿದ್ದರು. ಬರೀ ಸಂಜ್ಞೆಗಳನ್ನು ತಿಳಿದು ಯುದ್ಧ ಮಾಡುತ್ತಿದ್ದರು. ರಥಿಕರು ವಿರಥರಾಗಿ ಒಬ್ಬರನ್ನೊಬ್ಬರು ತಲೆಕೂದಲುಗಳಲ್ಲಿಯೂ, ಕವಚಗಳಲ್ಲಿಯೂ, ಭುಜಗಳಲ್ಲಿಯೂ ಹಿಡಿದು ಎಳೆದಾಡುತ್ತಿದ್ದರು. ಅನೇಕ ರಥಿಕರು ರಥ, ರಥಾಶ್ವ, ಸಾರಥಿಗಳನ್ನೆಲ್ಲ ಕಳೆದುಕೊಂಡು, ತಾವೂ ಹತರಾಗಿ ಬಿದ್ದರು. ಸತ್ತವರೂಕೂಡ ಜೀವಿಸಿರುವವರಂತೆಯೇ ಕಾಣಿಸುತ್ತಿದ್ದರು. ಗಜಯೋಧರು ಸತ್ತ ಆನೆಗಳನ್ನೇ ಅಪ್ಪಿಕೊಂಡು, ವೀರ್ಯವಡಗಿ, ಮೃತಪ್ರಾಯರಂತೆ ಮಲಗಿದರು. ಅಶ್ವಯೋಧರೂ ಮೃತವಾದ ತಮ್ಮ ಕುದುರೆಗಳನ್ನಪ್ಪಿ ಮಲಗಿದ್ದರು. ಇಷ್ಟರಲ್ಲಿ ದ್ರೋಣನು ಯುದ್ಧರಂಗದಿಂದ ಪ್ರತ್ಯೇಕವಾಗಿ ಉತ್ತರದಕಡೆಗೆ ತಿರುಗಿ ಹೊಗೆಯಿಲ್ಲದ ಅಗ್ನಿಯಂತೆ ಜ್ವಲಿಸುತ್ತಿದ್ದನು. ಹೀಗೆ ದ್ರೋಣನು ಇದ್ದಕ್ಕಿದ್ದಹಾಗೆ ರಣರಂಗದಿಂದ ಏಕಾಕಿಯಾಗಿ ಬೇರೆಕಡೆಗೆ ಹೋದುದನ್ನು ನೋಡಿ, ಪಾಂಡವರಿಗೆ ಇದೇನೋ ಕಾರಣವಿರಬೇಕೆಂದು ಎದೆ ನಡುಗಿತು. ದಿವ್ಯ ತೇಜಸ್ಸಿನಿಂದ ಜ್ವಲಿಸುತ್ತಿರುವ ಆ ದ್ರೋಣನನ್ನು ನೋಡಿ ಭಯಭ್ರಾಂತರಾಗಿ ಅನೇಕರು ನಡುಗುತ್ತಿದ್ದರು. ಕೆಲವರು ಓಡಿಹೋದರು. ಅನೇಕರಿಗೆ ಮುಖವು ವಿವರ್ಣವಾಯಿತು. ಯುದ್ಧಸನ್ನದ್ಧನಾಗಿ ಮದದಾನೆಯಂತೆ ನಿಂತಿರುವ ದ್ರೋಣನನ್ನು ನೋಡಿ, ಇಂದ್ರನನ್ನು ಕಂಡ ದಾನವರಂತೆ ಕೆಲವರು ಯುದ್ಧದಲ್ಲಿ ಭಗ್ನೋತ್ಸಾಹರಾದರು. ಕೆಲವರು ಆಶ್ಚರ್ಯಪಟ್ಟರು. ಕೆಲವರು ಕೋಪದಿಂದ ಉರಿಯುತ್ತಿದ್ದರು. ಕೆಲವರು ಕೈಗಳನ್ನು ಹಿಸುಕುವರು! ಕೆಲವರು ಕೋಪದಿಂದ ತುಟಿಗಳನ್ನು ಕಚ್ಚುವರು! ಕೆಲವರು ಆಯುಧಗಳನ್ನು ಒದರುವರು! ಕೆಲವರು ಭುಜಗಳನ್ನು ತಟ್ಟುವರು! ಬೇರೆ ಕೆಲವರು ತಮ್ಮ ಜೀವದಮೇಲೆ ಆಸೆಯನ್ನು ಬಿಟ್ಟು, ದ್ರೋಣನಿಗಿದಿರಾದರು. ಮುಖ್ಯವಾಗಿ ಪಾಂಚಾಲರು ದ್ರೋಣನ ಬಾಣಗಳಿಂದ ಬಹಳವಾಗಿ ನೊಂದು ಕಷ್ಟಕ್ಕೊಳಗಾದರು. ಇದನ್ನು ಕಂಡು ವಿರಾಟದ್ರುಪದರಿಬ್ಬರೂ ಅತಿ ಕ್ರೋಧದಿಂದ ಮುಂದೆ ಬಂದು ದ್ರೋಣನನ್ನು ಇದಿರಿಸಿದರು. ದ್ರುಪದನ ಮೂರುಮಂದಿ ಪೌತ್ರರೂ, ಚೇದಿಗಳೂ ಅವರಿಗೆ ಬೆಂಬಲವಾಗಿ ಬಂದು ದ್ರೋಣನಿಗಿದಿರಾದರು. ದ್ರೋಣನು ಮೂರೇ ಬಾಣಗಳಿಂದ ಆ ಮೂವರನ್ನೂ ಕೊನೆಗಾಣಿಸಿಬಿಟ್ಟನು! ಚೇದಿ, ಕೇಕಯ, ಸೃಂಜಯ, ಮಾತ್ಸ್ಯ

ಯೋಧರನ್ನೆಲ್ಲ ಹೊಡೆದೋಡಿಸಿದನು. ದ್ರುಪದ ವಿರಾಟರಿಬ್ಬರೂ ದ್ರೋಣನಮೇಲೆ ಎಡೆಬಿಡದೆ ಬಾಣವರ್ಷವನ್ನು ಕರೆಯುತ್ತಿದ್ದರು. ಅವರ ಬಾಣಗಳನ್ನೆಲ್ಲ ದ್ರೋಣನು ಭಂಗಿಸಿ, ಅವರಿಬ್ಬರನ್ನೂ ಬಾಣಗಳಿಂದ ಮುಚ್ಚಿದನು. ಅವರಿಬ್ಬರೂ ಸೇರಿ ದ್ರೋಣನನ್ನು ತಮ್ಮ ಬಾಣಗಳಿಂದ ಮರೆಸಿದರು. ದ್ರೋಣನು ಮಿತಿಮೀರಿ ಕೋಪಗೊಂಡು ಎರಡು ತೀಕ್ಷ್ಣಭಲ್ಲಗಳಿಂದ ಅವರಿಬ್ಬರ ಬಿಲ್ಲುಗಳನ್ನೂ ತುಂಡುಮಾಡಿದನು. ಅದಕ್ಕೆ ಪ್ರತಿಯಾಗಿ ವಿರಾಟನು ಹತ್ತು ತೋಮರಗಳನ್ನು ದ್ರೋಣನಮೇಲೆ ಪ್ರಯೋಗಿಸಿದನು. ದ್ರುಪದನೂಕೂಡ ಸರ್ಪದಂತೆ ಭಯಂಕರವಾದ ಉಕ್ಕಿನ ಕೊಡಲಿಯೊಂದನ್ನು ದ್ರೋಣನ ರಥಕ್ಕೆ ಬೀಸಿದನು. ದ್ರೋಣನು ಅವನ್ನೆಲ್ಲ ತನ್ನ ಬಾಣಗಳಿಂದ ನಡುದಾರಿಯಲ್ಲಿಯೇ ಭೇದಿಸಿ, ಎರಡೇ ಭಲ್ಲಗಳಿಂದ ದ್ರುಪದ ವಿರಾಟರಿಬ್ಬರನ್ನೂ ಮೃತ್ಯುಲೋಕಕ್ಕೆ ಸಾಗಿಸಿಬಿಟ್ಟನು. ಹೀಗೆ ದ್ರೋಣನಿಂದ ಕ್ಷಣಮಾತ್ರದಲ್ಲಿ ವಿರಾಟದ್ರುಪದರು, ಕೇಕಯರು, ಚೇದಿಗಳು, ಮಾತ್ಸ್ಯರು, ಪಾಂಚಾಲರು, ದ್ರುಪದನ ಮೂರುಮಂದಿ ಮೊಮ್ಮಕ್ಕಳು, ಇವರೆಲ್ಲರೂ ಹತರಾದರು. ಇದನ್ನು ನೋಡಿ ಧೃಷ್ಟದ್ಯುಮ್ನನಿಗೆ ದುಸ್ಸಹವಾದ ಆಕ್ರೋಶವುಂಟಾಯಿತು. ಆಗ ಅವನು ಉಚ್ಚಧ್ವನಿಯಿಂದ “ಈಗ ದ್ರೋಣನು ನನ್ನ ಕೈಯಿಂದ ತಪ್ಪಿಹೋದರೆ, ಅಥವಾ ದ್ರೋಣನಿಂದ ನನಗೆ ಪರಾಭವವುಂಟಾದರೆ, ನಾನು ಇದುವರೆಗೆ ಮಾಡಿದ ಯಾಗಹೋಮಾದಿಗಳೂ, ಕ್ಷೇತ್ರಾರಾಮಾದಿ ಧರ್ಮಕಾರ್ಯಗಳೂ, ನಾನು ಕ್ಷತ್ರಿಯನಾಗಿ ಹುಟ್ಟಿದುದೂ, ಯಾಜೋಪಯಾಜರೆಂಬ ಬ್ರಾಹ್ಮಣರ ತಪೋಬಲದಿಂದಲೂ ಬ್ರಾಹ್ಮಣರೂಪನಾದ ಅಗ್ನಿಯ ಸಂಬಂಧದಿಂದಲೂ ನನಗೆ ಲಭಿಸಿರುವ ಬ್ರಾಹ್ಮಣ್ಯವೂ, ಇವೆಲ್ಲವೂ ಇಂದಿಗೆ ನಷ್ಟವಾಗಲಿ” ಎಂದು ಎಲ್ಲಾ ಧನುರ್ಧಾರಿಗಳಮುಂದೆ ದೃಢಪ್ರತಿಜ್ಞೆಯನ್ನು ಮಾಡಿ, ದೊಡ್ಡ ಸೈನ್ಯದೊಡನೆ ದ್ರೋಣನನ್ನು ಇದಿರಿಸಿಬಂದನು. ಇನ್ನೊಂದುಕಡೆಯಿಂದ ಪಾಂಡವ ಪಾಂಚಾಲ ಸೈನಿಕರೂ ದ್ರೋಣನನ್ನಿದಿರಿಸಿ ಬಂದರು. ಇದನ್ನು ನೋಡಿ ದುರ್ಯೋಧನ, ಶಕುನಿ, ಕರ್ಣರೂ, ನಿನ್ನ ಬೇರೆ ಮಕ್ಕಳೂ, ದ್ರೋಣನನ್ನು ರಕ್ಷಿಸಿಕೊಳ್ಳುವುದರಲ್ಲಿ ಜಾಗರೂಕರಾಗಿ ನಿಂತರು. ಈ ಸ್ಥಿತಿಯಲ್ಲಿ ದ್ರೋಣನಮೇಲೆ ಪಾಂಚಾಲರ ಪ್ರಯತ್ನವೇನೂ ಸಾಗಲಿಲ್ಲ. ಪಾಂಚಾಲರಿಗೆ ಆಗ

ದ್ರೋಣನನ್ನು ಇದಿರಾಗಿ ನಿಂತು ನೋಡುವುದಕ್ಕೂ ಸಾಧ್ಯವಿಲ್ಲದಂತಾಯಿತು. ಇದನ್ನು ನೋಡಿ ಭೀಮಸೇನನಿಗೆ ಮಹತ್ತಾದ ಕೋಪವೂ, ವ್ಯಸನವೂ ಉಂಟಾಯಿತು. ಆಗ ಅವನು ಧೃಷ್ಟದ್ಯುಮ್ನನನ್ನು ನೋಡಿ ಕಠಿನವಾಕ್ಯಗಳಿಂದ ಹೀಗೆಂದನು. “ದ್ರುಪದಕುಲದಲ್ಲಿ ಹುಟ್ಟಿ, ಎಲ್ಲಾ ಅಸ್ತ್ರಗಳನ್ನೂ ಅಭ್ಯಸಿಸಿ, ಅಸ್ತ್ರಜ್ಞರಲ್ಲಿ ಮೇಲೆನಿಸಿಕೊಂಡ ನಿನ್ನಂತಹ ಯಾವ ಕ್ಷತ್ರಿಯನುತಾನೇ, ಶತ್ರುವಿನ ಈ ಪ್ರಾಬಲ್ಯವನ್ನು ನೋಡಿ ಇಷ್ಟುಹೊತ್ತು ಸಹಿಸಿಕೊಂಡಿರುವನು? ತಂದೆಯನ್ನೂ, ಮಕ್ಕಳನ್ನೂ ಕಳೆದುಕೊಂಡಮೇಲೆಯೂ, ತನ್ನ ಪುರುಷತ್ವವನ್ನು ತೋರಿಸದೆ ನಿನ್ನಂತೆ ಯಾವನುತಾನೇ ಸುಮ್ಮನಿರುವನು? ಅದರಲ್ಲಿಯೂ ರಾಜಸಭೆಯಲ್ಲಿ ಕ್ರೂರಶಪಥವನ್ನು ಮಾಡಿಬಂದ ನೀನು ಹೀಗೆ ಸುಮ್ಮನಿರುವುದುಂಟೇ? ಇಂತವರು ತಮ್ಮ ಪುಂಸ್ತ್ವಕ್ಕಾಗಿ ಸಂತೋಷಪಡಬಹುದೇ? ನಿನಗೆ ಶತ್ರುವಾದ ದ್ರೋಣನು ಸಮಿತ್ತುಗಳಿಂದ ಪ್ರಜ್ವಲಿತವಾದ ಅಗ್ನಿಯಂತೆ ಕ್ಷತ್ರಿಯಕುಲವನ್ನೆಲ್ಲ ದಹಿಸುತ್ತಿರುವನು. ಧನುರ್ಬಾಣಗಳೆಂಬ ಇಂಧನಗಳಿಂದ ಆತನ ವೀರ್ಯಜ್ವಾಲೆಯು ಹೆಚ್ಚುತ್ತಿರುವುದು. ಇನ್ನು ಸ್ವಲ್ಪಹೊತ್ತಿನಲ್ಲಿಯೇ ಆ ಬ್ರಾಹ್ಮಣನು ಪಾಂಡವಸೈನ್ಯವನ್ನೆಲ್ಲ ನಿಶ್ಶೇಷವಾಗಿ ತೀರಿಸಿಬಿಡುವನು. ಇನ್ನು ನಾನು ಸುಮ್ಮನಿರಲಾರೆನು. ನೀವೆಲ್ಲಾ ಇಲ್ಲಿಯೇ ನಿಂತು ನನ್ನ ವೀರಕಾರ್ಯಗಳನ್ನು ನೋಡುತ್ತಿರಿ! ಇದೋ! ನಾನೇ ಈಗ ದ್ರೋಣಸೈನ್ಯವನ್ನು ಪ್ರವೇಶಿಸುವೆನು!” ಎಂದು ಹೇಳಿ, ಧನುಸ್ಸನ್ನು ಎತ್ತಿಕೊಂಡು, ಆಕರ್ಣಾಂತವಾಗಿ ಬಾಣಗಳನ್ನೆಳೆದುಬಿಡುತ್ತ, ದ್ರೋಣಸೈನ್ಯದಲ್ಲಿ ಪ್ರವೇಶಿಸಿಬಿಟ್ಟನು. ಇದನ್ನು ನೋಡಿ ಧೃಷ್ಟದ್ಯುಮ್ನನೂ ಅವನ ಹಿಂದೆ ಹೊರಟು ದ್ರೋಣನಿಗಿದಿರಾದನು. ಉಭಯಸೈನ್ಯಕ್ಕೂ ಅತಿಪ್ರಬಲಯುದ್ಧವಾಯಿತು. ರಾಜಾ! ಅಂತಹ ಯುದ್ಧವನ್ನು ಇದುವರೆಗೆ ನಾನು ಕಂಡೂ ಇಲ್ಲ! ಕೇಳಿದುದೂ ಇಲ್ಲ! ಆ ಯುದ್ಧವು ಸೂರ್ಯೋದಯಕಾಲದಲ್ಲಿ ಆರಂಭಿಸಿತು. ಎಷ್ಟೋ ರಥಗಳು ಚೂರ್ಣಿತವಾಗಿ ಒಂದರಮೇಲೊಂದು ಬಿದ್ದು ರಣರಂಗವೆಲ್ಲ ಕೇವಲರಥಮಯವಾಗಿಯೇ ಕಾಣುತ್ತಿದ್ದಿತು. ಅನೇಕಯೋಧರ ಶರೀರಗಳು ಛಿನ್ನಭಿನ್ನವಾಗಿ ಬಿದ್ದುವು, ಜೀವದಾಸೆಯಿಂದ ತಲೆತಪ್ಪಿಸಿಕೊಳ್ಳಲು ಅತ್ತಿತ್ತ ಓಡಿಹೋಗುತ್ತಿದ್ದವರನ್ನೂ ಬಿಡದೆ, ಕೆಲವರು ಇದಿರಾಗಿಯೂ, ಕೆಲವರು ಹಿಂದಿನಿಂದಲೂ,

ಕೆಲವರು ಪಕ್ಕದಿಂದಲೂ ಬಂದು ಕೊಲ್ಲುತ್ತಿದ್ದರು. ಯುದ್ಧವು ಅತಿಭಯಂಕರವಾಯಿತು. ಸ್ವಲ್ಪಹೊತ್ತಿನಲ್ಲಿಯೇ ಸೂರ್ಯನು ಸಂಧ್ಯಾಗತನಾದನು.

**ಇಲ್ಲಿಗೆ ಹದಿನಾಲ್ಕನೆಯ ರಾತ್ರಿ ಯುದ್ಧವು ಮುಗಿದುದು.**

ಇದು ನೂರ ಎಂಭತ್ತೇಳನೆಯ ಅಧ್ಯಾಯವು.



## ಹದಿನೈದನೆಯ ದಿವಸದ ಯುದ್ಧಾರಂಭವು.

ನಕುಲನಿಂದ ದುರ್ಯೋಧನನ ಪರಾಜಯವು.

ಮಹಾರಾಜಾ! ಅವರೆಲ್ಲರೂ ಯುದ್ಧಕವಚವನ್ನು ಕಳೆಯದಹಾಗೆಯೇ ಯುದ್ಧರಂಗದಲ್ಲಿ ಸೂರ್ಯನಿಗಿದಿರಾಗಿ ಸಂಧ್ಯೋಪಾಸನೆಯನ್ನು ಮಾಡಿದರು. ಸೂರ್ಯನು ಉದಿಸಿದಮೇಲೆ ಲೋಕವೆಲ್ಲವೂ ಪ್ರಕಾಶಿತವಾಯಿತು. ಮೊದಲು ರಾತ್ರಿಯುದ್ಧಕ್ಕಾಗಿ ಯಾರುಯಾರು ಅನ್ಯೋನ್ಯವಾಗಿ ಕೈಕಲೆತಿದ್ದರೋ, ಅವರೇ ಬೆಳಗಾದಮೇಲೆ ಜತೆಜತೆಯಾಗಿ ದ್ವಂದ್ವಯುದ್ಧಕ್ಕೆ ಇದಿರಾದರು. ಕೆಲವುಕಡೆ ಕುದುರೆಗಳೊಡನೆ ಕುದುರೆಗಳೂ, ಪದಾತಿಗಳೊಡನೆ ಪದಾತಿಗಳೂ, ರಥಗಳೊಡನೆ ರಥಗಳೂ, ಆನೆಗಳೊಡನೆ ಆನೆಗಳೂ ಯುದ್ಧಕ್ಕೆ ನಿಂತುವು. ಇನ್ನು ಕೆಲವುಕಡೆ ರಥಗಳನ್ನು ಕುದುರೆಗಳೂ ಕುದುರೆಗಳನ್ನು ಆನೆಗಳೂ, ಆನೆಗಳನ್ನು ಪದಾತಿಗಳೂ ಇದಿರಿಸಿದುವು. ಒಮ್ಮೊಮ್ಮೆ ಒಬ್ಬರನ್ನೊಬ್ಬರು ಇದಿರಿಸುತ್ತ, ಉತ್ತರಕ್ಷಣದಲ್ಲಿಯೇ ಅವರನ್ನು ಬಿಟ್ಟು ಬೇರೆಕಡೆಗೆ ತಿರುಗುವರು. ರಾತ್ರಿಯೆಲ್ಲಾ ಯುದ್ಧವನ್ನು ನಡೆಸಿ, ಬೆಳಗ್ಗೆ ಬಿಸಿಲಿನಿಂದ ಬಳಲಿದ ಕೆಲವರು ಹಸಿವು ಬಾಯಾರಿಕೆಗಳನ್ನು ತಡೆಯಲಾರದೆ ಹಾಗೆಯೇ ಪ್ರಜ್ಞೆತಪ್ಪಿ ಬಿದ್ದರು. ಶಂಖ, ಭೇರಿ, ಮೃದಂಗ, ಮೊದಲಾದ ರಣವಾದ್ಯಗಳು ಮೊಳಗುತ್ತಿದ್ದುವು. ಅವುಗಳನಡುವೆ ಆನೆಗಳ ಗರ್ಜನೆ, ಧನುಷ್ಟಂಕಾರಧ್ವನಿ, ರಥನೇಮಿಧ್ವನಿ, ಪದಾತಿಗಳು ಇಲ್ಲಿಂದಲ್ಲಿಗೆ ಓಡುವ ಧ್ವನಿ, ಶಸ್ತ್ರಗಳ ತಾಡನಧ್ವನಿ, ಕುದುರೆಗಳ ಕೂಗು, ನೊಂದವರ ರೋದನಧ್ವನಿ, ವೀರರ ಗರ್ಜನಧ್ವನಿ, ಇವೆಲ್ಲವೂ ಮೇಲೆಮೇಲೆ ಪ್ರಬಲವಾಗಿ, ಭೂಮ್ಯಾಕಾಶಗಳೆಲ್ಲ ಕೇವಲ ಶಬ್ದಮಯವಾಗಿರುವಂತೆ ತೋರಿತು,

ಕೈಕಾಲು ಮುರಿದು ನೆಲದಮೇಲೆ ಒದೆದಾಡುತ್ತಿರುವ ಯೋಧರ ಆಕ್ರೋಶ ಧ್ವನಿಯೂ ಮೇಲೆಮೇಲೆ ಹೆಚ್ಚುತ್ತಿದ್ದಿತು. ಹೀಗೆ ಆಗಿನ ರಣರಂಗದ ಸ್ಥಿತಿಯು ನೋಡುವವರಿಗೆ ಬಹಳ ಕರುಣಾಸ್ಪದವಾಯಿತು. ಕೆಳಗೆ ಬೀಳುತ್ತಿರುವ ಮತ್ತು ಬಿದ್ದಿರುವ ಚತುರಂಗಗಳ ಆಕ್ರಂದನವು ಹೆಚ್ಚಿತು. ಉಭಯಸೈನ್ಯಗಳಲ್ಲಿಯೂ ಕೆಲಕೆಲವರು ತಮ್ಮವರನ್ನೇ ವಧಿಸುತ್ತಿದ್ದರು. ಕೆಲಕೆಲವರು ಅಲ್ಲಲ್ಲಿ ಶತ್ರುಗಳನ್ನು ಹುಡುಕಿ ನೋಡಿ ಕೊಲ್ಲುತ್ತಿದ್ದರು. ಪ್ರತಿಪಕ್ಷದ ಯೋಧರಮೇಲೆಯೂ, ಗಜತುರಗಗಳಮೇಲೆಯೂ ಬೀಸಿದ ಖಡ್ಗಾದ್ಯಾಯುಧಗಳು ಅಲ್ಲಲ್ಲಿ ಬಿದ್ದು, ಅಗಸನ ಮನೆಯ ಬಟ್ಟೆಯ ರಾಶಿಗಳಂತೆ ಕಾಣಿಸಿದುವು. ಶಸ್ತ್ರತಾಡನಶಬ್ದಗಳುಕೂಡ, ಅಗಸರು ಬಟ್ಟೆಯನ್ನೊಗೆಯುವ ಶಬ್ದದಂತೆ ಎಡೆಬಿಡದೆ ಕೇಳಿಸುತಿದ್ದಿತು. ಎರಡುಕಡೆಯೂ ಅಲಗುಳ್ಳ ಕತ್ತಿಗಳು, ಒಂದೇ ಅಲಗುಳ್ಳ ಕತ್ತಿಗಳು, ತೋಮರಗಳು, ಪರಶ್ವಧಗಳು, ಇವುಗಳಿಂದ ಅತಿದಾರುಣವಾದ ಯುದ್ಧವು ನಡೆಯುತ್ತಿದ್ದಿತು. ದೊಡ್ಡ ರಕ್ತನದಿಯು ಪ್ರವಹಿಸಿತು. ಅದರಲ್ಲಿ ಮುರಿದುಬಿದ್ದ ಶಸ್ತ್ರಗಳು ಮೀನುಗಳಂತೆಯೂ, ಮಾಂಸಪಿಂಡಗಳು ಕೆಸರಿನಂತೆಯೂ, ಆರ್ತಧ್ವನಿಯು ಪ್ರವಾಹಘೋಷದಂತೆಯೂ, ಪತಾಕೆಗಳು ನೊರೆಗಳಂತೆಯೂ ತೋರಿ, ಅದು ಯಮಲೋಕವೆಂಬ ಸಮುದ್ರಕ್ಕೆ ಸಾಗುವ ಮಹಾನದಿಯಂತೆ ಕಾಣಿಸಿತು. ಆನೆ ಕುದುರೆಗಳು ರಾತ್ರಿಯಲ್ಲಿ ನಿದ್ರೆಯಿಲ್ಲದುದರಿಂದಲೂ, ಬಾಣಪ್ರಹಾರದಿಂದಲೂ ಬಹಳವಾಗಿ ನೊಂದು, ಮೈಯನ್ನೆಲ್ಲ ಉಡುಗಿಸಿಕೊಂಡು ಅಲ್ಲಲ್ಲಿ ಕುಳಿತುಬಿಟ್ಟುವು. ವೀರರ ಮುಖವೆಲ್ಲ ಬಾಡಿ ಬಣ್ಣಗುಂದಿದ್ದಿತು. ಕಿರೀಟಕುಂಡಲಗಳಿಂದ ಅಲಂಕರಿಸಲ್ಪಟ್ಟ ಶಿರಸ್ಸುಗಳೊಡನೆಯೂ, ಯುದ್ಧೋಪಕರಣಗಳೊಡನೆಯೂ ಅಲ್ಲಲ್ಲಿ ವೀರರು ಸುಮ್ಮನೆ ಅಲಂಕಾರಕ್ಕಾಗಿ ನಿಂತಿರುವಂತೆ ಕಾಣಿಸಿದರು. ಸತ್ತವರು, ಅರ್ಧಜೀವದಿಂದ ನರಳುವವರು, ರಕ್ತಪಾನಕ್ಕಾಗಿ ಬಂದ ಪ್ರಾಣಿಗಳು, ಇವುಗಳಿಂದ ರಣಾಂಗಣವೆಲ್ಲಾ ತುಂಬಿಹೋಗಿ, ರಥಸಂಚಾರಕ್ಕೇ ದಾರಿಯಿಲ್ಲದಂತಾಯಿತು. ರಥಚಕ್ರಗಳು ಅಲ್ಲಲ್ಲಿ ಹೂತುಹೋಗುತ್ತ, ಒಳ್ಳೇ ಜಾತಿಯಲ್ಲಿ ಹುಟ್ಟಿ ಆನೆಯಂತೆ ಬೆಳೆದು ಬಲಾಢ್ಯಗಳಾದ ಕುದುರೆಗಳೂ ಕೂಡ ಆ ರಥಗಳನ್ನೆಳೆಯಲಾರದೆ, ಮೈನಡುಗುತ್ತ ನಿಂತುಬಿಟ್ಟುವು. ಮಹಾರಾಜಾ! ನಮ್ಮಲ್ಲಿ ದ್ರೋಣನೊಬ್ಬನು,

ಅತ್ತಲಾಗಿ ಅರ್ಜುನನೊಬ್ಬನು ಇವರಿಬ್ಬರುಹೊರತು ಇತರಸೈನ್ಯಗಳೆಲ್ಲವೂ ಭಯದಿಂದ ಮಂಕುಹಿಡಿದಂತೆ ನಿಶ್ಚೇಷ್ಟವಾಗಿ ನಿಂತುಬಿಟ್ಟಿತು. ಬೇರೆ ಎಲ್ಲಾ ಸೈನ್ಯಗಳಿಗೂ ಆಗ ಅವರಿಬ್ಬರೇ ಆಶ್ರಯಭೂತರಾದರು. ತಮ್ಮವರಿಗೆ ಅಭಯವನ್ನು ಕೊಡುವುದಕ್ಕೂ, ಶತ್ರುಗಳನ್ನು ಕೊಲ್ಲುವುದಕ್ಕೂ ಅವರಿಬ್ಬರೇ ಉಳಿದರು. ಇದಿರಾದ ಶತ್ರುಗಳನ್ನು ಕೊಲ್ಲುವ ಭಾರವೂ ಅವರಿಬ್ಬರಲ್ಲಿಯೇ ನಿಂತಿತು. ಸೈನ್ಯಗಳೆಲ್ಲ ಮೊತ್ತಕ್ಕೆ ಭಯದಿಂದ ವ್ಯಾಕುಲವಾಗಿದ್ದಿತು. ಯಾರಿಗೂ ಯಾವುದೊಂದೂ ತೋರದಂತಾಯಿತು ಆಗಿನ ರಣರಂಗವು ಯಮನ ಕ್ರೀಡಾಸ್ಥಾನದಂತೆ ಭೀರುಗಳಿಗೆ ಭಯವರ್ಧಕವಾಯಿತು. ಆಗಿನ ಕದನದಲ್ಲಿ ಕರ್ಣನೆಲ್ಲಿ? ದ್ರೋಣನೆಲ್ಲಿ? ಅರ್ಜುನನೆಲ್ಲಿ? ಧರ್ಮರಾಜನೆಲ್ಲಿ? ಎಂಬುದುಕೂಡ ಯಾರಿಗೂ ತಿಳಿಯಲಿಲ್ಲ. ಹಾಗೆಯೇ ಭೀಮ, ನಕುಲ, ಸಹದೇವ, ಧೃಷ್ಟದ್ಯುಮ್ನ, ಸಾತ್ಯಕಿ, ದುಶ್ಶಾಸನ, ಅಶ್ವತ್ಥಾಮ, ಶಕುನಿ, ದುರ್ಯೋಧನ, ಕೃಪ, ಕೃತವರ್ಮ ಶಲ್ಯಾದಿಗಳೂ ಕಾಣಿಸಲಿಲ್ಲ. ಇತರರಾರು? ತಮ್ಮವರಾರು? ಎಂಬುದೂ ತಿಳಿಯಲಿಲ್ಲ. ಭೂವ್ಯಾಕಾಶ ದಿಕ್ಕು ವಿದಿಕ್ಕುಗಳೊಂದೂ ಕಾಣಿಸದಂತೆ ಸೇನಾಧೂಳಿಯು ಸುತ್ತಲೂ ಆವರಿಸಿಕೊಂಡಿತು. ತಿರುಗಿ ರಾತ್ರಿಯಾದಂತೆ ಭ್ರಾಂತಿ ಹುಟ್ಟಿತು. ರಾತ್ರಿಸಂಚಾರಿಗಳಾದ ಭೂತಗಳು ತಲೆಯಿಕ್ಕಲಾರಂಭಿಸಿದುವು. ಹಳ್ಳತಿಟ್ಟುಗಳೂ ತಿಳಿಯದಂತಾಯಿತು. ಕಣ್ಣುಕಾಣದೆ, ಸಿಕ್ಕಿದವರು ಸಿಕ್ಕಿದವರನ್ನು ಬಡಿದು ಕೆಡಹುತಿದ್ದರು. ಸ್ವಲ್ಪಹೊತ್ತಿನೊಳಗಾಗಿಯೇ ದೊಡ್ಡ ಗಾಳಿಯು ಬೀಸಿದುದರಿಂದಲೂ, ರಕ್ತಸ್ರಾವದಿಂದಲೂ ಆ ಧೂಳು ಸ್ವಲ್ಪಸ್ವಲ್ಪವಾಗಿ ಅಡಗುತ್ತಬಂದಿತು. ಆಗ ಸ್ವಲ್ಪಸ್ವಲ್ಪವಾಗಿ ವ್ಯಕ್ತಿಜ್ಞಾನವುಂಟಾಯಿತು. ರಥ ಗಜ ತುರಗ ಪದಾತಿಗಳ ಮೈಯೆಲ್ಲ ರಕ್ತದಿಗ್ಧವಾಗಿ, ಆ ಸೈನ್ಯವೆಲ್ಲ ಒಂದು ಪಾರಿಜಾತದ ತೋಟದಂತೆ ಕಾಣಿಸಿತು. ಆಗ ದುರ್ಯೋಧನ, ಕರ್ಣ, ದ್ರೋಣ, ದುಶ್ಶಾಸನರೆಂಬೀ ನಾಲ್ವರೂ ಪಾಂಡವಪಕ್ಷದಲ್ಲಿ ಪ್ರಮುಖರಾದ ನಾಲ್ವರನ್ನು ಇದಿರಿಸಿದರು. ದುರ್ಯೋಧನ ದುಶ್ಶಾಸನರಿಬ್ಬರೂ ನಕುಲಸಹದೇವರಿಬ್ಬರಿಗೆ ಇದಿರಾದರು. ಕರ್ಣನು ಭೀಮನನ್ನೂ, ದ್ರೋಣನು ಅರ್ಜುನನನ್ನೂ ಇದಿರಿಸಿ ನಿಂತರು. ದೇವಾಸುರಯುದ್ಧದಂತೆ ತಿರುಗಿ ಘೋರಯುದ್ಧವು ಆರಂಭವಾಯಿತು. ರಥಿಕರು ಚಿತ್ರಗತಿಗಳಿಂದ ಸಂಚರಿ

ಸುತ್ತ, ವಿಚಿತ್ರಯುದ್ಧಗಳನ್ನು ಮಾಡುವರು! ಅನ್ಯೋನ್ಯವಾಗಿ ಬಾಣವರ್ಷವನ್ನು ಸುರಿಸುವರು! ರಥಾರೂಢರಾದ ರಥಿಕರು ಮಿಂಚಿನೊಡಗೂಡಿದ ಶರನ್ಮೇಘಗಳಂತೆ ಕಾಣಿಸುವರು. ಯೋಧರು ಅನ್ಯೋನ್ಯಸ್ಪರ್ಧೆಯಿಂದಲೂ, ಕೋಪದಿಂದಲೂ, ಮದದಾನೆಗಳಂತೆ ಒಬ್ಬರನ್ನೊಬ್ಬರು ಇದಿರಿಸಿ ಸರ್ವಸಾಹಸದಿಂದ ಹೊಡೆದಾಡುತ್ತಿದ್ದರು. ಮಹಾರಾಜಾ! ಆಗಿನ ಯುದ್ಧದಲ್ಲಿ ಕೈಕಲೆತವರೆಲ್ಲರೂ, ಒಂದೇಸಲಕ್ಕೆ ಸಾಯಬೇಕಾದ ಸ್ಥಿತಿಯಲ್ಲಿದ್ದರೂ, ಹಾಗಾಗದುದನ್ನು ನೋಡಿದರೆ, ನಿಯತಕಾಲವು ಬರುವವರೆಗೆ ದೇಹಕ್ಕೆ ನಾಶವಿಲ್ಲವೆಂಬುದು ಇದರಿಂದ ದೃಢಪಡುವುದು. ಅಲ್ಲಿ ಶಸ್ತ್ರಹತರಾದ ಅನೇಕರಿಗೆ ದೇಹಾವಯವಗಳೆಲ್ಲ ಛಿನ್ನಭಿನ್ನಗಳಾಗಿ, ತೋಳೊಂದು ಕಡೆ, ಕಾಲೊಂದು ಕಡೆ, ತಲೆಯೊಂದು ಕಡೆ ಬಿದ್ದಿದ್ದುವು. ಬಿಲ್ಲು, ಬಾಣ, ಪ್ರಾಸ, ಕೊಡಲಿ, ಕತ್ತಿ, ಪಟ್ಟಾಕತ್ತಿ, ನಾಳೀಕ, ಕ್ಷುದ್ರ, ನಾರಾಚ, ನಖರ, ಶಕ್ತಿ ತೋಮರಗಳೇ ಮೊದಲಾದ ವಿಚಿತ್ರಾಯುಧಗಳೂ, ಯುದ್ಧಕವಚಗಳೂ ಅಲ್ಲಲ್ಲಿ ತುಂಡುತುಂಡಾಗಿ ಬಿದ್ದಿದ್ದುವು. ಎಷ್ಟೋ ರಥಗಳು ಅಲ್ಲಿ ಸಾರಥಿಯೂ, ಕುದುರೆಗಳೂ ಸತ್ತು, ಧ್ವಜಗಳು ಮುರಿದು, ರಥಿಕಶೂನ್ಯವಾಗಿ ಪರ್ವತಾಕಾರದಲ್ಲಿ ನಿಂತಿದ್ದುವು. ಸಾರಥಿಗಳಿಲ್ಲದ ಕೆಲವು ರಥಗಳನ್ನು ಕುದುರೆಗಳು ಸಿಕ್ಕಿದಕಡೆಗೆ ಎಳೆದುಕೊಂಡು ಭಯದಿಂದ ಓಡುತ್ತಿದ್ದುವು. ಛತ್ರ, ಚಾಮರ, ವ್ಯಜನ, ಕಿರೀಟ, ಕುಂಡಲ, ವಸ್ತ್ರಾಭರಣ ಮಾಲ್ಯಗಳೂ, ರತ್ನಹಾರಗಳೂ, ಪದಕಗಳೂ, ಚೂಡಾಮಣಿಗಳೂ ಅಲ್ಲಲ್ಲಿ ಚದರಿಬಿದ್ದು, ರಣಭೂಮಿಯೆಲ್ಲ ನಕ್ಷತ್ರಗಳಿಂದ ತುಂಬಿದ ಆಕಾಶದಂತೆ ಕಾಣಿಸುತ್ತಿದ್ದಿತು. ದುರ್ಯೋಧನನೂ, ನಕುಲನೂ ಅನ್ಯೋನ್ಯವಾಗಿ ಅತ್ಯಾಕ್ರೋಶದಿಂದ ಯುದ್ಧವನ್ನು ತೊಡಗಿದರು. ಆಗ ನಕುಲನು ನಿನ್ನ ಮಗನಿಗೆ ಅಪಶಕುನವಾಗುವಂತೆ, ಅವನನ್ನು ಎಡಪಾರ್ಶ್ವಕ್ಕೆ ಬಿಟ್ಟುಕೊಂಡು, ಅವನಮೇಲೆ ಎಡೆಬಿಡದೆ ನೂರಾರು ಬಾಣಗಳನ್ನು ಕರೆದನು. ಆಗ ದೊಡ್ಡ ಕೋಲಾಹಲವಾಯಿತು. ತನಗುಂಟಾದ ಈ ತಿರಸ್ಕಾರವನ್ನು ಸಹಿಸಲಾರದೆ, ದುರ್ಯೋಧನನು ನಕುಲನನ್ನು ತನ್ನ ಎಡಪಕ್ಕಕ್ಕೆ ಬಿಟ್ಟುಕೊಂಡುಹೋಗುವುದಕ್ಕಾಗಿ ಬಾಣಗಳಿಂದ ಅವನ ಗತಿಯನ್ನು ತಡೆಯುತ್ತಿದ್ದನು. ಆಗ ನಕುಲನು ಹುರುಡಿನಿಂದ ನಿನ್ನ ಮಗನಿಗೆ ದಾರಿಯನ್ನು ಕೊಡದೆ, ಬಾಣಸಮೂಹಗಳಿಂದ ಅವನನ್ನು

ತಡೆದು, ಅವನನ್ನು ಬಹಳವಾಗಿ ನೋಯಿಸಿದನು. ಕೊನೆಗೆ ನಿನ್ನ ಮಗನು ನಕುಲನಮುಂದೆ ನಿಲ್ಲಲಾರದೆ ಹಿಂತಿರುಗಬೇಕಾಯಿತು. ಸೈನ್ಯಗಳೆಲ್ಲ ನಕುಲನ ಪರಾಕ್ರಮವನ್ನು ಕೊಂಡಾಡಿದುವು. ಆಗ ನಕುಲನು ಮತ್ತಷ್ಟು ಜಯೋತ್ಸಾಹದಿಂದ ನಿನ್ನ ಮಗನನ್ನು ಬಿಡದೆ "ಎಲಾ! ನಿಲ್ಲು! ನಿಲ್ಲು!" ಎಂದು ಬೆನ್ನಟ್ಟಿ ಆರ್ಭಟಿಸುತಿದ್ದನು. ಆಗ ನಕುಲನು ಹಿಂದೆ ನಿನ್ನ ಮಗನಿಂದ ತಮಗಾದ ಕೆಡಕುಗಳನ್ನೆಲ್ಲ ನೆನೆಸಿಕೊಂಡು, ಕೋಪವನ್ನು ತಡೆಯಲಾರದೆ, ಹಗೆತೀರಿಸಿಕೊಳ್ಳುವ ಆತುರದಲ್ಲಿದ್ದನು. ರಾಜಾ! ಇವೆಲ್ಲಾ ನಿನ್ನ ದುರ್ಮಂತ್ರದ ಫಲವೇ!"

ಇದು ನೂರ ಎಂಭತ್ತೆಂಟನೆಯ ಅಧ್ಯಾಯವು.



## ದ್ರೋಣಾರ್ಜುನಾದಿಗಳ ಸಂಕುಲಯುದ್ಧವು.

ರಾಜಾ! ಆಮೇಲೆ ದುಶ್ಶಾಸನನು ಭೂಮಿಯು ನಡುಗುವಂತೆ ವೇಗದಿಂದ ರಥವನ್ನು ಬಿಟ್ಟುಕೊಂಡು ಸಹದೇವನಿಗಿದಿರಾಗಿ ಹೊರಟನು. ಅವನು ಬರುತ್ತಿರುವಾಗಲೇ ಸಹದೇವನು ಒಂದು ಬಾಣದಿಂದ ಅವನ ಸಾರಥಿಯ ತಲೆಯನ್ನು ಹಾರಿಸಿಬಿಟ್ಟನು. ಸಹದೇವನ ಹಸ್ತಲಾಘವದಿಂದ ಇದು ಯಾರಿಗೂ ತಿಳಿಯಲಿಲ್ಲ. ರಥಾಶ್ವಗಳು ಅಂಕೆಯಿಲ್ಲದೆ ಓಡಿಹೋದಾಗಲೇ, ದುಶ್ಶಾಸನನಿಗೂ ತನ್ನ ಸಾರಥಿಯು ಸತ್ತ ಸಂಗತಿಯು ತಿಳಿಯಿತು. ಆಗ ದುಶ್ಶಾಸನನು ಸಾರಥ್ಯಕಾರ್ಯದಲ್ಲಿಯೂ ನೈಪುಣ್ಯವುಳ್ಳವನಾದುದರಿಂದ, ತಾನೇ ಕುದುರೆಯ ಹಗ್ಗಗಳನ್ನು ಹಿಡಿದು ನಡೆಸುತ್ತ, ಹಸ್ತಲಾಘವದಿಂದ ವಿಚಿತ್ರವಾಗಿ ಯುದ್ಧಮಾಡುತ್ತಿದ್ದನು. ಅವನ ಈ ಸಾಮರ್ಥ್ಯವನ್ನು ನಮ್ಮವರೂ, ಶತ್ರುಪಕ್ಷದವರೂ ಕೊಂಡಾಡಿದರು. ಇಷ್ಟರಲ್ಲಿಯೇ ಸಹದೇವನು ಬಾಣಗಳಿಂದ ಅವನ ರಥಾಶ್ವಗಳನ್ನು ಹೊಡೆಯಲು, ಅವು ಅಂಕೆಯಿಲ್ಲದೆ ಸಿಕ್ಕಿದಕಡೆಗೆ ಓಡಲಾರಂಭಿಸಿದುವು. ಆಗ ದುಶ್ಶಾಸನನಿಗೆ ಆ ರಥಾಶ್ವಗಳನ್ನು ನಿಲ್ಲಿಸಿಕೊಳ್ಳುವ ಪ್ರಯತ್ನದಲ್ಲಿ ಧನುಸ್ಸನ್ನು ಕೆಳಗಿಡಬೇಕಾಯಿತು. ಧನುಸ್ಸಿನಿಂದ ಯುದ್ಧಮಾಡುವಾಗ, ತಿರುಗಿ ಕುದುರೆಯ ಹಗ್ಗಗಳನ್ನು ಬಿಡಬೇಕಾಯಿತು. ಈ ಅವಕಾಶಗಳನ್ನು ನೋಡಿ ಸಹದೇ

ವನು ಅವನಮೇಲೆ ಎಡೆಬಿಡದೆ ಬಾಣಗಳನ್ನು ಪ್ರಯೋಗಿಸುತ್ತಿದ್ದನು. ದುಶ್ಶಾಸನನ ಈ ಕಷ್ಟದಶೆಯನ್ನು ನೋಡಿ ಕರ್ಣನು ಅವನ ರಕ್ಷಣೆಗಾಗಿ ಬಂದು ಸಹದೇವನನ್ನು ಇದಿರಿಸಿಹೋದನು. ಅದನ್ನು ನೋಡಿ ಭೀಮನು ಆ ಕರ್ಣನನ್ನಿದಿರಿಸಿ, ಮೂರು ಬಾಣಗಳನ್ನು ಆಕರ್ಣಾಂತವಾಗಿ ಎಳೆದು ಕರ್ಣನ ಎರಡು ತೋಳುಗಳಿಗೂ, ಎದೆಗೂ ಗುರಿಯಿಟ್ಟು ಹೊಡೆದು, ಸಿಂಹ ನಾದಮಾಡಿದನು. ದಂಡಾಹತವಾದ ಸರ್ಪದಂತೆ ಕರ್ಣನು ಆಕ್ರೋಶ ಗೊಂಡು, ಭೀಮನಮೇಲೆ ತೀಕ್ಷ್ಣಬಾಣಗಳನ್ನು ಬಿಟ್ಟನು. ಕರ್ಣಭೀಮ ರಿಗೆ ಪ್ರಬಲಯುದ್ಧವಾಯಿತು. ಇಬ್ಬರೂ ಗೂಳಿಗಳಂತೆ ಗರ್ಜಿಸುತ್ತ, ವೇಗ ದಿಂದ ಮುಂದೆಮುಂದೆ ಬಂದರು. ಅವರಿಬ್ಬರಿಗೆ ನಡುವೆ ಬಾಣಗಳನ್ನೆಳೆದು ಬಿಡುವುದಕ್ಕೇ ಅವಕಾಶವು ಸಾಲದಂತಾಗಲು, ಇಬ್ಬರೂ ಗದಾಯುದ್ಧಕ್ಕೆ ತೊಡಗಿದರು. ಭೀಮನು ತನ್ನ ಗದಾಪ್ರಹಾರದಿಂದ ಕರ್ಣನ ರಥದ ಮೂಕಿಯನ್ನು ಶತಖಂಡವಾಗಿ ಭೇದಿಸಿಬಿಟ್ಟನು. ಇದು ಆಶ್ಚರ್ಯಕರವಾ ಯಿತು. ಆಮೇಲೆ ಕರ್ಣನು ತನ್ನ ಗದೆಯನ್ನು ಭೀಮನ ರಥದಮೇಲೆ ಬೀಸಿದನು. ಭೀಮನು ಆ ಗದೆಯನ್ನು ಭೇದಿಸಿ ಕೆಡಹಿದುದಲ್ಲದೆ, ತಿರುಗಿ ಬೇರೊಂದು ದೊಡ್ಡ ಗದೆಯನ್ನೆತ್ತಿ ಕರ್ಣನಮೇಲೆ ಪ್ರಯೋಗಿಸಿದನು. ಆ ಗದೆಯನ್ನು ಕರ್ಣನು ತನ್ನ ಅನೇಕ ಬಾಣಗಳಿಂದ ನಿವಾರಿಸಲು, ಅದು ಮಂತ್ರಬಲದಿಂದ ನಿವಾರಿಸಿ ಹಿಂತಿರುಗಿಸಲ್ಪಟ್ಟ ಸರ್ಪದಂತೆ, ಹಿಮ್ಮೊಗವಾಗಿ ತಿರುಗಿ, ಭೀಮನ ಧ್ವಜದಂಡಕ್ಕೆ ತಾಡಿಸಿತು. ಆ ದೊಡ್ಡ ಧ್ವಜವು ತುಂ ಡಾಗಿ ಬಿದ್ದಿತು. ಸಾರಥಿಯೂ ಅದರ ವೇಗದಿಂದ ಬಹಳವಾಗಿ ನೊಂದು ಪ್ರಜ್ಞೆತಪ್ಪಿಬಿದ್ದನು. ಕೂಡಲೇ ಭೀಮನು ಕ್ರೋಧಾವಿಷ್ಟನಾಗಿ, ಕರ್ಣ ನಿಗೆ ಗುರಿಯಿಟ್ಟು ಎಂಟು ಬಾಣಗಳನ್ನು ಬಿಟ್ಟು, ಅವನ ಧ್ವಜವನ್ನೂ, ಬಿಲ್ಲನ್ನೂ, ಬತ್ತಳಿಕೆಯನ್ನೂ ಭೇದಿಸಿಬಿಟ್ಟನು. ಕರ್ಣನು ಒಡನೆ ಬೇರೆ ಬಿಲ್ಲನ್ನೆತ್ತಿಕೊಂಡು, ತೀವ್ರಬಾಣಗಳಿಂದ ಭೀಮನ ರಥಾಶ್ವಗಳನ್ನೂ, ಅವನ ಪಾರ್ಶ್ವದ ಇಬ್ಬರು ಸಾರಥಿಗಳನ್ನೂ ಹೊಡೆದುಕೆಡಹಿದನು. ರಥವು ಮುರಿ ದೊಡನೆ ಭೀಮನು ಬೆಟ್ಟದಿಂದ ಬೆಟ್ಟಕ್ಕೆ ಹಾರುವ ಸಿಂಹದಂತೆ, ತನ್ನ ರಥ ದಿಂದ ತಟ್ಟನೆ ಹಾರಿ, ಸಮೀಪದಲ್ಲಿದ್ದ ನಕುಲನ ರಥವನ್ನೇರಿ ಕುಳಿತನು. ರಾಜಾ! ಇನ್ನೊಂದುಕಡೆ ಹೀಗೆಯೇ ಗುರುಶಿಷ್ಯರೆನಿಸಿದ ದ್ರೋಣಾರ್ಜುನ

ರಿಬ್ಬರೂ ವಿಚಿತ್ರಯುದ್ಧಚಾತುರ್ಯದಿಂದ, ಜನರ ಕಣ್ಣನ್ನೂ, ಮನಸ್ಸನ್ನೂ ಮೋಹಗೊಳಿಸುವಂತೆ ಒಬ್ಬರಿಗೆ ಮೇಲೊಬ್ಬರು ಹಟದಿಂದ ಪ್ರತಿಗೆ ಪ್ರತಿಯನ್ನು ಮಾಡುತ್ತ ಯುದ್ಧಮಾಡುತ್ತಿದ್ದರು. ಬಾಣಸಂಧಾನ ಮೋಕ್ಷಗಳಲ್ಲಿ ತಮಗಿರುವ ಹಸ್ತಲಾಘವದಿಂದಲೂ, ರಥಗತಿಗಳಿಂದಲೂ ನೋಡುವವರನ್ನು ವಿಸ್ಮಯಗೊಳಿಸುತ್ತ, ಒಬ್ಬರನ್ನೊಬ್ಬರು ತಮ್ಮ ಎಡಭಾಗಕ್ಕೆ ಬಿಟ್ಟುಕೊಂಡುಹೋಗುವ ಪ್ರಯತ್ನದಿಂದ, ವಿಚಿತ್ರಗತಿಗಳಲ್ಲಿ ಸಂಚರಿಸುತಿದ್ದರು. ಬೇರೆ ಯೋಧರೆಲ್ಲರೂ ತಮ್ಮ ಯುದ್ಧಕಾರ್ಯವನ್ನೇ ಮರೆತು ಅವರಿಬ್ಬರ ಯುದ್ಧವನ್ನೇ ಆಶ್ಚರ್ಯದಿಂದ ನೋಡುತ್ತಿದ್ದರು. ಅವರಿಬ್ಬರೂ ಆಹಾರಕ್ಕಾಗಿ ಹೋರಾಡುವ ಗಿಡುಗಗಳಂತೆ ಹೋರಾಡುತ್ತಿದ್ದರು. ದ್ರೋಣನು ಮಾಡಿದುದಕ್ಕೆಲ್ಲ ತಕ್ಕಂತೆ ಅರ್ಜುನನು ಪ್ರತಿಯನ್ನು ಮಾಡುತ್ತಿದ್ದನು. ಅರ್ಜುನನನ್ನು ತನ್ನಿಂದ ಮೀರಿಸಲು ಸಾಧ್ಯವಿಲ್ಲದೆಹೋಗಲು, ದ್ರೋಣನು ಕ್ರಮವಾಗಿ ಐಂದ್ರ, ಪಾಶುಪತ, ತ್ವಾಷ್ಟ್ರ, ವಾಯುವ್ಯ, ವಾರುಣಗಳೆಂಬ ಮಂತ್ರಾಸ್ತ್ರಗಳನ್ನು ಮೇಲೆಮೇಲೆ ಪ್ರಯೋಗಿಸತೊಡಗಿದನು. ಅರ್ಜುನನು ಆ ದಿವ್ಯಾಸ್ತ್ರವೊಂದೊಂದನ್ನೂ ಪ್ರತ್ಯಸ್ತ್ರದಿಂದ ಭಂಗಿಸಿದುದನ್ನು ನೋಡಿ, ದ್ರೋಣನು ತನ್ನ ಮನಸ್ಸಿನಲ್ಲಿ ಅರ್ಜುನನನ್ನು ಕೊಂಡಾಡುತ್ತ ಅಂತಹ ಶಿಷ್ಯನನ್ನು ಪಡೆದ ತನಗೆ ಲೋಕದಲ್ಲಿ ಸಮಾನರಿಲ್ಲ"ವೆಂದು ಸಂತೋಷಗೊಂಡನು. ದ್ರೋಣಾರ್ಜುನರ ಈ ಯುದ್ಧವನ್ನು ನೋಡಲು ದೇವಗಂಧರ್ವ ಸಿದ್ಧ ಚಾರಣರೂ, ಮಹರ್ಷಿಗಳೂ ಗುಂಪುಗುಂಪಾಗಿ ಬಂದು ಆಕಾಶದಲ್ಲಿ ನೆರೆದರು. ಅವರಿಂದ ಆಕಾಶವೆಲ್ಲ ಮೇಘಾಚ್ಛಾದಿತವಾದಂತೆ ಮರೆಸಿತು. ದೇವಗಣಗಳು ಆಕಾಶದಲ್ಲಿ ಅದೃಶ್ಯವಾಗಿಯೇ ಇದ್ದು, ತಮ್ಮೊಳಗೆ ಅನ್ಯೋನ್ಯವಾಗಿ "ಇದು ಮನುಷ್ಯರು ನಡೆಸತಕ್ಕ ಯುದ್ಧವಲ್ಲ. ದೇವ ದಾನವ ರಾಕ್ಷಸರ ಯುದ್ಧಕ್ರಮವೂ ಅಲ್ಲ! ಗಾಂಧರ್ವಯುದ್ಧವೂ ಅಲ್ಲ! ಇದು ಬ್ರಹ್ಮಸಂಬಂಧವಾದ ಬೇರೆ ಅಸಾಧಾರಣಯುದ್ಧವು. ಇಂತಹ ಆಶ್ಚರ್ಯಕರವಾದ ಯುದ್ಧವನ್ನು ನಾವು ಹಿಂದೆ ಯಾವಾಗಲೂ ಕಂಡುದಿಲ್ಲ! ಕೇಳಿದುದೂ ಇಲ್ಲ! ಶಿಷ್ಯನು ಆಚಾರ್ಯನನ್ನು ಮೀರಿಸುತ್ತಿರುವನು. ಆಚಾರ್ಯನು ಶಿಷ್ಯನನ್ನು ಮೀರಿಸುತ್ತಿರುವನು. ಇವರಿಬ್ಬರಲ್ಲಿ ಯಾರು ಮೇಲೆಂದು ತಿಳಿಯುವುದೇ ಬೇರೊಬ್ಬರಿಗೆ ಸಾಧ್ಯವಿಲ್ಲ. ಸಾಕ್ಷಾದ್ರುದ್ರನೇ

ಎರಡು ರೂಪಗಳಿಂದ ಇದಿರಿದಿರಾಗಿ ನಿಂತು ತನ್ನೊಡನೆ ತಾನೇ ಯುದ್ಧಮಾಡುವುದನ್ನು ಇದಕ್ಕೆ ಹೋಲಿಸಬಹುದೇಹೊರತು, ಇದಕ್ಕೆ ಬೇರೆ ಉಪಮಾನವಿಲ್ಲ. ಆಚಾರ್ಯನಲ್ಲಿ ಜ್ಞಾನದ ಮತ್ತು ಶೌರ್ಯ ಪರಾಕಾಷ್ಠೆಯುಂಟು. ಅರ್ಜುನನಲ್ಲಿ ಕೃಷ್ಣಸಾರಥ್ಯ, ಗಾಂಡೀವಾದಿ ದಿವ್ಯಸಾಧನಗಳೊಡನೆ ಜ್ಞಾನದ ಮತ್ತು ದೇಹಬಲದ ಅತಿಶಯವುಂಟು. ಹೇಗೂ ಒಬ್ಬರಿಗೊಬ್ಬರು ಕಡಿಮೆಯಿಲ್ಲ. ಯುದ್ಧದಲ್ಲಿ ಇವರನ್ನು ಬೇರೆ ಯಾರಿಂದಲೂ ಜಯಿಸಲು ಸಾಧ್ಯವಲ್ಲ. ಇವರು ಬಯಸಿದರೆ ದೇವತೆಗಳೊಡಗೂಡಿದ ಜಗತ್ತನ್ನೇ ನಾಶಮಾಡಬಲ್ಲರು" ಎಂದು ಆಡಿಕೊಳ್ಳುತ್ತಿದ್ದರು. ಕಣ್ಣಿಗೆ ಕಾಣುವ ಮತ್ತು ಕಾಣಿಸದಿರುವ ಎಲ್ಲಾ ಭೂತಗಳೂ ಇದೇವಿಧವಾಗಿ ಕೊಂಡಾಡುತಿದ್ದುವು. ಕೊನೆಗೆ ದ್ರೋಣನು ಅರ್ಜುನನಲ್ಲಿ ತನ್ನ ಬೇರೆ ಅಸ್ತ್ರಗಳಾವುವೂ ಸಫಲವಾಗದಿರುವುದನ್ನು ನೋಡಿ, ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿಬಿಟ್ಟನು. ಅದರ ಜ್ವಾಲೆಯು ಅರ್ಜುನನನ್ನೂ, ಇತರ ಭೂತಗಳನ್ನೂ ಸಂತಾಪಗೊಳಿಸಿತು. ಪರ್ವತಾರಣ್ಯಗಳೊಡನೆ ಭೂಮಿಯು ನಡುಗಿತು. ನದೀಪ್ರವಾಹಗಳು ಹಿಮ್ಮೊಗವಾದುವು. ವಾಯುವು ವಿಷಮವಾಗಿ ಬೀಸಿತು. ಉಭಯಸೈನ್ಯಗಳೂ ಇದರಿಂದ ಭಯಾಕುಲವಾಯಿತು. ಭೂತಗಳೆಲ್ಲ ನಡುಗಿದುವು. ಆದರೇನು? ಅರ್ಜುನನು ಬ್ರಹ್ಮಾಸ್ತ್ರದಿಂದಲೇ ಅದನ್ನು ಶಾಂತಿಗೊಳಿಸಿಬಿಟ್ಟನು. ಹೀಗೆ ಇಬ್ಬರಲ್ಲಿ ಯಾರ ಕೈಯೂ ಹಿಂದಾಗದೆ, ಸಮಬಲದಿಂದ ಹೋರಾಡುತ್ತಿರಲು, ಕೊನೆಗೆ ಸೈನ್ಯದಲ್ಲಿ ಸಂಕುಲಯುದ್ಧವು ಆರಂಭವಾಯಿತು. ಅದರ ಮೇಲೆ ಇವರ ಯುದ್ಧವು ನಿಂತಿತು. ಆ ದೊಂಬಿಯ ಯುದ್ಧದಲ್ಲಿ ಯಾವುದೊಂದೂ ತಿಳಿಯದಂತಾಯಿತು. ದ್ರೋಣನು ಅರ್ಜುನನನ್ನು ಬಿಟ್ಟು ಪಾಂಚಾಲರನ್ನಡಗಿಸಲು ಹೊರಟನು. ಅರ್ಜುನನೂ ಕೌರವಸೈನ್ಯಕ್ಕಿದಿರಾದನು. ಲೋಕಭಯಂಕರವಾದ ತುಮುಲಯುದ್ಧಕ್ಕೆ ಆರಂಭವಾಗಿ, ಆಕಾಶವೆಲ್ಲ ಮೇಘಾವೃತವಾದಂತೆ ಬಾಣಗಳಿಂದ ಮರೆಸಿಹೋಯಿತು. ಆಗ ಅಲ್ಲಿ ಗಗನಚಾರಿಗಳ ಸಂಚಾರಕ್ಕೂ ಎಡೆಯಿಲ್ಲದಂತಾಯಿತು.

ಇದು ನೂರ ಎಂಭತ್ತೊಂಭತ್ತನೆಯ ಅಧ್ಯಾಯವು.



## ಸಾತ್ಯಕಿ ದುರ್ಯೋಧನಾದಿಗಳ ಸಂಕುಲಯುದ್ಧವು.

ಮಹಾರಾಜಾ! ಹೀಗೆ ಯುದ್ಧದಲ್ಲಿ ಅಪರಿಮಿತವಾಗಿ ಆನೆಕುದುರೆಗಳೂ, ಮನುಷ್ಯರೂ ಸಾಯುತ್ತಿರುವಾಗ, ಒಂದುಕಡೆ ದುಶ್ಶಾಸನನು, ದ್ರೋಣನನ್ನು ಹಿಡಿಯಬೇಕೆಂದು ಹೋಗುತ್ತಿದ್ದ ಧೃಷ್ಟದ್ಯುಮ್ನನನ್ನು ಬಾಣಗಳಿಂದ ತಡೆಯಲು, ಧೃಷ್ಟದ್ಯುಮ್ನನು ನಿನ್ನ ಮಗನ ರಥಾಶ್ವಗಳನ್ನು ಕೊಂದು, ಅವನ ರಥವೇ ಕಾಣದಂತೆ ಬಾಣಗಳಿಂದ ಮುಚ್ಚಿದನು. ಧೃಷ್ಟದ್ಯುಮ್ನನ ಮುಂದೆ ನಿಲ್ಲಲು ನಿನ್ನ ಮಗನಿಗೆ ಸಾಧ್ಯವಿಲ್ಲದಂತಾಗಿ, ಅವನು ಹಿಂತಿರುಗಿಬಿಟ್ಟನು. ಆಮೇಲೆ ಧೃಷ್ಟದ್ಯುಮ್ನನು ದ್ರೋಣನನ್ನು ಲಕ್ಷ್ಯದಲ್ಲಿಟ್ಟುಕೊಂಡು ಮುಂದೆ ಹೊರಟಾಗ, ಕೃತವರ್ಮನು ಇದಿರಿಸಿ ತಡೆದನು. ಧೃಷ್ಟದ್ಯುಮ್ನನಿಗೆ ಅವನ ಇಬ್ಬರು ಸಹೋದರರೂ, ನಕುಲಸಹದೇವರೂ ಬೆಂಬಲವಾಗಿ ಬಂದರು. ಎಲ್ಲರೂ ಮರಣಕ್ಕೆ ಸಿದ್ಧರಾಗಿ ಪ್ರಬಲಯುದ್ಧವನ್ನು ಆರಂಭಿಸಿದರು. ಒಬ್ಬೊಬ್ಬರೂ ಮನೋವಾಕ್ಕಾಯಗಳಲ್ಲಿ ನಿಷ್ಕಲ್ಮಷರಾಗಿ, ವೀರಸ್ವರ್ಗವನ್ನೇ ಧ್ಯೇಯವಾಗಿಟ್ಟುಕೊಂಡು, ಪರಸ್ಪರ ಜಯಾಕಾಂಕ್ಷೆಯಿಂದ ಸಜ್ಜನಸಮ್ಮತವಾದ ಯುದ್ಧಧರ್ಮವನ್ನು ಹಿಡಿದೇ ಹೋರಾಡಿದರು. ಎಲ್ಲರೂ ಶುದ್ಧವಂಶೀಯರು! ಶುದ್ಧವಾದ ಆಚರಣೆಯುಳ್ಳವರು! ಧೀಮಂತರು! ಆದುದರಿಂದ ಅವರ ಯುದ್ಧದಲ್ಲಿ ಧರ್ಮವಿರುದ್ಧವಾದ ಅಥವಾ ನಿಂದಾಸ್ಪದವಾದ ಒಂದು ಕಾರ್ಯವಾದರೂ ನಡೆಯಲಿಲ್ಲ. ಆಗಿನ ಅವರ ಯುದ್ಧದಲ್ಲಿ ಹಿಂದಕ್ಕೆ ಬಾಗಿದ ಎರಡು ಮುಳ್ಳುಗಳುಳ್ಳ ಕರ್ಣಿಯೆಂಬ ಬಾಣಗಳಾಗಲಿ, ದೇಹದಿಂದ ಕೀಳುವುದಕ್ಕಾಗದ ನಾಳೀಕವೆಂಬ ಸಣ್ಣ ಬಾಣವಾಗಲಿ, ವಿಷದಿಗ್ಧವಾದ ಬಾಣವಾಗಲಿ, ಅಲಗಿಗೂ, ಹಿಡಿಗೂ ದೃಢವಾದ ಬೆಸಿಗೆಯಿಲ್ಲದೆ, ಕೀಳುವಾಗ ಹಿಡಿಯುಮಾತ್ರ ಬಂದು, ಅಲಗು ದೇಹದಲ್ಲಿಯೇ ನಾಟಿ ನಿಲ್ಲತಕ್ಕ ವಸ್ತಿಕವೆಂಬ ಬಾಣವಾಗಲಿ ಉಪಯೋಗಿಸಲ್ಪಡುತ್ತಿರಲಿಲ್ಲ. ಸೂಚಿ, ಕಪಿಶ, ದನದ ಕೊಂಬಿನಿಂದಲೂ, ಆನೆಯ ಎಲುಬಿನಿಂದಲೂ ಮಾಡಿದ ಆಯುಧ, ಚೂಳಿ, ಬಲಿಶ, ಯಮಿ, ಪಾಚಕ, ಮುಂತಾದ ಹಿಂಸಾಕರ ಬಾಣಗಳಾವುವೂ ಇರಲಿಲ್ಲ. ತೆಕ್ಕೆಯ ಬಾಣಗಳು, ದುರ್ಗಂಧವನ್ನು ಲೇಪಿಸಿದ ಬಾಣಗಳು, ವಕ್ರವಾಗಿ ನಾಟುವ ಬಾಣಗಳು, ಇವೂ ಪ್ರಯೋಗಿಸಲ್ಪಡುತ್ತಿರಲಿಲ್ಲ. ಶುದ್ಧವಾಗಿಯೂ, ಋಜುವಾಗಿಯೂ

ಇರುವ ಬಾಣಗಳನ್ನೇ ಇಟ್ಟುಕೊಂಡು, ಸದ್ಗತಿಯಲ್ಲಿಯೂ, ಕೀರ್ತಿಯಲ್ಲಿಯೂ ಆಸೆಯುಳ್ಳವರಾಗಿ, ನಿರ್ದುಷ್ಟವಾದ ಯುದ್ಧವನ್ನು ಮಾಡುತ್ತಿದ್ದರು. ನಾಲ್ವರು ಕೌರವಯೋಧರು ಸೇರಿ, ಪಾಂಡವರಲ್ಲಿ ಮೂರುಮಂದಿಯೊಡನೆ ಹೀಗೆ ಧರ್ಮಯುದ್ಧಮಾಡುತ್ತಿದ್ದಾಗ, ಧೃಷ್ಟದ್ಯುಮ್ನನು ನಕುಲಸಹದೇವರನ್ನು ಅಲ್ಲಿ ಬಿಟ್ಟು ತಾನೊಬ್ಬನೇ ದ್ರೋಣನನ್ನಿದಿರಿಸುವುದಕ್ಕಾಗಿ ಹೊರಟನು. ನಿನ್ನಕಡೆಯ ನಾಲ್ಕುಮಂದಿ ಯೋಧರೂ ನಕುಲಸಹದೇವರಿಂದ ನಿವಾರಿತರಾಗಿ, ಪರ್ವತಗಳಿಗಿದಿರಾದ ಬಿರುಗಾಳಿಯಂತೆ ತಡೆಯಲ್ಪಟ್ಟರು. ನಕುಲಸಹದೇವರಲ್ಲಿ ಒಬ್ಬೊಬ್ಬನೂ ನಿನ್ನಕಡೆಯ ನಾಲ್ವರಲ್ಲಿ ಇಬ್ಬಿಬ್ಬರನ್ನು ಇದಿರಿಸಿ ತಡೆದು ನಿಲ್ಲಿಸಿದನು. ಧೃಷ್ಟದ್ಯುಮ್ನನು ದ್ರೋಣನಿಗೆ ಇದಿರಾಗುತ್ತಿರುವುದನ್ನೂ, ನಕುಲಸಹದೇವರು ತಮ್ಮವರನ್ನು ತಡೆದು ನಿಲ್ಲಿಸಿದುದನ್ನೂ ನೋಡಿ ದುರ್ಯೋಧನನು ತೀವ್ರಬಾಣಗಳನ್ನು ಬಿಡುತ್ತ ಅವರನ್ನು ತಡೆಯುತ್ತಿದ್ದನು. ಆಗ ಸಾತ್ಯಕಿಯು ಬಂದು ದುರ್ಯೋಧನನನ್ನು ಇದಿರಿಸಿ ನಿಂತನು. ಅವರಿಬ್ಬರೂ ಬಾಲ್ಯಸ್ನೇಹಿತರು. ತಾವು ಬಾಲ್ಯದಲ್ಲಿ ನಡೆಸಿದ ಕಾರ್ಯಗಳನ್ನು ನೆನೆಸಿಕೊಂಡು, ಒಬ್ಬರನ್ನೊಬ್ಬರು ನೋಡಿ ನಗುತ್ತಲೇ ಯುದ್ಧವನ್ನಾರಂಭಿಸಿದರು. ಆಗ ನಿನ್ನ ಮಗನು ಸಾತ್ಯಕಿಯ ವಿಷಯದಲ್ಲಿ ತನ್ನ ಕಾರ್ಯಕ್ಕಾಗಿ ತನ್ನನ್ನೇ ನಿಂದಿಸಿಕೊಳ್ಳುತ್ತ ಹೀಗೆಂದನು. "ಮಿತ್ರ ಸಾತ್ಯಕೀ! ಈಗ ನಮ್ಮನ್ನು ಈ ಕಾರ್ಯಕ್ಕೆ ಪ್ರೇರಿಸಿದ ಈ ನಮ್ಮ ಕ್ರೋಧಲೋಭಗಳನ್ನೂ, ಮೋಹ ಮತ್ಸರಗಳನ್ನೂ ಸುಡಬೇಕಲ್ಲವೆ? ಮೊತ್ತಕ್ಕೆ ನಮ್ಮ ಕ್ಷತ್ರಿಯಧರ್ಮವನ್ನೇ ಸುಡಬೇಕು! ನಮ್ಮ ದೇಹಬಲಕ್ಕೂ ಧಿಕ್ಕಾರವಿರಲಿ. ಓ ಸಾತ್ಯಕೀ! ಅಷ್ಟು ಪ್ರಿಯಸ್ನೇಹಿತರಾಗಿದ್ದ ನಾವು, ಆ ಸ್ನೇಹವನ್ನೆಲ್ಲ ಮರೆತು, ಈಗ ನೀನು ನನ್ನನ್ನೂ, ನಾನು ನಿನ್ನನ್ನೂ ಕೊಲ್ಲಬೇಕೆಂದು ಯುದ್ಧಕ್ಕೆ ನಿಂತಿರುವೆವು. ನೀನು ನನಗೆ ಪ್ರಾಣಕ್ಕಿಂತಲೂ ಪ್ರಿಯತಮನು. ನಾನೂ ನಿನಗೆ ಹಾಗೆಯೇ! ನಾನೂ, ನೀನೂ ಸೇರಿ, ಬಾಲ್ಯದಲ್ಲಿ ನಡೆಸಿದ ಆಟಪಾಟಗಳೆಲ್ಲ ಇನ್ನೂ ನನ್ನ ನೆನಪಿಗೆ ಬರುತ್ತಿವೆ. ಆದರೇನು? ಈ ಯುದ್ಧರಂಗದಲ್ಲಿ ಅವೆಲ್ಲವೂ ಎಲ್ಲಿಯೋ ಜೀರ್ಣವಾಗಿಹೋದುವು. ಮನುಷ್ಯನಲ್ಲಿ ಕ್ರೋಧಲೋಭಗಳ ಫಲವೇ ಇದು!" ಎಂದನು. ಈ ಮಾತನ್ನು ಕೇಳಿ ಸಾತ್ಯಕಿಯು ನಗುತ್ತ, ಕೈಯಲ್ಲಿ ತೀಕ್ಷ್ಣಬಾಣಗಳನ್ನು

ಎತ್ತಿ ಹಿಡಿದಹಾಗೆಯೇ ನಿನ್ನ ಮಗನನ್ನು ಕುರಿತು “ರಾಜಕುಮಾರಾ! ನಾವು ಹಿಂದೆ ಆಟವಾಡಿದ ಸ್ಥಳದಂತೆ ಇದು ಸಭೆಯೂ ಅಲ್ಲ! ಆಚಾರ್ಯ ಗೃಹವೂ ಅಲ್ಲ! ಅದೆಲ್ಲವೂ ಆ ಕಾಲಕ್ಕೇ ಮುಗಿಯಿತು. ನಾವು ಆಗ ಆಟ ವಾಡಿದುದು ವಾಸ್ತವವೇ! ಈಗಿನ ಸ್ಥಿತಿಯು ಅದಲ್ಲ.” ಎಂದನು. ಅದಕ್ಕೆ ದುರ್ಯೋಧನನು “ಓ ಸಾತ್ಯಕೀ! ನಾವು ಬಾಲ್ಯದಲ್ಲಿ ನಡೆಸಿದ ಆ ವಿನೋದಕ್ರೀಡೆಗಳೆಲ್ಲಿ? ಈಗಿನ ಈ ಕ್ರೂರಯುದ್ಧವೆಲ್ಲಿ? ಕಾಲವೆಂಬುದು ಎಂತವರಿಗೂ ದುರತಿಕ್ರಮವು! ಪರಮಮಿತ್ರರಲ್ಲಿ ಮಹಾದ್ವೇಷವನ್ನು ತಂದೊಡ್ಡತಕ್ಕ ಧನಲೋಭದಿಂದಲ್ಲವೇ ಹೀಗೆ ನಾವು ಒಬ್ಬರಿಗೊಬ್ಬರು ಹೊಡೆದಾಡಿ ಸಾಯಬೇಕಾಗಿರುವುದು” ಎಂದನು. ತಿರುಗಿ ಸಾತ್ಯಕಿಯು “ದುರ್ಯೋಧನಾ! ಕ್ಷತ್ರಿಯವ್ಯಾಪಾರವೇ ಇದು! ಕ್ಷತ್ರಿಯರು ಗುರುಗಳನ್ನಾದರೂ ಯುದ್ಧದಲ್ಲಿ ಇದಿರಿಸಲೇಬೇಕು. ನಿನಗೆ ನಾನು ನಿಜವಾದ ಪ್ರಿಯಮಿತ್ರನಾಗಿದ್ದಪಕ್ಷದಲ್ಲಿ, ನೀನು ವಿಳಂಬಮಾಡದೆ ಈಗಲೇ ನನ್ನನ್ನು ವಧಿಸಿಬಿಡು! ನಿನ್ನಿಂದ ನನಗೆ ಪುಣ್ಯಲೋಕಗಳಾದರೂ ಲಭಿಸಲಿ! ನಿನ್ನ ಶಕ್ತಿಯೆಷ್ಟೋ ಅದನ್ನೆಲ್ಲ ಈಗಲೇ ನನ್ನಲ್ಲಿ ತೋರಿಸು. ಇನ್ನುಮುಂದೆಯಾದರೂ ಈ ಯುದ್ಧದಲ್ಲಿ ನನ್ನ ಬಂಧುಮಿತ್ರರಿಗುಂಟಾಗತಕ್ಕ ಮಹತ್ತಾದ ವ್ಯಸನವನ್ನು ನಾನು ನೋಡದಂತೆ ಮಾಡು! ಅದು ನನಗೆ ಸಮ್ಮತವಿಲ್ಲ” ಎಂದನು. ಹೀಗೆಂದು ಸಾತ್ಯಕಿಯು ಪ್ರತ್ಯುತ್ತರಗಳನ್ನು ಹೇಳಿ, ದಯಾದಾಕ್ಷಿಣ್ಯಗಳನ್ನು ತೊರೆದು ಯುದ್ಧಕ್ಕೆ ತೊಡಗಿದನು. ನಿನ್ನ ಮಗನೂ ಬಾಣಗಳನ್ನು ಬಿಟ್ಟನು. ಗಜಸಿಂಹಗಳ ಯುದ್ಧದಂತೆ ಅವರಿಬ್ಬರಿಗೂ ಘೋರಯುದ್ಧವು ನಡೆಯಿತು. ದುರ್ಯೋಧನನು ಹತ್ತು ಬಾಣಗಳನ್ನು ಆಕರ್ಣಾಂತವಾಗಿ ಎಳೆದು, ಸಾತ್ಯಕಿಯಮೇಲೆ ಪ್ರಯೋಗಿಸಿದನು. ಸಾತ್ಯಕಿಯು ತನ್ನ ಬಾಣಗಳಿಂದ ಆ ದುರ್ಯೋಧನನ ಬಾಣಗಳನ್ನೆಲ್ಲ ಭಂಗಿಸಿ ಮೇಲೆಮೇಲೆ ಐವತ್ತು, ಮೂವತ್ತು, ಹತ್ತು, ಹೀಗೆ ಬಾಣಗಳನ್ನು ಬಿಟ್ಟನು. ನಿನ್ನ ಮಗನು ಹಸನ್ಮುಖನಾಗಿಯೇ ಮೂವತ್ತು ಬಾಣಗಳಿಂದ ಸಾತ್ಯಕಿಯ ಬಾಣಗಳನ್ನೆಲ್ಲ ಭಂಗಿಸಿ, ಒಂದು ಕ್ಷುರಪ್ರದಿಂದ ಸಾತ್ಯಕಿಯ ಕೈಯಲ್ಲಿ ಬಾಣಸಹಿತವಾಗಿದ್ದ ಬಿಲ್ಲನ್ನು ಎರಡು ತುಂಡಾಗಿ ಕಡಿದನು. ಒಡನೆ ಸಾತ್ಯಕಿಯು ಬೇರೊಂದು ಬಿಲ್ಲನ್ನು ಕೈಗೆತ್ತಿಕೊಂಡು, ತನ್ನ ಹಸ್ತವೇಗವನ್ನೆಲ್ಲ ತೋರಿಸಿ ನಿನ್ನ

ಮಗನಮೇಲೆ ಬಾಣಪರಂಪರೆಗಳನ್ನು ಕರೆದನು. ಅವನ್ನೆಲ್ಲ ದುರ್ಯೋಧನನು ತನ್ನ ಬಾಣಗಳಿಂದ ತುಂಡುಮಾಡಿದನು. ಜನರೆಲ್ಲರೂ ಇದನ್ನು ನೋಡಿ ಆಶ್ಚರ್ಯದಿಂದ ಕೂಗುತ್ತಿದ್ದರು. ತಿರುಗಿ ನಿನ್ನ ಮಗನು ಎಡೆಬಿಡದೆ ಎಪ್ಪತ್ತುಮೂರು ತೀಕ್ಷ್ಣಬಾಣಗಳನ್ನು ಬಿಟ್ಟು, ಸಾತ್ಯಕಿಯನ್ನು ಬಲವಾಗಿ ನೋಯಿಸಿದನು. ಇಷ್ಟರಲ್ಲಿಯೇ ಸಾತ್ಯಕಿಯು ನಿನ್ನ ಮಗನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿ ಅವನನ್ನೂ ನೋಯಿಸಲು, ನಿನ್ನ ಮಗನು ಬಹಳವಾಗಿ ನೊಂದು, ಬೇರೆ ರಥವನ್ನೇರಿ ವಿಮುಖನಾದನು. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ತಿರುಗಿ ಚೇತರಿಸಿಕೊಂಡು, ಬಾಣಗಳನ್ನು ಬಿಡುತ್ತ, ತಿರುಗಿ ಸಾತ್ಯಕಿಗಿದಿರಾದನು. ಸಾತ್ಯಕಿಯು ಪ್ರತಿಯಾಗಿ ನಿನ್ನ ಮಗನ ರಥಕ್ಕೆ ಗುರಿಯಿಟ್ಟು ಬಾಣಗಳನ್ನು ಹೊಡೆದನು. ಒಣಗಿದ ಪೊದೆಯಲ್ಲಿ ಹತ್ತಿಕೊಂಡ ಬೆಂಕಿಯ ಚಟಚಟಾತ್ಕಾರದಂತೆ, ಅವರಿಬ್ಬರ ಬಾಣಪಾತಧ್ವನಿಯು ಅತಿಪ್ರಬಲವಾಗಿ ಕೇಳಿಸುತ್ತಿತ್ತು. ಅವರಿಬ್ಬರ ಬಾಣಗಳಿಂದ ಭೂವ್ಯಾಕಾಶಗಳೆಲ್ಲ ಮರೆಸಿಹೋದುವು. ಆಗಿನ ಯುದ್ಧದಲ್ಲಿ ಸಾತ್ಯಕಿಯ ಕೈಮೇಲಾಗುತ್ತಿರುವುದನ್ನು ನೋಡಿ, ಕರ್ಣನು ನಿನ್ನ ಮಗನ ಸಹಾಯಾರ್ಥವಾಗಿ ಬಂದನು. ಇದನ್ನು ನೋಡಿ ಭೀಮಸೇನನು ಸಾತ್ಯಕಿಗೆ ಬೆಂಬಲವಾಗಿ ಬಂದು ಕರ್ಣನನ್ನಿದಿರಿಸಿದನು. ಒಡನೆ ಕರ್ಣನು, ನಗುಮುಖದಿಂದಲೇ ಭೀಮನ ಕೈಯಲ್ಲಿದ್ದ ಧನುರ್ಬಾಣಗಳೆರಡನ್ನೂ ಕತ್ತರಿಸಿ, ಅವನ ಸಾರಥಿಯನ್ನೂ ಬಲವಾಗಿ ನೋಯಿಸಿದನು. ಇದರಿಂದ ಭೀಮನು ಕುಪಿತನಾಗಿ, ತನ್ನ ಗದೆಯನ್ನೆತ್ತಿ, ಕರ್ಣನ ಧ್ವಜವನ್ನೂ, ಬಿಲ್ಲನ್ನೂ, ಸಾರಥಿಯನ್ನೂ, ರಥಚಕ್ರವನ್ನೂ ಮುರಿದುಕೆಡಹಿದನು. ತನ್ನ ರಥದ ಒಂದು ಚಕ್ರವು ಮುರಿದುಹೋದರೂ, ಕರ್ಣನು ನಿಶ್ಚಲನಾಗಿ ಅದೇ ರಥದಲ್ಲಿ ಕುಳಿತಿದ್ದನು. ಸೂರ್ಯನ ಒಂದೇ ಚಕ್ರದ ರಥವನ್ನು ಅವನ ಏಳು ಕುದುರೆಗಳು ಎಳೆಯುವಂತೆ, ಕರ್ಣನ ಕುದುರೆಗಳು ಆ ಒಂದು ಚಕ್ರದ ರಥವನ್ನೇ ಎಳೆದುಕೊಂಡು ಸಂಚರಿಸುತ್ತಿದ್ದುವು. ಭೀಮನ ಈ ಕಾರ್ಯವನ್ನು ನೋಡಿ ಸಹಿಸದೆ, ಕರ್ಣನು ಭೀಮನಮೇಲೆ ವಿವಿಧಬಾಣಗಳನ್ನೂ, ಶಸ್ತ್ರಗಳನ್ನೂ ಪ್ರಯೋಗಿಸಿದನು. ಭೀಮನೂ ಕರ್ಣನನ್ನಿದಿರಿಸುತಿದ್ದನು. ಇದನ್ನು ನೋಡಿ ಧರ್ಮರಾಜನು ತನ್ನ ಸಮೀಪದಲ್ಲಿದ್ದ ಪಾಂಚಾಲ ಮಾತ್ಸ್ಯಪ್ರಮುಖರನ್ನು

ನೋಡಿ "ಎಲೈ! ಈಗಲೂ ನೀವು ಮಂಕುಹಿಡಿದವರಂತೆ ಹೀಗೇಕೆ ಸುಮ್ಮ ನಿರುವಿರಿ? ನಮಗೆ ಪ್ರಾಣದಂತೆಯೂ, ಶಿರಸ್ಸಿನಂತೆಯೂ ಇರತಕ್ಕ ನಮ್ಮ ಕಡೆಯ ಮಹಾರಥರೂ, ನಮ್ಮ ಯೋಧರೂ ಅದೋ ಅಲ್ಲಿ ಕೌರವರೊಡನೆ ಹೆಣಗಾಡುತ್ತಿರುವರು. ಈಗಲೇ ನೀವು ಅವರ ಸಹಾಯಕ್ಕೆ ಹೋಗಿರಿ. ನೀವೆಲ್ಲರೂ ಭೀತಿಯನ್ನು ಬಿಟ್ಟು ಕ್ಷತ್ರಿಯಧರ್ಮವನ್ನು ಹಿಡಿದು ಯುದ್ಧ ಮಾಡಿರಿ. ಯುದ್ಧದಲ್ಲಿ ಜಯಿಸಿದರೂ, ಮರಣಹೊಂದಿದರೂ ನಿಮಗೆ ಉತ್ತಮಗತಿಯುಂಟು. ನೀವು ಜಯಿಸಿಬಂದರೆ, ಭೂರಿದಕ್ಷಿಣೆಗಳುಳ್ಳ ಅನೇಕ ಯಜ್ಞಗಳಿಂದ ಪುಣ್ಯವನ್ನು ಸಂಪಾದಿಸಬಹುದು. ಅಥವಾ ನೀವು ಸತ್ತರೆ ದೇವತ್ವವನ್ನು ಹೊಂದಿ, ಇನ್ನೂ ಮೇಲಾದ ಲೋಕಗಳನ್ನು ಪಡೆಯ ಬಹುದು" ಎಂದನು. ಹೀಗೆ ಧರ್ಮರಾಜನಿಂದ ಪ್ರೇರಿತರಾದ ಮಹಾ ರಥರು ತಮ್ಮ ಸೈನ್ಯವನ್ನು ನಾಲ್ಕು ಶಾಖೆಗಳಾಗಿ ವಿಭಾಗಿಸಿಕೊಂಡು, ದ್ರೋ ಣನಿಗಿದಿರಾಗಿ ಹೊರಟರು. ಒಂದುಕಡೆಯಿಂದ ಪಾಂಚಾಲರೂ ಗುಂಪಾಗಿ ದ್ರೋಣನಿಗಿದಿರಾದರು. ಭೀಮಸೇನನನ್ನು ಮುಂದಿಟ್ಟುಕೊಂಡು ಬೇರೆ ಕೆಲ ವರು ಇನ್ನೊಂದು ಪಾರ್ಶ್ವದಿಂದ ದ್ರೋಣನನ್ನು ಆವರಿಸಿಕೊಂಡರು. ಆಗ ಭೀಮ ನಕುಲ ಸಹದೇವರೀ ಮೂವರೂ, ಅರ್ಜುನನನ್ನು ಕುರಿತು "ಅರ್ಜುನಾ! ನೀನು ಈಗ ಆ ಕೌರವಯೋಧರನ್ನು ದ್ರೋಣನಬಳಿಗೆ ಹೋಗದಂತೆ ನಿವಾರಿಸಬೇಕು. ಆಗಮಾತ್ರವೇ ಅಸಹಾಯನಾದ ದ್ರೋಣ ನನ್ನು ಪಾಂಚಾಲರು ಸುಲಭವಾಗಿ ಕೊಲ್ಲಬಲ್ಲರು" ಎಂದು ಕೂಗಿದರು. ಅದ ರಂತೆ ಅರ್ಜುನನು ಕೌರವರನ್ನು ತಡೆಯುತ್ತಿದ್ದನು. ದ್ರೋಣನು ಧೃಷ್ಟದ್ಯು ಮ್ನನನ್ನು ಮುಂದಿಟ್ಟುಕೊಂಡು ಬಂದ ಪಾಂಚಾಲರನ್ನು ಇದಿರಿಸುತ್ತಿದ್ದನು. ದ್ರೋಣನ ಈ ಐದನೆಯ ದಿನದ ಯುದ್ಧದಲ್ಲಿ, ಉಭಯಪಕ್ಷದ ವೀರರಿಗೂ ಪ್ರಬಲವಾದ ಹೋರಾಟವಾಗಿ ಒಬ್ಬರನ್ನೊಬ್ಬರು ವಧಿಸುತ್ತಿದ್ದರು.

ಇದು ನೂರತೊಂಭತ್ತನೆಯ ಅಧ್ಯಾಯವು.



ಕೃಷ್ಣನು ಯುಧಿಷ್ಠಿರನನ್ನು ಕುರಿತು, ದ್ರೋಣನನ್ನು ಜಯಿಸಬೇಕಾದರೆ ಅವನು ತಾನಾಗಿ ಶಸ್ತ್ರತ್ಯಾಗಮಾಡುವಂತೆ ಉಪಾಯವನ್ನು ನಡೆಸಬೇಕೆಂದೂ, ಅದಕ್ಕಾಗಿ ಅವನ ಮಗನ ವಧವನ್ನು ಅವನ ಕಿವಿಗೆ ಬೀಳಿಸಬೇಕೆಂದೂ ಹೇಳಿದುದು. ಇದಕ್ಕಾಗಿ ಭೀಮನು ಅಶ್ವತ್ಥಾಮವೆಂಬ ಒಂದಾನೆಯನ್ನು ಕೊಂದು ಬಂದು, ಅದೇ ನೆಪವಾಗಿ ಆ ವೃತ್ತಾಂತವನ್ನು ದ್ರೋಣನ ಮುಂದೆ ಯುಧಿಷ್ಠಿರನ ಬಾಯಿಂದ ನುಡಿಸಿದುದು.

ಮಹಾರಾಜಾ! ಇಂದ್ರನು ದಾನವಕ್ಷಯಕ್ಕಾಗಿ ಕೋಪಗೊಂಡು ನಿಂತಂತೆ, ದ್ರೋಣನು ಪಾಂಚಾಲರನ್ನೆಲ್ಲ ಮಹಾಸ್ತ್ರಗಳಿಂದ ವಧಿಸುತಿದ್ದನು. ಆ ಕೊಲೆಗೆ ಭಯಪಡದೆ ಪಾಂಚಾಲ ಸೃಂಜಯರೂ ಮಹಾಪ್ರಯತ್ನದಿಂದ ಇದಿರಿಸಿ ಯುದ್ಧಮಾಡುತ್ತಿದ್ದರು. ಕೊನೆಕೊನೆಗೆ ದ್ರೋಣನ ಶರಪ್ರಹಾರದಿಂದ ಕೊಲೆಗೀಡಾದ ಪಾಂಚಾಲರ ಆಕ್ರೋಶವು ಮೇಲೆಮೇಲೆ ಪ್ರಬಲವಾಯಿತು. ತಮ್ಮ ಸೇನಾಕ್ಷಯವನ್ನು ನೋಡಿ ಪಾಂಡವರಿಗೂ ಭೀತಿ ಹುಟ್ಟಿತು. ಅವರಿಗೆ ಜಯದಲ್ಲಿ ನಂಬಿಕೆ ತಪ್ಪಿತು. ಚಳಿಗಾಲವು ಕಳೆದಮೇಲೆ ಒಣಗಿದ ಪೊದೆಯನ್ನು ದಹಿಸುವ ದಾವಾಗ್ನಿಯಂತೆ, ದ್ರೋಣನು ತಮ್ಮನ್ನೆಲ್ಲ ಪೂರ್ಣವಾಗಿ ನಾಶಮಾಡದೆ ಬಿಡುವನೇ? ಇವನನ್ನು ಯುದ್ಧದಲ್ಲಿ ಇದಿರಿಸುವುದಕ್ಕೆ ಯಾರೂ ಸಮರ್ಥರಿಲ್ಲವಲ್ಲಾ! ಅರ್ಜುನನಾದರೂ ಆಚಾರ್ಯನಿಗಿದಿರಾಗಿ ನಿಂತು ಯುದ್ಧಮಾಡುವನೆಂದು ತೋರಲಿಲ್ಲ. ಏಕೆಂದರೆ ಅವನು ಧರ್ಮಜ್ಞನು. ತನ್ನ ಗುರುವಿಗೆ ಇದಿರಾಗಿ ನಿಲ್ಲಲಾರನು. ಈಗ ಮಾಡುವುದೇನು?" ಎಂದು ಪಾಂಡವರೆಲ್ಲರೂ ಭಯಾಕುಲರಾಗಿದ್ದರು. ಈ ಸ್ಥಿತಿಯನ್ನು ಕಂಡು ಕೃಷ್ಣನು ಅರ್ಜುನನನ್ನು ನೋಡಿ "ಧನಂಜಯಾ! ಈ ದ್ರೋಣನನ್ನು ಯುದ್ಧದಿಂದ ಜಯಿಸುವುದು ಹೇಗೂ ಸಾಧ್ಯವಲ್ಲ. ಧನುರ್ಧಾರಿಗಳಲ್ಲಿ ಶ್ರೇಷ್ಠನೆನಿಸಿದ ಇವನು, ಕೈಯಲ್ಲಿ ಬಿಲ್ಲನ್ನು ಹಿಡಿದು ನಿಂತಾಗ, ಇಂದ್ರನೊಡಗೂಡಿದ ದೇವತೆಗಳಾದರೂ ಅವನನ್ನು ಜಯಿಸಲಾರರು. ಅವನು ಶಸ್ತ್ರವನ್ನು ಕೆಳಗಿಟ್ಟರೆಮಾತ್ರವೇ ಅವನನ್ನು ಕೊಲ್ಲಬಹುದು. ಆದುದರಿಂದ ಎಲೈ ಪಾಂಡವರೆ! ನೀವು ಈ ಸಮಯದಲ್ಲಿ ಧರ್ಮಾಧರ್ಮಗಳನ್ನು ವಿಚಾರಮಾಡದೆ, ಜಯಕ್ಕೆ ತಕ್ಕ ತಂತ್ರವನ್ನುನಡೆಸಬೇಕು. ರುಕ್ಮ

ರಥನೆನಿಸಿಕೊಂಡ ಆ ದ್ರೋಣನು ನಿಮ್ಮೆಲ್ಲರನ್ನೂ ಕೊಲ್ಲುವುದಕ್ಕೆ ಮೊದಲೇ ಆ ತಂತ್ರವನ್ನು ನಡೆಸಿರಿ! ಅವನ ಮಗನಾದ ಅಶ್ವತ್ಥಾಮನು ಯುದ್ಧದಲ್ಲಿ ಹತನಾದನೆಂಬ ಸಂಗತಿಯನ್ನು ಕೇಳಿದರೆಮಾತ್ರ ಆ ದ್ರೋಣನು ಮುಂದೆ ಯುದ್ಧಮಾಡಲಾರನೆಂದು ನನಗೆ ತೋರುವುದು. ಆ ಅಶ್ವತ್ಥಾಮನೇನೋ ಸಾಯುವವನಾಗಿಲ್ಲ. ಆದುದರಿಂದ ನಮ್ಮಲ್ಲಿ ಯಾವನಾದರೂ "ಅಶ್ವತ್ಥಾಮನು ಯುದ್ಧದಲ್ಲಿ ಹತನಾದ"ನೆಂದು ದ್ರೋಣನ ಮುಂದೆ ಸುಳ್ಳಾಡಬೇಕು" ಎಂದನು. ಕೃಷ್ಣನ ಈ ಮಾತಿಗೆ ಅರ್ಜುನನು ಸರ್ವಥಾ ಸಮ್ಮತಿಸಲಿಲ್ಲ. ಇತರರೆಲ್ಲರೂ ಅದು ಒಳ್ಳೇ ಉಪಾಯವೆಂದು ಅನುಮೋದಿಸಿದರು. ಯುಧಿಷ್ಠಿರನು ಬಹಳ ಕಷ್ಟದಿಂದ ಅದನ್ನಾಮೋದಿಸಿದನು. ಆಮೇಲೆ ಭೀಮನು ಮಾಲವರಾಜನಾದ ಇಂದ್ರವರ್ಮನಲ್ಲಿದ್ದ ಅಶ್ವತ್ಥಾಮವೆಂಬ ಹೆಸರುಳ್ಳ ಒಂದು ದೊಡ್ಡ ಆನೆಯನ್ನು ತನ್ನ ಗದೆಯಿಂದ ಕೊಂದು, ನೆಟ್ಟಗೆ ದ್ರೋಣನಲ್ಲಿಗೆ ಬಂದು, ತನ್ನ ಮನಸ್ಸಿನಲ್ಲಿ ಲಜ್ಜೆಯು ಬಾಧಿಸುತ್ತಿದ್ದರೂ, ಅಶ್ವತ್ಥಾಮವೆಂಬ ಆನೆಯು ಹತವಾದುದನ್ನು ಮನಸ್ಸಿನಲ್ಲಿಟ್ಟುಕೊಂಡು, ದ್ರೋಣನ ಕಿವಿಗೆ ಬೀಳುವಂತೆ "ಅಶ್ವತ್ಥಾಮಾ ಹತಃ" ಎಂದು ಉಚ್ಚಸ್ವರದಿಂದ ಕೂಗಿದನು. ಅಪ್ರಿಯವಾದ ಈ ಮಾತನ್ನು ಕೇಳಿ ದ್ರೋಣನ ಮನಸ್ಸು ಕದಲಿತು. ನೀರಿನ ವೇಗದಲ್ಲಿ ಮಳಲಿನಂತೆ ಅವನ ಮನಸ್ಸು ವ್ಯಾಕುಲತೆಯಿಂದ ಕರಗಿಹೋಯಿತು. ಅವನ ದೇಹವು ಕಂಪಿಸಿತು. ಆದರೆ ತನ್ನ ಮಗನ ಪರಾಕ್ರಮವನ್ನು ಅವನು ಬಲ್ಲವನಾದುದರಿಂದ, ಭೀಮನ ಮಾತಿನಲ್ಲಿ ಅವನಿಗೆ ನಂಬಿಕೆ ಹುಟ್ಟಲಿಲ್ಲ. ಅವನು ಧೈರ್ಯಚ್ಯುತನಾಗದೆ ಅದನ್ನು ಸುಳ್ಳೆಂದೇ ತಿಳಿದನು. ಉತ್ತರಕ್ಷಣದಲ್ಲಿಯೇ ಅವನ ಮನಸ್ಸಿಗೆ ಸಮಾಧಾನವುಂಟಾಗಿ, ತಿರುಗಿ ಅವನು ಯುದ್ಧದಲ್ಲಿ ಉತ್ಸಾಹಗೊಂಡನು. ತನಗೆ ಮೃತ್ಯುವೆನಿಸಿಕೊಂಡ ಧೃಷ್ಟದ್ಯುಮ್ನನನ್ನು ವಧಿಸುವ ಉದ್ದೇಶದಿಂದ ಹೊರಟು, ಅವನಮೇಲೆ ಸಾವಿರಾರು ತೀಕ್ಷ್ಣಬಾಣಗಳನ್ನು ಪ್ರಯೋಗಿಸುತ್ತ ಬಂದನು. ಇಪ್ಪತ್ತುಸಾವಿರಮಂದಿ ಪಾಂಚಾಲರು ದ್ರೋಣನನ್ನು ಸುತ್ತಿಮುತ್ತಿ ಬಾಣಗಳಿಂದ ಹೊಡೆಯಲಾರಂಭಿಸಿದರು. ಮೇಘಗಳಿಂದ ಮರೆಸಲ್ಪಟ್ಟ ಸೂರ್ಯನಂತೆ ಸ್ವಲ್ಪಹೊತ್ತಿನವರೆಗೆ ದ್ರೋಣನಿದ್ದ ಸ್ಥಳವೇ ತಿಳಿಯದಂತಾಯಿತು. ಆದರೆ ದ್ರೋಣನು ಕ್ಷಣಮಾತ್ರದಲ್ಲಿ

ಆ ಬಾಣಗಳನ್ನೆಲ್ಲ ಭಂಗಿಸಿ, ಪಾಂಚಾಲರ ವಧಕ್ಕಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿಬಿಟ್ಟನು. ಅನೇಕ ಪಾಂಚಾಲರ ತಲೆಗಳು ಕತ್ತರಿಸಿ ಬಿದ್ದುವು. ಅನೇಕರಿಗೆ ಸುವರ್ಣಾಲಂಕೃತಗಳಾದ ತೋಳುಗಳು ತುಂಡಾಗಿ ಬಿದ್ದುವು. ಬಿರುಗಾಳಿಯಿಂದ ಮುರಿಯಲ್ಪಟ್ಟ ಮರಗಳಂತೆ ಹಲವರು ಸತ್ತು ಬಿದ್ದರು. ಆನೆಕುದುರೆಗಳ ಮೃತದೇಹದಿಂದ ರಣಭೂಮಿಯೆಲ್ಲ ಆಚ್ಛಾದಿತ ವಾಯಿತು. ನೆಲವೆಲ್ಲ ರಕ್ತಮಾಂಸಗಳ ಕೆಸರಿನಿಂದ ತುಂಬಿತು. ಇಪ್ಪತ್ತು ಸಾವಿರ ಮಂದಿ ಪಾಂಚಾಲರಥಿಕರನ್ನೂ ದ್ರೋಣನು ಕ್ಷಣಮಾತ್ರದಲ್ಲಿ ಕೊಂದು ಕೆಡಹಿ, ಹೊಗೆಯಿಲ್ಲದ ಬೆಂಕಿಯಂತೆ ಜ್ವಲಿಸುತ್ತಿದ್ದನು. ವಸು ದಾನನೆಂಬವನ ತಲೆಯನ್ನು ಒಂದೇ ಭಲ್ಲದಿಂದ ಕಡಿದುಕೆಡಹಿದನು. ಐನೂ ರುಮಂದಿ ಮಾತ್ಸ್ಯರನ್ನೂ, ಆರುಸಾವಿರಮಂದಿ ಸೃಂಜಯರನ್ನೂ, ಹತ್ತು ಸಾವಿರ ಕುದುರೆಗಳನ್ನೂ ವಧಿಸಿದನು. ಕ್ಷತ್ರಿಯರ ಹುಟ್ಟೇ ಇಲ್ಲದಂತೆ ಮಾಡ ಬೇಕೆಂದಿರುವ ದ್ರೋಣನ ದಾರುಣಪ್ರಯತ್ನವನ್ನು ನೋಡಿ, ಅನೇಕಮಹ ರ್ಷಿಗಳು ಅಗ್ನಿಯನ್ನು ಮುಂದಿಟ್ಟುಕೊಂಡು ದ್ರೋಣನ ಬಳಿಗೆ ಬಂದರು. ವಿಶ್ವಾಮಿತ್ರ, ಜಮದಗ್ನಿ, ಭರದ್ವಾಜ, ಗೌತಮ, ವಸಿಷ್ಠ, ಕಶ್ಯಪ, ಅತ್ರಿ, ಮೊದಲಾದವರೂ, ಸಿಕತ, ಪೃಶ್ನಿ, ಗರ್ಗ, ವಾಲಖಿಲ್ಯ, ಮರೀಚಿಪ, ಭೃಗು, ಅಂಗೀರಸಾದಿ ಕುಲಪವರೂ, ಸೂಕ್ಷ್ಮಶರೀರಿಗಳಾದ ಇನ್ನೂ ಕೆಲವು ಮಹರ್ಷಿಗಳೂ, ಒಂದಾಗಿ ಸೇರಿ ಬಂದು ಯುದ್ಧರಂಗದಲ್ಲಿದ್ದ ದ್ರೋಣನ ಮುಂದೆ ನಿಂತು ಹೀಗೆಂದರು. "ಬ್ರಾಹ್ಮಣೋತ್ತಮಾ! ಬ್ರಾಹ್ಮಣನಾದ ನೀನು ಅಧರ್ಮದಿಂದ ಈ ಯುದ್ಧದಲ್ಲಿ ಪ್ರವರ್ತಿಸಿರುವೆ. ನಿನಗೆ ಮರಣ ಕಾಲವೂ ಉಪಸ್ಥಿತವಾಗಿದೆ. ಈಗಲಾದರೂ ಆಯುಧವನ್ನು ಕೆಳಗಿಡು! ನಮ್ಮನ್ನು ನೋಡು. ಇನ್ನುಮೇಲಾದರೂ ನೀನು ಇಂತಹ ಕ್ರೂರಕಾರ್ಯ ವನ್ನು ನಡೆಸಬಾರದು. ವೇದವೇದಾಂಗಗಳನ್ನೆಲ್ಲ ತಿಳಿದು, ಸತ್ಯಧರ್ಮಗ ಳಲ್ಲಿ ನಿರತನಾದ ನಿನಗೆ, ಅವರಲ್ಲಿಯೂ ಬ್ರಾಹ್ಮಣನೆನಿಸಿಕೊಂಡ ನಿನಗೆ, ಈ ಕೊಲೆಗೆಲಸವು ಯುಕ್ತವಲ್ಲ. ಆಯುಧವನ್ನು ಬಿಸುಡು! ಶಾಶ್ವತವಾದ ಮೋ ಕ್ಷಮಾರ್ಗವನ್ನು ಹಿಡಿ! ಮನುಷ್ಯಲೋಕದಲ್ಲಿ ನೀನಿರಬೇಕಾದ ಕಾಲವು ಮುಗಿಯುತ್ತಬಂದಿತು. ಅಸ್ತ್ರವನ್ನೇ ತಿಳಿಯದ ಅನೇಕರನ್ನು ನೀನು ಬ್ರಹ್ಮಾಸ್ತ್ರದಿಂದ ದಹಿಸಿದೆ. ಓ ಬ್ರಾಹ್ಮಣಾ! ಇಂತಹ ಕಾರ್ಯವು ನಿನಗೆ

ಯೋಗ್ಯವಲ್ಲ. ವಿಳಂಬಮಾಡದೆ ಆಯುಧವನ್ನು ಕೆಳಗಿಟ್ಟುಬಿಡು. ನಿನ್ನ ಕೊನೆಗಾಲದಲ್ಲಿಯಾದರೂ ಈ ಪಾಪಕಾರ್ಯವನ್ನು ಮಾಡದಿರು" ಎಂದರು. ಋಷಿಗಳು ಹೇಳಿದ ಮಾತನ್ನು ಕೇಳಿದಮೇಲೆ, ಹಿಂದೆ ಭೀಮನು ಹೇಳಿದ ಅಶ್ವತ್ಥಾಮನ ವಧದ ಸುದ್ದಿಯೂ ಅವನ ನೆನಪಿಗೆ ಬಂದಿತು. ತನಗೆ ಮೃತ್ಯುವೆನಿಸಿದ ಧೃಷ್ಟದ್ಯುಮ್ನನು ಯುದ್ಧದಲ್ಲಿ ತನಗಿದಿರಾಗಿರುವುದನ್ನೂ ನೋಡಿದನು. ಆಗ ದ್ರೋಣನಿಗೆ ಮನಸ್ಸು ಕದಲಿತು. ಆದರೂ ಭೀಮನ ಮಾತಿನಲ್ಲಿ ತನಗೆ ಸಂದೇಹವಿದ್ದುದರಿಂದ, ಮಹಾವ್ಯಸನದೊಡನೆ ತನ್ನಿದಿರಿಗಿದ್ದ ಧರ್ಮರಾಜನನ್ನು ನೋಡಿ "ತನ್ನ ಮಗನು ನಿಜವಾಗಿ ಹತನಾದನೇ? ಇಲ್ಲವೇ?" ಎಂದು ಪ್ರಶ್ನೆಮಾಡಿದನು. ತ್ರೈಲೋಕ್ಯಾಧಿಪತ್ಯವೇ ಲಭಿಸುವಹಾಗಿದ್ದರೂ ಧರ್ಮರಾಜನು ಸುಳ್ಳಾಡತಕ್ಕವನಲ್ಲವೆಂದು ದ್ರೋಣನಿಗೆ ಪೂರ್ಣವಾದ ನಂಬಿಕೆಯಿದ್ದಿತು. ಆದರಿಂದ ಬೇರೊಬ್ಬರನ್ನೂ ಕೇಳದೆ, ಬಾಲ್ಯದಿಂದಲೂ ಸತ್ಯಸಂಧನೆಂಬ ನಂಬಿಕೆಗೆ ಪಾತ್ರನಾದ ಆ ಧರ್ಮರಾಜನನ್ನೇ ಪ್ರಶ್ನೆಮಾಡಿದನು. ಇದನ್ನು ತಿಳಿದು ಕೃಷ್ಣನು, ಈ ಸಮಯದಲ್ಲಿ ಧರ್ಮರಾಜನ ಮುಖದಿಂದ ಸತ್ಯವಾದ ಮಾತು ಹೊರಟರೆ, ದ್ರೋಣನು ಈ ಭೂಮಿಯನ್ನೆಲ್ಲ ಪಾಂಡವಶೂನ್ಯವನ್ನಾಗಿ ಮಾಡುವುದೇ ನಿಶ್ಚಯವೆಂದು ತಿಳಿದು, ಧರ್ಮರಾಜನನ್ನು ಕುರಿತು ರಹಸ್ಯವಾಗಿ ಹೀಗೆಂದನು. "ಯುಧಿಷ್ಠಿರಾ! ಈ ದ್ರೋಣನು ಇನ್ನು ಅರ್ಧದಿವಸದವರೆಗೆ ಇದೇರೀತಿಯಲ್ಲಿ ಯುದ್ಧಮಾಡಿದರೆ, ನಿನ್ನ ಸೈನ್ಯವೆಲ್ಲ ನಿಶ್ಶೇಷವಾಗಿ ಹತವಾಗುವುದು ನಿಶ್ಚಯವು. ಆದುದರಿಂದ ಈಗ ಎಲ್ಲರನ್ನೂ ರಕ್ಷಿಸತಕ್ಕ ಭಾರವು ನಿನ್ನಮೇಲೆ ಬಿದ್ದಿದೆ. ಕೆಲವು ಸಂದರ್ಭಗಳಲ್ಲಿ ಸತ್ಯಕ್ಕಿಂತಲೂ ಅನೃತವೇ ಮೇಲೆನಿಸುವುದು. ಪ್ರಾಣವನ್ನುಳಿಸುವ ಸಂದರ್ಭದಲ್ಲಿ ಅನೃತವನ್ನಾಡಿದರೆ ಅದರಿಂದ ದೋಷವಿರದು" ಎಂದನು. ಹೀಗೆ ಅವರಿಬ್ಬರೂ ಮಾತಾಡುತ್ತಿರುವಾಗಲೇ ಭೀಮನು ಬಂದು "ಅಣ್ಣಾ! ಕೃಷ್ಣನು ಹೇಳಿದ ದ್ರೋಣನ ವಧೋಪಾಯವನ್ನು ಕೇಳಿಯೇ ನಾನು, ಇಂದ್ರವರ್ಮನೆಂಬ ಮಾಳವರಾಜನಿಗೆ ಸೇರಿದ ಅಶ್ವತ್ಥಾಮವೆಂಬ ಆನೆಯನ್ನು ಕೊಂದೆನು. ಐರಾವತಕ್ಕೆಣೆಯಾದ ಆ ಆನೆಯನ್ನು ಕೊಂದು ಬಂದು, "ಅಶ್ವತ್ಥಾಮನ ವಧವಾಯಿ"ತೆಂದೂ, "ಯುದ್ಧವನ್ನು ನಿಲ್ಲಿ"ಸೆಂದೂ, ದ್ರೋಣನಿಗೆ ಹೇಳಿ

ದೆನು. ಆದರೆ ಅವನು ನನ್ನ ಮಾತನ್ನು ನಂಬುವಹಾಗಿಲ್ಲ. ಆದುದರಿಂದ ಅಣ್ಣಾ! ಈ ಶ್ರೀಕೃಷ್ಣನ ಆಜ್ಞೆಯಮೇಲೆ ನೀನೂ ಈಗ ಅದೇ ಮಾತನ್ನು ದ್ರೋಣನಮುಂದೆ ನುಡಿಯಬೇಕು. ಸತ್ಯಸಂಧನೆಂದು ಲೋಕಪ್ರಖ್ಯಾತನಾದ ನೀನು ಹೇಳಿದರೆ, ದ್ರೋಣನು ಅದನ್ನು ನಂಬಿ ಮುಂದೆ ಯುದ್ಧಮಾಡಲಾರನು" ಎಂದನು. ಧೃತರಾಷ್ಟ್ರಮಹಾರಾಜಾ! ಕೃಷ್ಣಭೀಮರಿಬ್ಬರೂ ತನ್ನನ್ನು ನಿರ್ಬಂಧಿಸಿದುದರಿಂದಲೂ, ಕಾಲಗತಿಯಿಂದ ಅದು ಹಾಗೆಯೇ ನಡೆಯಬೇಕಾಗಿದ್ದುದರಿಂದಲೂ, ಧರ್ಮರಾಜನೂ ಅದಕ್ಕೆ ಸಮ್ಮತಿಸಿದನು. ಒಂದುಕಡೆ ಜಯಾಕಾಂಕ್ಷೆ! ಇನ್ನೊಂದುಕಡೆ ಅಸತ್ಯದ ಭೀತಿ! ಇವೆರಡರಿಂದ ಅವನು ದೋಲಾಯಮಾನಹೃದಯನಾಗಿ "ಅಶ್ವತ್ಥಾಮಾ ಹತಃ" ಎಂದು ಗಟ್ಟಿಯಾಗಿ ಕೂಗಿ ಹೇಳಿ, ಒಡನೆಯೇ "ಕುಂಜರಃ" ಎಂಬ ಶಬ್ದವನ್ನು ಮೆಲ್ಲಗೆ ನುಡಿದು ಮಾತನ್ನು ಮುಗಿಸಿದನು. ಧರ್ಮರಾಜನ ಮುಖದಿಂದ ಈ ಮಾತು ಹೊರಡುವುದಕ್ಕೆಮೊದಲು ಅವನ ರಥವು ಭೂಮಿಯಿಂದ ನಾಲ್ಕು ಅಂಗುಲಗಳಿಗೆ ಮೇಲೆಯೇ ನಿಂತಿದ್ದಿತು. ಅವನ ಬಾಯಿಂದ ಈ ಸುಳ್ಳುಮಾತು ಹೊರಟೊಡನೆ, ಅವನ ರಥಾಶ್ವಗಳ ಪಾದಗಳು ನೆಲವನ್ನು ಮುಟ್ಟಿದುವು. ಯುಧಿಷ್ಠಿರನ ಮಾತನ್ನು ಕೇಳಿದಮೇಲೆ, ದ್ರೋಣನಿಗೆ ತನ್ನ ಪುತ್ರವಧದಲ್ಲಿ ನಂಬಿಕೆ ಹುಟ್ಟಿತು. ಇನ್ನುಮೇಲೆ ತಾನು ಭೂಮಿಯಲ್ಲಿ ಬದುಕಿ ಫಲವಿಲ್ಲವೆಂದು ನಿಶ್ಚಯಿಸಿಕೊಂಡನು. ಋಷಿಗಳು ಬಂದು ಹೇಳಿದ ಮಾತಿನಿಂದ ತಾನು ಪಾಂಡವರ ವಿಷಯದಲ್ಲಿ ಅಪರಾಧಿಯೆಂಬ ಭಾವವೂ ಅವನಿಗೆ ಹುಟ್ಟಿತು. ಅದರೊಡನೆ ತನ್ನ ಮಗನು ಹತನಾದನೆಂಬ ಸುದ್ದಿಯೂ ಅವನ ಕಿವಿಗೆ ಬಿದ್ದಮೇಲೆ, ಯುದ್ಧದಲ್ಲಿ ಅವನಿಗೆ ಉತ್ಸಾಹವು ಬಿಟ್ಟುಹೋಯಿತು. ಮಹಾವ್ಯಸನದಿಂದ ಏನೊಂದೂ ತೋರದವನಾಗಿ, ತನ್ನ ಮುಂದೆ ನಿಂತಿದ್ದ ಧೃಷ್ಟದ್ಯುಮ್ನನನ್ನು ಒಂದಾವರ್ತಿ ನೋಡಿದನು. ಮೊದಲಿನಂತೆ ಅವನಿಗೆ ಯುದ್ಧಮಾಡಲು ಕೈಯೇ ಬಾರದಿರಲು, ಹಾಗೆಯೇ ಸುಮ್ಮನೆ ನಿಂತಿದ್ದನು.

ಇದು ನೂರ ತೊಂಭತ್ತೊಂದನೆಯ ಅಧ್ಯಾಯವು.



ಅಶ್ವತ್ಥಾಮವಧವನ್ನು ಕೇಳಿ ದುಃಖದಿಂದ ನಿಂತಿದ್ದ ದ್ರೋಣ ನನ್ನು ಕೊಲ್ಲುವುದಕ್ಕಾಗಿ ಧೃಷ್ಟದ್ಯುಮ್ನನ ಪ್ರಯತ್ನವು. ಧೃಷ್ಟದ್ಯುಮ್ನನು ದ್ರೋಣನ ಕೊಲೆಗೆ ಸಿಕ್ಕಿಬಿದ್ದಾಗ ಸಾತ್ಯಕಿಯು ಅವನನ್ನು ಬಿಡಿಸಿದುದು.

ಮಹಾರಾಜಾ! ಹೀಗೆ ದ್ರೋಣನು ಮಹಾವ್ಯಸನದಿಂದ ವ್ಯಾಕುಲಿತ ನಾಗಿ ನಿಂತಿರುವುದನ್ನು ನೋಡಿ, ಧೃಷ್ಟದ್ಯುಮ್ನನು, ಅವನನ್ನು ಕೊಲ್ಲಲು ಅದೇ ತಕ್ಕ ಸಮಯವೆಂದು ಆತುರದಿಂದ ಓಡಿಬಂದನು. ದ್ರುಪದನು ದ್ರೋಣವಧಕ್ಕಾಗಿಯೇ ಯಜ್ಞವನ್ನು ಮಾಡಿ, ಆ ಯಜ್ಞಾಗ್ನಿಯಮೂಲಕ ವಾಗಿ ಯಾವ ಮಗನನ್ನು ಪಡೆದನೋ, ಆ ಧೃಷ್ಟದ್ಯುಮ್ನನು ದೃಢವಾದ ನಾಣುಳ್ಳ ಒಂದು ದಿವ್ಯಧನುಸ್ಸನ್ನೂ, ಸರ್ಪಸಮಾನವಾದ ಬಾಣವನ್ನೂ ಕೈಗೆ ತ್ತಿಕೊಂಡು ಬಿಲ್ಲಿನಲ್ಲಿ ಸಂಧಿಸಿದನು. ಮಂಡಲಾಕಾರವಾದ ಆ ಬಿಲ್ಲಿನ ನಡುವೆ ಅವನು ಪರಿವೇಷಮಧ್ಯಗತನಾದ ಸೂರ್ಯನಂತೆ ಜ್ವಲಿಸುತ್ತಿದ್ದನು. ಆಗ ಕೋಪಗೊಂಡ ಧೃಷ್ಟದ್ಯುಮ್ನನ ಕೈಯಲ್ಲಿದ್ದ ಬಿಲ್ಲನ್ನು ನೋಡಿ, ಸೈನಿಕರೆಲ್ಲ ಅದೇ ಪ್ರಳಯಕಾಲವೆಂದು ಭ್ರಮಿಸಿದರು. ದ್ರೋಣನೂಕೂಡ ಧೃಷ್ಟ ದ್ಯುಮ್ನನ ಕೈಯಲ್ಲಿ ಸಂಧಾನಮಾಡಿದ ಬಾಣವನ್ನು ನೋಡಿ, ತನ್ನ ದೇಹಕ್ಕೆ ಕೊನೆಗಾಲವು ಪ್ರಾಪ್ತವಾಯಿತೆಂದು ನಿಶ್ಚಯಿಸಿದನು. ಆಗಲೂ ಆಚಾ ರ್ಯನು ಆತ್ಮರಕ್ಷಣೆಗಾಗಿ ಆ ಬಾಣವನ್ನು ತಡೆಯುವುದಕ್ಕೆ ಪ್ರಯತ್ನಿಸಿದನು. ಆದರೆ ಅವನ ಕೈಗೆ ಬಾಣಗಳೊಂದೂ ಸಿಕ್ಕಲಿಲ್ಲ. ಹಿಂದೆ ನಾಲ್ಕು ಹಗಲು ಮತ್ತು ಒಂದು ರಾತ್ರಿಯೆಲ್ಲಾ ಎಡೆಬಿಡದೆ ಬಾಣಗಳನ್ನು ಪ್ರಯೋಗಿಸಿದ ಆ ದ್ರೋಣನ ಬತ್ತಳಿಕೆಯಲ್ಲಿದ್ದ ಬಾಣಗಳೆಲ್ಲ ಮುಗಿದು, ಮರುದಿನದ ಹಗಲಿನ ಮೂರನೆಯ ಜಾಮದೊಳಗಾಗಿ ಬತ್ತಳಿಕೆಯು ಬರಿದಾಗಿದ್ದಿತು. ಅಸ್ತ್ರಮಂ ತ್ರಗಳೂ ಅವನ ನೆನಪಿಗೆ ಬಾರದೆಹೋದುವು. ಹೀಗೆ ತನಗೆ ಬಾಣಗಳು ಕ್ಷೀಣಿಸಿಹೋದುದೊಂದು, ಅಸ್ತ್ರಮಂತ್ರಗಳು ತನ್ನ ನೆನಪಿಗೆ ಬಾರದು ದೊಂದು, ಪುತ್ರಶೋಕವೊಂದು, ಇವಿಷ್ಟೂ ಅವನಿಗೆ ಮುಂದೆ ಏನೂ ತೋರ ದಂತೆ ಮಾಡಿದುವು. ಇದಲ್ಲದೆ ಮಹರ್ಷಿಗಳು ತನಗೆ ಹೇಳಿಹೋದ ಮಾತು ಗಳೂ ಅವನ ಸ್ಮರಣೆಗೆ ಬಂದುವು. ಆಗ ಶಸ್ತ್ರತ್ಯಾಗಮಾಡಬೇಕೆಂದು ಅವ ನಿಗೆ ಬುದ್ಧಿ ಹುಟ್ಟಿತು. ಮಹಾರಾಜಾ! ಆಗಲೂ ಅವನ ತೇಜಸ್ಸೇನೂ

ಕುಂದಿರಲಿಲ್ಲ. ಆದರೆ ಮೊದಲಿನಂತೆ ಯುದ್ಧದಲ್ಲಿ ಅವನಿಗೆ ಉತ್ಸಾಹವಿರಲಿಲ್ಲ. ಆದರೂ ಆಗ ಧೃಷ್ಟದ್ಯುಮ್ನನ ಪ್ರಯತ್ನವನ್ನು ನೋಡಿ, ಅವನಿಗೆ ಮನಸ್ಸು ತಡೆಯುಲಿಲ್ಲ. ಅಂಗಿರಸ್ಸಿನಿಂದ ತನಗೆ ಬಂದ ಬೇರೊಂದು ದಿವ್ಯಧನುಸ್ಸನ್ನು ಕೈಗೆತ್ತಿಕೊಂಡನು. ಬ್ರಹ್ಮದಂಡಕ್ಕೆಣೆಯಾದ ಬೇರೆ ಬಾಣಗಳನ್ನೂ ಸಂಗ್ರಹಿಸಿಕೊಂಡು, ತಿರುಗಿ ಧೃಷ್ಟದ್ಯುಮ್ನನಮೇಲೆ ಬಾಣವರ್ಷವನ್ನು ಕರೆದನು. ಆ ಧೃಷ್ಟದ್ಯುಮ್ನನ ಬಾಣಗಳನ್ನೆಲ್ಲ ತನ್ನ ಬಾಣಗಳಿಂದ ಶತಖಂಡವಾಗಿ ಭೇದಿಸಿದನು. ಅವನ ಧ್ವಜವನ್ನೂ, ಬಿಲ್ಲನ್ನೂ ಮುರಿದು, ಸಾರಥಿಯನ್ನೂ ಕೊಂದುಕೆಡಹಿದನು. ಧೃಷ್ಟದ್ಯುಮ್ನನೂ ಬೇರೊಂದು ಬಿಲ್ಲನ್ನು ಕೈಗೆತ್ತಿಕೊಂಡು, ದ್ರೋಣನ ಎದೆಗೆ ಗುರಿಯಿಟ್ಟು ಬಾಣವನ್ನು ಹೊಡೆದನು. ದ್ರೋಣನು ತಿರುಗಿ ಧೃಷ್ಟದ್ಯುಮ್ನನ ಬಿಲ್ಲನ್ನು ಮುರಿದು, ಅವನ ಕೈಯಲ್ಲಿದ್ದ ಬಾಣಗಳನ್ನು ಭೇದಿಸಿದನು. ಅವನಲ್ಲಿದ್ದ ಗದೆ, ಕತ್ತಿ, ಇವೆರಡುಹೊರತು ಮಿಕ್ಕ ಉಪಕರಣಗಳೆಲ್ಲ ದ್ರೋಣನಿಂದ ಭೇದಿಸಲ್ಪಟ್ಟುವು. ಧೃಷ್ಟದ್ಯುಮ್ನನನ್ನು ದ್ರೋಣನು ಒಂಭತ್ತು ತೀಕ್ಷ್ಣಬಾಣಗಳಿಂದ ಹೊಡೆದನು. ಇಷ್ಟರಲ್ಲಿಯೇ ಧೃಷ್ಟದ್ಯುಮ್ನನು ಬ್ರಹ್ಮಾಸ್ತ್ರಮಂತ್ರವನ್ನು ಪುನಶ್ಚರಣಮಾಡುತ್ತ, ತನ್ನ ರಥವನ್ನು ಮುಂದೆ ಸಾಗಿಸಿ, ದ್ರೋಣನ ರಥಕ್ಕೆ ತಗುಲುವಂತೆ ನಿಲ್ಲಿಸಿದನು. ಪಾರಿವಾಳದ ಬಣ್ಣವುಳ್ಳ ಧೃಷ್ಟದ್ಯುಮ್ನನ ರಥಾಶ್ವಗಳೂ, ದ್ರೋಣನ ರಥದ ಶೋಣಿತಾಶ್ವಗಳೂ ಒಂದಕ್ಕೊಂದು ಕಲೆತು, ಮಿಂಚಿನೊಡಗೂಡಿದ ಮೇಘಗಳಂತೆ ಕಾಣಿಸಿದುವು. ಇಷ್ಟರಲ್ಲಿಯೇ ದ್ರೋಣನು ಧೃಷ್ಟದ್ಯುಮ್ನನ ರಥದ ಚಕ್ರ, ರಥಬಂಧ, ಮುಂತಾದುವುಗಳನ್ನೆಲ್ಲ ಬಾಣಗಳಿಂದ ಭೇದಿಸಿಬಿಟ್ಟನು. ಧೃಷ್ಟದ್ಯುಮ್ನನಿಗೆ ಕೈಯಲ್ಲಿದ್ದ ಬಿಲ್ಲು ಮುರಿಯಿತು. ಅವನ ರಥವು ಭಗ್ನವಾಯಿತು. ಸಾರಥಿಯೂ ಸತ್ತನು. ಅವನೂ ಮಹತ್ತಾದ ಅಪಾಯಕ್ಕೆ ಒಳಗಾಗುವ ಸ್ಥಿತಿಯಲ್ಲಿದ್ದನು. ಆಗ ಅವನು ತನ್ನ ಗದೆಯನ್ನು ಕೈಗೆತ್ತಿಕೊಂಡನು. ಆ ಗದೆಯನ್ನೂ ದ್ರೋಣನು ಆಕ್ಷಣವೇ ಭೇದಿಸಿಬಿಟ್ಟನು. ಆಮೇಲೆ ಧೃಷ್ಟದ್ಯುಮ್ನನು ಕತ್ತಿಗುರಾಣಿಗಳನ್ನು ಕೈಗೆತ್ತಿಕೊಂಡು, ದ್ರೋಣನನ್ನು ತಾನು ಕೊಂದೇತೀರಿಸುವೆನೆಂಬ ದೃಢಸಂಕಲ್ಪದಿಂದ ಖಡ್ಗಪಾಣಿಯಾಗಿ, ತನ್ನ ರಥದ ಮೂಕಿಯಿಂದ ಥಟ್ಟನೆ ದ್ರೋಣನು ಕುಳಿತಿದ್ದ ರಥದ ಗದ್ದುಗೆಗೆ

ಹಾರಿದನು. ಕತ್ತಿಯನ್ನು ಮೇಲಕ್ಕೆತ್ತಿ ಹಿಡಿದು ದ್ರೋಣನ ಎದೆಯನ
ಭೇದಿಸುವ ಪ್ರಯತ್ನದಲ್ಲಿದ್ದನು. ಈ ಉದ್ದೇಶದಿಂದ ಧೃಷ್ಟದ್ಯುಮ್ನನ
ದ್ರೋಣನ ರಥದ ನೊಗ, ನೊಗದಕಟ್ಟು, ರಥಾಶ್ವಗಳ ಬೆನ್ನಿನ ಹಿಂಭಾ
ಇವುಗಳಮೇಲೆ ಕಾಲನ್ನಿಟ್ಟು ನಿಂತು, ಕತ್ತಿಯನ್ನು ಬೀಸುವುದರಲ್ಲಿದ್ದನ
ಸೈನ್ಯಗಳೆಲ್ಲ ಅವನ ಸಾಹಸಕ್ಕೆ ಆಶ್ಚರ್ಯಪಡುತ್ತಿದ್ದುವು. ಹೀಗೆ ಕುದ
ಯಿಂದ ನೊಗಕ್ಕೂ, ನೊಗದಿಂದ ಕುದುರೆಗೂ, ಹೆಜ್ಜೆಯನ್ನು ಮಾರಿಸಿ ವೇ
ದಿಂದ ಸಂಚರಿಸುತಿದ್ದ ಆ ಧೃಷ್ಟದ್ಯುಮ್ನನನ್ನು ಗುರಿಯಿಟ್ಟು ಹೊಡೆಯ
ದ್ರೋಣನಿಗೆ ತಕ್ಕ ಅವಕಾಶವು ಸಿಕ್ಕದಂತಾಯಿತು. ನೋಡುವವರಿಗೆಲ
ಇದು ಆಶ್ಚರ್ಯಕರವಾಯಿತು. ಮಾಂಸಕ್ಕಾಗಿ ಆತುರಗೊಂಡು ಬರು
ರುವ ಗಿಡುಗಗಳಂತೆ, ದ್ರೋಣ ಧೃಷ್ಟದ್ಯುಮ್ನರಿಬ್ಬರೂ ಒಬ್ಬರನ್ನೊಬ್ಬ
ಹಿಡಿಯಲು ಯತ್ನಿಸುತ್ತಿದ್ದರು. ಆಗ ದ್ರೋಣನು ಉಭಯರಥಗಳ ಕು
ರೆಗಳೆರಡೂ ತೊಡರಿಕೊಂಡಿದ್ದಾಗ, ತನ್ನ ಕೆಂಪುಕುದುರೆಗಳನ್ನು ಮಾ
ಬಿಟ್ಟು, ಪಾರಿವಾಳದ ಬಣ್ಣವುಳ್ಳ ಧೃಷ್ಟದ್ಯುಮ್ನನ ಕುದುರೆಗಳನ್ನೆಲ್ಲ ತ
ಶಕ್ತ್ಯಾಯುಧದಿಂದ ಬಡಿದು ಕೊಲ್ಲುತ್ತ ಬಂದನು. ಧೃಷ್ಟದ್ಯುಮ್ನನ ಕು
ರೆಗಳೆಲ್ಲಾ ಸತ್ತುಬಿದ್ದುವು. ದ್ರೋಣನ ರಥಾಶ್ವಗಳು ಧೃಷ್ಟದ್ಯುಮ್
ರಥಾಶ್ವಗಳ ತೊಡಕಿನಿಂದ ಬಿಡಿಸಲ್ಪಟ್ಟುವು. ತನ್ನ ಕುದುರೆಗಳು ನಷ್ಟ
ದ್ದುದನ್ನು ನೋಡಿ ಧೃಷ್ಟದ್ಯುಮ್ನನು ಅತ್ಯಾಕ್ರೋಶದಿಂದ ರಥವನ್ನು ಬಿ
ಳಿದು, ಖಡ್ಗವನ್ನೆತ್ತಿಕೊಂಡು ಸರ್ಪದಮೇಲೆ ಬೀಳುವ ಗರುಡನ
ದ್ರೋಣನಮೇಲೆ ನುಗ್ಗಿದನು. ಆಗ ದ್ರೋಣವಧಕ್ಕಾಗಿ ಕೋಪಗೊಂ
ಬರುತ್ತಿರುವ ಆ ಧೃಷ್ಟದ್ಯುಮ್ನನ ರೂಪವು, ಹಿಂದೆ ಹಿರಣ್ಯಕಶಿಪುವಿನ ವ
ಕ್ಕಾಗಿ ಬಂದ ನೃಸಿಂಹರೂಪಿಯಾದ ಶ್ರೀವಿಷ್ಣುವಿನ ರೂಪದಂತೆ ಅತ್ಯು
ವಾಗಿದ್ದಿತು. ಖಡ್ಗವನ್ನು ಹಿಡಿದು ಅವನು ಆ ರಣಭೂಮಿಯಲ್ಲಿ ಇ
ತ್ತೊಂದು ಬಗೆಯ ಗತಿವಿಶೇಷಗಳಿಂದ ಸಂಚರಿಸುತ್ತಿದ್ದನು. ಭ್ರಾಂ
ಉದ್ಭ್ರಾಂತ, ಆವಿದ್ಧ, ಆಪ್ಲುತ, ಪ್ರಸೃತ, ಸೃತ, ಪರಿವೃತ್ತ, ನಿವೃ
ಸಂಪಾತ, ಸಮುದೀರ್ಣ, ಭಾರತ, ಕೌಶಿಕ, ಸಾತ್ವತಗಳೆಂಬ ಹದಿಮೂ
ಬಗೆಯ ವಿಚಿತ್ರಗತಿ ಚಮತ್ಕಾರಗಳನ್ನೆಲ್ಲ ತೋರಿಸಿದನು. ಎಲ್ಲಾ ಯೆ
ಧರೂ, ಆಕಾಶದಲ್ಲಿ ನೆರೆದಿದ್ದ ದೇವತೆಗಳೂ ಅದನ್ನು ನೋಡಿ ವಿಸ್ಮಿತರಾದ

ಇಷ್ಟರಲ್ಲಿಯೇ ದ್ರೋಣನು ಸಾವಿರಾರು ಬಾಣಗಳಿಂದ ಆ ಧೃಷ್ಟದ್ಯುಮ್ನನ ಕತ್ತಿ ಗುರಾಣಿಗಳೆರಡನ್ನೂ ಛೇದಿಸಿಕೆಡಹಿದನು. ಮಹಾರಾಜಾ! ಶತ್ರುವು ಬಹಳ ಸಮೀಪದಲ್ಲಿರುವಾಗ ಪ್ರಯೋಗಿಸತಕ್ಕ ವೈತಸ್ತಿಕಗಳೆಂಬ ಬಾಣಗಳು ದ್ರೋಣನಲ್ಲಿಹೊರತು, ಬೇರೆ ಯಾರಲ್ಲಿಯೂ ಇಲ್ಲ. ವೈತಸ್ತಿಕಗಳೆಂದರೆ ವಿತಸ್ತಿಪ್ರಮಾಣದ (ಹನ್ನೆರಡಂಗುಲವುಳ್ಳ) ಬಾಣಗಳು. ಅವು ದ್ರೋಣ, ಕೃಪ, ಕರ್ಣ, ಅಶ್ವತ್ಥಾಮ, ಅರ್ಜುನ, ಅಭಿಮನ್ಯು, ಪ್ರದ್ಯುಮ್ನ, ಸಾತ್ಯಕಿಗಳೆಂಬ ಇಷ್ಟುಮಂದಿಯಲ್ಲಿಮಾತ್ರ ಇರುವುವಲ್ಲದೆ, ಬೇರೆ ಯಾರಿಗೂ ಆ ಬಾಣಪ್ರಯೋಗವು ತಿಳಿಯದು. ಆಮೇಲೆ ಆಚಾರ್ಯನು ತನಗೆ ಶಿಷ್ಯನೂ, ಪುತ್ರಸಮಾನನೂ ಆದ ಆ ಧೃಷ್ಟದ್ಯುಮ್ನನನ್ನು ಕೊಲ್ಲಬೇಕೆಂದು ಒಂದು ದೃಢವಾದ ಬಾಣವನ್ನು ಬಿಲ್ಲಿನಲ್ಲಿ ಸಂಧಾನಮಾಡಿದನು. ಆಗ ಸಾತ್ಯಕಿಯು, ದ್ರೋಣನು ಸಂಧಿಸಿದ್ದ ಆ ಬಾಣವನ್ನು ಛೇದಿಸಿ, ಕರ್ಣದುರ್ಯೋಧನಾದಿಗಳು ನೋಡುತ್ತಿದ್ದಹಾಗೆಯೇ ದ್ರೋಣನಿಂದ ಕೊಲೆಗೀಡಾಗುತಿದ್ದ ಧೃಷ್ಟದ್ಯುಮ್ನನನ್ನು ತಪ್ಪಿಸಿದನು. ಸಾತ್ಯಕಿಯು ನಡೆಸಿದ ಆ ಸಾಹಸಕಾರ್ಯವನ್ನೂ, ಅವನು ಅಸಹಾಯನಾಗಿ ಶತ್ರುಗಳ ದಿವ್ಯಾಸ್ತ್ರಗಳನ್ನೆಲ್ಲ ಭಂಗಿಸುತ್ತಿರುವುದನ್ನೂ ನೋಡಿ ಕೃಷ್ಣಾರ್ಜುನರಿಬ್ಬರೂ ಅವನನ್ನು "ಭಲೆ! ಭಲೆ!" ಎಂದು ಕೊಂಡಾಡಿದರು. ಆಗ ಧನಂಜಯನು ಕೃಷ್ಣನನ್ನು ಕುರಿತು "ವಾಸುದೇವಾ! ಅದೋ ನೋಡು! ಸಾತ್ಯಕಿಯು ದ್ರೋಣಕೃಪರ ಮತ್ತು ಇತರ ಮಹಾರಥರ ನಡುವೆ ಸಿಕ್ಕಿರುವಾಗಲೂ, ಯುದ್ಧಕ್ರೀಡೆಯನ್ನು ನಡೆಸುತ್ತಿರುವುದು ನಮ್ಮೆಲ್ಲರ ಮನಸ್ಸಿಗೆ ಮಹತ್ತಾದ ಹರ್ಷವನ್ನುಂಟುಮಾಡುತ್ತಿದೆ. ವೃಷ್ಣಿವಂಶಕ್ಕೆಲ್ಲ ಕೀರ್ತಿವರ್ಧಕನಾದ ಆ ಸಾತ್ಯಕಿಯು, ಕೇವಲ ಲೀಲಾಮಾತ್ರದಿಂದ ಮಹಾರಥರನ್ನೆಲ್ಲ ಇದಿರಿಸುತ್ತ ತನ್ನ ಪರಾಕ್ರಮಕ್ಕಾಗಿ ಹೆಮ್ಮೆಗೊಳ್ಳದೆ ರಣರಂಗದಲ್ಲಿ ಸಂಚರಿಸುತ್ತಿರುವನು ನೋಡು. ಆಕಾಶದಲ್ಲಿ ನೆರೆದ ಸಿದ್ಧರೂ, ಉಭಯಪಕ್ಷದ ಸೈನಿಕರೂ ಅವನ ಕಾರ್ಯವನ್ನು "ಭಲೆ! ಶಹಭಾಷ್" ಎಂದು ಕೊಂಡಾಡುತ್ತಿರುವರು" ಎಂದನು.

ಇದು ನೂರ ತೊಂಭತ್ತೆರಡನೆಯ ಅಧ್ಯಾಯವು.



ದ್ರೋಣಧೃಷ್ಟದ್ಯುಮ್ನರ ಯುದ್ಧವು. ಭೀಮನ ಮರ್ಮಭೇದಕ ವಾಕ್ಯಗಳನ್ನು ಕೇಳಿ ದ್ರೋಣನು ಶಸ್ತ್ರನ್ಯಾಸಮಾಡಿ, ಯೋಗದಿಂದ ತನ್ನ ಶರೀರವನ್ನು ನೀಗಿದುದು. ಅವನ ದೇಹದಿಂದ ಒಂದು ದಿವ್ಯತೇಜಸ್ಸು ಹೊರಬಿದ್ದು, ಅಲ್ಲಿದ್ದ ಕೆಲವರಿಗೆ ಮಾತ್ರ ಗೋಚರಿಸುತ್ತ ಆಕಾಶಕ್ಕೆ ಹಾರಿದುದು. ಧೃಷ್ಟದ್ಯುಮ್ನನು ದ್ರೋಣನ ಶಿರಸ್ಸನ್ನು ಕಡಿದುದು.

ಮಹಾರಾಜಾ! ಸಾತ್ವತನ (ಸಾತ್ಯಕಿಯ) ಸಾಹಸವನ್ನು ನೋಡಿ ಸಹಿಸಲಾರದೆ, ದುರ್ಯೋಧನನೇ ಮೊದಲಾದ ನಿನ್ನ ಮಕ್ಕಳೂ, ಕರ್ಣ ಕೃಪರೂ, ಕೋಪದಿಂದ ಅವನನ್ನು ಸುತ್ತಿಮುತ್ತಿ ಬಾಣಗಳಿಂದ ಹೊಡೆಯ ಲಾರಂಭಿಸಿದರು. ಇದನ್ನು ಕಂಡು ಯುಧಿಷ್ಠಿರ, ಭೀಮ, ನಕುಲ, ಸಹದೇ ವರು ನಾಲ್ವರೂ ಸಾತ್ಯಕಿಗೆ ಬೆಂಬಲವಾಗಿ ಬಂದುಸೇರಿದರು. ಸಾತ್ಯಕಿಯು ಕರ್ಣಾದಿ ಮಹಾರಥರ ಶಸ್ತ್ರಾಸ್ತ್ರವರ್ಷಗಳನ್ನೆಲ್ಲ ತನ್ನ ಅಸ್ತ್ರಗಳಿಂದ ನಿವಾ ರಿಸಿ, ಅವರೊಡನೆ ಯುದ್ಧಮಾಡುತ್ತಿದ್ದನು. ಪ್ರಾಣಿಸಂಹಾರಕಾಲದ ರುದ್ರನ ಕ್ರೀಡೆಯಂತೆ ಆಗ ದಾರುಣಯುದ್ಧವು ನಡೆಯಿತು. ತುಂಡಾ ಕೈ, ಕಾಲು, ತಲೆ, ಬಿಲ್ಲು, ಛತ್ರ ಚಾಮರಾದಿಗಳೆಲ್ಲ ರಣರಂಗದಲ್ಲಿ ರಾಶಿರಾ ಯಾಗಿ ಬಿದ್ದುವು. ಚಕ್ರಗಳೂ, ಧ್ವಜಗಳೂ, ಮುರಿದ ರಥಗಳೂ, ಯೋ ರನ್ನು ಕಳೆದುಕೊಂಡ ಕುದುರೆಗಳೂ, ಸತ್ತುಬಿದ್ದ ಆನೆಗಳೂ, ಬಾಣಗಳಿಂ ತುಂಡಾಗಿ ಬಿದ್ದ ಯೋಧರ ಶರೀರಗಳೂ ರಣಭೂಮಿಯಲ್ಲಿ ಉರುಳಾಡು ದ್ದುವು. ಹೀಗೆ ಘೋರಯುದ್ಧವು ನಡೆಯುತ್ತಿದ್ದಾಗ, ಧರ್ಮರಾಜನು ತ ಕಡೆಯ ರಾಜರನ್ನು ನೋಡಿ “ ಎಲೈ ವೀರರೇ! ನೀವೆಲ್ಲರೂ ಬೇಗನೆ ದ್ರೋ ಣನನ್ನು ಇದಿರಿಸಿಹೋಗಿರಿ! ಅದೋ! ಧೃಷ್ಟದ್ಯುಮ್ನನೊಬ್ಬನೇ ದ್ರೋ ನಿಗಿದಿರಾಗಿ, ಅವನನ್ನು ಕೊಲ್ಲುವುದಕ್ಕಾಗಿ ತನ್ನ ಶಕ್ತಿಮೀರಿ ಯತ್ನಿಸುತ್ತಿ ವನು. ಧೃಷ್ಟದ್ಯುಮ್ನನ ಆವೇಶವನ್ನು ನೋಡಿದರೆ, ಅವನು ಶೀಘ್ರ ಲ್ಲಿಯೇ ದ್ರೋಣನನ್ನು ಕೊನೆಗಾಣಿಸುವನೆಂದು ತೋರುವುದು. ನೀ ಲ್ಲರೂ ಒಂದಾಗಿ ಈ ಸಮಯದಲ್ಲಿ ಧೃಷ್ಟದ್ಯುಮ್ನನಿಗೆ ಬೆಂಬಲವಾಗಿ ದ್ರೋ ಣನನ್ನಿದಿರಿಸಿರಿ” ಎಂದನು. ಯುಧಿಷ್ಠಿರನ ಆಜ್ಞೆಯಂತೆ ಕೆಲವು ಸೃಂ ಜಯರು ಯುದ್ಧಕ್ಕೆ ಮುಂದುವರಿದರು. ಹೀಗೆ ತನಗಿದಿರಾಗಿ ಬರುವ ಪ್ರಬಲ

ತ್ರುಗಳನ್ನು ನೋಡಿ ದ್ರೋಣನು, ತನ್ನ ಸಾವಿನಲ್ಲಿ ನಿಶ್ಚಯಬುದ್ಧಿಯಿಂದಲೇ ಅವರನ್ನಿದಿರಿಸಿನಿಂತನು. ಆಗ ಭೂಮಿಯೂ ನಡುಗಿತು. ಸೈನ್ಯವನ್ನೆಲ್ಲ ನಡುಗಿಸುವಂತೆ ಸಿಡಿಲಿನ ಧ್ವನಿಯೊಡನೆ ಬಿರುಗಾಳಿಯು ಬೀಸಿತು. ಸೂರ್ಯಬಿಂಬದಿಂದ ದೊಡ್ಡ ಉಲ್ಕೆಯು ದಿಕ್ಕುಗಳನ್ನೆಲ್ಲಾ ಬೆಳಗುತ್ತ ಕೆಳಗೆ ಬಿದ್ದಿತು. ಮುಂದೆಬರುವ ಮಹಾಭಯಕ್ಕೆ ಇವೆಲ್ಲವೂ ಸೂಚಕವಾದುವು. ದ್ರೋಣನ ಕೈಯಲ್ಲಿದ್ದ ಶಸ್ತ್ರಗಳು ಇದ್ದಕ್ಕಿದ್ದಹಾಗೆ ಜ್ವಾಲೆಗಳನ್ನು ಕೆದರಿದುವು. ರಥಗಳು ಮೊರೆಯಿಟ್ಟುವು. ಕುದುರೆಗಳ ಕಣ್ಣಿಂದ ನೀರು ಸುರಿಯಿತು. ಇಷ್ಟರಲ್ಲಿಯೇ ಮಹಾರಥನಾದ ಆ ದ್ರೋಣನ ಮುಖವು ಕಳೆಗೆಟ್ಟಂತೆ ಕಾಣಿಸಿತು. ಅವನ ಎಡದ ಕಣ್ಣು, ಭುಜ, ಇವೆರಡೂ ಅದುರಿದುವು. ಧೃಷ್ಟದ್ಯುಮ್ನನು ತನಗಿದಿರಾಗಿರುವುದನ್ನು ನೋಡಿ, ಅವನಿಗೆ ಯುದ್ಧದಲ್ಲಿ ಮನಸ್ಸು ತಗ್ಗಿತು. ಸ್ವರ್ಗಸಾಧನೆಗಾಗಿ ಋಷಿಪ್ರೋಕ್ತಗಳಾದ ಶ್ರುತಿವಾಕ್ಯಗಳೆಲ್ಲ ಆಗ ಅವನ ಸ್ಮರಣೆಗೆ ಬಂದುವು. ಅದರಮೇಲೆ ಅವನು ಕ್ರಮವಾದ ಯುದ್ಧದಿಂದಲೇ ಪ್ರಾಣವನ್ನು ಬಿಡುವ ಸಂಕಲ್ಪದಲ್ಲಿದ್ದನು. ಇಷ್ಟರಲ್ಲಿಯೇ ನಾಲ್ಕುದಿಕ್ಕುಗಳಿಂದಲೂ ಅವನನ್ನು ದ್ರುಪದನ ಸೈನ್ಯಗಳು ಆವರಿಸಿಕೊಂಡುವು. ಆಗಲೂ ದ್ರೋಣನು ತನ್ನ ಬಾಣಗಳಿಂದ ಕ್ಷತ್ರಿಯರನ್ನೆಲ್ಲ ದಹಿಸುತ್ತ, ನಿರಂಕುಶವಾಗಿ ರಣರಂಗದಲ್ಲಿ ಸಂಚರಿಸುತ್ತಿದ್ದನು. ಇಪ್ಪತ್ತು ಸಾವಿರಮಂದಿ ಕ್ಷತ್ರಿಯರನ್ನೂ, ಲಕ್ಷ ಗಜಗಳನ್ನೂ ಕ್ಷಣಮಾತ್ರದಲ್ಲಿ ಕೊಂದನು. ಹೊಗೆಯಿಲ್ಲದ ಬೆಂಕಿಯಂತೆ ಜ್ವಲಿಸುತ್ತ, ಕ್ಷತ್ರಿಯಕುಲವನ್ನೇ ನಿರ್ಮೂಲವಮಾಡುವ ಉದ್ದೇಶದಿಂದ ಬ್ರಹ್ಮಾಸ್ತ್ರವನ್ನು ಧ್ಯಾನಿಸಿದನು. ಇಷ್ಟರಲ್ಲಿ ಧೃಷ್ಟದ್ಯುಮ್ನನು ತನ್ನ ರಥವನ್ನೂ, ಸರ್ವಾಯುಧಗಳನ್ನೂ ಕಳೆದುಕೊಂಡು, ಮಹತ್ತಾದ ಚಿಂತೆಗೀಡಾಗಿರುವುದನ್ನು ನೋಡಿ ಭೀಮನು ಥಟ್ಟನೆ ಮುಂದೆ ಹೋಗಿ, ಅವನನ್ನು ತನ್ನ ರಥದಮೇಲೆ ಏರಿಸಿಕೊಂಡನು. ಆಗಲೂ, ದ್ರೋಣನು ಎಡೆಬಿಡದೆ ಬಾಣಗಳನ್ನು ಕರೆಯುತ್ತಿರಲು, ಭೀಮನು ಧೃಷ್ಟದ್ಯುಮ್ನನನ್ನು ಕುರಿತು, “ಪಾಂಚಾಲಕುಮಾರಾ! ಈಗಿನ ಯುದ್ಧದಲ್ಲಿ ನೀನುಹೊರತು ಈ ಆಚಾರ್ಯನಮುಂದೆ ಯುದ್ಧಕ್ಕೆ ನಿಲ್ಲಬಲ್ಲ ಗಂಡಸು ನಮ್ಮಲ್ಲಿ ಬೇರೊಬ್ಬನಿಲ್ಲ. ಇವನನ್ನು ವಧಿಸುವ ಭಾರವು ಪೂರ್ಣವಾಗಿ ನಿನ್ನಮೇಲೆ ಬಿದ್ದಿದೆ. ನೀನು ಆ ಕಾರ್ಯ

ವನ್ನು ಬೇಗನೆ ಮುಗಿಸಬೇಕು" ಎಂದನು. ಈ ಮಾತನ್ನು ಕೇಳಿದೊಡನೆ ಧೃಷ್ಟದ್ಯುಮ್ನನು ಥಟ್ಟನೆ ಮುಂದೆ ಹೋಗಿ, ಪ್ರಬಲವಾದ ಒಂದು ಧನುಸ್ಸನ್ನು ಕೈಗೆತ್ತಿಕೊಂಡು, ದ್ರೋಣನನ್ನು ಸರ್ವಪ್ರಯತ್ನದಿಂದ ತಡೆಯುವುದಕ್ಕಾಗಿ ಮುಂದುವರಿದನು. ದ್ರೋಣನೂ ಬಾಣಗಳನ್ನು ಬಿಟ್ಟನು. ಬ್ರಾಹ್ಮವೇ ಮೊದಲಾದ ದಿವ್ಯಾಸ್ತ್ರಗಳನ್ನು ಒಬ್ಬರಮೇಲೊಬ್ಬರು ಪ್ರಯೋಗಿಸಿದರು. ದ್ರೋಣನ ಅಸ್ತ್ರಗಳನ್ನೆಲ್ಲ ಧೃಷ್ಟದ್ಯುಮ್ನನು ಭಂಗಿಸಿ, ದ್ರೋಣನನ್ನು ಮಹಾಸ್ತ್ರಗಳಿಂದ ಬಲವಾಗಿ ಹೊಡೆಯುತ್ತಿದ್ದನು. ಸಾತ್ಯಕಿಯು ದ್ರೋಣನ ರಕ್ಷಣೆಗಾಗಿ ಬಂದಿದ್ದ ವಸಾತಿ, ಶಿಬಿ, ಬಾಹ್ಲೀಕ, ಕೌರವರನ್ನೆಲ್ಲ ತನ್ನ ಬಾಣಗಳಿಂದ ತಡೆದು, ದ್ರೋಣನ ಮೇಲೆಯೂ, ಅಸ್ತ್ರಗಳನ್ನು ಬಿಡುತ್ತ, ಸೂರ್ಯನು ತನ್ನ ಕಿರಣಗಳಿಂದ ದಿಕ್ಕುಗಳನ್ನು ಮರೆಸುವಂತೆ, ತನ್ನ ಬಾಣಗಳಿಂದ ದಿಕ್ಕುಗಳನ್ನೆಲ್ಲ ಮರೆಸುತ್ತಿದ್ದನು. ಇಷ್ಟರಲ್ಲಿ ದ್ರೋಣನು ಧೃಷ್ಟದ್ಯುಮ್ನನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿ, ಅವನಮೇಲೆ ಮರ್ಮಭೇದಕಗಳಾದ ಬಾಣಗಳನ್ನು ಬಿಟ್ಟನು. ಇದರಿಂದ ಧೃಷ್ಟದ್ಯುಮ್ನನು ಬಹಳವಾಗಿ ನೊಂದು ಮೂರ್ಛಿತನಾಗುವ ಸ್ಥಿತಿಯಲ್ಲಿದ್ದನು. ಆಗ ಭೀಮನಿಗೆ ದುಸ್ಸಹವಾದ ಕೋಪವುಂಟಾಯಿತು. ಥಟ್ಟನೆ ಮುಂದೆಹೋಗಿ, ದ್ರೋಣನ ರಥನನ್ನು ಕೈಯಿಂದ ಹಿಡಿದು ನಿಲ್ಲಿಸಿಕೊಂಡು, ಮೃದುವಾದ ವಾಕ್ಯದಿಂದ ಹೀಗೆಂದನು. "ಓ ಬ್ರಾಹ್ಮಣಾ! ಸ್ವಧರ್ಮದಲ್ಲಿ ತೃಪ್ತಿಯಿಲ್ಲದ ಕ್ಷುದ್ರಬ್ರಾಹ್ಮಣರು ಧನುರ್ವಿದ್ಯೆಯನ್ನು ಕಲಿತು, ಹೀಗೆ ಯುದ್ಧಕ್ಕೆ ಕೈಯಿಕ್ಕದಿದ್ದ ಪಕ್ಷದಲ್ಲಿ, ಕ್ಷತ್ರಿಯರಿಗೆ ಈ ವಿಧವಾದ ನಾಶವೇ ಇರುತ್ತಿರಲಿಲ್ಲ. ಲೋಕದಲ್ಲಿ ಅಹಿಂಸೆಯೆಂಬುದು ಎಲ್ಲಕ್ಕಿಂತಲೂ ಶ್ರೇಷ್ಠವಾದ ಧರ್ಮವೆಂದು ಹೇಳುವರು. ಆ ಉತ್ತಮಧರ್ಮಕ್ಕೆ ಬ್ರಾಹ್ಮಣನೇ ಮೂಲಾಧಾರವೆನಿಸಿರುವನು. ನೀನಾದರೋ ಬ್ರಾಹ್ಮಣನು! ಬ್ರಹ್ಮಜ್ಞರಲ್ಲಿ ಮೇಲೆನಿಸಿದವನು! ಹೀಗಿರುವಾಗ ನಿನಗೆ ಈ ಯುದ್ಧವೇಕೆ? ನಿನ್ನಂತೆ ಜ್ಞಾನಿಗಳೂ, ಶ್ವಪಚರಂತೆ ನಿರ್ದಯರಾಗಿ ಹೆಂಡಿರುಮಕ್ಕಳನ್ನು ಪೋಷಿಸಬೇಕೆಂದು ಮ್ಲೇಚ್ಛರನ್ನೂ, ಇನ್ನೂ ಬೇರೆಬೇರೆ ಜನರನ್ನೂ ಇದಿರಿಸಿ ಕೊಲ್ಲುವುದು ಯಾವ ನೀತಿ? ಬ್ರಾಹ್ಮಣನಾಗಿ ನೀನು ಅಜ್ಞಾನಮೋಹಿತನಂತೆ ಹೆಂಡಿರುಮಕ್ಕಳ ಪೋಷಣೆಗಾಗಿಯೂ, ಹಣದಾಸೆಗಾಗಿಯೂ ಈ ಕೆಲಸಮಾಡುತ್ತಿರುವೆ. ಒಬ್ಬ ಮಗ

ನಿಗಾಗಿ ನೀನು ನಿನ್ನ ಅಧರ್ಮವಿದ್ಯೆಯಿಂದ ಅನೇಕರನ್ನು ಕೊಲ್ಲುತ್ತಿರುವೆ! ಕರ್ಮಭ್ರಷ್ಟನಾಗಿ ಸ್ವಧರ್ಮರತರಾದ ಇತರರನ್ನು ಕೊಂದು, ಹೇಗೆತಾನೇ ಅದಕ್ಕಾಗಿ ಲಜ್ಜೆಪಡದಿರುವೆ? ಓ ಕ್ಷುದ್ರಬ್ರಾಹ್ಮಣಾ! ಆಚಾರಹೀನಾ! ನಿರ್ಲಜ್ಜಾ! ಬಾ! ಬಾ! ನನ್ನ ಮುಂದೆ ನಿಲ್ಲು! ಬುದ್ಧಿಗೆಟ್ಟ ನೀನು ನನ್ನಿಂದ ಬದುಕಿಹೋಗಲಾರೆ! ಯಾವನಿಗಾಗಿ ನೀನು ಶಸ್ತ್ರವನ್ನು ಕೈಯಲ್ಲಿ ಹಿಡಿದೆಯೋ, ಯಾವನಿಗಾಗಿಯೇ ಇದುವರೆಗೆ ಜೀವಿಸಿದ್ದೆಯೋ, ಅಂತಹ ನಿನ್ನ ಮಗನೇ ಈಗ ರಣಾಂಗಣದಲ್ಲಿ ಸತ್ತು ಮಲಗಿದನು. ನನ್ನ ಮಾತಿನಲ್ಲಿ ನಂಬಿಕೆಯಿಲ್ಲದೆ ನೀನಾಗಿ ಧರ್ಮರಾಜನನ್ನು ಕೇಳಿದೆ! ಅವನೂ ನಿನಗೆ ನಿಜಸ್ಥಿತಿಯನ್ನು ತಿಳಿಸಿದನು. ಧರ್ಮರಾಜನ ಮಾತಿನಲ್ಲಿಯೂ ನಿನಗೆ ಸಂದೇಹವೇನು?" ಎಂದನು. ಭೀಮನ ಈ ಕಠಿನವಾಕ್ಯಗಳನ್ನು ಕೇಳಿದೊಡನೆ ದ್ರೋಣನಿಗೆ ಮಹತ್ತಾದ ಚಿಂತೆಯೂ, ಜಿಹಾಸೆಯೂ ಹುಟ್ಟಿತು. ತನ್ನ ಕೈಯಲ್ಲಿದ್ದ ಬಿಲ್ಲನ್ನು ಬಿಸುಟನು. ಶರೀರತ್ಯಾಗಕ್ಕಾಗಿ ಯೋಗನಿಷ್ಠೆಯನ್ನು ಹಿಡಿಯುವ ಉದ್ದೇಶದಿಂದ, ತನ್ನ ಎಲ್ಲಾ ಶಸ್ತ್ರಾಸ್ತ್ರಗಳನ್ನೂ ಬಿಟ್ಟುಬಿಡುವುದಾಗಿ ಸಂಕಲ್ಪಿಸಿ, ತನ್ನಿದಿರಾಗಿದ್ದ ಕರ್ಣನನ್ನೂ, ದುರ್ಯೋಧನನನ್ನೂ, ಕೃಪನನ್ನೂ ನೋಡುತ್ತ, "ಮಹಾಧನುರ್ಧರನಾದ ಓ ಕರ್ಣಾ! ಓ ಕೃಪಾ! ಓ ದುರ್ಯೋಧನಾ! ನನ್ನ ಮಾತನ್ನು ಕೇಳಿರಿ. ಇನ್ನು ನೀವು ಪಾಂಡವರೊಡನೆ ನಿಮ್ಮ ಸರ್ವಪ್ರಯತ್ನದಿಂದ ಯುದ್ಧಮಾಡಬೇಕು ಬಾರಿಬಾರಿಗೂ ನಿಮ್ಮನ್ನು ಎಚ್ಚರಿಸುವೆನು. ನಿಮಗೆ ಮಂಗಳವಾಗಲಿ! ಇದೋ! ನಾನು ಶಸ್ತ್ರತ್ಯಾಗಮಾಡುವೆನು" ಎಂದನು. ಧೃತರಾಷ್ಟ್ರಮಹಾರಾಜಾ! ಹೀಗೆ ದ್ರೋಣನು ಎಲ್ಲರಮುಂದೆ ತನ್ನ ಉದ್ದೇಶವನ್ನು ಉದ್ಘೋಷಿಸಿ ಹೇಳಿ, ತನ್ನ ಪುತ್ರಮರಣದುಃಖದಿಂದ ಅಶ್ವತ್ಥಾಮನನ್ನು ಕುರಿತು ಮೊರೆಯಿಟ್ಟನು. ತನ್ನಲ್ಲಿದ್ದ ಶಸ್ತ್ರಗಳನ್ನೆಲ್ಲ ಬಿಸುಟು, ರಥದ ನಡುವೆ ಕುಳಿತು, ತಾನು ಇನ್ನುಮೇಲೆ ಯೋಗವನ್ನು ಹಿಡಿಯುವುದಾಗಿ ಹೇಳಿ, ಯಾವ ಪ್ರಾಣಿಗಳಿಗೂ ತನ್ನಿಂದ ಇನ್ನುಮೇಲೆ ಪ್ರಾಣಭಯವಿಲ್ಲವೆಂದು ಅಭಯವನ್ನು ಕೊಟ್ಟನು. ಇದೇ ಅವಕಾಶವನ್ನು ನಿರೀಕ್ಷಿಸುತ್ತಿದ್ದ ಧೃಷ್ಟದ್ಯುಮ್ನನು, ತನ್ನ ಕೈಯಲ್ಲಿ ಹಿಡಿದಿದ್ದ ಬಿಲ್ಲನ್ನು ರಥದಲ್ಲಿಟ್ಟು, ಖಡ್ಗವನ್ನು ಕೈಗೆತ್ತಿಕೊಂಡು, ರಥದಿಂದ ಕೆಳಕ್ಕೆ ಹಾರಿ, ದ್ರೋಣನನ್ನು ವಧಿಸುವುದಕ್ಕಾಗಿ

ವೇಗದಿಂದೋಡಿದನು. ಧೃಷ್ಟದ್ಯುಮ್ನನ ಆ ಪ್ರಯತ್ನವನ್ನು ನೋಡಿ ಸಮಸ್ತಭೂತಗಳೂ ಹಾಹಾಕಾರಮಾಡಿದುವು. ಯೋಗನಿಷ್ಠನಾಗಿ ಧೃಷ್ಟದ್ಯುಮ್ನನ ಕೊಲೆಗೆ ಸುಲಭವಾಗಿ ಸಿಕ್ಕಿಬೀಳುತ್ತಿರುವ ಆ ಬ್ರಾಹ್ಮಣನ ಶೋಚನೀಯಸ್ಥಿತಿಯನ್ನು ಕಂಡು, ಸೈನ್ಯಗಳೆಲ್ಲಾ ಹಾಹಾಕಾರದೊಡನೆ "ಹಾ ಧಿಕ್! ಹಾ ಧಿಕ್" ಎಂದು ಕೂಗುತ್ತಿದ್ದುವು. ಹೀಗೆ ಶಸ್ತ್ರತ್ಯಾಗಮಾಡಿ, ಪ್ರಾಣಿಗಳಿಗೆಲ್ಲ ಅಭಯವನ್ನು ಕೊಟ್ಟು, ಯೋಗವನ್ನು ಹಿಡಿದು ಕುಳಿತ ಆ ದ್ರೋಣನು, ಸಾಂಖ್ಯವಿದ್ಯೆಯಿಂದ ಮಂತ್ರವನ್ನು ಜಪಿಸುತ್ತಿರುವಾಗ, ಅವನ ಶರೀರವೇ ಒಂದು ಜ್ಯೋತಿರ್ಮಯವಾದ ರೂಪದಿಂದ ತೋರಿತು. ಆಗ ದ್ರೋಣನು ಪುರಾಣಪುರುಷನಾದ ಶ್ರೀವಿಷ್ಣುವನ್ನು ಮನಸ್ಸಿನಿಂದ ಧ್ಯಾನಿಸುತ್ತಾ, ಮುಖವನ್ನು ಸ್ವಲ್ಪ ಮೇಲಕ್ಕೆತ್ತಿ, ಎದೆಯನ್ನು ಮುಂದಕ್ಕೆ ಚಾಚಿ, ಕಣ್ಣನ್ನು ಮುಚ್ಚಿ, ಸತ್ವಗುಣದಲ್ಲಿ ನೆಲೆಗೊಂಡು, "ಓಂ" ಎಂಬ ಪ್ರಣವಮಂತ್ರವನ್ನು ಹೃದಯದಲ್ಲಿ ಧಾರಣೆಮಾಡಿ, ಉಚ್ಚರಿಸಿದನು ಒಡನೆಯೇ ಅವನ ಆತ್ಮವು ಜ್ಯೋತಿರೂಪವಾಗಿ ಮೇಲೆ ಹೊರಟಿತು. ದೇವದೇವೇಶನೂ, ಅಕ್ಷರನೂ, ಪರಮಪುರುಷನೂ ಆದ ಭಗವಂತನನ್ನು ಸ್ಮರಿಸುತ್ತಾ ದ್ರೋಣನು ಮಹಾತ್ಮರಿಗೂ ದುರ್ಲಭವಾದ ಗತಿಯನ್ನು ಹೊಂದಿದನು.

ರಾಜಾ! ಆ ಜ್ಯೋತಿಯು ಅವನ ದೇಹವನ್ನು ರಥದಲ್ಲಿಯೇ ಬಿಟ್ಟು, ಅವನ ತಲೆಯ ಮಧ್ಯಭಾಗವನ್ನು ಭೇದಿಸಿಕೊಂಡು, ಪರಮಸ್ಥಾನವನ್ನು ಸೇರಿತು. ಆ ಜ್ಯೋತಿಯು ಮೇಲೆಹೋಗುತ್ತಿರುವಾಗ ಆಕಾಶದಲ್ಲಿ ಇಬ್ಬರು ಸೂರ್ಯರು ಏಕಕಾಲದಲ್ಲಿ ಉದಿಸಿದಂತೆ ನಮಗೆ ತೋರಿತು. ಅದರ ಬೆಳಕಿನಿಂದ ಆಕಾಶವೆಲ್ಲಾ ಒಂದೇ ಜ್ಯೋತಿರ್ಮಯವಾಯಿತು. ಆಕಾಶವನ್ನೆಲ್ಲ ಒಂದೇ ಉಲ್ಕೆಯು ಆವರಿಸಿದಂತೆ ಕಾಣಿಸಿತು. ರಾಜಾ! ಎವೆಹಾರುವಷ್ಟರಲ್ಲಿಯೇ ಆ ಜ್ಯೋತಿಯು ಆಕಾಶದಲ್ಲಿ ಕಣ್ಮರೆಯಾಯಿತು. ದ್ರೋಣನು ಬ್ರಹ್ಮಲೋಕಕ್ಕೆ ಸೇರುತ್ತಿರುವುದನ್ನು ನೋಡಿ, ದೇವತೆಗಳಲ್ಲಿ ಮಹತ್ತಾದ ಸಂತೋಷಕೋಲಾಹಲವೆದ್ದಿತು. ಧೃಷ್ಟದ್ಯುಮ್ನನು ಮಂಕುಹಿಡಿದಂತೆ ನಿಂತಿದ್ದನು ಮಹಾರಾಜಾ! ಯೋಗನಿಷ್ಠನಾದ ಆ ಮಹಾತ್ಮನು ಆ ಪರಗತಿಗೆ ಹೋದು

ದನ್ನು ಮನುಷ್ಯರಲ್ಲಿ ನಾವು ಐದುಮಂದಿ ಮಾತ್ರವೇ ಕಂಡೆವು. ನಾನೊಬ್ಬನು, ಧನಂಜಯನೊಬ್ಬನು, ಬ್ರಾಹ್ಮಣನಾದ ಕೃಪನೊಬ್ಬನು, ಶ್ರೀಕೃಷ್ಣನೊಬ್ಬನು, ಧರ್ಮರಾಜನೊಬ್ಬನು, ಈ ಐದುಮಂದಿಗೆ ಹೊರತು ಬೇರೆ ಯಾರಿಗೂ ಆ ಜ್ಯೋತಿಯು ಕಾಣಿಸಲಿಲ್ಲ. ಯೋಗನಿಷ್ಠೆಯಿಂದ ಬ್ರಹ್ಮಲೋಕವನ್ನು ಸೇರಿದ ಆ ಬ್ರಾಹ್ಮಣನ ಮಹಿಮೆಯು ನಮಗೆ ಮಾತ್ರ ಗೋಚರಿಸಿತು. ರಾಜಾ! ಇದೊಂದು ದೇವರಹಸ್ಯವು. ಋಷಿಗಣಗಳೊಡನೆ ಸೇರಿ ಉತ್ತಮಗತಿಗೆ ಹೋಗುವಾಗ ಅವನನ್ನು ನೋಡಲು, ಮನುಷ್ಯಯೋನಿಗಳಾರೂ ಶಕ್ತರಾಗಲಿಲ್ಲ. ಕೈಯಲ್ಲಿ ಆಯುಧಗಳಿಲ್ಲದೆ, ನಿರ್ಜೀವವಾದ ಅವನ ಶರೀರದಲ್ಲಿ ಬಾಣಸಮೂಹಗಳಿಂದುಂಟಾದ ಗಾಯಗಳು ತುಂಬಿದ್ದುವು. ದೇಹದಿಂದ ರಕ್ತವು ಸುರಿಯುತ್ತಿದ್ದಿತು. ಆ ಸ್ಥಿತಿಯಲ್ಲಿಯೂ ಧೃಷ್ಟದ್ಯುಮ್ನನು ಕೋಪಾವೇಶದಿಂದ ಮೋಹಿತನಾಗಿ, ಕತ್ತಿಯನ್ನು ಒರೆಯಿಂದ ಸೆಳೆದು, ಸಮಸ್ತಭೂತಗಳೂ ನೋಡುತ್ತಿದ್ದಹಾಗೆಯೇ ಮುಂದೆಹೋಗಿ, ಆ ದ್ರೋಣನ ತಲೆಕೂದಲನ್ನು ಹಿಡಿದನು. ದೇಹದಲ್ಲಿ ಸತ್ವವಿಲ್ಲದೆ, ಬಾಯಿಂದ ಮಾತೂ ಇಲ್ಲದೆ, ಶವಪ್ರಾಯನಾಗಿದ್ದ ಆ ದ್ರೋಣನ ತಲೆಕೂದಲನ್ನು ಹಿಡಿದು, ಕೈಯಲ್ಲಿದ್ದ ಕತ್ತಿಯಿಂದ ಶಿರಸ್ಸನ್ನೂ ಕಡಿದುಬಿಟ್ಟನು. ಆ ದ್ರೋಣನನ್ನು ತಾನು ಕೊಂದೆನೆಂಬ ಮಹತ್ತಾದ ಸಂತೋಷದಿಂದ ಖಡ್ಗವನ್ನು ತಿರುಗಿಸುತ್ತ, ದೊಡ್ಡ ಸಿಂಹನಾದವನ್ನು ಮಾಡಿದನು. ಮಹಾರಾಜಾ! ಕಿವಿಯವರೆಗೆ ಕೂದಲೆಲ್ಲವೂ ನರೆತು, ಎಂಭತ್ತೈದು ವರುಷದದಲ್ಲಿ ಮುದುಕನಾಗಿದ್ದ ಆ ದ್ರೋಣನು, ನಿನ್ನಲ್ಲಿರುವ ಅಭಿಮಾನದಿಂದ ಯುದ್ಧದಲ್ಲಿ ಹದಿನಾರುವರ್ಷದ ತರುಣನಂತೆ ಎಷ್ಟೋ ವೀರಕಾರ್ಯಗಳನ್ನು ನಡೆಸಿದನು. ಧೃಷ್ಟದ್ಯುಮ್ನನು ಆ ಬ್ರಾಹ್ಮಣನಮೇಲೆ ಕೈಯೆತ್ತುವುದಕ್ಕೆ ಹೋದಾಗಲೇ ಧನಂಜಯನು "ದ್ರುಪದಕುಮಾರಾ! ಬೇಡ! ಬೇಡ! ಆಚಾರ್ಯನನ್ನು ಕೊಲ್ಲಬೇಡ. ಅವನನ್ನು ಜೀವಸಹಿತವಾಗಿಯೇ ಎತ್ತಿಕೊಂಡುಬಾ. ಕೊಲ್ಲಬಾರದು! ಕೊಲ್ಲಬಾರದು" ಎಂದು ಕೂಗಿದನು. ಸೈನಿಕರೆಲ್ಲರೂ ಅದೇ ರೀತಿ ಕೂಗಿಕೊಂಡರು. ಅರ್ಜುನನು ಮಹತ್ತಾದ ಕನಿಕರದಿಂದ ಧೃಷ್ಟದ್ಯುಮ್ನನನ್ನು ತಡೆಯುವುದಕ್ಕಾಗಿ ಮುಂದೆಹೋದನು.

ಹೀಗೆ ಅರ್ಜುನನೂ, ಇತರರಾಜರೂ ಕೂಗುತ್ತಿರುವಾಗಲೇ ಧೃಷ್ಟ ದ್ಯುಮ್ನನು ರಥದಮೇಲೇರಿ ಆ ದ್ರೋಣನ ತಲೆಯನ್ನು ಕತ್ತರಿಸಿಬಿಟ್ಟನು. ರಕ್ತದಿಂದ ತೊಯ್ದ ದ್ರೋಣನ ದೇಹವು, ರಕ್ತವರ್ಣವುಳ್ಳ ಸೂರ್ಯಬಿಂಬ ದಂತೆ ರಥದಿಂದ ಕೆಳಕ್ಕುರುಳಿತು. ಸೈನಿಕರೆಲ್ಲರೂ ಮಹತ್ತಾದ ಕನಿಕರ ದಿಂದ ನೋಡುತ್ತಿರುವಾಗ, ಧೃಷ್ಟದ್ಯುಮ್ನನು ಆ ದ್ರೋಣನ ತಲೆಯನ್ನು ತಂದು ನಿನ್ನವರಮುಂದೆ ಬಿಸುಟನು. ಆ ತಲೆಯನ್ನು ನೋಡಿ ನಮ್ಮ ಕಡೆಯ ವೀರರೆಲ್ಲರೂ ಭಯಗ್ರಸ್ತರಾಗಿ ದಿಕ್ಕುದಿಕ್ಕಿಗೆ ಓಡತೊಡಗಿದರು. ಅಷ್ಟರಲ್ಲಿಯೇ ದ್ರೋಣನ ಆತ್ಮವು ಆಕಾಶಮಾರ್ಗವಾಗಿ ನಕ್ಷತ್ರಪಥವನ್ನು ಪ್ರವೇಶಿಸಿತು. ಮಹಾರಾಜಾ! ಸತ್ಯವತೀಪುತ್ರನೂ, ಮಹರ್ಷಿಯೂ, ಆದ ಕೃಷ್ಣದ್ವೈಪಾಯನನ (ವ್ಯಾಸನ) ಅನುಗ್ರಹಬಲದಿಂದ, ನಾನು ಆ ದ್ರೋಣನ ನಿಧನವನ್ನೂ, ಅವನ ಜ್ಯೋತಿಯು ಹೊಗೆಯಿಲ್ಲದೆ ಜ್ವಲಿಸುತ್ತಿ ರುವ ಉಲ್ಕೆಯಂತೆ ಆಕಾಶಮಾರ್ಗವಾಗಿ ಹೋಗುತ್ತಿರುವುದನ್ನೂ ಕಂಡೆನು. ದ್ರೋಣನು ಹತನಾದುದನ್ನು ನೋಡಿ, ಅತ್ತಲಾಗಿ ಕೌರವರೂ, ಇತ್ತಲಾಗಿ ಪಾಂಡವರೂ, ಸೃಂಜಯರೂ, ಮುಂದಿನ ಯುದ್ಧದಲ್ಲಿ ಉತ್ಸಾಹಹೀನರಾಗಿ, ಹಿಂತಿರುಗಿದರು. ಸೈನ್ಯವೆಲ್ಲ ಚದರಿತು. ನಿನ್ನವರೆಲ್ಲರೂ, ಕೇವಲ ಜೀವ ಚ್ಛವದಂತೆ ಕಳೆಗುಂದಿದರು. ತಮಗೆ ಯುದ್ಧದಲ್ಲಿ ಪರಾಜಯವಾದುದೊಂದು, ಪರಲೋಕದ ಭಯವೊಂದು, ಇವೆರಡರಿಂದಲೂ, ಇಹಪರಗಳೆರಡೂ, ತಮಗೆ ತಪ್ಪಿಹೋಯಿತೆಂದು ನಿನ್ನವರು ತಮ್ಮ ಬುದ್ಧಿಯನ್ನು ತಾವೇ ನಿಂದಿಸಿಕೊಳ್ಳುತ್ತಿದ್ದರು. ಆಮೇಲೆ ನಿನ್ನಕಡೆಯ ರಾಜರು ದ್ರೋಣನ ಮೃತಶರೀರವನ್ನು ಕಂಡುಹಿಡಿಯಲು ಪ್ರಯತ್ನಪಟ್ಟರು. ಲಕ್ಷೋಪಲಕ್ಷ ಮೃತಶರೀರಗಳಿಂದ ತುಂಬಿದ ಆ ರಣಭೂಮಿಯಲ್ಲಿ ಅದೂ ಅವರಿಗೆ ಲಭಿಸ ಲಿಲ್ಲ. ರಾಜಾ! ದ್ರೋಣನು ರಣರಂಗದಲ್ಲಿ ಬಿದ್ದೊಡನೆ, ನಿನ್ನ ಸೇನೆಯಲ್ಲಿ ಇಪ್ಪತ್ತೊಂದುಸಾವಿರ ಕಬಂಧಗಳು ಮೇಲೆದ್ದು ಕುಣಿದಾಡುತ್ತಿದ್ದವು. ರಣ ಭೂಮಿಯೆಲ್ಲ ರಕ್ತಮಯವಾಗಿ, ಕಣ್ಣಿಂದ ನೋಡುವುದಕ್ಕೂ ಸಾಧ್ಯವಿಲ್ಲ ದಂತಾಯಿತು. ಪಾಂಡವರು ಜಯಕ್ಕೂ, ಕೀರ್ತಿಗೂ ತಾವು ಪಾತ್ರರಾದೆ ವೆಂಬ ಸಂತೋಷದಿಂದ ಶಂಖಧ್ವನಿಗಳನ್ನೂ, ಸಿಂಹನಾದಗಳನ್ನೂ ಮಾಡಿ ದರು. ಭೀಮನೂ, ಧೃಷ್ಟದ್ಯುಮ್ನನೂ, ಸಂತೋಷದಿಂದ ಒಬ್ಬರನ್ನೊ

ಬ್ಬರು ಅಪ್ಪಿಕೊಂಡು, ಸೈನ್ಯದನಡುವೆ ಕುಣಿಯಲಾರಂಭಿಸಿದರು. ಆಗ ಭೀಮನು ಧೃಷ್ಟದ್ಯುಮ್ನನನ್ನು ಕುರಿತು, "ಓ ವೀರಾಗ್ರಣೀ! ಮುಂದೆ ಕರ್ಣನೂ, ದುರ್ಯೋಧನನೂ, ಹತರಾದಮೇಲೆ, ತಿರುಗಿ ನಿನ್ನನ್ನು ನಾನು ಹೀಗೆಯೇ ಇನ್ನೊಮ್ಮೆ ಆಲಂಗಿಸಿಕೊಳ್ಳುವೆನು" ಎಂದು ಹೇಳಿ, ಭೂಮಿಯೆಲ್ಲ ನಡುಗುವಂತೆ ತೋಳನ್ನು ತಟ್ಟಿದನು. ಭೀಮನ ಆ ಭುಜಾಸ್ಫಾಲನಧ್ವನಿಯನ್ನು ಕೇಳಿ, ಭಯದಿಂದ ನಿನ್ನವರು ಎಷ್ಟೋಮಂದಿ ಪಲಾಯನಮಾಡಿಬಿಟ್ಟರು. ಪಾಂಡವರು ಜಯೋತ್ಸಾಹದಿಂದ ಮೈಯುಬ್ಬಿ ಸುಖದಿಂದಿದ್ದರು.

ಇದು ನೂರತೊಂಭತ್ತುಮೂರನೆಯ ಅಧ್ಯಾಯವು.

ಇಲ್ಲಿಗೆ ದ್ರೋಣವಧಪರ್ವವು ಮುಗಿದುದು.



# ನಾರಾಯಣಾಸ್ತ್ರಮೋಕ್ಷಪರ್ವವು.



{ ದುರ್ಯೋಧನನ ಪ್ರೇರಣೆಯಿಂದ ಕೃಪನು ಅಶ್ವತ್ಥಾಮನಿಗೆ ಅವನ ತಂದೆಯ ವಧವನ್ನು ತಿಳಿಸಿದುದು. ಅಶ್ವತ್ಥಾಮನ ಕೋಪೋದ್ರೇಕವು. }

ಮಹಾರಾಜಾ! ಹೀಗೆ ದ್ರೋಣನು ಹತನಾಗಿ ಬಿದ್ದನು. ಕೌರವಯೋಧರೆಲ್ಲ ಶಸ್ತ್ರಪ್ರಹಾರದಿಂದ ನೊಂದು ಬಾಧೆಪಡುತ್ತಿದ್ದರು. ಅನೇಕ ಪ್ರಮುಖ ವೀರರೆಲ್ಲ ನಾಶಹೊಂದಿದರು. ಇದರಿಂದ ನಮ್ಮ ಕಡೆಯಲ್ಲಿ ಒಬ್ಬೊಬ್ಬರೂ ವ್ಯಸನದಿಂದ ಕುದಿಯುತ್ತಿದ್ದಾಗಲೇ, ಅತ್ತಲಾಗಿ ಪಾಂಡವಪಕ್ಷದಲ್ಲಿ ಬಾರಿಬಾರಿಗೂ ಜಯೋತ್ಸಾಹದಿಂದ ಹೊರಟ ಸಂತೋಷಕೋಲಾಹಲಗಳೂ ನಮ್ಮವರ ಕಿವಿಗೆ ಬಿದ್ದು, ಇವರ ಸಂಕಟವು ಮೇಲೆಮೇಲೆ ಹೆಚ್ಚುತ್ತಿದ್ದಿತು. ಎಲ್ಲರ ಕಣ್ಣುಗಳಲ್ಲಿಯೂ, ನೀರು ತುಂಬಿತು. ಭಯದಿಂದಲೂ, ದೈನ್ಯದಿಂದಲೂ ನಮ್ಮವರಿಗೆ ಮಂಕು ಕವಿದಂತಾಯಿತು. ಯುದ್ಧೋತ್ಸಾ

ಹವೇ ಅಡಗಿಹೋಯಿತು. ಆಗ ಕೌರವಯೋಧರೆಲ್ಲಾ ವೀರ್ಯವಡಗಿ, ಚಿಂತಾಕುಲರಾಗಿ, ದೊಡ್ಡ ಆರ್ತಸ್ವರದೊಡನೆ ನಿನ್ನ ಮಗನಬಳಿಗೆ ಬಂದು ಅವನ ಸುತ್ತಲೂ ಕಳೆಗುಂದಿದ ಮುಖದಿಂದಲೂ, ಬಾಷ್ಪಗದ್ಗದ ಸ್ವರದಿಂದಲೂ ಮಾತಾಡಲಾರದೆ ದೈನ್ಯದಿಂದ ನಿಂತಿದ್ದರು. ಹಿರಣ್ಯಾಕ್ಷವಧವಾದ ಮೇಲೆ ದೈತ್ಯಸೇನೆಯಂತೆಯೂ, ಸಿಂಹಕ್ಕೆ ಭಯಪಟ್ಟ ಕ್ಷುದ್ರಮೃಗಗಳಂತೆಯೂ, ನಮ್ಮ ಯೋಧರು ಭಯಗ್ರಸ್ತರಾಗಿರುವುದನ್ನು ನೋಡಿ, ನಿನ್ನ ಮಗನು ಅವರ ಮುಂದೆ ತಾನು ನಿಲ್ಲಲಾರದೆ, ಆ ಸ್ಥಳವನ್ನು ಬಿಟ್ಟು ಬೇರೆ ಕಡೆಗೆ ಹೊರಟುಹೋದನು. ಹಸಿವುಬಾಯಾರಿಕೆಗಳಿಂದ ಕಂಗೆಟ್ಟಿದ್ದ ನಿನ್ನ ಯೋಧರು, ಸೂರ್ಯಕಿರಣದಿಂದ ಬೆಂದವರಂತೆ ಕಳೆಗುಂದಿ ಉತ್ಸಾಹಹೀನರಾಗಿದ್ದರು. ಮಹಾರಾಜಾ! ಸೂರ್ಯನು ಕೆಳಗೆ ಬಿದ್ದಂತೆಯೂ, ಸಮುದ್ರವು ಒಣಗಿದಂತೆಯೂ, ಮೇರುವು ಕದಲಿದಂತೆಯೂ, ಇಂದ್ರನ ಅಪಜಯದಂತೆಯೂ, ಆ ದ್ರೋಣಾಚಾರ್ಯನು ಹತವಾಗಿ ಬಿದ್ದುದು ಎಲ್ಲರಿಗೂ ಅಸಂಭಾವ್ಯವೆಂದೇ ತೋರಿತು. ಕಣ್ಣಿಂದ ನೋಡಬಾರದ ಆ ದ್ರೋಣನ ಸ್ಥಿತಿಯನ್ನು ನೋಡಿ, ಮಹಾಭಯದಿಂದ ಕೌರವರಲ್ಲಿ ಅನೇಕರು ಓಡಿಬಿಟ್ಟರು. ಗಾಂಧಾರರಾಜನಾದ ಶಕುನಿಯೂ ಎಲ್ಲರಿಗಿಂತಲೂ ಅಧಿಕಭಯದಿಂದ ತನ್ನ ರಥಸೈನ್ಯಗಳೊಡನೆ ಪಲಾಯನಮಾಡಿಬಿಟ್ಟನು. ಕರ್ಣನೂ ತನ್ನ ಸೈನ್ಯದೊಡನೆ ರಣರಂಗವನ್ನು ಬಿಟ್ಟೋಡಿದನು. ಶಲ್ಯನೂ ತನ್ನ ಸೈನ್ಯದೊಡನೆ ಹಿಂತಿರುಗಿಬಿಟ್ಟನು. ದ್ರೋಣವಧವನ್ನು ನೋಡಿ ಅವನ ಸಮೀಪಬಂಧುವಾದ ಕೃಪನು “ಹಾ ಕಷ್ಟ! ಕಷ್ಟ!” ವೆಂದು ಕೂಗುತ್ತ, ಹತಶೇಷವಾಗಿದ್ದ ತನ್ನ ಸೈನ್ಯಗಳನ್ನು ಕರೆದುಕೊಂಡು ಹಿಂತಿರುಗಿಬಿಟ್ಟನು. ಕೃತವರ್ಮನೂ ಹತಶೇಷವಾಗಿದ್ದ ಭೋಜಸೈನ್ಯದೊಡನೆಯೂ, ಕಳಿಂಗ, ಆರಟ್ಟ, ಬಾಹ್ಲೀಕವೀರರೊಡನೆಯೂ ಎಲ್ಲಿಯೋ ಓಡಿಬಿಟ್ಟನು. ಉಲೂಕನೂ ಭಯದಿಂದ ಕಣ್ಮರೆಯಾದನು. ದುಶ್ಯಾಸನನು ತನ್ನ ದೊಡ್ಡ ಗಜಸೈನ್ಯದೊಡನೆ ಹಿಂತಿರುಗಿಬಿಟ್ಟನು. ಕರ್ಣನ ಮಗನಾದ ವೃಷಸೇನನು ತನ್ನ ಸಹಾಯಕ್ಕೆ ಬಂದಿದ್ದ ಹತ್ತುಸಾವಿರ ರಥಗಳನ್ನೂ, ಮೂರುಸಾವಿರ ಆನೆಗಳನ್ನೂ ಕರೆದುಕೊಂಡು ಓಡಿಹೋದನು. ನಿನ್ನ ಹಿರಿಯಮಗನಾದ ದುರ್ಯೋಧನನೂಕೂಡ ತನ್ನ ಚತುರಂಗದೊಡನೆ ರಣರಂಗವನ್ನು

ಬಿಟ್ಟು ಹೋದನು. ಸುಶರ್ಮನೂ ಹತಶೇಷರಾದ ಸಂಶಪ್ತಕರೊಡನೆ ಎಲ್ಲಿಯೋ ಓಡಿಬಿಟ್ಟನು. ಕೆಲವರು ತಮ್ಮ ಆನೆ ಕುದುರೆ ಮೊದಲಾದ ವಾಹನಗಳನ್ನೋಡಿಸಿಕೊಂಡು ವೇಗದಿಂದ ಪಲಾಯನಮಾಡಿದರು. ಕೆಲವರು ನಡುನಡುವೆ ದಾರಿಗಡ್ಡಲಾದ ಆನೆಕುದುರೆಗಳನ್ನೂ ಒತ್ತರಿಸಿಕೊಂಡು ಓಡಿಹೋದರು. ಅನೇಕರು ತಂದೆತಾತಂದಿರನ್ನೂ, ಸಹೋದರರನ್ನೂ, ಮಾವಂದಿರನ್ನೂ, ಪುತ್ರರನ್ನೂ, ಮಿತ್ರರನ್ನೂ ತ್ವರೆಗೊಳಿಸುತ್ತ ನಾನಾದಿಕ್ಕಿಗೆ ಓಡಿ ತಲೆತಪ್ಪಿಸಿಕೊಂಡರು. ಮೈಯೆಲ್ಲ ಹರಿದು, ಕೆದರಿದ ತಲೆಯೊಡನೆ ಅನೇಕರು ನಿರ್ಲಜ್ಜರಾಗಿ ಓಡಿಹೋದರು. ಇಬ್ಬರನ್ನು ಒಂದುಕಡೆಯಲ್ಲಿ ನೋಡುವುದೇ ಅಸಂಭವವಾಯಿತು. ಇನ್ನು ತಮಗೆ ಉಳಿಗಾಲವಿಲ್ಲವೆಂದು ನಿಶ್ಚಯಿಸಿ, ಅನೇಕರು ಯುದ್ಧಕವಚಗಳನ್ನು ಮೈಯಿಂದ ಕಳಚಿ, ಅಲ್ಲಿ ಕ್ಷಣಮಾತ್ರವೂ, ನಿಲ್ಲಲಾರದೆ ಕಂಡಕಂಡವರನ್ನು ಕೂಗುತ್ತ ಓಡಿದರು. ಕೆಲವರು ರಥಕ್ಕೆ ಕಟ್ಟಿದ್ದ ಕುದುರೆಗಳನ್ನು ಬಿಚ್ಚಿ, ಅವುಗಳನ್ನೇರಿ, ಕಾಲಿಂದ ಮೀಟುತ್ತ, ಅತಿವೇಗದಿಂದ ಓಡಿಸಿಕೊಂಡು ಹೋದರು. ಮಹಾರಾಜಾ! ಹೀಗೆ ಕೌರವಸೈನ್ಯವೆಲ್ಲವೂ ವೀರ್ಯವಡಗಿ, ಭಯದಿಂದ ಓಡುತ್ತಿರುವ ಸಮಯದಲ್ಲಿ, ಇಲ್ಲಿ ನಡೆದ ಸಂಗತಿಯನ್ನೇನೂ ತಿಳಿಯದ ದ್ರೋಣಪುತ್ರನು, ಮಹಾಮಕರವು ಪ್ರವಾಹಕ್ಕಿದಿರಾಗಿ ಹೋಗುವಂತೆ ಬೇರೆಕಡೆಯಲ್ಲಿ ಪಾಂಡವರಿಗಿದಿರಾಗಿ ಹೋದನು. ಶಿಖಂಡಿಯನ್ನು ಮುಂದಿಟ್ಟುಕೊಂಡ ಪ್ರಭದ್ರಕ, ಪಾಂಚಾಲ, ಚೇದಿ, ಕೇಕಯಾದಿ ರಥಿಕರೊಡನೆ ಅವನಿಗೆ ಪ್ರಬಲಯುದ್ಧವಾಯಿತು. ಪಾಂಡವರ ಅನೇಕಸೈನ್ಯಗಳನ್ನು ಅವನು ಕೊಂದು ಕೆಡಹಿದನು. ಮದದಾನೆಯಂತೆ ಪರಾಕ್ರಮಶಾಲಿಯಾದ ಆ ಅಶ್ವತ್ಥಾಮನು, ಅಲ್ಲಿ ಸರ್ವಪ್ರಯತ್ನದಿಂದ ತನ್ನ ಆಪತ್ತನ್ನು ತಪ್ಪಿಸಿಕೊಂಡು, ಶತ್ರುಜಯದಿಂದ ಆಪ್ಯಾಯಿತನಾಗಿ ಬರುತ್ತಿರುವಾಗ, ಕೌರವಸೈನ್ಯವೆಲ್ಲ ಚದರಿ, ಭಯದಿಂದೋಡುತ್ತಿರುವುದನ್ನು ಕಂಡನು. ಅದರ ಕಾರಣವೇನೆಂದು ಅವನು ಮನಸ್ಸಿನಲ್ಲಿ ಚಿಂತಿಸುತ್ತ,ನೆಟ್ಟಗೆ ದುರ್ಯೋಧನನ ಬಳಿಗೆ ಬಂದು "ಮಹಾರಾಜಾ! ಏನಿದು? ನಮ್ಮ ಕಡೆಯ ಸೈನ್ಯವೆಲ್ಲ ಹೀಗೆ ಭಯದಿಂದ ಓಡುವಂತಿದೆ. ನೀನೇಕೆ ತಡೆಯದೆ ಸುಮ್ಮನಿರುವೆ? ನಿನಗೂ ಯುದ್ಧದಲ್ಲಿ ಮೊದಲಿನ ಉತ್ಸಾಹವಿರುವಂತೆ ತೋರಲಿಲ್ಲ. ಕರ್ಣಾದಿ

ಗಳೂ ರಣರಂಗದಲ್ಲಿ ಕಾಣಿಸುವುದಿಲ್ಲ. ಬೇರೆ ಯಾವ ಯುದ್ಧಗಳಲ್ಲಿಯೂ ನಮ್ಮ ಸೈನ್ಯವು ಹೀಗೆ ಓಡಿಹೋಗಿ, ರಣಾಂಗಣವು ಶೂನ್ಯಪ್ರಾಯವಾದುದನ್ನು ನಾನು ನೋಡಲಿಲ್ಲ. ಓ ಮಹಾಬಾಹೂ! ನಿನ್ನ ಸೈನ್ಯಕ್ಕೆ ಕ್ಷೇಮವಷ್ಟೆ? ನಮ್ಮ ಸೈನ್ಯದಲ್ಲಿ ಯಾವ ಮಹಾರಥಿಕನು ಹತನಾದನು? ಯಾವನ ವಧದಿಂದ ಈ ಅವಸ್ಥೆಯುಂಟಾಯಿತು? ಹೇಳು" ಎಂದನು. ಧೃತರಾಷ್ಟ್ರಮಹಾರಾಜಾ! ಅಶ್ವತ್ಥಾಮನ ಮಾತಿಗೆ ಪ್ರತ್ಯುತ್ತರವನ್ನು ಹೇಳಲು, ನಿನ್ನ ಮಗನಿಗೆ ಬಾಯಿ ಬರಲಿಲ್ಲ. ಅತಿದಾರುಣವಾದ ಅಪ್ರಿಯ ವಾರ್ತೆಯನ್ನು ಅಶ್ವತ್ಥಾಮನಿಗೆ ತನ್ನ ಬಾಯಿಂದ ತಿಳಿಸಲಾರದೆ, ನಿನ್ನ ಮಗನು ಸುಮ್ಮನಿದ್ದನು. ಸಮುದ್ರಮಧ್ಯದಲ್ಲಿ ಒಡೆದುಹೋದ ಹಡಗಿನಂತೆ ದುಃಖಸಾಗರದಲ್ಲಿ ಮುಳುಗಿ ನಿರಾಶ್ರಯನಾದ ನಿನ್ನ ಮಗನು, ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು, ರಥಸ್ಥನಾದ ದ್ರೋಣಪುತ್ರನನ್ನು ಒಂದಾವರ್ತಿ ನೋಡಿದನು. ಆಮೇಲೆ ಅವನು ಸಮೀಪದಲ್ಲಿದ್ದ ಕೃಪನ ಕಡೆಗೆ ತಿರುಗಿ ಲಜ್ಜೆಯೊಡನೆ ಅವನನ್ನು ಕುರಿತು, "ಆಚಾರ್ಯಾ! ನಮ್ಮ ಸೈನ್ಯವು ಹೀಗೆ ಓಡುವುದಕ್ಕೆ ಕಾರಣವೇನೆಂಬುದನ್ನು ನೀನೇ ಇವನಿಗೆ ತಿಳಿಸಬೇಕು! ನಿನಗೆ ಮಂಗಳವಾಗಲಿ" ಎಂದನು. ಆಗ ಕೃಪನು ಮೇಲೆಮೇಲೆ ಉಕ್ಕಿಬರುತ್ತಿರುವ ತನ್ನ ದುಃಖವನ್ನು ತಡೆದುಕೊಳ್ಳುತ್ತ, "ವತ್ಸ ಅಶ್ವತ್ಥಾಮಾ! ಲೋಕದ ಮಹಾರಥಿಕರಿಗೆಲ್ಲ ಪ್ರಧಾನನೆನಿಸಿದ ನಿನ್ನ ತಂದೆಯನ್ನು ಮುಂದಿಟ್ಟುಕೊಂಡು, ನಾವು ಪಾಂಚಾಲರೊಡನೆ ಯುದ್ಧಕ್ಕೆ ಹೊರಟೆವು. ಆ ಯುದ್ಧದಲ್ಲಿ ಕೌರವರೂ, ಸೋಮಕರೂ, ಇದಿರಾಗಿ ವೀರಗರ್ಜನೆಗಳನ್ನು ಮಾಡುತ್ತ ಒಬ್ಬರನ್ನೊಬ್ಬರು ಶಸ್ತ್ರಗಳಿಂದ ಕೊಲೆಮಾಡುತ್ತಿದ್ದರು. ಆದರಲ್ಲಿ ಕೌರವಸೈನ್ಯಗಳು ಬಹಳವಾಗಿ ಕ್ಷೀಣಿಸುತ್ತಿರುವುದನ್ನು ನೋಡಿ, ನಿನ್ನ ತಂದೆಯು ಕುಪಿತನಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ, ನೂರುಸಾವಿರ ಶತ್ರುಯೋಧರನ್ನು ಕೊಂದನು. ಪಾಂಡವ ಕೇಕಯ ಮಾತ್ಸ್ಯ ಪಾಂಚಾಲರಲ್ಲಿ ಬಹುಮಂದಿ ಕಾಲವಶರಾದರು. ಸಾವಿರಮಂದಿ ಮಹಾರಥರೂ, ಎರಡುಸಾವಿರ ಆನೆಗಳೂ, ದ್ರೋಣಾಸ್ತ್ರದಿಂದ ಮೃತ್ಯುವಿಗೀಡಾದರು. ಕುಮಾರಾ! ಕಿವಿಯವರೆಗೆ ಕೂದಲುನರೆತ ಎಂಭತ್ತೈದುವಯಸ್ಸಿನ ಮುದುಕನಾಗಿದ್ದ ನಿನ್ನ ತಂದೆಯು, ಯುದ್ಧದಲ್ಲಿ ಹದಿನಾರುವರ್ಷದ ತರುಣನಂತೆ

ಕೆಲಸವಮಾಡಿದನು. ಪಾಂಚಾಲರು ಯುದ್ಧದಿಂದ ವಿಮುಖರಾದರು. ಆ ರಣರಂಗದಲ್ಲಿ ಬಾಣಗಳೆಂಬ ರಶ್ಮಿಗಳನ್ನು ಕೆದರುವ ಮಧ್ಯಾಹ್ನಸೂರ್ಯನಂತೆ ಅವನು ಕಣ್ಣಿಂದ ನೋಡುವುದಕ್ಕೂ ಸಾಧ್ಯವಿಲ್ಲದಂತಿದ್ದನು. ಶತ್ರುಗಳೆಲ್ಲ ದ್ರೋಣನ ಪ್ರತಾಪಾಗ್ನಿಯಿಂದ ಬೆಂದು, ವೀರ್ಯವಡಗಿ, ನಿರುತ್ಸಾಹರಾಗಿ ದಿಗ್ಭ್ರಾಂತರಾದರು. ಪಾಂಡವಸೈನ್ಯದ ಈ ಸ್ಥಿತಿಯನ್ನು ನೋಡಿ, ಕೃಷ್ಣನು ಪಾಂಡವರಿಗೆ ಜಯವನ್ನು ಕೋರಿ, ಧರ್ಮರಾಜನನ್ನು ಕುರಿತು, "ಧರ್ಮರಾಜಾ! ಮಹಾರಥರಲ್ಲಿಯೂ, ಶಸ್ತ್ರಜ್ಞರಲ್ಲಿಯೂ ಮೇಲೆನಿಸಿದ ದ್ರೋಣನನ್ನು ಮನುಷ್ಯರಿಂದ ಜಯಿಸಲು ಸಾಧ್ಯವಿಲ್ಲ. ವೃತ್ರಹರನಾದ ಇಂದ್ರನೇ ಬಂದರೂ ಯುದ್ಧದಲ್ಲಿ ಅವನನ್ನು ಜಯಿಸಲಾರನು. ಇದರಿಂದ ನೀವು ಧರ್ಮವನ್ನಾದರೂ ಬಿಟ್ಟು, ಈಗ ನಿಮ್ಮ ಜಯವನ್ನು ಸಾಧಿಸಬೇಕು. ರುಕ್ಮರಥನೆನಿಸಿದ ದ್ರೋಣನು ನಿಮ್ಮನ್ನೆಲ್ಲ ನಿಶ್ಶೇಷವಾಗಿ ಕೊಲ್ಲುವವನೊದಲೇ, ನೀವು ಏನಾದರೂ ಉಪಾಯದಿಂದ ಅವನನ್ನು ಅಡಗಿಸಬೇಕು. ತನ್ನ ಮಗನಾದ ಅಶ್ವತ್ಥಾಮನು ಹತನಾದ ಸುದ್ದಿಯನ್ನು ಕೇಳಿದರೆಮಾತ್ರ, ದ್ರೋಣನು ಯುದ್ಧವನ್ನು ನಿಲ್ಲಿಸುವನೆಂದು ನನಗೆ ತೋರಿದೆ. ಆದುದರಿಂದ ಅವನ ಕಿವಿಗೆ ಬೀಳುವಂತೆ ಅಶ್ವತ್ಥಾಮನು ಹತನಾದನೆಂದು ಯಾವನಾದರೂ ಸುಳ್ಳನ್ನಾದರೂ ಹೇಳಬೇಕು" ಎಂದನು. ಇದು ಧನಂಜಯನಿಗೆ ಮಾತ್ರ ಸರ್ವಾತ್ಮನಾ ಸಮ್ಮತವಾಗಲಿಲ್ಲ. ಇತರರೆಲ್ಲರೂ ಅನುಮೋದಿಸಿದರು. ಧರ್ಮರಾಜನೂ ಬಹಳ ಕಷ್ಟದಿಂದ ಒಪ್ಪಿಕೊಂಡನು. ಆಗ ಭೀಮನಿಗೆ ಅಸತ್ಯವನ್ನು ನುಡಿಯಬೇಕೆಂಬ ಲಜ್ಜೆಯು ಮನಸ್ಸಿನಲ್ಲಿದ್ದರೂ, ನಿನ್ನ ತಂದೆಯ ಮುಂದೆ "ಅಶ್ವತ್ಥಾಮಾ ಹತಃ" ಎಂದು ಕೂಗಿದನು. ನಿನ್ನ ತಂದೆಯು ಅದನ್ನು ನಂಬದೆ ಅಲಕ್ಷ್ಯವಾಗಿದ್ದು, ಕೊನೆಗೆ "ಈ ವಧವೃತ್ತಾಂತವು ನಿಜವೇ? ಸುಳ್ಳೇ" ಎಂದು ಧರ್ಮರಾಜನನ್ನು ಕೇಳಿದನು. ಧರ್ಮರಾಜನಿಗೆ ಈಗ ಧರ್ಮಸಂಕಟವೊದಗಿತು ಒಂದುಕಡೆ ಅಸತ್ಯಭೀತಿಯೂ ಮತ್ತೊಂದುಕಡೆ ಜಯದಾಸೆಯೂ, ಅವನ ಮನಸ್ಸನ್ನು ಬಾಧಿಸುತ್ತಿದ್ದಿತು. ಈ ಸಮಯಕ್ಕೆ ಸರಿಯಾಗಿ ಭೀಮನು, ಮಾಳವರಾಜನಾದ ಇಂದ್ರವರ್ಮನೆಂಬವನಿಗೆ ಸೇರಿದ ಅಶ್ವತ್ಥಾಮನೆಂಬ ಮಹಾಗಜವೊಂದನ್ನು ಕೊಂದನು. ಅದನ್ನು ದ್ರೋಣನಿಗೆ ತಿಳಿಸುವ ನೆವದಿಂದ ದ್ರೋಣನ ಮುಂದೆ ಹೋಗಿ,

“ಆಚಾರ್ಯಾ! ನೀನು ಯಾವನಿಗಾಗಿ ಶಸ್ತ್ರವನ್ನು ಕೈಯಲ್ಲಿ ಹಿಡಿದಿರುವೆಯೋ, ಯಾವನನ್ನು ನೋಡಿಕೊಂಡು ನೀನು ಬದುಕಿರುವೆಯೋ, ನಿನ್ನ ಅಂತಹ ಪ್ರಿಯಪುತ್ರನಾದ ಅಶ್ವತ್ಥಾಮನು ಹತನಾಗಿ, ಕಾಡಿನಲ್ಲಿ ಸಿಂಹದ ಮರಿಯು ಬಿದ್ದಂತೆ, ರಣಭೂಮಿಯಲ್ಲಿ ಮಲಗಿರುವನು” ಎಂದನು. ರಾಜಾ! ಅಸತ್ಯದಿಂದುಂಟಾಗುವ ದೋಷವನ್ನು ಧರ್ಮರಾಜನು ಬಲ್ಲವನಾಗಿದ್ದರೂ, ಆಚಾರ್ಯನಾದ ಬ್ರಾಹ್ಮಣನ ಮುಂದೆ “ಅಶ್ವತ್ಥಾಮಾ ಹತಃ” ಎಂದು, ಗಟ್ಟಿಯಾಗಿ ಹೇಳಿ, ಕೊನೆಗೆ “ಕುಂಜರಃ” ಎಂಬ ಶಬ್ದವನ್ನು ಆ ದ್ರೋಣನ ಕಿವಿಗೆ ಬೀಳದಂತೆ ಅವ್ಯಕ್ತವಾಗಿ ಹೇಳಿದನು. ಅದನ್ನು ಕೇಳಿದೊಡನೆ ನಿನ್ನ ತಂದೆಯು, ನೀನು ಹತನಾದೆಯೆಂದು ತಿಳಿದು, ದಿವ್ಯಾಸ್ತ್ರಗಳನ್ನು ಬಿಸುಟು, ಯುದ್ಧದಲ್ಲಿ ಮನಸ್ಸಿಲ್ಲದೆ ನಿಂತುಬಿಟ್ಟನು. ಹೀಗೆ ನಿನ್ನ ತಂದೆಯು ಪುತ್ರಶೋಕದಿಂದ ಪ್ರಜ್ಞೆತಪ್ಪಿದಂತಿದ್ದಾಗ ಕ್ರೂರಕರ್ಮಿಯಾದ ಧೃಷ್ಟದ್ಯುಮ್ನನು, ಆದೇ ಅವಕಾಶವೆಂದು ತಿಳಿದು, ಅವನನ್ನು ಕೊಲ್ಲಲು ಆತುರದಿಂದ ಓಡಿಬಂದನು. ಲೋಕತತ್ವವನ್ನೆಲ್ಲ ಚೆನ್ನಾಗಿ ಬಲ್ಲ ನಿನ್ನ ತಂದೆಯು ತನಗೆ ಆ ಧೃಷ್ಟದ್ಯುಮ್ನನೇ ದೈವಕಲ್ಪಿತವಾದ ಮೃತ್ಯುವೆಂಬುದನ್ನು ತಿಳಿದಿದ್ದುದರಿಂದ, ಮನಸ್ಸಿನಲ್ಲಿ ಧೈರ್ಯಗೊಂಡು, ಶಸ್ತ್ರತ್ಯಾಗಮಾಡಿ, ಆ ರಣಭೂಮಿಯಲ್ಲಿಯೇ ಪ್ರಾಯೋಪವೇಶದಿಂದ ಕುಳಿತನು. ಆಗ ದುರಾತ್ಮನಾದ ಧೃಷ್ಟದ್ಯುಮ್ನನು ಮುಂದೆಬಂದು. ಎಡಗೈಯಿಂದ ನಿನ್ನ ತಂದೆಯ ತಲೆಕೂದಲನ್ನು ಹಿಡಿದು, ಅವನ ಶಿರಸ್ಸನ್ನು ಛೇದಿಸಿಬಿಟ್ಟನು. ಕುಮಾರಾ! ಆಗ ಸುತ್ತಮುತ್ತಲೂ ನೆರೆದಿದ್ದ ಶೂರರೆಲ್ಲರೂ ನಾನಾಕಡೆಗಳಿಂದ “ಬೇಡ! ಬೇಡ! ಕೊಲ್ಲಬೇಡ”ವೆಂದು ಕೂಗಿಕೊಂಡರು. ಅರ್ಜುನನೂ ಆಗ. ಧೃಷ್ಟದ್ಯುಮ್ನನ ಪ್ರಯತ್ನವನ್ನು ನೋಡಿ, ಥಟ್ಟನೆ ತನ್ನ ವಾಹನದಿಂದ ಕೆಳಕ್ಕಿಳಿದು, ಬಾರಿಬಾರಿಗೂ ಕೂಗುತ್ತ, “ಧೃಷ್ಟದ್ಯುಮ್ನಾ! ಬೇಡ! ಆಚಾರ್ಯನನ್ನು ಕೊಲ್ಲಬೇಡ! ಜೀವಸಹಿತವಾಗಿ ಅವನನ್ನು ಎತ್ತಿಕೊಂಡು ಬಾ” ಎಂದು ಕೂಗಿದನು. ಹೀಗೆ ಕೌರವರೂ, ಪಾಂಡವರೂ, ಅರ್ಜುನನೂ ಒಂದೇ ಕೂಗಾಗಿ “ಬೇಡಬೇಡ”ವೆಂದು ನಿವಾರಿಸುತ್ತಿದ್ದರೂ, ಘಾತುಕನಾದ ಆ ಪಾಂಚಾಲನು ನಿನ್ನ ತಂದೆಯ ತಲೆಯನ್ನು ಕಡಿದೇಬಿಟ್ಟನು. ಅದನ್ನು ನೋಡಿ, ಸೈನಿಕರೆಲ್ಲರೂ ಭಯದಿಂದ ಪಲಾಯನಮಾಡಿದರು.

ರಾವೂ ನಿರುತ್ಸಾಹರಾಗಿ ಹಿಂತಿರುಗಿದೆವು" ಎಂದನು. ಈ ಮಾತನ್ನು ಕೇಳಿ ದೊಡನೆಯೇ ಅಶ್ವತ್ಥಾಮನಿಗೆ ತಡೆಯಲಾರದ ಕೋಪಾವೇಶವುಂಟಾಯಿತು. ದಂಡಾಹತವಾದ ಸರ್ಪದಂತೆ ಆಕ್ರೋಶಗೊಂಡು, ಇಂಧನರಾಶಿಯಲ್ಲಿ ಹತ್ತಿ ಕೊಂಡ ಬೆಂಕಿಯಂತೆ ಉರಿಯುತ್ತಿದ್ದನು. ಕೈಗಳನ್ನು ಹಿಸುಕಿದನು! ಕಟ ಕಟನೆ ಹಲ್ಲುಗಳನ್ನು ಕಡಿದನು! ಸರ್ಪದಂತೆ ಬುಸುಗುಟ್ಟುತ್ತಿದ್ದನು! ಅವನ ಕಣ್ಣುಗಳು ಕೆಂಪೇರಿದುವು.

ಇದು ನೂರ ತೊಂಬತ್ತುನಾಲ್ಕನೆಯ ಅಧ್ಯಾಯವು.



## ಧೃತರಾಷ್ಟ್ರನು ಮುಂದೆ ಅಶ್ವತ್ಥಾಮನ ಪ್ರಯತ್ನವೇನೆಂದು ಸಂಜಯನನ್ನು ಪ್ರಶ್ನೆಮಾಡಿದುದು.

ಆಗ ಧೃತರಾಷ್ಟ್ರನು "ಸಂಜಯಾ! ಕ್ರೋಧಾವಿಷ್ಟನಾದ ಅಶ್ವತ್ಥಾ ಮನು ಹೇಳಿದುದೇನು? ಪರಮವೃದ್ಧ ಬ್ರಾಹ್ಮಣನಾದ ತನ್ನ ತಂದೆಯು ಅಧರ್ಮದಿಂದ ಹತನಾದುದನ್ನು ಕೇಳಿದಾಗ, ಅವನ ಮುಂದಿನ ಆಲೋಚನೆ ಯೇನಾಯಿತು? ಯಾವನಲ್ಲಿ ಮಾನವ, ವಾರುಣ, ಆಗ್ನೇಯ, ಬ್ರಾಹ್ಮ, ಐಂದ್ರ, ನಾರಾಯಣಾದ್ಯಸ್ತ್ರಗಳೆಲ್ಲ ಸ್ಥಿರವಾಗಿ ನೆಲೆಗೊಂಡಿದ್ದುವೋ, ಅಂತಹ ಶಸ್ತ್ರಾಚಾರ್ಯನೂ, ಧರ್ಮಿಷ್ಠನೂ ಆದ ತನ್ನ ತಂದೆಯನ್ನು ಪಾಂಚಾಲನು ಅಧರ್ಮದಿಂದ ಕೊಂದುದಕ್ಕಾಗಿ ಅಶ್ವತ್ಥಾಮನು ಮುಂದೆ ಯಾವರೀತಿ ಪ್ರವರ್ತಿಸಿದನು? ಆ ದ್ರೋಣನೋ, ಮಹಾತ್ಮನಾದ ಪರಶು ರಾಮನಿಂದ ಸಾಕ್ಷಾತ್ತಾಗಿ ಧನುರ್ವೇದವನ್ನು ಕಲಿತು, ಆ ದಿವ್ಯಾಸ್ತ್ರಗಳ ನ್ನೆಲ್ಲ ತನ್ನ ಮಗನಿಗೆ ಸಾಂಗವಾಗಿ ಉಪದೇಶಿಸಿದ್ದನು. ಲೋಕದಲ್ಲಿ ಮನು ಷ್ಯರು ತಮಗಿಂತಲೂ ಉತ್ತಮಗುಣವುಳ್ಳ ಒಬ್ಬ ಪುತ್ರನಿದ್ದರೂ ಸಾಕೆಂದು ಬಯಸುವರಲ್ಲದೆ ಬೇರೆವಿಧವಾದ ಪುತ್ರರನ್ನು ಹೇಗೂ ಬಯಸುವುದಿಲ್ಲ. ಮಹಾತ್ಮರಾದ ಆಚಾರ್ಯರು, ಎಷ್ಟೋ ರಹಸ್ಯವಿದ್ಯೆಗಳನ್ನು ತಮ್ಮಲ್ಲಿ ಸಂಗ್ರ ಹಿಸಿಕೊಂಡಿದ್ದು, ಅದನ್ನು ತಮ್ಮ ಮಕ್ಕಳಿಗೂ, ಪ್ರಿಯಶಿಷ್ಯರಿಗೂ ಉಪದೇ ಶಿಸುವರು. ಉತ್ತಮಶಿಷ್ಯರು ಅವನ್ನೆಲ್ಲ ತಿಳಿದು, ಅದಕ್ಕಿಂತಲೂ ವಿಶೇಷ ವಾಗಿಯೂ ಗ್ರಹಿಸಬಲ್ಲರು. ಅಶ್ವತ್ಥಾಮನು ದ್ರೋಣನಿಗೆ ಪ್ರಿಯಪುತ್ರನೂ

ಶಿಷ್ಯನೂ ಆಗಿರುವನು. ಅವನು ಯುದ್ಧದಲ್ಲಿ ದ್ರೋಣನಿಗೆ ಎರಡನೆಯವನು. ಶಸ್ತ್ರವಿದ್ಯೆಯಲ್ಲಿ ಪರಶುರಾಮನಿಗೆ ಸಮಾನನು. ಬಲದಲ್ಲಿ ಇಂದ್ರನಿಗೆ ಸಾಟಿಯಾದವನು. ವೀರ್ಯದಲ್ಲಿ ಕಾರ್ತವೀರ್ಯನಿಗೂ, ಬುದ್ಧಿಯಲ್ಲಿ ಬೃಹಸ್ಪತಿಗೂ, ಸ್ಥೈರ್ಯದಲ್ಲಿ ಪರ್ವತಕ್ಕೂ; ತೇಜಸ್ಸಿನಲ್ಲಿ ಅಗ್ನಿಗೂ, ಗಾಂಭೀರ್ಯದಲ್ಲಿ ಸಮುದ್ರಕ್ಕೂ, ಕ್ರೋಧದಲ್ಲಿ ಸರ್ಪಕ್ಕೂ ಸಮಾನನು. ಲೋಕಕ್ಕೆಲ್ಲ ಮೊದಲನೆಯ ಮಹಾರಥನೆಂದರೆ ಅವನೇ! ಅವನು ದೃಢಧನುಸ್ಸುಳ್ಳವನು! ಶ್ರಮವನ್ನು ಜಯಿಸಿದವನು! ವಾಯುವೇಗವುಳ್ಳವನು! ಕೋಪಗೊಂಡ ಮೃತ್ಯುವಿಗೆ ಸಮಾನನು! ಅವನ ಬಾಣಪ್ರಯೋಗಕ್ಕೆ ಭೂಮಿಯೇ ನಡುಗುವುದು. ಎಂತಹ ಯುದ್ಧಕ್ಕೂ ಹಿಂಜರಿಯತಕ್ಕವನಲ್ಲ! ವೇದಾಧ್ಯಯನವನ್ನೂ, ವ್ರತಗಳನ್ನೂ ಮುಗಿಸಿ ಸ್ನಾನಮಾಡಿದವನು. ಧನುರ್ವಿದ್ಯಾಪಾರಂಗತನು! ಸಮುದ್ರದಂತೆ ಅಕ್ಷೋಭ್ಯನು! ದಶರಥಪುತ್ರನಾದ ರಾಮನಿಗೆ ಸಮಾನನು! ಅಂತಹ ಅಶ್ವತ್ಥಾಮನು ಧರ್ಮಿಷ್ಠನಾದ ತನ್ನ ತಂದೆಯು ಅಧರ್ಮದಿಂದ ಹತನಾದುದನ್ನು ಕೇಳಿದಮೇಲೆ ಏನನ್ನು ಹೇಳಿದನು? ಸಂಜಯಾ! ದ್ರೋಣನಿಗೆ ಧೃಷ್ಟದ್ಯುಮ್ನನು ಹೇಗೋ, ಹಾಗೆಯೇ ಧೃಷ್ಟದ್ಯುಮ್ನನಿಗೂ ಅಶ್ವತ್ಥಾಮನೇ ಮೃತ್ಯುವಾಗಿ ದೈವದಿಂದ ಸೃಷ್ಟಿಸಲ್ಪಟ್ಟಿರುವನು. ನೃಶಂಸನೂ, ಪಾಪಿಯೂ, ಕ್ರೂರನೂ, ದೂರದೃಷ್ಟಿಯಿಲ್ಲದವನೂ ಆದ ಆ ಧೃಷ್ಟದ್ಯುಮ್ನನ ಕ್ರೂರಕಾರ್ಯವನ್ನು ಕೇಳಿ ಆ ಅಶ್ವತ್ಥಾಮನು ಮಾಡಿದುದೇನು?" ಎಂದನು.

ಇದು ನೂರತೊಂಬತ್ತೈದನೆಯ ಅಧ್ಯಾಯವು.

ಅಶ್ವತ್ಥಾಮನು ಕೋಪಾವಿಷ್ಟನಾಗಿ ಯುಧಿಷ್ಠಿರಾದಿಗಳನ್ನು ನಿಂದಿಸಿ, ತನ್ನ ತಂದೆಯಿಂದ ತಾನು ಪಡೆದಿರುವ ನಾರಾಯಣಾಸ್ತ್ರದಿಂದ ಪಾಂಡವರನ್ನು ನಿರ್ಮೂಲಮಾಡುವುದಾಗಿ ಪ್ರತಿಜ್ಞೆಮಾಡಿದುದು.

ಧೃತರಾಷ್ಟ್ರಮಹಾರಾಜಾ! ತನ್ನ ತಂದೆಯು ಮೋಸದಿಂದ ವಧಿಸಲ್ಪಟ್ಟುದನ್ನು ಕೇಳಿ ಅಶ್ವತ್ಥಾಮನಿಗೆ ಕೋಪವು ಉಕ್ಕಿಬಂದಿತು. ಕಣ್ಣಿನಲ್ಲಿ

ನೀರುಸುರಿಯಿತು. ಆಗಿನ ಅವನ ರೂಪವು ಪ್ರಳಯಕಾಲದಲ್ಲಿ ಪ್ರಾಣಿನಾಶಕ್ಕಾಗಿ ಹೊರಟಿರುವ ಕಾಲಾಂತಕನ ರೂಪದಂತೆ ಉಗ್ರವಾಯಿತು. ಅವನು ಬಾರಿಬಾರಿಗೂ ಉಕ್ಕಿಬರುವ ಕಣ್ಣೀರನ್ನೊರಸಿಕೊಳ್ಳುತ್ತ, ಕೋಪದಿಂದ ನಿಟ್ಟುಸಿರನ್ನು ಬಿಟ್ಟು, ದುರ್ಯೋಧನನನ್ನು ನೋಡಿ ಹೀಗೆಂದನು. “ತಾನು ಧರ್ಮಧ್ವಜವನ್ನೇರಿಸಿದವನಂತೆ ಕೇವಲ ಡಾಂಭಿಕನಾದ ಆ ಧರ್ಮರಾಜನ ಪಾಪಬುದ್ಧಿಯು ಈಗ ಚೆನ್ನಾಗಿ ಹೊರಬಿದ್ದಿತು. ಶಸ್ತ್ರಸನ್ಯಾಸಮಾಡಿದ ನನ್ನ ತಂದೆಯನ್ನು ಕ್ಷುದ್ರಜನರಿಂದ ಕೊಲ್ಲಿಸುವುದಕ್ಕೆ ಮೂಲವೇ ಆ ಯುಧಿಷ್ಠಿರನು! ಧರ್ಮಪುತ್ರನೆನಿಸಿಕೊಂಡ ಅವನು, ಅನಾರ್ಯವಾದ ಘಾತುಕಕೃತ್ಯವನ್ನು ನಡೆಸಿದನು. ರಾಜಾ! ಯುದ್ಧದಲ್ಲಿ ತಲೆಯಿಕ್ಕಿದವರಿಗೆ ಜಯಪರಾಜಯಗಳೆರಡರಲ್ಲಿ ಯಾವುದೋ ಒಂದು ಆಗಲೇಬೇಕು. ಯುದ್ಧದಲ್ಲಿ ಅಪಜಯಕ್ಕಿಂತಲೂ ವಧವೇ ಪ್ರಶಸ್ತವು. ಆದರೆ, ಆ ವಧವು ನ್ಯಾಯವಾಗಿ ನಡೆದಿದ್ದರೆ, ಅದು ಅಷ್ಟು ದುಃಖಕ್ಕೆ ಕಾರಣವಲ್ಲ. ವಿದ್ವಾಂಸರಾದ ಬ್ರಾಹ್ಮಣರು ಹಾಗೆಯೇ ನಿರ್ಣಯಿಸಿರುವರು. ನನ್ನ ತಂದೆಯು ವೀರಲೋಕಕ್ಕೆ ಹೋಗುವುದರಲ್ಲಿ ಸಂದೇಹವಿಲ್ಲ. ಅವನ ಮರಣಕ್ಕಾಗಿ ನಾನು ಚಿಂತಿಸಬೇಕಾದುದೂ ಇಲ್ಲ. ಅತ್ಯಲ್ಪನಾದ ಒಬ್ಬ ಕ್ಷತ್ರಿಯಾಧಮನು, ಸದಾ ಧರ್ಮನಿರತನಾದ ನನ್ನ ತಂದೆಯ ತಲೆಕೂದಲಿಗೆ ಕೈಯಿಕ್ಕಿ, ಎಲ್ಲಾ ಸೈನ್ಯಗಳ ಮುಂದೆ ನಡೆಸಿದ ಪಾಪಕೃತ್ಯವು ಮರ್ಮಗಳನ್ನು ಭೇದಿಸುತ್ತಿರುವುದು. ಮಗನಾದ ನಾನು ಬದುಕಿರುವಾಗ, ನನ್ನ ತಂದೆಯ ತಲೆಕೂದಲಿಗೆ ಇನ್ನೊಬ್ಬನು ಕೈಯಿಕ್ಕಿ ಹಿಡಿದೆಳೆದನೆಂದಮೇಲೆ, ಇನ್ನು ಮಕ್ಕಳೊಂದಿಗರಾದ ಬೇರೆ ಯಾರುತಾನೇ ತಮ್ಮ ಮಕ್ಕಳಿಗಾಗಿ ಆಸೆಪಡುವರು? ಕಾಮದಿಂದಲೋ, ಕ್ರೋಧದಿಂದಲೋ, ಅಜ್ಞಾನದಿಂದಲೋ, ಸಂತೋಷದಿಂದಲೋ, ಹುಡುಗುಬುದ್ಧಿಯಿಂದಲೋ, ಜನರು ಅಧರ್ಮಗಳನ್ನು ನಡೆಸುವುದುಂಟು. ದೊಡ್ಡವರನ್ನು ತಿರಸ್ಕರಿಸುವುದೂ ಉಂಟು. ದುರಾತ್ಮನಾದ ಆ ಪಾರ್ಷದನು ನನ್ನನ್ನೂ ಲಕ್ಷ್ಯಮಾಡದೆ, ಎಂತಹ ಮಹಾಪಾಪಕೃತ್ಯವನ್ನು ಮಾಡಿದನು? ರಾಜಾ! ಅದಕ್ಕೆ ಅವನು ನನ್ನಿಂದ ಎಂತಹ ದಾರುಣವಾದ ಫಲವನ್ನು ಹೊಂದುವನೋ ನೋಡುತ್ತಿರು! ಆ ಧರ್ಮರಾಜನಾದರೂ ಎಂತಹ ವಿವೇಕಹೀನನು? ಅತಿನೀಚವಾದ ಈ ಕಾರ್ಯ

ಕ್ಕಾಗಿ ತನ್ನ ಬಾಯಿಂದ ಸುಳ್ಳನ್ನಾಡಿ, ಮೋಸದಿಂದ ತನ್ನ ಆಚಾರ್ಯನು ಕೈಯಲ್ಲಿದ್ದ ಶಸ್ತ್ರವನ್ನು ಬಿಡುವಹಾಗೆ ಮಾಡಿದನು. ಅಂತಹ ಅಧಾರ್ಮಿಕನಾದ ಧರ್ಮರಾಜನ ರಕ್ತವನ್ನು ಈಗಲೇ ಈ ಭೂಮಿಯು ಪಾನಮಾಡದೆ ಬಿಡದು. ಕೌರವರಾಜಾ! ನನ್ನ ಸತ್ಯದಮೇಲೆ, ನಾನು ಮಾಡಿದ ಇಷ್ಟಾಪೂರ್ತಗಳೆಂಬ ಧರ್ಮಗಳಮೇಲೆ ಆಣೆಯಿಟ್ಟು ಹೇಳುವೆನು. ಎಲ್ಲ ಪಾಂಚಾಲರನ್ನೂ ನಿರ್ಮೂಲಮಾಡದೆ ನಾನು ಬದುಕಿರಲಾರೆನು? ಪಾಂಚಾಲರ ವಧಕ್ಕಾಗಿ ನಾನು ನನ್ನಿಂದಾದ ಸರ್ವೋಪಾಯಗಳಿಂದ ಯತ್ನಿಸುವೆನು. ಇದೇ ಯುದ್ಧದಲ್ಲಿ ಪಾಪಕರ್ಮಿಯಾದ ಆ ಧೃಷ್ಟದ್ಯುಮ್ನನನ್ನು ನಾನು ಕೊಂದೇ ಕೊಲ್ಲುವೆನು. ಮೃದುವಾಗಿಯೋ, ಕ್ರೂರವಾಗಿಯೋ, ಯಾವುದಾದರೂ ಒಂದುಬಗೆಯ ಕಾರ್ಯಸಾಧನೆಯಿಂದ ಪಾಂಚಾಲರನ್ನು ಕೊಂದಮೇಲೆಯೇ ನಾನು ಶಾಂತಿಯನ್ನು ಹೊಂದುವೆನು. ಕೌರವರಾಜಾ! ಮನುಷ್ಯರು ಮಕ್ಕಳನ್ನು ಪಡೆಯುವುದೇಕೆ? ತಮ್ಮ ಮಕ್ಕಳು ಇಹದಲ್ಲಿಯೂ, ಪರದಲ್ಲಿಯೂ ತಮ್ಮನ್ನು ಭಯದಿಂದ ತಪ್ಪಿಸುವರೆಂಬ ಉದ್ದೇಶದಿಂದಲೇ ಅಲ್ಲವೇ? ಈಗ ನಾನು ನನ್ನ ತಂದೆಗೆ ಮಗನಾಗಿ ಹುಟ್ಟಿ, ಅವನಿಗೆ ಜ್ಯೇಷ್ಠನಾಗಿಯೂ ಇದ್ದು, ಬೆಟ್ಟದಂತೆ ಬೆಳೆದಿರುವಾಗಲೂ, ನನ್ನ ತಂದೆಯು ಬಂಧುಹೀನನಂತೆ ಈ ದುರವಸ್ಥೆಯನ್ನು ಹೊಂದಿದನು. ಇನ್ನು ನಾನು ಬದುಕಿ ಫಲವೇನು? ಛೀ! ನನ್ನನ್ನೂ, ನಾನು ಪಡೆದಿರುವ ದಿವ್ಯಾಸ್ತ್ರಗಳನ್ನೂ, ನನ್ನ ಬಾಹುಗಳನ್ನೂ, ನನ್ನ ಪರಾಕ್ರಮವನ್ನೂ ಸುಡಬೇಕಲ್ಲವೆ? ನನ್ನಂತಹ ಮಗನನ್ನು ಪಡೆದೂ ದ್ರೋಣನು, ನಾನು ಬದುಕಿರುವಾಗಲೇ ಕೇಶಗ್ರಹಣವನ್ನು ಹೊಂದಿದಮೇಲೆ ಇನ್ನು ನನ್ನ ಜನ್ಮವೇಕೆ? ಓ ಭರತಕುಲೋತ್ತಮಾ! ಈಗಲೂ ಚಿಂತೆಯಿಲ್ಲ. ನನ್ನ ತಂದೆಯು ಪರಲೋಕಗತನಾಗಿದ್ದರೂ, ಅವನ ಋಣವನ್ನು ತೀರಿಸಿಕೊಂಡು ಆನೃಣ್ಯವನ್ನು ಹೊಂದುವುದಕ್ಕೆ ನಾನು ಪ್ರಯತ್ನಮಾಡುವೆನು. ಹಾಗೆಯೇ ನಡೆಸುವೆನು. ಇದರಲ್ಲಿ ಸಂದೇಹವಿಲ್ಲ. ಆರ್ಯನಾದವನು ಆತ್ಮಪ್ರಶಂಸೆಯನ್ನು ಮಾಡಿಕೊಳ್ಳಬಾರದು! ಆದರೂ ಈಗ ನಾನು ನನ್ನ ತಂದೆಯ ವಧವನ್ನು ಕೇಳಿ ಸಹಿಸಲಾರದೆ, ನನ್ನ ಪೌರುಷವನ್ನು ನನ್ನ ಬಾಯಿಂದಲೇ ಆಡುವಂತೆ ಮಾಡಿದೆ. ರಾಜಾ! ದೇವ, ದಾನವ, ಗಂಧರ್ವ, ರಾಕ್ಷಸರಲ್ಲಿ ಯಾರೇ ಆಗಲಿ,

ಗ ರಥಾರೂಢನಾಗಿ ಯುದ್ಧಕ್ಕೆ ಹೋಗುವ ನನ್ನನ್ನು ಜಯಿಸಲಾರರು. ೋಕದಲ್ಲಿ ನನ್ನನ್ನು ಮತ್ತು ಆ ಅರ್ಜುನನನ್ನು ಬಿಟ್ಟರೆ, ಅಸ್ತ್ರಜ್ಞನಾದ ನು ಬೇರೆ ಯಾವನೂ ಎಲ್ಲಿಯೂ ಇಲ್ಲ. ಕಿರಣಗಳ ನಡುವೆ ಪ್ರಕಾಶಿಸುವ ೂರ್ಯನಂತೆ, ನಾನು ರಣರಂಗದಲ್ಲಿ ನನ್ನ ದಿವ್ಯಾಸ್ತ್ರಗಳನ್ನು ಹರಡುವೆನು. ನ್ನ ಬಿಲ್ಲಿನಿಂದ ಹೊರಟ ಬಾಣಗಳು ತಮ್ಮ ಪೂರ್ಣಶಕ್ತಿಯಿಂದ ಪಾಂಡವ ನ್ನೆಲ್ಲ ನಾಶಮಾಡದೆ ಬಿಡಲಾರವು. ಮೇಘವರ್ಷದಂತೆ ನನ್ನ ಬಾಣವು ಲ್ಲಾ ದಿಕ್ಕುಗಳಲ್ಲಿಯೂ ವ್ಯಾಪಿಸುವುದನ್ನು ಈಗ ಎಲ್ಲರೂ ನೋಡಲಿ! ಿರುಗಾಳಿಯು ಮರಗಳನ್ನುರುಳಿಸುವಂತೆ ನಾನು ನನ್ನ ಭಯಂಕರಘೋಷ ುಳ್ಳ ಬಾಣಗಳಿಂದ ಶತ್ರುಗಳನ್ನೆಲ್ಲ ಉರುಳಿಸುವೆನು. ರಾಜಾ! ಪ್ರಯೋ ಮತ್ತು ಉಪಸಂಹಾರಕ್ರಮಗಳೊಡನೆ ನನ್ನಲ್ಲಿ ಅದ್ಭುತವಾದ ಒಂದು ುಹಾಸ್ತ್ರವುಂಟು. ಅದನ್ನು ಇದುವರೆಗೆ ಅರ್ಜುನನಾಗಲಿ, ಕೃಷ್ಣನಾ ಲಿ, ಯುಧಿಷ್ಠಿರನಾಗಲಿ, ಭೀಮನಾಗಲಿ, ನಕುಲಸಹದೇವರಾಗಲಿ ಯಾರೂ ಳಿದಿಲ್ಲ. ದುರಾತ್ಮನಾದ ಆ ಧೃಷ್ಟದ್ಯುಮ್ನನಿಗೂ, ಶಿಖಂಡಿಗೂ, ಸಾತ್ಯ ಗೂ, ಬೇರೆ ಯಾರಿಗೂ ಅದು ತಿಳಿಯದು. ಆ ಅಸ್ತ್ರವು ನನಗೆ ಹೇಗೆ ಲಭಿ ತೆಂಬುದನ್ನು ನಿನಗೆ ಹೇಳುವೆನು ಕೇಳು. ಹಿಂದೆ ನನ್ನ ತಂದೆಯು ಶ್ರೀಮ ನ್ನಾರಾಯಣನನ್ನು ವಿಧ್ಯುಕ್ತವಾಗಿ ಆರಾಧಿಸಲು, ನೈವೇದ್ಯವನ್ನು ಸಿದ್ಧಮಾ ಿದನು. ಆಗ ಭಗವಂತನು, ಬ್ರಾಹ್ಮಣರೂಪದಿಂದ ಪ್ರತ್ಯಕ್ಷನಾಗಿ ಬಂದು, ದನ್ನು ತಾನಾಗಿ ಸ್ವೀಕರಿಸಿ, ತೃಪ್ತನಾಗಿ, ಬೇಕಾದ ವರವನ್ನು ಕೇಳುವಂತೆ ಹೇಳಿದನು. ಆಗ ನನ್ನ ತಂದೆಯು ತನಗೆ ನಾರಾಯಣನಾಮಕವಾದ ಉ ್ತಮಾಸ್ತ್ರವನ್ನು ಅನುಗ್ರಹಿಸಬೇಕೆಂದು ಕೇಳಿಕೊಂಡನು. ಆಗ ಆ ದೇವ ನೇವನು "ಓ ಬ್ರಾಹ್ಮಣೋತ್ತಮಾ! ಯುದ್ಧದಲ್ಲಿ ನಿನಗೆ ಸಮಾನನಾದ ಮನುಷ್ಯನು ಬೇರೆ ಯಾವನೂ ಎಲ್ಲಿಯೂ ಇರಲಾರನು. ನೀನು ಕೋರಿದ ಸ್ತ್ರವನ್ನು ನಾನುಕೊಡುವೆನು. ಆದರೆ, ಈ ಅಸ್ತ್ರವನ್ನು ನೀನು ಯಾ ಾಗಲೂ ಆತುರಪಟ್ಟು ಉಪಯೋಗಿಸಬಾರದು. ಪ್ರಯೋಗಿಸಿದಮೇಲೆ ಅದು ಶತ್ರುವನ್ನು ಕೊಲ್ಲದೆ ಹಿಂತಿರುಗಲಾರದು. ಇದನ್ನು ಯಾರೂ ನಿಗ್ರ ಹಿಸಲಾರರು. ಇದಕ್ಕೆ ಯಾರೂ ಅವಧ್ಯರಿಲ್ಲ. ಇದನ್ನು ಪ್ರಯೋಗಿಸಿಬಿ ಟ್ಟರೆ, ವಧಾರ್ಹರಲ್ಲದವರನ್ನೂ ಇದು ಕೊಂದುಬಿಡುವುದು. ಆದುದರಿಂದ

ಇದನ್ನು ಎಲ್ಲಿಯೂ ಬಿಡಲೇಬಾರದು. ಯುದ್ಧದಲ್ಲಿ ರಥವನ್ನು ಬಿಟ್ಟಿಳಿಯುವುದು, ಶಸ್ತ್ರತ್ಯಾಗಮಾಡುವುದು, ದೈನ್ಯದಿಂದ ಯಾಚಿಸುವುದು, ಶರಣಾಗತಿಮಾಡುವುದು, ಇವೇ ಈ ಮಹಾಸ್ತ್ರವನ್ನು ಶಾಂತಿಗೊಳಿಸುವ ಉಪಾಯಗಳು. ಯುದ್ಧದಲ್ಲಿ ವಧಾರ್ಹರಲ್ಲದವರನ್ನು ಪೀಡಿಸತಕ್ಕವನು ಹೇಗಿದ್ದರೂ ಇದರಿಂದ ಪೀಡಿಸಲ್ಪಡುವನು. ನನ್ನ ತಂದೆಯು ನನಗಾಗಿಯೇ ಆ ಅಸ್ತ್ರವನ್ನು ಗ್ರಹಿಸಿದನು. ಆ ಅಸ್ತ್ರವನ್ನು ನನ್ನ ತಂದೆಗೆ ಕೊಡುವಾಗ ಆ ಭಗವಂತನು "ಓ ವಿಪ್ರೋತ್ತಮಾ! ನೀನು ಈ ಅಸ್ತ್ರದಿಂದ ಬೇರೆ ಎಲ್ಲ ಅಸ್ತ್ರಗಳನ್ನೂ ನಿಗ್ರಹಿಸಬಹುದು. ಈ ಅಸ್ತ್ರಗ್ರಹಣದಿಂದ ನಿನ್ನ ತೇಜಸ್ಸು ಹೆಚ್ಚುವುದು" ಎಂದು ಹೇಳಿ, ಅಂತರಿಕ್ಷಮಾರ್ಗವಾಗಿ ಅದೃಶ್ಯನಾದನು. ಆ ನಾರಾಯಣಾಸ್ತ್ರವು ನನ್ನ ತಂದೆಯಿಂದ ನನಗೆ ಲಭಿಸಿದೆ. ಆದರಿಂದ ಈಗ ನಾನು ಇಂದ್ರನು ದೈತ್ಯರನ್ನು ಹೇಗೋ ಹಾಗೆ, ಪಾಂಡವ, ಪಾಂಚಾಲ, ಮಾತ್ಸ್ಯ, ಕೇಕಯರನ್ನೆಲ್ಲ ಬಡಿದೋಡಿಸುವೆನು. ಆ ಅಸ್ತ್ರಮಹಿಮೆಯಿಂದ ನೀನು ಯಾವಯಾವ ರೀತಿಯಲ್ಲಿ ಬಯಸಿದರೆ, ಆಯಾ ರೀತಿಯಲ್ಲಿ ಬಾಣಗಳು ಹೊರಟು ಶತ್ರುಗಳಮೇಲೆ ಬಿದ್ದು ಕೊಲ್ಲುವುವು. ಈ ಅಸ್ತ್ರಬಲದಿಂದ ನಾನು ಇಷ್ಟಪಟ್ಟರೆ, ರಣರಂಗದಲ್ಲಿ ಯಥೇಷ್ಟವಾದ ಕಲ್ಮಳೆಯನ್ನು ಕರೆಯಬಹುದು! ಉಕ್ಕಿನ ಮೂತಿಯುಳ್ಳ ಪಕ್ಷಿಗಳನ್ನು ಬಿಟ್ಟು ಮಹಾರಥರನ್ನು ಓಡಿಸಬಹುದು! ನಾನು ಇಷ್ಟಪಟ್ಟಂತೆ ಕತ್ತಿ, ಕೊಡಲಿ ಮುಂತಾದ ಆಯುಧಗಳನ್ನೆಲ್ಲ ಇದರಿಂದ ವರ್ಷಿಸಬಹುದು! ಈ ನಾರಾಯಣಾಸ್ತ್ರದಿಂದ ನಿಸ್ಸಂಶಯವಾಗಿ ಪಾಂಡವರನ್ನು ಸೇರಿಸಿ ನಿನ್ನ ಶತ್ರುಗಳನ್ನೆಲ್ಲಾ ಧ್ವಂಸಮಾಡಬಲ್ಲೆನು. ಮಿತ್ರದ್ರೋಹಿಯೂ, ಗುರುದ್ರೋಹಿಯೂ, ಮೂರ್ಖನೂ, ನಿಂದಿತನೂ, ಆದ ಆ ಪಾಂಚಾಲಾಧಮನು, ಇನ್ನು ನನ್ನಿಂದ ಬದುಕಿಹೋಗಲಾರನು" ಎಂದನು. ಅಶ್ವತ್ಥಾಮನ ಈ ವೀರವಾಕ್ಯಗಳನ್ನು ಕೇಳಿ, ಕೌರವಸೈನ್ಯಕ್ಕೆಲ್ಲ ತಿರುಗಿ ಸ್ವಲ್ಪ ಧೈರ್ಯವುಂಟಾಗಿ, ಯುದ್ಧಕ್ಕಾಗಿ ಹಿಂತಿರುಗಿತು. ಯುದ್ಧಾರಂಭಸೂಚಕಗಳಾದ ಶಂಖ, ಭೇರಿ, ಡಿಂಡಿಮಾದಿ ವಾದ್ಯಗಳು ಸಾವಿರಾರು ಕಡೆಗಳಿಂದ ಮೊಳಗಿದುವು. ಕುದುರೆಗಳ ಗೊರಸಲಿನ ಮತ್ತು ರಥಚಕ್ರಗಳ ಧ್ವನಿಯು ರಣಭೂಮಿಯನ್ನೆಲ್ಲ ಆವರಿಸಿತು. ಹೀಗೆ ಕೌರವಸೈನ್ಯದಿಂದ ಹೊರಟ ಯುದ್ಧೋತ್ಸಾಹದ ಘೋಷವು ಮೇಘದ

ಗುಡುಗಿನಂತೆ, ಭೂವ್ಯೋಮಾಕಾಶಗಳನ್ನೆಲ್ಲ ವ್ಯಾಪಿಸಿತು. ಈ ಶಬ್ದವು ಪಾಂಡವರ ಕಿವಿಗೆ ಬಿದ್ದಿತು. ಆಗ ಪಾಂಡವರು ತಮ್ಮೊಳಗೆ ಒಂದಾಗಿ ಸೇರಿ, ಮಂತ್ರಾಲೋಚನೆಮಾಡತೊಡಗಿದರು. ಧೃತರಾಷ್ಟ್ರಮಹಾರಾಜಾ! ಇತ್ತಲಾಗಿ ಅಶ್ವತ್ಥಾಮನು ನಿನ್ನ ಮಗನೊಡನೆ ತನ್ನ ಮುಂದಿನ ಕಾರ್ಯವನ್ನು ತಿಳಿಸಿದೊಡನೆ, ಆಚಮನಮಾಡಿ ಬಂದು, ನಾರಾಯಣನಾಮಕವಾದ ಆ ದಿವ್ಯಾಸ್ತ್ರವನ್ನು ಅಭಿಮಂತ್ರಿಸಿದನು.

ಇದು ನೂರ ತೊಂಭತ್ತಾರನೆಯ ಅಧ್ಯಾಯವು.

ಕೌರವಸೈನ್ಯದಲ್ಲಿ ಉಂಟಾದ ಕೋಲಾಹಲವನ್ನು ಕೇಳಿ, ಯುಧಿಷ್ಠಿರನು ಕಾರಣವನ್ನು ಕೇಳಿದುದು. ಅರ್ಜುನನು ಆಚಾರ್ಯವಧದಲ್ಲಿ ಭಾಗಿಗಳಾದ ಧೃಷ್ಟದ್ಯುಮ್ನನನ್ನೂ ಯುಧಿಷ್ಠಿರನನ್ನೂ ನಿಂದಿಸಿದುದು.

ರಾಜಾ! ಅಶ್ವತ್ಥಾಮನು ನಾರಾಯಣಾಸ್ತ್ರವನ್ನು ಸಂಧಿಸಿದೊಡನೆ, ಸುತ್ತಲೂ ಮಹತ್ತಾದ ವಿಪರೀತಗಳು ಕಂಡುಬಂದುವು. ಮೋಡವಿಲ್ಲದೆ ಆಕಾಶದಿಂದ ಬಿರುಗಾಳಿಯೊಡನೆ ಮಳೆಯು ಸುರಿಯಿತು. ಭೂಮಿಯು ನಡುಗಿತು! ಸಮುದ್ರವು ಕಲಗಿತು! ಸಮುದ್ರದಕಡೆಗೆ ಹರಿಯುತಿದ್ದ ನದೀಪ್ರವಾಹಗಳು ಹಿಮ್ಮೊಗವಾದುವು. ಪರ್ವತಶಿಖರಗಳು ಭೇದಿಸಿದುವು. ಪಾಂಡವಸೇನೆಗೆ ಅನಿಷ್ಟಸೂಚಕವಾಗಿ, ಮೃಗಗಳು ಅದರ ಎಡಗಡೆಯಿಂದ ಬಂದುವು. ಅಂಧಕಾರವುಂಟಾಯಿತು! ಸೂರ್ಯನ ಕಾಂತಿಯು ಕಂದಿತು! ಮಾಂಸಾಹಾರಿಜಂತುಗಳು ಸಂತೋಷದಿಂದ ಸುತ್ತಲೂ ಮುತ್ತಿದುವು. ಈ ಉತ್ಪಾತಗಳನ್ನು ನೋಡಿ, ದೇವ ದಾನವ ಗಂಧರ್ವರೆಲ್ಲರೂ, "ಮುಂದೆ ಹೇಗೆ? ಮುಂದೆಹೇಗೆ?" ಎಂದು ಭಯಾಕುಲರಾಗಿದ್ದರು. ರಾಜರೆಲ್ಲ ಭಯಗ್ರಸ್ತರಾಗಿ ತತ್ತಳಿಸುತ್ತಿದ್ದರು. ಹೀಗೆ ದ್ರೋಣಪುತ್ರನ ಮಹಾಭಯಂಕರವಾದ ಅಸ್ತ್ರವು ಜಗತ್ತನ್ನೆಲ್ಲ ಉಲ್ಲೋಲಕಲ್ಲೋಲವಾಗಿ ಮಾಡಿತು" ಎಂದನು. ಆಗ ಧೃತರಾಷ್ಟ್ರನು "ಸಂಜಯಾ! ಪಿತೃವಧದಿಂದ ದುಃಖಾಕ್ರೋಶವಶನಾದ ದ್ರೋಣಪುತ್ರನು ನಮ್ಮ ಸೈನ್ಯಗಳನ್ನು ತಿರುಗಿಸಿದಮೇಲೆ,

ಆತ್ತಲಾಗಿ ಪಾಂಡವರು ಧೃಷ್ಟದ್ಯುಮ್ನನ ರಕ್ಷಣೆಗಾಗಿ ಮಾಡಿದ ಆಲೋಚನೆಯೇನು?" ಎಂದನು.

ಸಂಜಯನು "ರಾಜಾ! ದ್ರೋಣವಧವನ್ನು ನೋಡಿ ಭಯದಿಂದೋಡಿದ ಸೈನ್ಯದಲ್ಲಿ, ತಿರುಗಿ ದೊಡ್ಡ ಕೋಲಾಹಲವೆದ್ದುದನ್ನು ಕೇಳಿ, ಯುಧಿಷ್ಠಿರನು ಭಯಗ್ರಸ್ತನಾಗಿ, "ಧನಂಜಯಾ! ಧೃಷ್ಟದ್ಯುಮ್ನನು ದ್ರೋಣನನ್ನು ಕೊಂದಮೇಲೆ ಕೌರವರು ತಮ್ಮ ಜಯದಲ್ಲಿ ಆಶೆಯನ್ನೇ ಬಿಟ್ಟು, ತಾವು ಬದುಕಿದರೆ ಸಾಕೆಂದು ಓಡಿದರು. ಆಗ ಅನೇಕ ರಥಿಕರು ತಮ್ಮ ರಥಾಶ್ವಗಳೆಲ್ಲ ಸತ್ತು, ಛತ್ರ, ಧ್ವಜ, ಪತಾಕೆ, ಮೂಕಿ, ನೊಗಗಳೆಲ್ಲ ಮುರಿದುದರಿಂದ, ಅಲ್ಲಲ್ಲಿ ಸಿಕ್ಕಿದ ಬೇರೆ ರಥಗಳನ್ನೇರಿ ಓಡಿ ಹೋದರು. ಕೆಲವರು ಕಾಲ್ನಡೆಯಿಂದಲೇ ಓಡಿದರು. ಕೆಲವರು ಸಾರಥಿಯಿಲ್ಲದ ರಥಗಳಲ್ಲಿ ಕುಳಿತು, ತಾವೇ ಕುದುರೆಗಳನ್ನು ಹೊಡೆದೋಡಿಸುತ್ತ ಪಲಾಯನ ಮಾಡಿದರು, ಇರಿಚಿ, ನೊಗ, ಚಕ್ರ ಮುಂತಾದುವು ಮುರಿದುಹೋದ ರಥಗಳನ್ನೇ ಕುದುರೆಗಳು ಸಿಕ್ಕಿದಕಡೆಗೆ ಎಳೆದುಕೊಂಡುಹೋದುವು. ಅಶ್ವಯೋಧರು ತಾವು ಕುಳಿತ ಆಸನವು ಜಾರಿಹೋದುದನ್ನೂ ತಿಳಿಯದೆ, ಕುದುರೆಗಳು ಸ್ವೇಚ್ಛೆಯಿಂದ ಹೋದಕಡೆಗೆ ಸಾಗಿಸಲ್ಪಡುತ್ತಿದ್ದರು. ಗಜಾರೂಢರು ತಮ್ಮ ಆನೆಗಳು ಎಳೆದುಕೊಂಡು ಹೋಗುತ್ತಿದ್ದಕಡೆಗೆ ಹೋಗುತ್ತಿದ್ದರು. ಆನೇಕರು ಕವಚಗಳು ಹರಿದು, ಶಸ್ತ್ರಗಳು ಮುರಿದು ತಮ್ಮ ವಾಹನಗಳಿಂದ ಕೆಳಗೆ ಬಿದ್ದರು. ಭಯದಿಂದೋಡುತ್ತಿರುವಾಗ ಎಷ್ಟೋಮಂದಿ, ರಥಚಕ್ರಗಳ ಮತ್ತು ಆನೆಕುದುರೆಗಳ ಕಾಲುಗಳ ಕೆಳಗೆ ಸಿಕ್ಕಿ ಅರೆಯಲ್ಪಟ್ಟರು. ಅಲ್ಲಲ್ಲಿ ಕೆಲವರು "ಹಾ ಪುತ್ರಾ! ಹಾ ತಾತಾ" ಎಂದು ಕೂಗುತ್ತ, ಆ ಮಹಾಭಯದಲ್ಲಿ ಮುಂದೆ ನಿಂತವರನ್ನೂ ಕಾಣದೆ ಓಡಿದರು. ಕೆಲವರು ಯುದ್ಧದಲ್ಲಿ ಗಾಯಪಟ್ಟ ಪುತ್ರ ಮಿತ್ರ ಸಹೋದರರನ್ನೂ, ಪಿತೃಗಳನ್ನೂ ಎತ್ತಿಕೊಂಡುಹೋಗಿ, ಅವರ ಕವಚಗಳನ್ನೆಲ್ಲ ಮೆಲ್ಲಗೆ ಕಳಚಿ, ಅವರ ಮೇಲೆ ನೀರನ್ನು ಚಿಮುಕಿಸುತ್ತಿದ್ದರು. ಹೀಗೆ ನೂರುಸಹಸ್ರಸಂಖ್ಯೆಯಿಂದ ಕೌರವಯೋಧರೆಲ್ಲ ಪಲಾಯನಮಾಡಿಬಿಟ್ಟರಲ್ಲವೆ? ದ್ರೋಣನು ಹತನಾದೊಡನೆ ದುರವಸ್ಥೆಗೀಡಾಗಿ ಓಡಿಹೋದ ಕೌರವಸೈನ್ಯವೆಲ್ಲಾ ತಿರುಗಿ

ಇಷ್ಟು ಉತ್ಸಾಹದಿಂದ ಹಿಂತಿರುಗಿ ಬಂದು ಕೂಗಿಡುವುದೇಕೆ? ಇಷ್ಟು ಬೇಗನೆ ಅದನ್ನು ಹಿಂತಿರುಗಿಸಿದ ಧೀರನಾರು? ನಿನಗೆ ತಿಳಿದಿದ್ದರೆ ಹೇಳು. ಅದೋ! ಆ ಕಡೆಯಿಂದ ಕುದುರೆಗಳ ಕೂಗು, ಆನೆಗಳ ಗರ್ಜನೆ, ರಥನೇಮಿಧ್ವನಿ, ಭಟರ ಕೋಲಾಹಲಗಳು, ಇವೆಲ್ಲ ಒಂದಾಗಿ ಸೇರಿ, ಬಾರಿಬಾರಿಗೂ ನಮ್ಮ ಹೃದಯವನ್ನು ನಡುಗಿಸುತ್ತ, ಮೈಯಲ್ಲಿ ರೋಮಾಂಚವನ್ನು ಹುಟ್ಟಿಸುತ್ತಿದೆ. ಮೇಲೆಮೇಲೆ ಅವರ ಕೋಲಾಹಲವು ಹೆಚ್ಚುತ್ತಿದೆ. ಈಗ ಆ ಸೈನ್ಯಗಳನ್ನು ಹಿಂತಿರುಗಿಸಿಕೊಂಡು ಬರತಕ್ಕ ವೀರನು, ಇಂದ್ರನೊಡಗೂಡಿದ ತ್ರೈಲೋಕ್ಯವನ್ನೇ ನುಂಗಿಬಿಡುವಂತೆ ತೋರುವುದು. ವಜ್ರಧಾರಿಯಾದ ಇಂದ್ರನ ಭಯಂಕರವಾದ ಆರ್ಭಟವೇ ಇದಾಗಿರಬಹುದೆ? ಧನಂಜಯಾ! ಆಚಾರ್ಯನಾದ ಆ ದ್ರೋಣನ ವಧವನ್ನು ನೋಡಿ, ಇಂದ್ರನೇ ಸಹಿಸಲಾರದೆ, ಕೌರವಪಕ್ಷವನ್ನು ವಹಿಸಿ ನಮ್ಮನ್ನಿದಿರಿಸುವುದಕ್ಕಾಗಿ ಬರುವನೋ? ನಮ್ಮ ಆನೆಕುದುರೆಗಳೆಲ್ಲ ಭಯದಿಂದ ತತ್ತಳಿಸುತ್ತಿವೆ! ಇಷ್ಟು ಕೋಲಾಹಲಕ್ಕೆ ಕಾರಣವೇನು? ಕೌರವಸೈನ್ಯಕ್ಕೆ ಬೆಂಬಲವಾಗಿ ಬಂದು, ಅವುಗಳನ್ನು ಹಿಂತಿರುಗಿಸಿದ ಮಹಾರಥನಾರು?" ಎಂದನು. ಅದಕ್ಕಾ ಅರ್ಜುನನು "ಅಣ್ಣಾ! ನೀನು ಹೇಳಿದುದು ವಾಸ್ತವವೇ! ಕೌರವರು ತಿರುಗಿ ಉತ್ಸಾಹಗೊಂಡು ಶಂಖಧ್ವನಿಗಳನ್ನು ಮಾಡುವರು. ಅವರು ಯಾರ ಪರಾಕ್ರಮವನ್ನು ಆಶ್ರಯಿಸಿ ಹೀಗೆ ಧೈರ್ಯಗೊಂಡಿರುವರೆಂಬುದನ್ನೂ ನಾನು ಬಲ್ಲೆನು. ಅವನು ನಮ್ಮ ಆಚಾರ್ಯಪುತ್ರನು! ಅವನು ಮಹಾಬಾಹು! ಮದದಾನೆಯಂತೆ ಗಂಭೀರವಾದ ನಡೆಯುಳ್ಳವನು! ಲಜ್ಜಾಶೀಲನು! ವೀರ್ಯದಲ್ಲಿ ಇಂದ್ರವಿಷ್ಣುಗಳಿಗೂ, ಕೋಪದಲ್ಲಿ ಯಮನಿಗೂ, ಬುದ್ಧಿಯಲ್ಲಿ ಬೃಹಸ್ಪತಿಗೂ ಸಮಾನನು. ಮಹಾರಥನೂ, ನೀತಿಜ್ಞನೂ, ಉಗ್ರಕರ್ಮಿಯೂ ಆದ ಅಶ್ವತ್ಥಾಮನು, ಕೌರವರಿಗೆ ಅಭಯವನ್ನು ಕೊಟ್ಟು ಕರೆತರುತ್ತಿರುವನು. ಯಾವನ ಜನನಕಾಲದಲ್ಲಿ ದ್ರೋಣನು ಉತ್ತಮ ಬ್ರಾಹ್ಮಣರಿಗೆ ಸಹಸ್ರ ಗೋವುಗಳನ್ನು ದಾನಮಾಡಿದನೋ, ಅಂತಹ ಅಶ್ವತ್ಥಾಮನ ಗರ್ಜನೆಯೇ ಇದು. ಹುಟ್ಟಿದೊಡನೆ ಉಚ್ಚೈಶ್ರವಸ್ಸಿನ ಕೂಗಿನಂತೆ ಕೂಗಿ, ಅಶ್ವತ್ಥಾಮನೆಂದು ಪ್ರಖ್ಯಾತಿಗೊಂಡ ಗುರುಪುತ್ರನು ಗರ್ಜಿಸುತ್ತಿರುವನು. ಅವನು ಹುಟ್ಟಿದಾಗ ಕೂಗಿದ ಕೂಗಿನಿಂದ ಭೂಮಿಯೆಲ್ಲಾ ನಡುಗಿತು.

ತ್ರೈಲೋಕ್ಯಗಳೂ ತತ್ತರಿಸಿದುವು. ಆ ಧ್ವನಿಯನ್ನು ಕೇಳಿ ಅದೃಶ್ಯವಾದ ಯಾವುದೋ ಮಹಾಭೂತವೊಂದು ಅವನಿಗೆ "ಅಶ್ವತ್ಥಾಮ"ನೆಂದು ಹೆಸರಿಟ್ಟು ಕರೆಯಿತು. ಆ ಅಶ್ವತ್ಥಾಮನೇ ಈಗ ಗರ್ಜಿಸುತ್ತಿರುವನು. ಅಣ್ಣಾ! ವಿವೇಕಹೀನನಾದ ಆ ಧೃಷ್ಟದ್ಯುಮ್ನನ ಕೈಗೆ ಸಿಕ್ಕಿ, ಅನಾಥನಂತೆ ಕ್ರೂರಕಾರ್ಯದಿಂದ ವಧಿಸಲ್ಪಟ್ಟ ಆಚಾರ್ಯನಿಗೆ ಇವನು ಈಗ ನಾಥನಾಗಿ ಬಂದಿರುವನು. ಈ ಧೃಷ್ಟದ್ಯುಮ್ನನು ತನ್ನ ತಂದೆಯ ತಲೆಕೂದಲಿಗೆ ಕೈಯಿಕ್ಕಿದ ಕ್ರೂರಕಾರ್ಯವನ್ನು ಅಶ್ವತ್ಥಾಮನು ಎಂದಿಗೂ ಸಹಿಸಲಾರನು. ಆ ಧೃಷ್ಟದ್ಯುಮ್ನನೊಡನೆ ಸೇರಿಸಿ, ಅಶ್ವತ್ಥಾಮನು ಈಗ ನಮ್ಮೆಲ್ಲರನ್ನೂ ಧ್ವಂಸಮಾಡದೆ ಬಿಡನೆಂದು ನನಗೆ ತೋರಿರುವುದು. ಅವನು ತನ್ನ ಪರಾಕ್ರಮವನ್ನು ಚೆನ್ನಾಗಿ ಬಲ್ಲನು. ಅಣ್ಣಾ! ಅವೆಲ್ಲ ಹಾಗಿರಲಿ! ಧರ್ಮಜ್ಞನೆಂದು ಪ್ರಸಿದ್ಧಿಗೊಂಡ ನೀನೂ ಕೂಡ, ರಾಜ್ಯದಾಸೆಗಾಗಿ ಸುಳ್ಳಾಡಿ, ಗುರುವನ್ನೇ ವಂಚಿಸಿದೆ! ಬಹಳ ಅಧರ್ಮವನ್ನು ಮಾಡಿದೆ! ಹಿಂದೆ ವಾಲಿವಧದಿಂದ ಶ್ರೀರಾಮನಿಗೆ ಹೇಗೋಹಾಗೆ, ಈ ದ್ರೋಣವಧದಿಂದ ನಿನಗೆ ಮೂರುಲೋಕದಲ್ಲಿಯೂ ದೊಡ್ಡ ಅಪಕೀರ್ತಿಯು ಸ್ಥಿರವಾಗಿ ನಿಂತಿತು. ಆ ಆಚಾರ್ಯನು ನಿನ್ನ ವಿಷಯದಲ್ಲಿ ಎಷ್ಟೋ ಗೌರವವನ್ನಿಟ್ಟು 'ಇವನು ಸಮಸ್ತಧರ್ಮಗಳನ್ನೂ ಬಲ್ಲವನು! ನನಗೆ ಪ್ರಿಯಶಿಷ್ಯನು! ಇವನ ಬಾಯಿಂದ ಸುಳ್ಳುಮಾತು ಹೊರಡದು'' ಎಂದು ನಿನ್ನಲ್ಲಿ ಪೂರ್ಣವಾದ ನಂಬಿಕೆಯನ್ನಿಟ್ಟು ನಿನ್ನನ್ನು ಕೇಳಿದಾಗ, ಮೇಲೆಮಾತ್ರ ಸತ್ಯವೆಂಬ ಕಂಚುಕವನ್ನು ಹೊದೆದ ನೀನು, ಆ ಆಚಾರ್ಯನಮುಂದೆ ಸುಳ್ಳುಸುಳ್ಳಾಗಿ ಅಶ್ವತ್ಥಾಮನ ವಧವನ್ನು ತಿಳಿಸಿದೆ. ಕೊನೆಗೆ ಅವನಿಗೆ ತಿಳಿಯದಂತೆ ಕುಂಜರಶಬ್ದವನ್ನು ನುಡಿದು ಅವನನ್ನು ವಂಚಿಸಿದೆ. ಅದರಮೇಲೆ ಅವನು ದುಃಖವಶನಾಗಿ ವೈರಾಗ್ಯವನ್ನು ಹಿಡಿದು, ಶಸ್ತ್ರವನ್ನು ಕೆಳಗಿಟ್ಟನು. ಇದನ್ನು ನೀನೂ ಕಣ್ಣಾರೆ ನೋಡಿದೆ. ಪುತ್ರವತ್ಸಲನಾದ ಆತನನ್ನು ನೀನು ದುಃಖಕ್ಕೀಡಾಗುವಂತೆ ಮಾಡಿದೆ! ನಿನ್ನ ಶಾಶ್ವತಧರ್ಮವನ್ನು ಮರೆತು, ಶಿಷ್ಯನಾದ ನೀನೇ ಗುರುಹತ್ಯೆಗೆ ಕಾರಣನಾದೆ. ಶಸ್ತ್ರತ್ಯಾಗಮಾಡಿದ ಗುರುವನ್ನು ಅಧರ್ಮದಿಂದ ಕೊಲ್ಲಿಸಿದ ನೀನು ಈಗ ನಿನಗೆ ಸಹಾಯಕನಾದ ಧೃಷ್ಟದ್ಯುಮ್ನನನ್ನು ಹೇಗೆ ರಕ್ಷಿಸಿಕೊಳ್ಳುವೆಯೋ ನೋಡುವೆನು. ನಿನಗೆ

ಶಕ್ತಿಯಿದ್ದರೆ ಅಶ್ವತ್ಥಾಮನಿಂದ ಧೃಷ್ಟದ್ಯುಮ್ನನನ್ನು ರಕ್ಷಿಸು. ಈಗ ನಾವು ಯಾರೂ ಆ ಧೃಷ್ಟದ್ಯುಮ್ನನನ್ನು ರಕ್ಷಿಸಿಕೊಳ್ಳಲಾರೆವು. ಅತಿಮಾನುಷ ಪ್ರಭಾವವುಳ್ಳವನಾದರೂ, ಸಮಸ್ತ ಭೂತಗಳಲ್ಲಿಯೂ ಸೌಹಾರ್ದವನ್ನು ಬಯಸುತ್ತಿದ್ದ ಆ ಅಶ್ವತ್ಥಾಮನು, ಈಗ ತನ್ನ ತಂದೆಗುಂಟಾದ ಕೇಶಗ್ರಹಣ ರೂಪವಾದ ಅಪಮಾನವನ್ನು ಕೇಳಿ, ನಮ್ಮನ್ನೆಲ್ಲಾ ದಹಿಸದೆ ಬಿಡನು. ಅಯ್ಯೋ! ನಾನು ಎಷ್ಟೋ ವಿಧದಿಂದ "ಬೇಡ! ಬೇಡ!"ವೆಂದು ಕೂಗಿದರೂ, ಧರ್ಮವನ್ನೂ ಯೋಚಿಸದೆ, ಶಿಷ್ಯನೆನಿಸಿದವನೇ ಗುರುವನ್ನು ಕೊಂದನು. ಅಣ್ಣಾ! ನಮಗೋ ವಯಸ್ಸು ಕಳೆದುಹೋಯಿತು. ಇನ್ನು ನಾವು ಬದುಕಿರುವ ಕಾಲವು ಸ್ವಲ್ಪವೇ! ಈ ಸ್ಥಿತಿಯಲ್ಲಿ ನೀನು ದೊಡ್ಡ ಅಧರ್ಮವನ್ನು ನಡೆಸಿದೆ! ಯಾವನು ನಮ್ಮಲ್ಲಿ ತಂದೆಯಂತೆ ಪ್ರೇಮವನ್ನಿಟ್ಟಿದ್ದನೋ, ಧರ್ಮರೀತಿಯಿಂದಲೂ ಯಾವನು (ನಮಗೆ ಗುರುವಾದುದರಿಂದ) ತಂದೆಯೆನಿಸಿದನೋ, ಅಂತವನನ್ನು ನೀನು ಈ ಸ್ವಲ್ಪಕಾಲದ ರಾಜ್ಯದಾಸೆಗಾಗಿ ಕೊಲ್ಲಿಸಿದೆ! ಆ ಧೃತರಾಷ್ಟ್ರನು ಅನೇಕ ಪುತ್ರರನ್ನು ಪಡೆದಿದ್ದರೂ, ಭೂಮಂಡಲವನ್ನೆಲ್ಲಾ ಆ ಭೀಷ್ಮನಿಗಾಗಿಯೂ, ದ್ರೋಣನಿಗಾಗಿಯೂ ಒಪ್ಪಿಸಿ, ಅವರಿಗೆ ವಿಧೇಯನಾಗಿದ್ದನು. ಹೀಗೆ ಧೃತರಾಷ್ಟ್ರನಿಂದಲೂ ಸತ್ಕೃತನಾಗಿ, ಲೋಕಕ್ಕೆಲ್ಲ ಪೂಜ್ಯನೆನಿಸಿದ್ದ ಆ ದ್ರೋಣನು, ತನ್ನ ಮಗನಿಗಿಂತಲೂ ನನ್ನನ್ನೇ ಮೇಲೆಂದು ಎಲ್ಲರೊಡನೆ ಹೇಳುತ್ತಿದ್ದನು. ಆ ದ್ರೋಣನು ಶಸ್ತ್ರತ್ಯಾಗಮಾಡಿ ಸಾಯುವಾಗಲೂ, ಕೂಡ, ನನ್ನನ್ನೂ ನಿನ್ನನ್ನೂ ನೋಡುತ್ತಲೇ ಪ್ರಾಣವನ್ನು ಬಿಟ್ಟನು! ಅಣ್ಣಾ! ಅವನು ಶಸ್ತ್ರಧಾರಿಯಾಗಿ ಯುದ್ಧಕ್ಕೆ ನಿಂತರೆ ಇಂದ್ರನಾದರೂ ಅವನನ್ನು ಕೊಲ್ಲಲಾರನು. ಅಂತಹ ಆಚಾರ್ಯನೂ, ವೃದ್ಧನೂ, ನಮಗೆ ನಿತ್ಯೋಪಕಾರಿಯೂ ಆಗಿದ್ದ ಆ ಮಹಾತ್ಮನನ್ನು ಲೋಭಬುದ್ಧಿಯುಳ್ಳ ನಾವು ರಾಜ್ಯಕ್ಕಾಗಿ ಕೊಲ್ಲಿಸಿದಂತಾಯಿತು. ಹಾ ಕಷ್ಟವೆ? ನಾವು ಮಹತ್ತಾದ ಪಾಪವನ್ನು ಮಾಡಿದಂತಾಯಿತು. ರಾಜ್ಯಕ್ಕಾಗಿ ನಾವು ಆ ವೃದ್ಧಬ್ರಾಹ್ಮಣನನ್ನು ಕೊಲ್ಲಿಸಿದೆವು. ಆ ಆಚಾರ್ಯನು ನನ್ನ ವಿಷಯದಲ್ಲಿ ಎಷ್ಟೋ ಪ್ರೇಮದಿಂದಿದ್ದನು. ಅವನು ಯಾವಾಗಲೂ ನನ್ನನ್ನು ಕುರಿತು, "ಈ ಅರ್ಜುನನು ನನಗಾಗಿ ಪುತ್ರರನ್ನಾದರೂ, ಪಿತೃಗಳನ್ನಾದರೂ, ಸಹೋ

ದರರನ್ನಾದರೂ, ಪತ್ನಿಯರನ್ನಾದರೂ, ಕೊನೆಗೆ ತನ್ನ ಜೀವವನ್ನಾದರೂ ಬಿಡತಕ್ಕವ ''ನೆಂದು ತಿಳಿದಿದ್ದನು. ರಾಜ್ಯದಾಸೆಯುಳ್ಳ ನಾನು, ಅಂತಹ ಮಹಾತ್ಮನ ವಧವನ್ನು ಕಣ್ಣಿಂದ ನೋಡುತ್ತ ಉಪೇಕ್ಷಿಸಿದಂತಾಯಿತು. ರಾಜಾ! ಇದರಿಂದ ನಾನು ತಲೆಕೆಳಗಾಗಿ ನರಕದಲ್ಲಿ ಬೀಳುವೆನು. ಬ್ರಾಹ್ಮಣನೂ, ವೃದ್ಧನೂ, ಆಚಾರ್ಯನೂ, ಮಹಾತಪಸ್ವಿಯೂ ಆದ ಆ ಮಹಾತ್ಮನಿಂದ ಶಸ್ತ್ರತ್ಯಾಗಮಾಡಿಸಿ, ರಾಜ್ಯಕ್ಕಾಗಿ ಅವನನ್ನು ಕೊಲ್ಲಿಸಿದ ನಾವು ಬದುಕಿರುವುದಕ್ಕಿಂತಲೂ ಸಾಯುವುದೇ ಮೇಲಲ್ಲವೆ?" ಎಂದನು.

ಇದು ನೂರ ತೊಂಭತ್ತೇಳನೆಯ ಅಧ್ಯಾಯವು.

ಯುಧಿಷ್ಠಿರನನ್ನು ನಿಂದಿಸಿದ ಅರ್ಜುನನಮೇಲೆ ಭೀಮನ ಆಕ್ರೋಶವು. ಧೃಷ್ಟದ್ಯುಮ್ನನು ಕೋಪದಿಂದ ಅರ್ಜುನನ ಮಾತನ್ನು ಖಂಡಿಸಿ, ತಾನು ನಡೆಸಿದುದೇ ಸರಿಯೆಂದು ವಾದಿಸಿದುದು.

ಮಹಾರಾಜಾ! ಅರ್ಜುನನ ಮಾತನ್ನು ಕೇಳಿ ಅಲ್ಲಿದ್ದ ಮಹಾರಥರಾರೂ ಬಾಯೆತ್ತದೆ ಸುಮ್ಮನಿದ್ದರು. ಅರ್ಜುನನಿಗೆ ಅನುಕೂಲವಾಗಿಯೋ, ಪ್ರತಿಕೂಲವಾಗಿಯೋ ಬಾಯೆತ್ತಲು ಯಾರಿಗೂ ಧೈರ್ಯವಿರಲಿಲ್ಲ. ಆದರೆ ಭೀಮನಿಗೆಮಾತ್ರ ಅರ್ಜುನನ ಮಾತು ದುಸ್ಸಹವಾಯಿತು. ಆಗ ಅರ್ಜುನನನ್ನು ಖಂಡಿಸುತ್ತ, "ಅರ್ಜುನಾ! ನೀನು ಕ್ಷತ್ರಿಯನಾಗಿದ್ದು, ಅರಣ್ಯವಾಸಿಯಾದ ಋಷಿಯಂತೆ ಧರ್ಮವನ್ನು ಹೇಳುವುದಕ್ಕೆ ಉಪಕ್ರಮಿಸಿದೆ. ಹಿಂಸಾಕಾರ್ಯವಿಮುಖನಾಗಿ ಕಠಿನವ್ರತವನ್ನು ಹಿಡಿದ ವೈದಿಕಬ್ರಾಹ್ಮಣನಂತೆ ಮಾತನಾಡುತ್ತಿರುವೆ. ಇದು ಕ್ಷತ್ರಿಯಧರ್ಮವಲ್ಲ! ಇತರರನ್ನು ಕಷ್ಟದಿಂದ ತಪ್ಪಿಸಬೇಕು. ಯುದ್ಧದಿಂದ ಜೀವಿಸಬೇಕು. ಸಾಧುಗಳ ಮತ್ತು ಸ್ತ್ರೀಯರ ವಿಷಯದಲ್ಲಿ ಕ್ಷಮೆಯನ್ನು ತೋರಿಸಬೇಕು! ಅಂತಹ ಕ್ಷತ್ರಿಯನಿಗೆಮಾತ್ರವೇ ರಾಜ್ಯವೂ, ಧರ್ಮವೂ, ಯಶಸ್ಸೂ, ಸಂಪತ್ತೂ ಕೂಡಿಬರುವುವು. ನೀನು ಎಲ್ಲಾ ಕ್ಷತ್ರಿಯಗುಣಗಳಿಂದ ಕೂಡಿ, ಕ್ಷತ್ರಿಯಕುಲವನ್ನುದ್ಧರಿಸತಕ್ಕವನಾಗಿದ್ದು, ಏನೂ ತಿಳಿಯದ ಅಜ್ಞನಂತೆ ಹೀಗೆ ಮಾತಾಡು

ವುದು ಚೆನ್ನಾಗಿ ತೋರುವುದಿಲ್ಲ. ನೀನು ಪರಾಕ್ರಮದಲ್ಲಿ ಇಂದ್ರನಿಗೆ ಎಣೆಯೆನಿಸಿದವನು. ಸಮುದ್ರವು ತನ್ನ ವೇಲೆಯನ್ನು ಹೇಗೋ ಹಾಗೆ ಸ್ವಧರ್ಮವನ್ನು ಮೀರಿಹೋಗದವನು. ಅರ್ಜುನಾ! ಕಳೆದ ಹದಿಮೂರುವರ್ಷಗಳಲ್ಲಿ ನೀನು ನಿನ್ನ ಕೋಪವನ್ನು ಅಡಗಿಸಿಟ್ಟು, ಧರ್ಮವನ್ನೇ ಅನುಸರಿಸುತ್ತಿದ್ದುದು ಸಾಲದೆ? ಅದಕ್ಕಾಗಿ ನಿನ್ನನ್ನು ಯಾರುತಾನೇ ಗೌರವಿಸದಿರುವರು? ಇತ್ತೀಚೆಗೆ ನಿನ್ನ ಮನಸ್ಸು ಭಾಗ್ಯವಶದಿಂದ ಸ್ವಧರ್ಮವಾದ ಕ್ಷತ್ರಧರ್ಮದಲ್ಲಿ ಪ್ರವರ್ತಿಸಿತು. ನೀನು ಕ್ಷತ್ರಿಯನಾದರೂ ಅದೃಷ್ಟವಶದಿಂದ ನಿನ್ನ ಬುದ್ಧಿಯು ಅಹಿಂಸೆಯಲ್ಲಿಯೇ ಇರುವುದು. ಆದರೆ, ಅದೇ ಅಹಿಂಸಾಧರ್ಮವನ್ನು ಯಾವಾಗಲೂ ಎಲ್ಲೆಲ್ಲಿಯೂ ಉಪಯೋಗಿಸಬಾರದು. ಧರ್ಮಪ್ರವೃತ್ತನಾಗಿದ್ದ ನಿನ್ನ ರಾಜ್ಯವನ್ನು ಶತ್ರುಗಳು ಅಧರ್ಮದಿಂದ ಅಪಹರಿಸಿದರು. ನಿನ್ನ ಸಾಧುತ್ವವನ್ನೇ ತಮಗೆ ಅನುಕೂಲವೆಂದು ಭಾವಿಸಿ, ಶತ್ರುಗಳು ನಮ್ಮ ಪತ್ನಿಯಾದ ದ್ರೌಪದಿಯನ್ನು ರಾಜಸಭೆಗೆ ಸೆಳೆತಂದರು. ನಾವು ನಾರ್ಮಡಿಯನ್ನುಟ್ಟು ಕಾಡಿನಲ್ಲಿ ಅಲೆಯುವಂತೆ ಮಾಡಿದರು. ಕಷ್ಟಕ್ಕೆ ಯೋಗ್ಯರಲ್ಲದ ನಾವು ಹದಿಮೂರು ವರ್ಷಗಳವರೆಗೆ ಅಂತಹ ಕಷ್ಟಕ್ಕೆ ಗುರಿಮಾಡಲ್ಪಟ್ಟೆವು. ಸತ್ಯಧರ್ಮನಿರತರಾದ ನಾವು ಶತ್ರುಗಳ ಎಷ್ಟೋ ಅಪರಾಧಗಳನ್ನೆಲ್ಲ ಸಹಿಸಿದುದಾಯಿತು. ಮಿತಿಮೀರಿ ಹೋಗತಕ್ಕ ಆ ಶತ್ರುಗಳ ಮಹಾಪರಾಧಗಳನ್ನು ನೀನೂ ಇದುವರೆಗೆ ಸಹಿಸಿದೆ. ನೀನು ಕ್ಷತ್ರಿಯನಾಗಿದ್ದು ಇಷ್ಟು ಅಪರಾಧಗಳನ್ನು ಕ್ಷಮಿಸಿದುದೇ ಹೆಚ್ಚು. ಇನ್ನುಮೇಲೆ ನಾನು ಅದನ್ನು ಸಹಿಸಲಾರೆನು. ನಮ್ಮ ರಾಜ್ಯವನ್ನು ಅಪಹರಿಸಿದ ಆ ಶತ್ರುಗಳನ್ನು ಅವರ ಸಮಸ್ತಪರಿವಾರಗಳೊಡನೆ ನಾನು ಕೊಂದುಬರುವೆನು. ಅರ್ಜುನಾ! ಮೊದಲು ಯುದ್ಧಕ್ಕೆ ಹೊರಡುವಾಗ ನೀನೇ ನಮ್ಮನ್ನೆಲ್ಲ ಹುರಿಗೊಳಿಸಿ, ನಮ್ಮ ಶಕ್ತಿಮೀರಿ ಯುದ್ಧಮಾಡಬೇಕೆಂದು ಬಾಯಿಂದ ಹೇಳಿದವನಲ್ಲವೆ? ಈಗ ಅದೇಕಾರ್ಯದಲ್ಲಿ ನಾವು ಪ್ರವರ್ತಿಸಿದರೆ, ನಮ್ಮನ್ನು ನಿಂದಿಸುವೆ! ನಿನ್ನ ಸ್ವಧರ್ಮವೇನೆಂಬುದನ್ನೂ ನೀನು ತಿಳಿಯಲಿಲ್ಲ. ಬಾಯಿಯಲ್ಲಿಮಾತ್ರ ಮಾತನಾಡುವಂತಿದೆ. ಈಗಿನ ವಿಪರೀತಗಳನ್ನೆಲ್ಲ ನೋಡಿ ಮೊದಲೇ ಭಯಪಟ್ಟಿರತಕ್ಕ ನಮ್ಮನ್ನು ನೀನು ಮರ್ಮೋದ್ಘಾಟಕವಾದ ಮಾತುಗಳಿಂದ ಮತ್ತಷ್ಟು ಪೀಡಿಸುತ್ತ, ಉರಿಯುವ ಹುಣ್ಣಿಗೆ ಉಪ್ಪನ್ನು

ತಿಕ್ಕುವೆ! ನಿನ್ನ ಮಾತುಗಳು ಶಲ್ಯದಂತೆ ನನ್ನ ಹೃದಯವನ್ನು ಭೇದಿಸುತ್ತಿವೆ. ನೀನು ಧಾರ್ಮಿಕನೆನಿಸಿದ್ದು "ನಮಗೆ ಧರ್ಮವಾವುದು? ಅಧರ್ಮವಾವು" ದೆಂಬುದನ್ನು ತಿಳಿಯದೆಹೋದೆ. ಈಗ ನಡೆದ ಕಾರ್ಯದಲ್ಲಿ ಪ್ರಶಂಸೆಗೆ ಪಾತ್ರರಾದ ನಮ್ಮನ್ನೂ ನಿರಾಕರಿಸಿ, ಆ ಅಶ್ವತ್ಥಾಮನನ್ನೇ ಪ್ರಶಂಸೆಮಾಡುತ್ತಿರುವೆ. ಈ ಕೃಷ್ಣನಿಗಿದಿರಾಗಿಯೇ ನೀನು ಹೀಗೆ ಹೇಳುವುದು ಸರಿಯಲ್ಲ. ಧನಂಜಯಾ! ಆ ದ್ರೋಣಪುತ್ರನು ನಿನ್ನ ಹದಿನಾರನೆಯ ಒಂದು ಪಾಲಿಗೂ ಸಮಾನನಲ್ಲ. ಅವನನ್ನು ತೂಗಿಟ್ಟು, ನಿನ್ನಲ್ಲಿ ನೀನೇ ಕೊರತೆಗಳನ್ನು ಹೇಳಿಕೊಳ್ಳುವುದಕ್ಕೆ ನಿನಗೆ ನಾಚಿಕೆಯಿಲ್ಲವೆ? ನಾನೂಕೂಡ ಹತ್ತುಸಾವಿರ ಆನೆಗಳಿಗೆ ಸಮಾನವಾದ ಬಾಹುಬಲವುಳ್ಳವನೆಂಬುದು ನಿನಗೆ ತಿಳಿಯದೆ? ನಾನು ಕೋಪಿಸಿದರೆ ಈ ಭೂಮಿಯನ್ನೆಲ್ಲ ಭೇದಿಸಬಲ್ಲೆನು! ಪರ್ವತಗಳನ್ನೆಲ್ಲ ಕಿತ್ತೆಸೆಯಬಲ್ಲೆನು! ಇದೋ! ಚಿನ್ನದ ಕಟ್ಟುಳ್ಳ ಈ ನನ್ನ ಗದೆಯನ್ನು ಕೈಯಲ್ಲಿ ಹಿಡಿದುಕೊಂಡರೆ, ಬೆಟ್ಟದಂತಿರುವ ವೃಕ್ಷಗಳನ್ನೆಲ್ಲ ಬಿರುಗಾಳಿಯಂತೆ ಮುರಿದು ಕೆಡಹಬಲ್ಲೆನು. ಇಂದ್ರಾದಿ ದೇವಗಣಗಳನ್ನೆಲ್ಲ ಬಾಣಗಳಿಂದ ಓಡಿಸಬಲ್ಲೆನು! ದೈತ್ಯ ದಾನವ ಮಾನವ ರಾಕ್ಷಸಗಣಗಳನ್ನು ಧ್ವಂಸಮಾಡಬಲ್ಲೆನು. ಹೀಗಿರುವಾಗ ಆ ದ್ರೋಣಪುತ್ರನನ್ನು ತೋರಿಸಿ ನನ್ನನ್ನು ನೀನು ಬೆದರಿಸುತ್ತಿರುವೆ. ಈ ಬೆದರಿಕೆಗೆಲ್ಲಾ ನಾನು ಹೆದರುವವನಲ್ಲ. ಓ ಭೀಭತ್ಸೂ! ನಿನಗೆ ಇಷ್ಟವಿಲ್ಲದಿದ್ದರೆ, ನಿನ್ನ ಇತರ ಸಹೋದರರೊಡನೆ ನೀನು ಇಲ್ಲಿ ಸುಮ್ಮನೆ ನೋಡುತ್ತಿರು. ನಾನೊಬ್ಬನೇ ಗದಾಪಾಣಿಯಾಗಿ ಹೋಗಿ ಆ ದ್ರೋಣಪುತ್ರನನ್ನು ಕೊಂದುಬರುವೆನು" ಎಂದನು. ಭೀಮನ ಮಾತನ್ನು ಕೇಳಿ ಧೃಷ್ಟದ್ಯುಮ್ನನಿಗೂ ಮನಸ್ಸು ರೇಗಿತು. ಆಗ ಅವನು ಅರ್ಜುನನನ್ನು ನೋಡಿ "ಧನಂಜಯಾ! ಬ್ರಾಹ್ಮಣರಿಗೆ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹಗಳೆಂಬ ಷಟ್ಕರ್ಮಗಳು ವಿಹಿತವಾಗಿರುವುವು ಈ ಆರು ಕರ್ಮಗಳಲ್ಲಿ ದ್ರೋಣನು ಯಾವುದನ್ನುತಾನೇ ನಡೆಸುತ್ತಿದ್ದನು? ಅವನನ್ನು ಹೇಗೆತಾನೆ ಬ್ರಾಹ್ಮಣನೆನ್ನಬಹುದು? ಅಂತಹ ದ್ರೋಣನನ್ನು ನಾನು ಕೊಂದೆನೆಂದು ನನ್ನನ್ನೇಕೆ ನಿಂದಿಸುವೆ? ಸ್ವಧರ್ಮವನ್ನು ಬಿಟ್ಟು ವಿಧರ್ಮವನ್ನು ಅವಲಂಬಿಸಿದ ಆತನು ಅಧರ್ಮದಿಂದಲೇ ಹತನಾದನು. ಕ್ಷುದ್ರಕಾರ್ಯಗಳಲ್ಲಿ ಪ್ರವ

ರ್ತಿಸಿ ನಮ್ಮನ್ನು ಕೊಲ್ಲುವುದಕ್ಕಾಗಿ ತಂತ್ರಗಳನ್ನೆಲ್ಲ ಮಾಡಿ, ನಾಮಮಾತ್ರಕ್ಕೆಬ್ರಾಹ್ಮಣನೆನಿಸಿಕೊಂಡ ಆತನಿಗೆ ತಕ್ಕ ಪ್ರತಿಮಾಯೆಯನ್ನು ಮಾಡಿ ನಾನು ಅವನನ್ನು ಕೊಂದರೆ, ಅದರಲ್ಲಿ ಅನ್ಯಾಯವೇನಿರುವುದು? ನಾನು ಪ್ರತಿಗೆ ಪ್ರತಿ ಮಾಡಿದೆನು. ತಂದೆಯ ವಧದಿಂದ ದುಃಖವಶನಾಗಿ ಆ ದ್ರೋಣಪುತ್ರನು ಬರೀ ಗರ್ಜನೆಗಳನ್ನು ತೋರಿಸುವುದೇನೂ ಆಶ್ಚರ್ಯವಲ್ಲ. ಅವನಿಗೆ ಈ ಗರ್ಜನೆಯೊಂದೇ ಫಲವು. ಅವನೇನೋ ಕೌರವರನ್ನು ಕಾಪಾಡಿಕೊಳ್ಳಲಾರನು. ಬರೀ ಆರ್ಭಟಗಳನ್ನು ತೋರಿಸುತ್ತಿರುವ ಅವನು, ನನ್ನ ಕೈಯಿಂದ ಸಾಯುವುದಕ್ಕಾಗಿಯೇ ಬರುತ್ತಿರುವನೆಂದು ತಿಳಿ. ಅವನಿಂದ ಇನ್ನಷ್ಟು ಮಂದಿ ಕೌರವರು ಸಾಯುವರು. ನಾನು ಬ್ರಾಹ್ಮಣನನ್ನು ಕೊಂದೆನೆಂದು ಹೇಳುವೆಯಲ್ಲವೆ? ನಾನು ಹುಟ್ಟಿದುದೇ ಅದಕ್ಕೆ! ನನ್ನ ತಂದೆಯು ಆ ದ್ರೋಣವಧಕ್ಕಾಗಿಯೇ ಅಗ್ನಿಮುಖದಿಂದ ನನ್ನನ್ನು ಪಡೆದನು. ಯಾವನು ಕಾರ್ಯಾಕಾರ್ಯಗಳ ತಾರತಮ್ಯವನ್ನೂ ಎಣಿಸದೆ, ನಮ್ಮನ್ನು ಕೊಲ್ಲುವುದಕ್ಕೆ ಬಂದನೋ. ಅವನನ್ನು ನೀನು ಬ್ರಾಹ್ಮಣನೆಂದು ಹೇಳುವೆಯಾ? ಅಥವಾ ಕ್ಷತ್ರಿಯನೆಂದು ಹೇಳುವೆಯಾ? ಯಾವನು ಕೋಪವಶನಾಗಿ ಅಸ್ತ್ರಗಳನ್ನು ತಿಳಿಯದವರನ್ನೆಲ್ಲ ಬ್ರಹ್ಮಾಸ್ತ್ರದಿಂದ ಕೊಲ್ಲಲಾರಂಭಿಸಿದನೋ ಅಂತವನು ಸರ್ವೋಪಾಯಗಳಿಂದಲೂ ವಧ್ಯನಲ್ಲವೆ? ಇಷ್ಟುಮಾತ್ರವಲ್ಲ! ನನ್ನ ತಂದೆಯನ್ನು ವಧಿಸಿದವನು ನನಗೆ ವಧ್ಯನಲ್ಲವೇ? ಪಾಪಬುದ್ಧಿಯಿಂದ ನನ್ನ ಬಂಧುಗಳನ್ನೆಲ್ಲ ಈಗಿನ ಯುದ್ಧದಲ್ಲಿ ಕೊಂದು, ಹೆಸರಿಗೆ ಮಾತ್ರ ಬ್ರಾಹ್ಮಣನೆನಿಸಿಕೊಂಡ ಅಂತಹ ಪಾಪಾತ್ಮನನ್ನು ಕೊಂದರೆ ನನಗೆ ಪಾಪವೇನಿರುವುದು? ಸ್ವಧರ್ಮವನ್ನು ಬಿಟ್ಟುಹೋದ ವಿಧರ್ಮಿಗಳ ಜೀವನವು ವಿಷಸಮಾನವೆಂದು ವಿದ್ವಾಂಸರು ಹೇಳುವರು. ಧರ್ಮಾರ್ಥತತ್ವಗಳನ್ನೆಲ್ಲ ತಿಳಿದ ನೀನೇ ಅವನ ವಧೆಗಾಗಿ ನನ್ನನ್ನು ನಿಂದಿಸುವುದುಚಿತವೇ? ಘಾತುಕನಾದ ಆ ಬ್ರಾಹ್ಮಣಾಧಮನನ್ನು ಕೊಂದುದಕ್ಕಾಗಿ ನೀನು ನನ್ನನ್ನು ಪ್ರಶಂಸೆಮಾಡಬೇಕಾಗಿರುವಾಗ ನಿಂದಿಸುತ್ತಿರುವೆ? ಕಾಲಾಗ್ನಿಗೂ, ಸೂರ್ಯನಿಗೂ, ವಿಷಕ್ಕೂ ಸಮಾನವೆನಿಸಿ, ಭಯಂಕರವಾದ ಆ ದ್ರೋಣನ ತಲೆಯನ್ನು ನಾನು ಕೆಡಹಿದುದಕ್ಕಾಗಿ ನೀನು ನನ್ನನ್ನು ಪ್ರಶಂಸೆಮಾಡಬೇಕು. ಮುಖ್ಯವಾಗಿ ಆ ದ್ರೋಣನು ನನ್ನ ಬಂಧುಗಳನ್ನೇ ವಿಶೇಷವಾಗಿ ಕೊಂದಿ

ರುವನು. ಬೇರೆಯುವರನ್ನಲ್ಲ. ಅವನ ತಲೆಯನ್ನು ನಾನು ಕತ್ತರಿಸಿದರೂ, ನನ್ನ ಮನಸ್ಸಿನ ಕೋಪವು ಇನ್ನೂ ಆರಲಿಲ್ಲ. ನೀನು ಜಯದ್ರಥನ ತಲೆಯನ್ನು ಹಾರಿಸಿದಂತೆ, ದ್ರೋಣನ ತಲೆಯನ್ನು ನಾನು ಬೇಡರ ಗುಂಪಿನಲ್ಲಿ ಕೆಡಹದೆ ಹೋದುದಕ್ಕಾಗಿ ಪರಿತಪಿಸುವೆನು. ಶತ್ರುಗಳನ್ನು ಕೊಲ್ಲದೆಬಿಡುವುದೇ ಕ್ಷತ್ರಿಯನಿಗೆ ಅಧರ್ಮವು. ಶತ್ರುಗಳನ್ನು ಕೊಲ್ಲಬೇಕು. ಅಥವಾ ನಾನು ಸಾಯಬೇಕು. ಇದೇ ಕ್ಷತ್ರಿಯರಿಗೆ ಧರ್ಮವು. ಅರ್ಜುನಾ! ನಿನ್ನ ತಪ್ಪನ್ನು ತಿಳಿಯದೆ ನನ್ನಲ್ಲಿ ದೋಷವನ್ನು ಹೇಳುವೆ? ನಿನ್ನ ತಂದೆಗೆ ಪರಮ ಮಿತ್ರನೆನಿಸಿದ್ದ ಭಗದತ್ತನನ್ನು ನೀನು ಕೊಂದುದು ಧರ್ಮವು! ನನ್ನ ತಂದೆಯನ್ನು ವಧಿಸಿದ ನನ್ನ ಶತ್ರುವನ್ನು ನಾನು ಕೊಂದುದು ಅಧರ್ಮವೋ! ಎಂದಿಗೂ ಇಲ್ಲ. ನೀನು ನಿನಗೆ ಯಾವಾಗಲೂ ಹಿತಚಿಂತಕನಾದ ನಿನ್ನ ಪಿತಾಮಹನನ್ನೇ ಕೊಂದವನಲ್ಲವೆ? ಅದನ್ನು ನೀನು ಧರ್ಮವೆಂದು ತಿಳಿದಿರುವೆ. ನನ್ನ ಶತ್ರುವನ್ನು ನಾನು ಕೊಂದಾಗ ಅದನ್ನು ಅಧರ್ಮವೆಂದು ಹೇಳುವೆ! ಧನಂಜಯಾ! ಬಂಧುತ್ವದ ದಾಕ್ಷಿಣ್ಯಕ್ಕಾಗಿ ತಗ್ಗಿಹೋಗುತ್ತಿರುವ ನನ್ನನ್ನು ಕುರಿತು ನೀನು ಹೀಗೆ ಮಾತಾಡಬಾರದು. ತನ್ನ ಮೈಯನ್ನೇ ಏರುವ ಮೆಟ್ಟಲನ್ನಾಗಿ ಮಾಡಿ ಕುಳಿತಿರುವ ಆನೆಯನ್ನು, ಕಾಲಿಂದ ಮೆಟ್ಟಿ ಮೇಲೇರುವಂತೆ, ನಾನು ತಗ್ಗಿಹೋದಷ್ಟು ನೀನು ನನ್ನನ್ನು ಅವಮಾನಿಸುತ್ತಿರುವೆ. ನನ್ನ ತಂಗಿಯಾದ ದ್ರೌಪದಿಯನ್ನೂ, ಅವಳ ಮಕ್ಕಳನ್ನೂ ನೋಡಿ ನಾನು ಈ ನಿನ್ನ ಅಧಿಕೋಕ್ತಿಗಳನ್ನೆಲ್ಲ ಮನ್ನಿಸುತ್ತಿರುವೆನೇಹೊರತು ಬೇರೆ ಕಾರಣದಿಂದಲ್ಲ! ನಿನ್ನ ಆಚಾರ್ಯನೊಡನೆ ನನಗೆ ವೈರವು ಕುಲಕ್ರಮಾಗತವೆಂಬುದನ್ನು ಈ ಲೋಕವೇ ಬಲ್ಲುದು. ಪಾಂಡವರಾದ ನಿಮಗೆ ಅದು ತಿಳಿಯದೆಹೋಯಿತೆ? ಅರ್ಜುನಾ! ದ್ರೋಣನನ್ನು ಕೊಲ್ಲುವ ವಿಷಯದಲ್ಲಿ ನಿನ್ನಣ್ಣನು ಅನೃತವಾದಿಯೂ ಅಲ್ಲ! ನಾನು ಧರ್ಮವನ್ನು ಬಿಟ್ಟುಹೋದವನೂ ಅಲ್ಲ! ಯುದ್ಧಕ್ಕೆ ಬಂದವನು ತಂದೆಯಾದರೇನು? ಗುರುವಾದರೇನು? ತನ್ನನ್ನು ಕೊಲ್ಲುವುದಕ್ಕಾಗಿ ಬರುವವನು ತಂದೆಯಾಗಿರಲಿ, ಗುರುವಾಗಿರಲಿ ಅವನನ್ನು ನ್ಯಾಯವಾಗಿಯೋ ವಕ್ರಮಾರ್ಗದಿಂದಲೋ ಕೊಂದೇ ತೀರಬೇಕು. ಹಾಗೆ ಮಾಡದವನು ಕ್ಷತ್ರಿಯನೆಂದು ಹೇಳಿಸಿಕೊಳ್ಳಲು ಯೋಗ್ಯನಲ್ಲ. ಮೊದಲೇ ಬ್ರಹ್ಮನು ಕ್ಷತ್ರಿಯಧರ್ಮ

ವನ್ನು ಹೀಗೆಂದು ವಿಧಿಸಿರುವನು. ಅದರಂತೆ ನನ್ನ ಗುರುವಾಗಿದ್ದರೂ, ಆ ಬ್ರಾಹ್ಮಣಾಧಮನನ್ನು ನಾನು ಕೊಲ್ಲಬೇಕಾಯಿತು. ಕ್ಷತ್ರಿಯಕುಮಾರ ನೆನಿಸಿದವನು ತನಗೆ ಅಹಿತನಾದ ತಂದೆಯನ್ನಾಗಲಿ, ಗುರುವನ್ನಾಗಲಿ, ಕೊಂದೇತೀರಬೇಕು. ಅವನೇ ಕ್ಷತ್ರಿಯನೆನಿಸುವನು. ಶಿಷ್ಯದ್ರೋಹಿ ಯಾದ ಆ ಪಾಪಾತ್ಮನು ನನ್ನಿಂದ ಹತನಾದನು. ಇದಕ್ಕೆ ನೀನೇಕೆ ಚಿಂತಿ ಸುವೆ? ಹೊರಡು! ಯುದ್ಧಮಾಡು! ಇನ್ನುಮೇಲೆ ಜಯವು ನಿನ್ನದು!" ಎಂದನು.

ಇದು ಇನ್ನೂರ ತೊಂಭತ್ತೆಂಟನೆಯ ಅಧ್ಯಾಯವು.



{ ಸಾತ್ಯಕಿ ಧೃಷ್ಟದ್ಯುಮ್ನರು ಒಬ್ಬರನ್ನೊಬ್ಬರು ನಿಂದಿಸಿದು ದು. ಧೃಷ್ಟದ್ಯುಮ್ನನನ್ನು ಕೊಲ್ಲುವುದಕ್ಕಾಗಿ ಗದೆಯ ನ್ನೆತ್ತಿಕೊಂಡುಬಂದ ಸಾತ್ಯಕಿಯನ್ನು ಕೃಷ್ಣಪ್ರೇರಣೆ ಯಿಂದ ಭೀಮನು ನಿವಾರಿಸಿದುದು. ತಿರುಗಿ ಕೌರವಪಾಂಡವರ ಯುದ್ಧಾರಂಭವು. }

ಆಗ ಧೃತರಾಷ್ಟ್ರನು "ಸಂಜಯಾ! ದ್ರೋಣನು ವಿಧ್ಯುಕ್ತವಾಗಿ ಎಲ್ಲಾ ವೇದಗಳನ್ನೂ ಸಾಂಗವಾಗಿ ಅಧ್ಯಯನ ಮಾಡಿದವನು! ಲಜ್ಜಾ ಶೀಲನು! ಅವನಲ್ಲಿ ಧನುರ್ವೇದವು ಸಾಕ್ಷಾತ್ತಾಗಿ ನೆಲೆಗೊಂಡಿರುವುದು. ಆ ಧನುರ್ವೇದದ ಪ್ರಭಾವದಿಂದ ಯುದ್ಧದಲ್ಲಿ ದೇವ ದಾನವ ಮಾನವ ರಿಗೆ ಸಾಧ್ಯವಲ್ಲದ ಅತಿಮಾನುಷಕಾರ್ಯಗಳನ್ನು ನಡೆಸಿದನು. ಪಾಪಿಯಾದ ಧೃಷ್ಟದ್ಯುಮ್ನನು ಎಲ್ಲಾ ವೀರರಮುಂದೆ ದ್ರೋಣನಮೇಲೆ ಪಾಪ ಕಾರ್ಯವನ್ನು ನಡೆಸಿದನು. ಅದಕ್ಕಾಗಿ ಯಾರೂ ಚಿಂತಿಸುವಹಾಗಿಲ್ಲ. ಮುಖ್ಯವಾಗಿ ಕ್ಷಾತ್ರಧರ್ಮವನ್ನು ಸುಡಬೇಕು! ಕೋಪವನ್ನು ಸುಡ ಬೇಕು! ಪಾಂಡವರೂ, ಧನುರ್ಧಾರಿಗಳಾದ ಇತರ ರಾಜರೂ, ಆ ಧೃಷ್ಟದ್ಯು ಮ್ನನು ಆಡಿದ ಮಾತಿನಮೇಲೆ ಏನೇನು ಹೇಳಿದರು?" ಎಂದನು. ಅದಕ್ಕಾ ಸಂಜಯನು "ರಾಜಾ! ಕ್ರೂರಕರ್ಮಿಯಾದ ಧೃಷ್ಟದ್ಯುಮ್ನನ ಮಾತನ್ನು ಕೇಳಿ ಎಲ್ಲಾ ರಾಜರೂ ಬಾಯೆತ್ತದೆ ಸುಮ್ಮನಿದ್ದರು. ಅರ್ಜುನನುಮಾತ್ರ

ಅವನ ಕಠಿನವಾಕ್ಯಕ್ಕಾಗಿ ಮನನೊಂದು, ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು, ದೀರ್ಘಶ್ವಾಸವನ್ನು ಬಿಟ್ಟು, ವಕ್ರದೃಷ್ಟಿಯಿಂದ ಆ ಧೃಷ್ಟದ್ಯುಮ್ನನನ್ನು ನೋಡಿ "ಛೀ! ಛೀ!" ಎಂದುಮಾತ್ರ ಹೇಳಿ ಸುಮ್ಮನಾದನು. ಯುಧಿಷ್ಠಿರನೂ, ಭೀಮನೂ, ನಕುಲಸಹದೇವರೂ, ಕೃಷ್ಣನೂ ಲಜ್ಜೆಯಿಂದ ತಲೆಬಗ್ಗಿಸಿ ನಿಂತಿದ್ದರು. ಆಗ ಸಾತ್ಯಕಿಯೊಬ್ಬನುಮಾತ್ರ ತನ್ನ ಕೋಪವನ್ನು ತಡೆಯಲಾರದೆ, ಧೃಷ್ಟದ್ಯುಮ್ನನನ್ನು ನೋಡಿ "ಆಹಾ! ಬಾಯಿಗೆಬಂದಹಾಗೆ ಹರಟುತ್ತಿರುವ ಈ ಪಾಪಿ ನರಾಧಮನನ್ನು ಕೊಲ್ಲುವವರು ಇಲ್ಲಿ ಯಾರೂ ಇಲ್ಲದೆ ಹೋದರೆ? ಈ ಪಾಂಡವರು ನಿನ್ನ ಪಾಪಕೃತ್ಯವನ್ನು ನಿನಗೆ ತಿಳಿಸಲು, ಬ್ರಾಹ್ಮಣರು ಚಂಡಾಲನನ್ನು ಹೇಗೋ ಹಾಗೆ ನಿನ್ನನ್ನು ಸುಮ್ಮನೆ ನಿಂದಿಸುತ್ತಿರುವರು. ಎಲ ನೀಚಾ! ಲೋಕಕ್ಕೆಲ್ಲ ನಿಂದಿತವಾದ ಈ ಪಾಪಕಾರ್ಯವನ್ನು ಮಾಡಿಯೂ ನೀನು ಈ ರಾಜಸಭೆಯಲ್ಲಿ ಲಜ್ಜೆಯಿಲ್ಲದೆ ಬಗುಳುತ್ತಿರುವೆ! ದೈನ್ಯದಿಂದ ಮೊರೆಯಿಡುತ್ತಿರುವ ಗುರುವನ್ನು ಕೊಂದು, ಅದನ್ನು ಧರ್ಮಯುಕ್ತವೆಂದೇ ಹೇಳುತ್ತಿರುವ ನಿನ್ನ ನಾಲಗೆಯೂ, ನಿನ್ನ ತಲೆಯೂ ಸಹಸ್ರಭಾಗವಾಗಿ ಭೇದಿಸಿಹೋಗದಿರುವುದಲ್ಲಾ? ಪಾಂಡವರು, ಅಂಧಕರು, ವೃಷ್ಣಿಗಳು, ಎಲ್ಲರೂ ನಿನ್ನನ್ನು ನಿಂದಿಸುತ್ತಿರುವರು. ಲೋಕಕ್ಕೆಲ್ಲ ನಿಂದಿತವಾದ ಪಾಪಕಾರ್ಯವನ್ನು ಮಾಡಿ ನೀನು, ಈ ಜನರಮುಂದೆ ನಿನ್ನನ್ನು ಹೊಗಳಿಕೊಳ್ಳುವೆ. ಅಂತಹ ಅಕಾರ್ಯವನ್ನು ಮಾಡಿಬಂದುದಲ್ಲದೆ, ಆ ನಿನ್ನ ಗುರುವನ್ನೂ ಈಗ ನಿಂದಿಸತಕ್ಕ ನೀನು ಈಕ್ಷಣವೇ ವಧಾರ್ಹನು. ನೀನು ಇನ್ನು ಒಂದು ಮುಹೂರ್ತಕಾಲದವರೆಗೆ ಜೀವಿಸಿರುವುದೂ ಯೋಗ್ಯವಲ್ಲ. ಸಾಧುವಾಗಿಯೂ, ಮಹಾತ್ಮನಾಗಿಯೂ ಇರುವ ಸ್ವಂತಗುರುವಿನ ತಲೆಕೂದಲನ್ನು ಹಿಡಿದು, ಅವನನ್ನು ನೀನು ವಧಿಸಿದೆ! ಇಂತಹ ಮಹಾಪಾಪವನ್ನು ಲೋಕದಲ್ಲಿ ಯಾವ ನೀಚನುತಾನೇ ಮಾಡುವನು? ಈ ಪಾಪದಿಂದ ನಿನ್ನ ಹಿಂದುಮುಂದಿನ ಏಳುತಲೆಮೊರೆಯವರೂ ನಿನ್ನ ದೆಸೆಯಿಂದ ನರಕದಲ್ಲಿ ಮುಳುಗುವಂತಾಯಿತು. ಕುಲಗೇಡಿಯಾದ ನೀನು ಹುಟ್ಟಿದುದರಿಂದ, ಅವರ ವಂಶದ ಕೀರ್ತಿಯೇ ಅಳಿಸಿಹೋಯಿತು. ಭೀಷ್ಮನ ಮರಣಕ್ಕಾಗಿ ಅರ್ಜುನನಮೇಲೆ ನೀನು ದೋಷವನ್ನಾರೋಪಿಸಿದೆ! ಮಹಾತ್ಮನಾದ ಆ ಭೀಷ್ಮನು ಆ ವಿಧವಾದ

ರಣವನ್ನು ತಾನಾಗಿಯೇ ಬಯಸಿದನು. ಅವನನ್ನು ಆ ಸ್ಥಿತಿಗೆ ತಂದ
ೂ ಅರ್ಜುನನಲ್ಲ. ಆ ಕಾರ್ಯವನ್ನು ಮಾಡಿದವನೂ ನಿನ್ನ ಒಡಹು
ದ ಆ ಶಿಖಂಡಿಯೇ. ನಿನ್ನಂತೆ ಅವನೂ ಮಹಾಪಾಪಿ! ಇವನ್ನೆಲ್ಲ
ೋಡುವಾಗ, ಈ ಭೂಮಿಯಲ್ಲಿ ಪಾಂಚಾಲಪುತ್ರರಿಗಿಂತಲೂ ಪಾಪಕಾರ್ಯಕ್ಕೆ
ಜದವನು ಬೇರೊಬ್ಬನಿಲ್ಲ. ನಿನ್ನ ತಂದೆಯು ಎಷ್ಟೋ ತಪಸ್ಸನ್ನು
ಡಿ, ದ್ರೋಣವಧಕ್ಕಾಗಿ ನಿನ್ನನ್ನೂ, ಭೀಷ್ಮವಧಕ್ಕಾಗಿ ಶಿಖಂಡಿಯನ್ನೂ
ಿಸಿಟ್ಟನು. ಮುಖ್ಯವಾಗಿ ಪಾಂಚಾಲರ ಹುಟ್ಟೇ ಅತಿನೀಚವಾದುದು.
ರು ಮಿತ್ರದ್ರೋಹಿಗಳು! ಗುರುದ್ರೋಹಿಗಳು! ಧರ್ಮಭ್ರಷ್ಟರು!
ಹೋದರರಾದ ನಿಮ್ಮಿಬ್ಬರಿಂದ ಪಾಂಚಾಲಕುಲವೇ ಸಾಧುಗಳ ಧಿಕ್ಕಾರಕ್ಕೆ
ತ್ರವಾಯಿತು. ಎಲ ಪಾಂಚಾಲಾಧಮಾ! ನನ್ನಿದಿರಿಗೆ ಇನ್ನುಮೇಲೆ
ತಹ ಮಾತು ನಿನ್ನ ಬಾಯಿಂದ ಹೊರಟರೆ, ಇದೋ ಈ ಗದೆಯಿಂದ
ನ್ನ ತಲೆಯನ್ನು ಆಕ್ಷಣವೇ ಭೇದಿಸಿಬಿಡುವೆನು. ಎಲ! ಪಾಪೀ! ಬ್ರಹ್ಮ
ತ್ಯೆಮಾಡಿದ ನಿನ್ನನ್ನು ನೋಡಿದಾಗ, ಜನರು ಆ ಪಾಪಪ್ರಾಯಶ್ಚಿತ್ತಕ್ಕಾಗಿ
ಕನೆ ಸೂರ್ಯನನ್ನು ನೋಡುವರು. ಎಲ ದುಷ್ಟ ಪಾಂಚಾಲಾ! ನನ್ನ
ಂದೆಯೇ ನನ್ನ ಗುರುವನ್ನೂ (ಅರ್ಜುನನನ್ನು), ನನ್ನ ಗುರುವಿನ ಗುರು
ನ್ನೂ ಬಾರಿಬಾರಿಗೂ ಧಿಕ್ಕರಿಸುತ್ತಿರುವ ನಿನಗೆ ನಾಚಿಕೆಯಿಲ್ಲವೆ? ನೀಚಾ!
ಲ್ಲು! ನಿಲ್ಲು! ಇದೋ ಈ ನನ್ನ ಗದಾಪ್ರಹಾರವನ್ನು ತಡೆದು ನಿಲ್ಲು!
ೋಡುವೆನು. ನಿನಗೆ ಶಕ್ತಿಯಿದ್ದರೆ, ನೀನೂ ನಿನ್ನ ಗದೆಯನ್ನು ಹಿಡಿದು
ಲ್ಲು" ಎಂದನು. ಸಾತ್ಯಕಿಯು ಈ ಪರುಷೋಕ್ತಿಯನ್ನು ಕೇಳಿ ಧೃಷ್ಟ
ುಮ್ನನಿಗೆ ಅತ್ಯಾಕ್ರೋಶವುಂಟಾಯಿತು. ಆಗ ಅವನು ಕೋಪದಿಂದ
ಟ್ಟಹಾಸಮಾಡಿ ನಗುತ್ತ "ಎಲಾ! ನಿನ್ನ ಮಾತುಗಳನ್ನೆಲ್ಲ ನಾನು ಕೇಳಿ
ಳಿ ಸಹಿಸಿಕೊಂಡಿರುವೆನೆಂದು ನೀನು ಸಿಕ್ಕಿದಂತೆ ಅವಾಚ್ಯವಾದ ಮಾತುಗ
ನ್ನೆಲ್ಲ ಹೇಳುತ್ತಿರುವೆ. ಸಾಧುವಾದ ಪುರುಷನನ್ನು ಅಲ್ಪನಾದವನು ಹೀಗೆ
ರಸ್ಕರಿಸುವುದೇನೂ ಆಶ್ಚರ್ಯವಲ್ಲ. ಲೋಕದಲ್ಲಿ ತಾಳ್ಮೆಯೆಂಬುದೇನೋ
ಶಸ್ತವೇ! ಆದರೆ ಪಾಪಿಯಾದವನು ಕ್ಷಮೆಗೆ ಯೋಗ್ಯನಲ್ಲ! ಪಾಪಾತ್ಮನು
ಮೆಯುಳ್ಳವನನ್ನು ತನಗೆ ಸೋತನೆಂದು ತಿಳಿಯುವನು. ಕ್ಷುದ್ರನೂ,
ಪಿಯೂ ಆದ ನಿನ್ನ ವಿಷಯದಲ್ಲಿ, ನಖಾಗ್ರದಿಂದ ಕೇಶಪರ್ಯಂತವಾಗಿ

ಎಷ್ಟೋ ದೋಷಗಳನ್ನು ಎತ್ತಿಹೇಳಬಹುದು. ಅಂತಹ ನೀನು ಇತರರನ್ನು ದೂಷಿಸುವೆ. ಎಲ ಪಾಪೀ! ನೀನು ಬದುಕಿರುವುದಕ್ಕಿಂತ ಸಾಯುವುದೇ ಮೇಲು! ನಿನ್ನ ಬುದ್ಧಿಯನ್ನು ನೋಡಿದರೆ, ನಿನ್ನ ಅಪವಾದ ಕಾರಣವನ್ನು ಕೇಳುವುದಕ್ಕೂ ನಿನ್ನ ಮನಸ್ಸಿಗೆ ಸಹನವಿಲ್ಲ. ನಿನ್ನಂತೆ ನೀಚಾಚಾರವುಳ್ಳವರು ತಮ್ಮ ದೋಷವನ್ನು ತಾವು ತಿಳಿಯದೆ, ಇತರರಲ್ಲಿ ದೋಷಾರೋಪಣೆಮಾಡಿ ಧಿಕ್ಕರಿಸುವುದು ಸಹಜವೇ! ಹಿಂದೆ ಈ ಅರ್ಜುನನು ಭೂರಿಶ್ರವಸ್ಸಿನ ತೋಳು ಗಳನ್ನು ಕತ್ತರಿಸಿದಮೇಲೆ, ಅವನು ಶಸ್ತ್ರವನ್ನು ಬಿಟ್ಟು, ಪ್ರಾಯೋಪವೇಶದಲ್ಲಿ ರುವಾಗ, ಬೇಡಬೇಡವೆಂದು ನಿನ್ನನ್ನು ಎಷ್ಟೋ ಜನಗಳು ತಡೆದರೂ ನೀನು ಅವನನ್ನು ಕೊಲ್ಲಲಿಲ್ಲವೆ? ಅದಕ್ಕಿಂತಲೂ ಪಾಪಕಾರ್ಯವೇನಿರುವುದು? ನಾನು ಹಾಗಲ್ಲ! ದ್ರೋಣನು ನನ್ನಮೇಲೆ ಅಸ್ತ್ರವನ್ನು ಬಿಡುತ್ತಿರುವಾ ಗಲೇ ನಾನು ಅವನನ್ನು ಹಿಡಿದುಕೊಂಡೆನು. ಅವನು ತಾನಾಗಿ ಶಸ್ತ್ರವನ್ನು ಬಿಟ್ಟಮೇಲೆ ಹತನಾದನು. ಇದರಲ್ಲಿ ದುಷ್ಕೃತ್ಯವೇನಿರುವುದು? ಇನ್ನೊ ಬ್ಬರಿಂದ ತೋಳು ಮುರಿದು, ಯುದ್ಧಮಾಡಲಾರದೆ, ಪ್ರಾಯೋಪವೇಶದಲ್ಲಿದ್ದ ವನನ್ನು ಕೊಂದ ಪಾಪಿಯು ನೀನಲ್ಲವೆ? ನನ್ನನ್ನು ನಿಂದಿಸುವುದಕ್ಕೆ ನಿನಗೆ ಹೇಗೆ ಬಾಯಿಬರುವುದು? ಅದೇ ಭೂರಿಶ್ರವಸ್ಸು ನಿನ್ನನ್ನು ಬಡಿದು ಕೆಡಹಿ, ಕಾಲಿಂದ ಮೆಟ್ಟಿ ನಿಂತಿದ್ದಾಗ, ನೀನು ಗಂಡಸಾಗಿದ್ದರೆ, ಆಗಲೇ ಅವನನ್ನೇಕೆ ಕೊಲ್ಲಲಿಲ್ಲ? ಮೊದಲೇ ಅರ್ಜುನನಿಂದ ಹತಪ್ರಾಯನಾಗಿ ಕೈಮುರಿದುಬಿದ್ದಿ ದ್ದವನನ್ನು ನೀನು ಕೊಂದೆ. ಎಲ ಸಾತ್ಯಕೀ! ಎಲ್ಲೆಲ್ಲಿ ದ್ರೋಣನು ಪಾಂಡ ವರ ಸೈನ್ಯವನ್ನು ಓಡಿಸುತ್ತಿದ್ದನೋ, ಅಲ್ಲಲ್ಲಿ ನಾನು ಹೋಗಿ ಅವನನ್ನಿದಿ ರಿಸಿ, ನೂರು ಸಹಸ್ರಬಾಣಗಳಿಂದ ಅವನನ್ನು ತಡೆಯುತ್ತಿದ್ದವನು. ನೀನಾ ದರೋ ಚಂಡಾಲನಂತೆ ಘೋರಕೃತ್ಯವನ್ನು ನಡೆಸಿ, ಲೋಕನಿಂದೆಗೆ ಗುರಿ ಯಾಗಿ, ಈಗ ನನ್ನನ್ನು ನಿಂದಿಸುತ್ತಿರುವೆ. ನಿನ್ನಂತೆ ನಾನೇನೂ ಅಂತಹ ಘೋರಕೃತ್ಯವನ್ನು ಮಾಡಿದವನಲ್ಲ. ಪಾಪಕಾರ್ಯಗಳಿಗೆಲ್ಲ ನೀನೇ ತಲೆಯೆ ನಿಸಿರುವೆ. ಇನ್ನು ಬಾಯೆತ್ತದಿರು. ತಿರುಗಿ ನನ್ನ ವಿಷಯವನ್ನು ಕುರಿತು ಮಾತಾಡಬೇಡ! ನೀನು ನನಗೆ ಹೇಳತಕ್ಕ ಮಾತನ್ನು ನಾನು ನಿನಗೆ ಹೇಳ ಬೇಕಾದುದು ಉಚಿತವು. ತಿರುಗಿ ನೀನೇನಾದರೂ ಇಂತಹ ಪರುಷವಾಕ್ಯ ಗಳನ್ನು ಆಡಿದಪಕ್ಷದಲ್ಲಿ, ನಿನ್ನನ್ನು ಯಮಪುರಿಗೆ ಕಳುಹಿಸಿಬಿಡುವೆನು, ಎಲ

ಮೂಢಾ! ಯುದ್ಧದಲ್ಲಿ ಬರೀ ಧರ್ಮದಿಂದಲೇ ಶತ್ರುಗಳನ್ನು ಜಯಿಸುವುದು ಎಂದಾದರೂ ಸಾಧ್ಯವೇ? ಆ ಕೌರವರೂ ಎಷ್ಟೋ ಅಧರ್ಮಗಳನ್ನು ಮಾಡಿರುವರು. ಮೊದಲು ಅವರಿಂದ ಯುಧಿಷ್ಠಿರನು ಅಧರ್ಮದಿಂದಲೇ ವಂಚಿಸಲ್ಪಟ್ಟನು! ದ್ರೌಪದಿಯನ್ನು ಅವರು ಅಧರ್ಮದಿಂದಲೇ ಸಭೆಗೆ ಸೆಳೆತಂದು ಕಷ್ಟಕ್ಕೀಡುಮಾಡಿದರು! ಅಧರ್ಮದಿಂದಲೇ ಕೌರವರು ಪಾಂಡವರ ಸರ್ವಸ್ವವನ್ನೂ ಅಪಹರಿಸಿ, ಅವರನ್ನು ದ್ರೌಪದಿಯೊಡನೆ ಕಾಡಿಗಟ್ಟಿದರು! ಅಧರ್ಮದಿಂದಲೇ ಶಲ್ಯನು ದುರ್ಯೋಧನನಕಡೆಗೆ ಸೆಳೆಯಲ್ಪಟ್ಟನು. ಅಭಿಮನ್ಯುವೂ ಅಧರ್ಮದಿಂದಲೇ ವಧಿಸಲ್ಪಟ್ಟನು. ಶತ್ರುಧ್ವಂಸಕನಾದ ಭೀಷ್ಮನೂ ಅಧರ್ಮದಿಂದಲೇ ಪಾಂಡವರಿಂದ ಹತನಾದನು. ಧರ್ಮಜ್ಞನೆಂದು ಹೇಳುತ್ತಿರುವ ನೀನು ಭೂರಿಶ್ರವಸ್ಸನ್ನು ಕೊಂದುದೂ ಅಧರ್ಮದಿಂದಲೇ! ಹೀಗೆ ಕೌರವರು ಯುದ್ಧದಲ್ಲಿ ತಮ್ಮ ಜಯಕ್ಕಾಗಿ ಅಧರ್ಮಗಳನ್ನು ನಡೆಸಿದುದು ಮಾತ್ರವಲ್ಲ! ಧರ್ಮಜ್ಞರಾದ ಪಾಂಡವರೂ ತಮ್ಮ ಜಯಕ್ಕಾಗಿ ಅಧರ್ಮದಿಂದಲೇ ವರ್ತಿಸಿರುವರು. ಧರ್ಮಾಧರ್ಮಗಳ ರಹಸ್ಯವನ್ನು ಸಾಮಾನ್ಯವಾಗಿ ತಿಳಿಯುವುದು ಕಷ್ಟವು. ಆ ವಿಷಯವು ನಿನಗೇಕೆ? ಈ ನಿನ್ನ ಕೋಪವನ್ನೆಲ್ಲ ಕೌರವರೊಡನೆ ತೋರಿಸು! ಅವರೊಡನೆ ಯುದ್ಧಮಾಡು. ಅನ್ಯಾಯವಾಗಿ ನನ್ನ ಕೈಯಿಂದ ಸಾಯಬೇಡ" ಎಂದನು.

ಮಹಾರಾಜಾ! ಹೀಗೆ ಧೃಷ್ಟದ್ಯುಮ್ನನ ಬಾಯಿಂದ ಹೊರಟ ಪರುಷವಾಕ್ಯಗಳನ್ನು ಕೇಳಿ ಸಾತ್ಯಕಿಗೆ ಕೋಪದಿಂದ ಮೈ ನಡುಗಿತು! ಅವನ ಕಣ್ಣುಗಳು ಕೆಂಪೇರಿದುವು! ಸರ್ಪದಂತೆ ಬುಸುಗುಟ್ಟುತ್ತ, ಕೈಯಲ್ಲಿದ್ದ ಬಿಲ್ಲನ್ನು ರಥದಮೇಲಕ್ಕೆ ಬಿಸುಟು, ಗದೆಯನ್ನು ಕೈಗೆತ್ತಿಕೊಂಡು, ಧೃಷ್ಟದ್ಯುಮ್ನನನ್ನು ಕೊಲ್ಲುವುದಕ್ಕಾಗಿ ವೇಗದಿಂದ ಮುಂದೆ ಬಂದು "ಎಲಾ ನೀಚಾ! ಇನ್ನುಮೇಲೆ ನಿನಗೆ ಪ್ರತ್ಯುತ್ತರವನ್ನು ಹೇಳಲಾರೆನು. ವಧಾರ್ಹನಾದ ನಿನ್ನನ್ನು ಈಗಲೇ ಕೊಂದುಬಿಡುವೆನು" ಎಂದು ಗದೆಯನ್ನೆತ್ತಿದನು. ಧೃಷ್ಟದ್ಯುಮ್ನನನ್ನು ವಧಿಸುವುದಕ್ಕಾಗಿ ಕಾಲಯಮನಂತೆ ಉಗ್ರರೂಪದಿಂದ ಗದೆಯನ್ನೆತ್ತಿರುವ ಸಾತ್ಯಕಿಯನ್ನು ನೋಡಿ, ಕೃಷ್ಣನು ಥಟ್ಟನೆ ತನ್ನ ರಥದಿಂದ ಹಾರಿ, ಸಾತ್ಯಕಿಯನ್ನು ತನ್ನ ಎರಡು ಕೈಗಳಿಂದಲೂ ಅಡ್ಡಗಟ್ಟಿ

ತಡೆದನು. ಆಗಲೂ ಸಾತ್ಯಕಿಯು ಬಲಾತ್ಕಾರದಿಂದ ಮುಂದೆ ನುಗ್ಗುತ್ತಿರುವುದನ್ನು ನೋಡಿ, ಭೀಮನು ಅವನನ್ನು ಒಟ್ಟಿಗೆ ಎತ್ತಿಕೊಂಡು, ಆರು ಹೆಜ್ಜೆಗಳ ದೂರಕ್ಕೆ ಅವನನ್ನು ಹಿಂದೆ ಸಾಗಿಸಿ, ಅವನ ಕಾಲಿಗೆ ಕಾಲನ್ನು ತೊಡರು ಹಾಕಿ ತಡೆದುನಿಲ್ಲಿಸಿಬಿಟ್ಟನು. ಇದನ್ನೆಲ್ಲ ನೋಡುತ್ತಿದ್ದ ಸಹದೇವನು ಮುಂದೆ ಬಂದು, ಆ ಸಾತ್ಯಕಿಯನ್ನೂ, ಧೃಷ್ಟದ್ಯುಮ್ನನನ್ನೂ ನೋಡಿ "ಓ ಪುರುಷಶ್ರೇಷ್ಠಾ! ಅಂಧಕವೃಷ್ಣಿಗಳಿಗಿಂತಲೂ, ಪಾಂಚಾಲರಿಗಿಂತಲೂ ನಮಗೆ ಮೇಲಾದ ಪ್ರಿಯಮಿತ್ರರಿಲ್ಲ. ಅದರಂತೆ ಅವರಿಗೂ, ಮುಖ್ಯವಾಗಿ ಕೃಷ್ಣನಿಗೂ ನಮಗಿಂತಲೂ ಬೇರೆ ಪ್ರಿಯತಮರಿಲ್ಲ. ಪಾಂಚಾಲರಿಗಾದರೂ ಈ ಸಮುದ್ರಾಂತವಾದ ಸಮಸ್ತಭೂಮಿಯಲ್ಲಿ ಹುಡುಕಿದರೂ ವೃಷ್ಣಿ ಪಾಂಡವರಿಗಿಂತಲೂ ಮೇಲಾದ ಮಿತ್ರರಿಲ್ಲ. ಸಾತ್ಯಕೀ! ನೀನು ನಮಗೆ ಅಂತಹ ಪರಮಮಿತ್ರನು. ನೀವು ನಮಗೆ ಹೇಗೋ ನಾವೂ ನಿಮಗೆ ಹಾಗೆಯೇ! ಸಮಸ್ತಧರ್ಮಗಳನ್ನೂ ಬಲ್ಲ ನೀನು ಮಿತ್ರಧರ್ಮವನ್ನು ಯೋಚಿಸು! ಆ ಧೃಷ್ಟದ್ಯುಮ್ನನನ್ನು ಮನ್ನಿಸು! ನಿನ್ನ ಕೋಪವನ್ನಡಗಿಸು! ಅವನೂ ನಿನ್ನಲ್ಲಿ ಕೋಪವನ್ನು ಬಿಟ್ಟು ಮನ್ನಿಸಲಿ! ನಾವು ನಿಮ್ಮಿಬ್ಬರ ಕ್ಷಮೆಯನ್ನೂ ಬೇಡುವೆವು. ಈ ಕಾಲದಲ್ಲಿ ತಾಳ್ಮೆಗಿಂತಲೂ ಮೇಲಾದುದಿಲ್ಲ" ಎಂದನು. ಹೀಗೆ ಸಹದೇವನು ಸಾತ್ಯಕಿಗೆ ಸಮಾಧಾನವನ್ನು ಹೇಳುತ್ತಿರುವಾಗಲೇ ಧೃಷ್ಟದ್ಯುಮ್ನನು ಗರ್ವದಿಂದ ನಗುತ್ತ "ಭೀಮಸೇನಾ! ಬಿಡು! ಬಿಡು! ಆ ಸಾತ್ಯಕಿಯನ್ನು ಬಿಟ್ಟುಬಿಡು! ಯುದ್ಧಮದದಿಂದ ಕೊಬ್ಬಿರುವ ಅವನು ಮುಂದೆ ಬರಲಿ! ಅವನ ಈ ಯುದ್ಧಾತುರವನ್ನೂ, ಅವನ ಜೀವವನ್ನೂ ಈಗಲೇ ಕೊನೆಗಾಣಿಸುವೆನು. ಭೀಮಸೇನಾ! ನಿಮಗೆ ಎಂತಹ ದೊಡ್ಡ ಕಾರ್ಯವಾಗಬೇಕಾದರೂ ತಿಳಿಸು! ಅದನ್ನು ನಾನು ನಡೆಸುವೆನು. ಅದೋ ಕೌರವರು ಆಗಲೇ ಬೆನ್ನಟ್ಟಿಬರುತ್ತಿರುವರು. ಅಥವಾ ಅರ್ಜುನನು ಹೋಗಿ ಕೌರವರನ್ನು ತಡೆಯಲಿ! ನಾನು ಮೊದಲು ಈ ಸಾತ್ಯಕಿಯ ತಲೆಯನ್ನು ಕೆಳಕ್ಕೆ ಕೆಡಹುವೆನು. ಈ ನೀಚನು ನನ್ನನ್ನು ಕೈಮುರಿದ ಭೂರಿಶ್ರವಸ್ಸಿನಂತೆ ತಿಳಿದಹಾಗಿದೆ! ಅವನನ್ನು ಬಿಡು! ನಾನು ಅವನನ್ನು ಕೊಲ್ಲುವೆನು. ಅವನಾದರೂ ನನ್ನನ್ನು ಕೊಲ್ಲಲಿ!" ಎಂದನು. ಈ ಕಠೋರವಾಕ್ಯಗಳನ್ನು ಕೇಳಿ ಸಾತ್ಯಕಿಗೆ ಆಕ್ರೋಶವು ಮಿತಿಮಿರಿಹೋಯಿತು. ಸರ್ಪದಂತೆ

ನಿಟ್ಟುಸಿರುಬಿಡುತ್ತ ಧೃಷ್ಟದ್ಯುಮ್ನನನ್ನು ನೋಡಿದನು. ಆದರೆ ಭೀಮನ ತೋಳುಗಳ ಬಿಗಿತದಲ್ಲಿ ಸಿಕ್ಕಿಬಿದ್ದ ಅವನಿಗೆ, ಮುಂದೆ ಬರಲು ಸಾಧ್ಯವಾಗಲಿಲ್ಲ. ಇತ್ತಲಾಗಿ ಸಾತ್ಯಕಿಯೂ, ಅತ್ತಲಾಗಿ ಧೃಷ್ಟದ್ಯುಮ್ನನೂ ಕೋಪದಿಂದ ಒಬ್ಬರನ್ನೊಬ್ಬರು ನೋಡುತ್ತ, ಗೂಳಿಗಳಂತೆ ಗರ್ಜಿಸುತ್ತಿದ್ದರು. ಇಷ್ಟರಲ್ಲಿಯೇ ಧರ್ಮರಾಜನೂ, ಕೃಷ್ಣನೂ ಬೇಗನೆ ಬಂದು, ಅವರಿಬ್ಬರನ್ನೂ ಬಹುಪ್ರಯತ್ನದಿಂದ ಸಮಾಧಾನಗೊಳಿಸಿದರು. ಆಮೇಲೆ ಎಲ್ಲರೂ ಯುದ್ಧಕ್ಕಾಗಿ ನಿರೀಕ್ಷಿಸುತ್ತಿದ್ದ ಶತ್ರುಗಳಕಡೆಗೆ ತಿರುಗಿದರು.

ಇದು ನೂರ ತೊಂಭತ್ತೊಂಭತ್ತನೆಯ ಅಧ್ಯಾಯವು.



ತಂದೆಯ ಮರಣದಿಂದ ಕೋಪಗೊಂಡ ಅಶ್ವತ್ಥಾಮನು ನಾರಾಯಣಾಸ್ತ್ರವನ್ನು ಬಿಟ್ಟುದು. ಪಾಂಡವಸೈನ್ಯಗಳೆಲ್ಲ ಅಸ್ತ್ರಜ್ವಾಲೆಯಲ್ಲಿ ಸಿಕ್ಕಿ ಕಷ್ಟಕ್ಕೊಳಗಾದಾಗ, ಕೃಷ್ಣನ ಮಾತಿನಿಂದ ಎಲ್ಲರೂ ತಮ್ಮತಮ್ಮ ವಾಹನಗಳಿಂದಿಳಿದು ಶಸ್ತ್ರತ್ಯಾಗಮಾಡಿ, ಆಪಾಯದಿಂದ ತಪ್ಪಿಸಿಕೊಂಡುದು. ಭೀಮನೊಬ್ಬನುಮಾತ್ರ ಯುದ್ಧಮಾಡುತ್ತಿರಲು, ಆ ಅಸ್ತ್ರಜ್ವಾಲೆಯು ಅವನನ್ನಾವರಿಸಿಕೊಂಡುದು.

ರಾಜಾ! ಆಗ ಅಶ್ವತ್ಥಾಮನು ಸರ್ವಸಂಹಾರಕ್ಕಾಗಿ ಕಾಲಚೋದಿತನಾಗಿ ಬಂದಯಮನಂತೆ ಸೈನ್ಯಗಳನ್ನೆಲ್ಲ ಕೊಲ್ಲುತ್ತಿದ್ದನು. ಅನೇಕ ಮೃತದೇಹಗಳು ರಾಶಿರಾಶಿಯಾಗಿ ಬಿದ್ದುವು. ಧ್ವಜಗಳೆಂಬ ವೃಕ್ಷಗಳಿಂದಲೂ, ಶಸ್ತ್ರಗಳೆಂಬ ಶಿಖರಗಳಿಂದಲೂ, ಆನೆಗಳ ದೇಹವೆಂಬ ಬಂಡೆಗಳಿಂದಲೂ, ಕುದುರೆಗಳೆಂಬ ಕಿಂಪುರುಷರಿಂದಲೂ, ಬಿಲ್ಲೆಂಬ ಬಳ್ಳಿಗಳಿಂದಲೂ, ಮಾಂಸಾಹಾರಿಪ್ರಾಣಿಗಳೆಂಬ ಪಕ್ಷಿಗಳಿಂದಲೂ ಕೂಡಿ, ಭೂತಯಕ್ಷಗಣಗಳಿಗೆ ವಾಸಸ್ಥಾನವಾದ ಪರ್ವತಗಳಂತೆ, ಆ ದೇಹರಾಶಿಗಳು ಕಾಣಿಸುತ್ತಿದ್ದುವು. ಆಮೇಲೆ ತಿರುಗಿ ಅಶ್ವತ್ಥಾಮನು ನಿನ್ನ ಮಗನಮುಂದೆ ಎಲ್ಲರೂ ಕೇಳುವಹಾಗೆ ಆರ್ಭಟಿಸಿ ಹೀಗೆಂದನು. “ಎಲೈ! ಕೇಳಿರಿ! ಎಲ್ಲರೂ ಕೇಳಿರಿ! ಮೇಲೆಮಾತ್ರ

ಧರ್ಮವೆಂಬ ಕಂಚುಕವನ್ನು ಹೊದೆದ ಯುಧಿಷ್ಠಿರನು, ಮೋಸದಿಂದ ತನ್ನ ಆಚಾರ್ಯನ ಕೈಯಲ್ಲಿದ್ದ ಶಸ್ತ್ರವನ್ನು ಕೆಳಕ್ಕಿಡಿಸಿದನು. ಆದುದರಿಂದ, ಅವನ ಕಣ್ಣೆದಿರಾಗಿಯೇ, ಅವನ ಸೈನ್ಯವನ್ನೆಲ್ಲ ಕೊಂದು, ನೀಚನಾದ ಆ ಪಾಂಚಾಲನನ್ನೂ ಯಮಪುರಿಗೆ ಕಳುಹಿಸುವೆನು. ನನಗೆ ಹೆದರಿ ಓಡದೆ ಇದಿರಿಸಿ ನಿಂತವರನ್ನೆಲ್ಲ ಈಗ ನಾನು ಕೊಲ್ಲುವುದೇ ನಿಶ್ಚಯವು. ದುರ್ಯೋಧನಾ! ಇದು ನನ್ನ ಸತ್ಯಪ್ರತಿಜ್ಞೆ! ನಮ್ಮ ಸೈನ್ಯವನ್ನು ಹಿಂತಿರುಗಿಸು" ಎಂದನು. ಒಡನೆಯೇ ನಿನ್ನ ಮಗನು ಸೈನ್ಯವನ್ನು ಹಿಂತಿರುಗಿಸಿಕೊಂಡು ಬಂದನು. ಎಲ್ಲರೂ ದೊಡ್ಡ ಸಿಂಹನಾದದೊಡನೆ ಯುದ್ಧಸನ್ನದ್ಧರಾಗಿ ಬಂದರು. ತುಂಬಿದ ಸಮುದ್ರವು ಸಮುದ್ರದೊಡನೆ ಸ್ಪರ್ಧಿಸುವಂತೆ, ಉಭಯಸೈನ್ಯಗಳಿಗೂ ತೀವ್ರಯುದ್ಧವಾಯಿತು. ಇತ್ತಲಾಗಿ ಕೌರವರು ದ್ರೋಣಪುತ್ರನಿಂದ ಪ್ರೋತ್ಸಾಹಿತರಾಗಿ ಯುದ್ಧಕ್ಕೆ ನಿಂತರು. ಅತ್ತಲಾಗಿ ಪಾಂಡವಪಾಂಚಾಲರೆಲ್ಲ ದ್ರೋಣವಧದಿಂದುಂಟಾದ ಜಯೋತ್ಸಾಹದಿಂದ ತಮ್ಮ ಜಯದಲ್ಲಿ ನಂಬಿಕೆಯಿಟ್ಟು ಸಂತೋಷದಿಂದಿದಿರಾದರು. ಬೆಟ್ಟದೊಡನೆ ಬೆಟ್ಟವೂ, ಸಮುದ್ರದೊಡನೆ ಸಮುದ್ರವೂ ಹೋರಾಡುವಂತೆ ಸೈನ್ಯಗಳೆರಡೂ ಒಂದನ್ನೊಂದು ವೇಗದಿಂದಿದಿರಿಸಿಬಂದಾಗ, ಭೂಮಿಯೇ ನಡುಗಿತು. ದಿಕ್ಕುಗಳು ಮೊಳಗಿದುವು. ಜಲಚರಪ್ರಾಣಿಗಳೂ ಬೆಜ್ಜರಬಿದ್ದುವು. ಶಂಖ, ಭೇರಿ ಮೊದಲಾದ ವಾದ್ಯಧ್ವನಿಗಳು ಸಾವಿರಾರು ಕಡೆಗಳಿಂದ ಸಮುದ್ರಮಥನ ಘೋಷದಂತೆ ಅತ್ಯಂತಪ್ರಬಲವಾಯಿತು. ಹೀಗೆ ಭಯಂಕರಧ್ವನಿಯೊಡನೆ ಉಭಯಪಕ್ಷದ ರಥಗಳೂ ಒಂದನ್ನೊಂದು ಇದಿರಿಸುತ್ತಿರುವಾಗ, ದ್ರೋಣಪುತ್ರನು ಪಾಂಚಾಲಸೇನೆಗೆ ಗುರಿಯಿಟ್ಟು ನಾರಾಯಣಾಸ್ತ್ರವನ್ನು ಮಂತ್ರಿಸಿ ಪ್ರಯೋಗಿಸಿದನು. ಆ ಅಸ್ತ್ರವನ್ನು ಪ್ರಯೋಗಿಸಿದೊಡನೆ ಜ್ವಾಲೆಗಳೊಡಗೂಡಿದ ಬಾಣಗಳು ಸಾವಿರಾರು ಸಂಖ್ಯೆಯಿಂದ ಆಕಾಶದಲ್ಲಿ ಹರಡಿ, ಉರಿಯುವ ಬಾಯುಳ್ಳ ಸರ್ಪಗಳಂತೆ ಪಾಂಡವರ ಮೇಲೆ ಬೀಳುತ್ತಿದ್ದುವು. ಒಂದು ಮುಹೂರ್ತಕಾಲದಲ್ಲಿಯೇ ಸೂರ್ಯಕಿರಣಗಳಂತೆ ಆ ಬಾಣಗಳು ಭೂಮ್ಯಾಕಾಶದಿಕ್ಕುಗಳನ್ನೆಲ್ಲ ಆವರಿಸಿಕೊಂಡುವು. ಆಕಾಶದಲ್ಲಿ ಸುತ್ತುತ್ತಿರುವ ಜ್ಯೋತಿರ್ಗಣಗಳಂತೆ ಉಕ್ಕಿನ ಗೋಳಗಳು ಪರಂಪರೆಯಾಗಿ ಹೊರಡುತ್ತಿದ್ದುವು. ನಾಲ್ಕು ಚಕ್ರಗ

ಗಳಿಂದಲೂ, ಎರಡು ಚಕ್ರಗಳಿಂದಲೂ ಕೂಡಿದ ಶತಘ್ನಿಗಳೂ, ಗದೆಗಳೂ ಎಡೆಬಿಡದೆ ಹೊರಡುತ್ತಿದ್ದುವು. ಸುತ್ತಲೂ ಕತ್ತಿಯ ಅಲಗುಗಳುಳ್ಳ ಚಕ್ರಗಳು ಸೂರ್ಯಮಂಡಲಗಳಂತೆ ಮೇಲೆಮೇಲೆ ಬೀಳುತ್ತಿದ್ದುವು. ಹೀಗೆ ಅಂತರಿಕ್ಷವೆಲ್ಲ ವಿವಿಧಾಕಾರದ ಶಸ್ತ್ರಗಳಿಂದಲೂ, ಅವುಗಳ ಜ್ವಾಲೆಗಳಿಂದಲೂ ವ್ಯಾಪ್ತವಾದುದನ್ನು ನೋಡಿ, ಪಾಂಡವ ಪಾಂಚಾಲ ಸೃಂಜಯಸೈನ್ಯಗಳೆಲ್ಲ ಭಯಪಟ್ಟು ತತ್ತಳಿಸುತ್ತಿದ್ದುವು. ಪಾಂಡವರ ಕಡೆಯಲ್ಲಿ ಮಹಾರಥರು ಎಷ್ಟೆಷ್ಟು ಪ್ರಯತ್ನದಿಂದ ಯುದ್ಧವನ್ನು ಮಾಡಿದರೆ ಅಷ್ಟಷ್ಟು ಪ್ರಬಲವಾಗಿ ಶಸ್ತ್ರಪರಂಪರೆಗಳು ಅವರಮೇಲೆ ಬೀಳುತ್ತಿದ್ದುವು. ಪಾಂಡವಯೋಧರೆಲ್ಲ ದೊಡ್ಡ ಕಾಡುಗಿಚ್ಚಿನ ನಡುವೆ ಸಿಕ್ಕಿಬಿದ್ದಂತೆ ಅಸ್ತ್ರಜ್ವಾಲೆಗಳಲ್ಲಿ ಸಿಕ್ಕಿಬಿದ್ದರು. ಬೇಸಗೆಯಲ್ಲಿ ಒಣಗಿದ ಪೊದೆಯನ್ನು ಆವರಿಸಿಕೊಂಡ ಬೆಂಕಿಯಂತೆ, ಆ ಅಸ್ತ್ರಜ್ವಾಲೆಯು ಪಾಂಡವಸೈನ್ಯಗಳನ್ನೆಲ್ಲ ದಹಿಸಲಾರಂಭಿಸಿತು. ಆ ಅಸ್ತ್ರಜ್ವಾಲೆಗಳಿಂದ ಸೈನ್ಯವು ಬಹಳವಾಗಿ ಕ್ಷಯಿಸುತ್ತಿರುವುದನ್ನು ನೋಡಿ ಯುಧಿಷ್ಠಿರನ ಎದೆಯು ನಡುಗಿತು. ದಿಕ್ಕುತೋರದೆ ಓಡುತ್ತಿರುವ ತನ್ನ ಸೈನ್ಯವನ್ನು ನೋಡಿಯೂ ಅರ್ಜುನನು ತಟಸ್ಥನಾಗಿರುವುದನ್ನು ನೋಡಿ ಯುಧಿಷ್ಠಿರನು "ಧೃಷ್ಟದ್ಯುಮ್ನಾ! ಇನ್ನು ಯುದ್ಧವು ಸಾಕು! ನಿನ್ನ ಪಾಂಚಾಲಸೈನ್ಯವನ್ನೆಲ್ಲ ಕರೆದುಕೊಂಡು, ನೀನು ಬೇಗನೆ ಪಲಾಯನಮಾಡು! ಸಾತ್ಯಕೀ! ನಿನ್ನಕಡೆಯ ವೃಷ್ಣ್ಯಂಧಕರೊಡನೆ ನೀನೂ ಓಡಿಹೋಗು! ಶ್ರೀಕೃಷ್ಣನೂ ಕಾಲೋಚಿತವಾಗಿ ತನಗೆ ತೋರಿದ ಉಪಾಯದಿಂದ ತಪ್ಪಿಸಿಕೊಳ್ಳಲಿ. ಅವನು ಲೋಕಕ್ಕೆಲ್ಲ ಶ್ರೇಯಸ್ಸನ್ನು ಉಪದೇಶಿಸತಕ್ಕವನು. ಇನ್ನು ತನ್ನ ರಕ್ಷಣೆಯನ್ನು ನೋಡಿಕೊಳ್ಳುವುದೇನೂ ಅವನಿಗೆ ಅಸಾಧ್ಯವಲ್ಲ. ಇನ್ನು ನೀವು ಯಾರೂ ಯುದ್ಧಕ್ಕೆ ತಲೆಹಾಕಲೇ ಬಾರದು. ಎಲ್ಲಾ ಸೈನ್ಯಗಳಿಗೂ ನಾನು ಎಚ್ಚರಿಸಿ ಹೇಳುತ್ತಿರುವೆನು. ಹೇಗಾದರೂ ನೀವು ಇಲ್ಲಿಂದ ತಲೆತಪ್ಪಿಸಿಕೊಂಡುಹೋಗಿ ಬದುಕಿಕೊಳ್ಳಿರಿ! ನಾನು ನನ್ನ ಸಹೋದರರೊಡನೆ ಅಗ್ನಿಪ್ರವೇಶವನ್ನು ಮಾಡುವೆನು. ಅಯ್ಯೋ! ಎಂತವರಿಗೂ ದಾಟಲಸಾಧ್ಯವಾದ ಭೀಷ್ಮ ದ್ರೋಣರೆಂಬ ಮಹಾಸಮುದ್ರಗಳೆರಡನ್ನೂ ದಾಟಿಬಂದ ನಮಗೆ, ಈಗ ಈ ಅಶ್ವತ್ಥಾಮನೆಂಬ ಗೋಷ್ಪದದಲ್ಲಿ (ಹಸುವಿನ ಹಜ್ಜೆಯಿಂದಾದ ಹಳ್ಳದ ನೀರಿನಲ್ಲಿ)

ಮುಳುಗಿಹೋಗುವ ಕಾಲವು ಬಂತು. ನನ್ನ ವಿಷಯದಲ್ಲಿ ಅರ್ಜುನನಿಗಿದ್ದ ಕೋರಿಕೆಯು ಈಗ ನೆರವೇರಲಿ! (ಅರ್ಜುನನ ಅಭಿಪ್ರಾಯದಂತೆ) ಅತ್ಯಂತಮಂಗಳಚರಿತ್ರನಾದ ಆಚಾರ್ಯನನ್ನು ನಾನು ಕೊಲ್ಲಿಸಿದವನು! ಯುದ್ಧಕ್ರಮವನ್ನೇ ಅರಿಯದ ಬಾಲಕನಾದ ಅಭಿಮನ್ಯುವನ್ನು ಯಾವನು ರಕ್ಷಿಸದೆ ಕ್ರೂರರಾದ ಅನೇಕ ಪ್ರಬಲವೀರರ ಕೈಯಿಂದ ಕೊಲ್ಲಿಸಿದನೋ, ಹಿಂದೆ ಸಭೆಗೆ ಸೆಳೆಯಲ್ಪಟ್ಟ ದ್ರೌಪದಿಯು ತನ್ನ ದಾಸೀಭಾವವನ್ನು ನಿಷೇಧಿಸುತ್ತ, ಧರ್ಮಯುಕ್ತವಾದ ಪ್ರಶ್ನೆಯನ್ನು ಕೇಳಿದಾಗ, ತನ್ನ ಪುತ್ರನೊಡನೆ ಸೇರಿ ಯಾವನು ಅವಳನ್ನು ಉಪೇಕ್ಷಿಸಿದನೋ, ಅಂತಹ ಸಚ್ಚರಿತ್ರನನ್ನು ನಾನು ಕೊಲ್ಲಿಸಿದವನು. ಇದರಮೇಲೆ ಈಗ ಅರ್ಜುನನನ್ನು ಕೊಲ್ಲಿಸಬೇಕೆಂಬ ಯತ್ನದಿಂದ ಯಾವನು ಸೈಂಧವನ ರಕ್ಷಣೆಗಾಗಿ ಬಹಳ ಪ್ರಯತ್ನಪಟ್ಟು, ವ್ಯೂಹದ್ವಾರದಲ್ಲಿ ನಮ್ಮನ್ನೂ, ನಮ್ಮ ದೊಡ್ಡ ಸೈನ್ಯವನ್ನೂ ತಡೆದು ಆ ಅಭಿಮನ್ಯುವಿಗೆ ಬೆಂಬಲವಿಲ್ಲದಂತೆ ಮಾಡಿದನೋ, ಆ ಆಚಾರ್ಯನನ್ನು ನಾನು ಕೊಲ್ಲಿಸಿದೆನು. ಕೌರವಸೈನ್ಯವೆಲ್ಲಾ ವಿಪತ್ತಿಗೀಡಾದಾಗ, ಅರ್ಜುನನ ವಧೆಗಾಗಿ ದುರ್ಯೋಧನನಿಗೆ ಮಂತ್ರಕವಚವನ್ನು ಕೊಟ್ಟು, ನಮ್ಮ ವೈರಿಯಾದ ಸೈಂಧವನನ್ನು ರಕ್ಷಿಸುವುದಕ್ಕಾಗಿ ಯಾವನು ಯತ್ನಿಸಿದನೋ, ಅಂತಹ ಮಂಗಳಚರಿತ್ರನನ್ನು ನಾನು ಕೊಲ್ಲಿಸಿದೆನು. ಯಾವನು ಬ್ರಹ್ಮಾಸ್ತ್ರವನ್ನು ಬಲ್ಲವನಾಗಿ, ಅದರಿಂದ ನಮ್ಮ ಜಯಕ್ಕಾಗಿ ಪಾಡುಪಡುತ್ತಿದ್ದ ಸತ್ಯಜಿತ್ತು ಮೊದಲಾದ ಪಾಂಚಾಲರನ್ನೆಲ್ಲ ಸಮೂಲವಾಗಿ ಕೊಂದನೋ, ಯಾವನು ನನ್ನನ್ನು ಸೆರೆಹಿಡಿದು ದುರ್ಯೋಧನನಿಗೆ ಒಪ್ಪಿಸುವುದಕ್ಕಾಗಿ ಬಹುಪ್ರಯತ್ನವನ್ನು ಮಾಡಿದನೋ, ಅಂತಹ ಸಚ್ಚರಿತ್ರನಾದ ಗುರುವನ್ನು ನಾನು ಕೊಲ್ಲಿಸಿದೆನು. ಇವೆಲ್ಲಾ ನಿಮಗೂ ಚೆನ್ನಾಗಿ ತಿಳಿದುದೇ! ವಿದುರನೇ ಮೊದಲಾದ ನಮ್ಮವರೆಲ್ಲರೂ ಎಷ್ಟೋವಿಧದಿಂದ ಬುದ್ಧಿವಾದಹೇಳಿ ತಡೆದರೂ, ನಮ್ಮನ್ನು ಕಾಡಿಗೆ ಕಳುಹಿಸುವುದಕ್ಕೆ ಆ ಆಚಾರ್ಯನು ಸಮ್ಮತಿಸುತ್ತಿದ್ದನೇಹೊರತು ಅದನ್ನು ನಿಷೇಧಿಸಲಿಲ್ಲ. ನಾವು ಶಪಥಮಾಡಿಕೊಟ್ಟಂತೆ ವನವಾಸದಿಂದ ಹಿಂತಿರುಗಿ ಬಂದಮೇಲೆ, ಆ ಆಚಾರ್ಯನು ನಮ್ಮಲ್ಲಿ ಎಷ್ಟು ಸ್ನೇಹವನ್ನು ತೋರಿಸುತ್ತಿರುವನೋ ಅದೂ ನಿಮಗೆ ಪ್ರತ್ಯಕ್ಷವಾಗಿ ತಿಳಿದುದೇ. ಎಲೈ ಮಹಾರಥರೇ! ನಮ್ಮಲ್ಲ ಯಾವನು ಇಷ್ಟೊಂದು ಸೌಹಾ

ರ್ದವನ್ನು ತೋರಿಸುತ್ತಿದ್ದನೋ, ಅಂತಹ ಆಚಾರ್ಯನು ನನ್ನಿಂದ ಹತನಾದನಲ್ಲವೇ? ಅದಕ್ಕಾಗಿಯೇ ಈಗ ನಾನು ನನ್ನ ಸಮಸ್ತಬಂಧುಗಳೊಡನೆ ಮರಣವನ್ನು ಹೊಂದುವುದೇ ಮೇಲೆಂದು ನನಗೆ ತೋರುವುದು" ಎಂದನು. ಹೀಗೆ ಧರ್ಮರಾಜನು ಮನಸ್ಸಂತಾಪದಿಂದ ಕೂಗಿಡುತ್ತಿರುವಾಗಲೇ ಕೃಷ್ಣನು ಬೇಗನೆ ಮುಂದೆ ಬಂದು, ತನ್ನ ತೋಳುಗಳನ್ನೆತ್ತಿ ಸೈನ್ಯಕ್ಕೆಲ್ಲ ಯುದ್ಧವನ್ನು ನಿಲ್ಲಿಸುವಂತೆ ಸಂಜ್ಞೆಮಾಡುತ್ತ ಹೀಗೆಂದನು. "ಎಲೈ! ಆಯುಧಗಳನ್ನು ಬೇಗನೆ ಕೆಳಗಿಟ್ಟುಬಿಡಿರಿ! ನಿಮ್ಮನಿಮ್ಮ ವಾಹನಗಳಿಂದ ಕೆಳಗಿಳಿಯಿರಿ. ಈಗ ಈ ಅಸ್ತ್ರವನ್ನು ಶಾಂತಿಗೊಳಿಸುವುದಕ್ಕೆ ಇದೊಂದೇ ಉಪಾಯವು. ಆನೆಕುದುರೆಗಳನ್ನೂ, ರಥಗಳನ್ನೂ ಏರಿದವರು ಬೇಗನೆ ಕೆಳಕ್ಕಿಳಿದುಬಿಡಿರಿ. ನೆಲದಮೇಲೆ ನಿಂತವರನ್ನೂ, ನಿರಾಯುಧರನ್ನೂ, ಈ ಅಸ್ತ್ರವು ಕೊಲ್ಲುವುದಿಲ್ಲ. ನಮ್ಮ ಯೋಧರು ಯುದ್ಧವನ್ನು ಹೆಚ್ಚಿಸಿದಹಾಗೆಲ್ಲಾ ಅಷ್ಟಷ್ಟು ಕ್ರೂರವಾಗಿ ಆ ಶಸ್ತ್ರಜ್ವಾಲೆಗಳು ಅವರನ್ನು ಕೊಲ್ಲುವುವು. ಶಸ್ತ್ರತ್ಯಾಗಮಾಡಿದವರನ್ನೂ, ವಾಹನದಿಂದಿಳಿದವರನ್ನೂ, ಕೈಜೋಡಿಸಿದವರನ್ನೂ, ಮರೆಹೊಕ್ಕವರನ್ನೂ ಆ ಅಸ್ತ್ರವು ಕೊಲ್ಲಲಾರದು. ಮನಸ್ಸಿನಿಂದಲಾದರೂ ತನ್ನನ್ನು ಪ್ರತಿಭಟಿಸಲು ಉದ್ದೇಶಿಸಿದವರನ್ನು ಆ ಅಸ್ತ್ರವು ಕೊಂದುಬಿಡುವುದು. ಪಾತಾಳಕ್ಕೆ ಹೋದರೂ ಅವರನ್ನು ಬಿಡುವಹಾಗಿಲ್ಲ" ಎಂದನು. ಕೃಷ್ಣನ ಈ ಮಾತನ್ನು ಕೇಳಿದೊಡನೆ ಪಾಂಡವಸೈನಿಕರೆಲ್ಲ ಅಸ್ತ್ರವನ್ನು ಕೆಳಗಿಡುವ ಪ್ರಯತ್ನದಲ್ಲಿರುವುದನ್ನು ನೋಡಿ ಭೀಮನು, ಕೋಪದಿಂದ "ಎಲೈ! ನಮ್ಮಲ್ಲಿ ಯಾರೊಬ್ಬರೂ ಈಗ ಅಸ್ತ್ರವನ್ನು ಕೆಳಗಿಡಲೇಬಾರದು! ಇದಕ್ಕಾಗಿ ಯಾರೂ ಹೆದರಬೇಕಾದುದಿಲ್ಲ. ಆ ಅಶ್ವತ್ಥಾಮನ ಅಸ್ತ್ರವನ್ನು ನಾನು ನನ್ನ ಬಾಣಗಳಿಂದ ತಡೆಯುವೆನು. ಈ ಮಹಾಗದೆಯಿಂದ ಅದನ್ನು ಭೇದಿಸುವೆನು. ಜ್ಯೋತಿಗಳಲ್ಲಿ ಸೂರ್ಯನಿಗೆಣೆಯಾದುದಿಲ್ಲ. ಅದರಂತೆ ಪರಾಕ್ರಮದಲ್ಲಿ ನನಗೆ ಸಮಾನನಾದವನು ಬೇರೊಬ್ಬನಿಲ್ಲ ಐರಾವತದ ಸುಂಡಿಲಿಗೆ ಸಮಾನವಾದ ಈ ನನ್ನ ತೋಳುಗಳನ್ನು ನೋಡಿರಿ! ಇವು ಹಿಮಾಲಯವನ್ನಾದರೂ ಮುರಿದು ಕೆಡಹಬಲ್ಲುವು. ಮನುಷ್ಯರಲ್ಲಿ ಹತ್ತುಸಾವಿರ ಆನೆಗಳ ಬಲವುಳ್ಳವನು ನಾನೊಬ್ಬನೇ! ದೇವತೆಗಳಲ್ಲಿ ಇಂದ್ರನಂತೆ, ಮನುಷ್ಯರಲ್ಲಿ ನಾನು ಅಸಮಾನನು. ಈಗ ನನ್ನ

ಬಾಹುವೀರ್ಯವನ್ನು ನೀವೆಲ್ಲರೂ ನೋಡುವಿರಿ! ಆ ನಾರಾಯಣಾಸ್ತ್ರವನ್ನು ಇದಿರಿಸಬಲ್ಲವರು ಲೋಕದಲ್ಲಿ ಯಾರೂ ಇಲ್ಲವೆಂದು ತಿಳಿದಿರುವಿರಷ್ಟೆ? ನಾನು ಅದನ್ನು ತಡೆಯುವುದನ್ನಾದರೂ ನೋಡಿರಿ. ಅರ್ಜುನಾ! ಓ ಭೀಭತ್ಸೂ! ನೀನು ಇದುವರೆಗೆ ಯಾವ ಯುದ್ಧದಲ್ಲಿಯೂ ನಿನ್ನ ಗಾಂಡೀವವನ್ನು ಕೆಳಗಿಟ್ಟವನಲ್ಲ. ಈಗ ನೀನು ಅದನ್ನು ಕೆಳಗಿಟ್ಟರೆ, ಚಂದ್ರನಿಗೆ ಕಳಂಕದಂತೆ, ನಿನಗೆ ಅದೊಂದು ಕಳಂಕವನ್ನು ತರುವುದು" ಎಂದನು. ಆಗ ಅರ್ಜುನನು "ಅಣ್ಣಾ! ನೀನು ಹೇಳುವುದು ಸರಿಯಲ್ಲ! ಗೋವುಗಳು, ಬ್ರಾಹ್ಮಣರು, ಮತ್ತು ಈ ನಾರಾಯಣಾಸ್ತ್ರ, ಇವುಗಳಮುಂದೆ ನಾನು ಗಾಂಡೀವವನ್ನು ಕೆಳಗಿಡಬೇಕಾದುದೇ ಉಚಿತವು! ಇದು ನನ್ನ ಮೇಲಾದ ವ್ರತವು" ಎಂದನು. ಈ ಮಾತನ್ನು ಲಕ್ಷ್ಯಮಾಡದಂತೆಯೇ ಭೀಮನು ಭೂಮಿಯು ಕಂಪಿಸುವಂತೆಯೂ, ನಿನ್ನ ಸೈನ್ಯಗಳನ್ನೆಲ್ಲ ನಡುಗಿಸುವಂತೆಯೂ ಶಂಖಶಬ್ದವನ್ನು ಮಾಡಿ, ಭುಜಗಳನ್ನು ತಟ್ಟುತ್ತ, ರಥವನ್ನು ಮುಂದುವರಿಸಿದನು. ಈ ಶಂಖಧ್ವನಿಯನ್ನು ಕೇಳಿ ನಮ್ಮವರೆಲ್ಲರೂ ಭೀಮನನ್ನು ಸುತ್ತಲೂ ಬಾಣಗಳಿಂದ ನಿವಾರಿಸುತ್ತಿದ್ದರು. ಭೀಮನು ತನ್ನ ಹಸ್ತಲಾಘವದಿಂದ ಆ ಬಾಣಗಳನ್ನೆಲ್ಲ ಭಂಗಿಸಿದನು. ಭೀಮನ ಈ ಪ್ರಯತ್ನವನ್ನು ನೋಡಿ ಅಶ್ವತ್ಥಾಮನು ನಗುಮುಖದಿಂದ ಅವನನ್ನು ಮೂದಲಿಸುತ್ತ, ಮಂತ್ರಿತಗಳಾದ ತನ್ನ ಬಾಣಗಳನ್ನು ಪ್ರಯೋಗಿಸತೊಡಗಿದನು. ಉರಿಯುನ್ನು ಕಕ್ಕುವ ಸರ್ಪಗಳಂತೆ ಆ ಬಾಣಗಳು ಜ್ವಾಲೆಗಳನ್ನು ಕೆದರುತ್ತ ಬಂದು, ಭೀಮನನ್ನು ಆವರಿಸಿಕೊಂಡುವು. ಭೀಮನ ಸುತ್ತಲೂ ಅಗ್ನಿಜ್ವಾಲೆಗಳು ಆವರಿಸಿಕೊಂಡುವು. ಆಗ ಭೀಮನ ಆಕಾರವು ಸಂಧ್ಯಾಕಾಲದಲ್ಲಿ ಮಿಂಚುಹುಳಗಳಿಂದ ಆವರಿಸಲ್ಪಟ್ಟ ಪರ್ವತದಂತೆ ಕಾಣಿಸಿತು. ಸುವರ್ಣಶಕಲಗಳಂತೆ ಅವನ ಸುತ್ತಲೂ ಕಿಡಿಗಳು ಹಾರುತ್ತಿದ್ದುವು. ಭೀಮನ ಈ ಸ್ಥಿತಿಯನ್ನು ನೋಡಿ ಪಾಂಡವಸೈನ್ಯವೆಲ್ಲ ಮಹತ್ತಾದ ಭಯದಿಂದ ತತ್ತಳಿಸುತಿದ್ದಿತು. ಆಗ ಎಲ್ಲರೂ ತಮ್ಮತಮ್ಮ ಶಸ್ತ್ರಗಳನ್ನು ಕೆಳಗಿಟ್ಟು, ತಾವುತಾವು ಕುಳಿತಿದ್ದ ರಥಗಳಿಂದಲೂ, ಆನೆಕುದುರೆಗಳಿಂದಲೂ ಕೆಳಕ್ಕಿಳಿದುಬಿಟ್ಟರು. ಆ ಅಸ್ತ್ರಜ್ವಾಲೆಯು ಭೀಮನೊಬ್ಬನನ್ನುಮಾತ್ರ ಆವರಿಸಿ, ಅವನ ತಲೆಯಮೇಲೆ ಧಗಧಗಾಯಮಾನವಾಗಿ ಉರಿಯತೊಡಗಿತು.

ಸಮಸ್ತಭೂತಗಳೂ ಭಯದಿಂದ ಹಾಹಾಕಾರಮಾಡಿದುವು. ಉರಿಯ ನಡುವೆ ಸಿಕ್ಕಿಬಿದ್ದ ಭೀಮನ ಸ್ಥಿತಿಯನ್ನು ನೋಡಿ ಪಾಂಡವರು "ಹಾ! ಹಾ!" ಎಂದು ಕೂಗುತ್ತಿದ್ದರು.

ಇದು ಇನ್ನೂರನೆಯ ಅಧ್ಯಾಯವು.

ಅಸ್ತ್ರಜ್ವಾಲೆಯಲ್ಲಿ ಸಿಕ್ಕಿದ ಭೀಮನನ್ನು ಕೃಷ್ಣಾರ್ಜುನರು ಬಲಾತ್ಕರಿಸಿ ರಥದಿಂದ ಕೆಳಕ್ಕಿಳಿಸಿ, ಅವನ ಕೈಯಲ್ಲಿದ್ದ ಶಸ್ತ್ರವನ್ನು ಕಿತ್ತುಕೊಂಡಮೇಲೆ, ಅಸ್ತ್ರವು ಶಾಂತವಾದುದು. ಸಂಕುಲಯುದ್ಧವು.

ಧೃತರಾಷ್ಟ್ರಮಹಾರಾಜಾ! ಅಸ್ತ್ರಜ್ವಾಲೆಯು ಭೀಮನನ್ನಾವರಿಸಿಕೊಂಡು, ಅವನ ತಲೆಯಮೇಲೆ ಉರಿಯುತ್ತಿರುವುದನ್ನು ನೋಡಿ, ಅರ್ಜುನನು ಆ ತಾಪಶಮನಾರ್ಥವಾಗಿ, ವಾರುಣಾಸ್ತ್ರವನ್ನು ಪ್ರಯೋಗಿಸಿ ಭೀಮನನ್ನು ತಂಪುಗೊಳಿಸುತ್ತಿದ್ದನು. ಅರ್ಜುನನ ಹಸ್ತಲಾಘವದಿಂದಲೂ, ನಾರಾಯಣಾಸ್ತ್ರದ ತೇಜಸ್ಸು ಸುತ್ತಲೂ ಆವರಿಸಿದ್ದುದರಿಂದಲೂ, ಅರ್ಜುನನು ಬಿಟ್ಟ ಪ್ರತ್ಯಸ್ತ್ರವು ಯಾರ ಕಣ್ಣಿಗೂ ತಿಳಿಯಲಿಲ್ಲ. ಆದರೆ ಭೀಮನು ತನ್ನ ರಥ ರಥಾಶ್ವ ಸಾರಥಿಗಳೊಡನೆ ಅಸ್ತ್ರಜ್ವಾಲೆಯೊಳಗೆ ಅಗ್ನಿಮಧ್ಯದಲ್ಲಿದ್ದಂತೆ ಅಡಗಿದ್ದನು. ನಿಶಾವಸಾನದಲ್ಲಿ ಗ್ರಹನಕ್ಷತ್ರಗಳೆಲ್ಲ ಅಸ್ತಗಿರಿಯಕಡೆಗೆ ಹೋಗುವಂತೆ ಅಶ್ವತ್ಥಾಮನ ಬಾಣಗಳು ಭೀಮನ ರಥದಕಡೆಗೇ ಹೋಗುತ್ತಿದ್ದುವು. ಪ್ರಳಯಕಾಲದಲ್ಲಿ ಜಗತ್ತನ್ನೆಲ್ಲ ನುಂಗಿದಮೇಲೆ ಕಾಲಾಗ್ನಿಯು, ಭಗವಂತನ ಬಾಯಲ್ಲಿ ಐಕ್ಯಹೊಂದುವಂತೆ, ಆ ಅಸ್ತ್ರಜ್ವಾಲೆಯು ಭೀಮನ ಮುಖದಲ್ಲಿ ಅಡಗುಳಿದ್ದಿತು. ಸೂರ್ಯನಲ್ಲಿ ಅಗ್ನಿಯೂ, ಅಗ್ನಿಯಲ್ಲಿ ಸೂರ್ಯನೂ ಅಡಗುವಂತೆ, ತೇಜಸ್ವಿಯಾದ ಭೀಮನಲ್ಲಿ ಆ ಅಸ್ತ್ರಜ್ವಾಲೆಯು ಒಂದಾಗಿ ಅಡಗಿದ್ದಿತು. ಆಗಾಗ ಆ ಅಸ್ತ್ರಕ್ಕಿದಿರಾಗಿ ಭೀಮನು ಮಾಡುವ ಹುಂಕಾರಕ್ಕೆ ಅದು ಸ್ವಲ್ಪ ಹಿಂದೆ ಸರಿಯುತ್ತ, ತಿರುಗಿತಿರುಗಿ ಭೀಮನನ್ನು ಆವರಿಸುತ್ತಿದ್ದಿತು. ಭೀಮನ ಈ ಪ್ರಭಾವವನ್ನು ನೋಡಿ ದೇವ ಗಂಧರ್ವರೆಲ್ಲರೂ ವಿಸ್ಮಿತರಾದರು. ಭೀಮನ ರಥದ ಸುತ್ತಲೂ, ಅಸ್ತ್ರಜ್ವಾಲೆಯು

ಆವರಿಸಿರುವುದನ್ನೂ, ಅಶ್ವತ್ಥಾಮನು ಮೇಲೆಮೇಲೆ ಎಣೆಯಿಲ್ಲದ ವೀರ್ಯದಲ್ಲಿ ಪ್ರಬಲಿಸುತ್ತಿರುವುದನ್ನೂ ನೋಡಿ, ಪಾಂಡವಸೈನ್ಯವೆಲ್ಲಾ ಬೆಜ್ಜರಗೊಂಡು ಆಯುಧವನ್ನು ಕೆಳಗಿಟ್ಟು, ಮಂಕುಹಿಡಿದಂತೆ ನಿಂತು ನೋಡುತ್ತಿದ್ದುವು. ಯುಧಿಷ್ಠಿರನೇ ಮೊದಲಾದ ಮಹಾರಥರೆಲ್ಲರೂ ಯುದ್ಧದಿಂದ ಹಿಂಜರಿದರು. ಇದನ್ನೆಲ್ಲ ನೋಡಿ ಕೃಷ್ಣಾರ್ಜುನರಿಬ್ಬರೂ ಥಟ್ಟನೆ ರಥದಿಂದ ಕೆಳಕ್ಕಿಳಿದು, ತಮ್ಮತಮ್ಮ ಶಸ್ತ್ರಗಳನ್ನು ಕೆಳಗಿಟ್ಟು, ತಮ್ಮ ಮಾಯಾಬಲದಿಂದ ಅಶ್ವತ್ಥಾಮನ ಅಸ್ತ್ರದ ಜ್ವಾಲೆಯಲ್ಲಿ ನಿರ್ಭಯವಾಗಿ ಪ್ರವೇಶಿಸಿದರು. ನಿರಾಯುಧರಾಗಿ ಬಂದುದರಿಂದ ಆ ಅಸ್ತ್ರಜ್ವಾಲೆಯು ಅವರನ್ನೇನೂ ಬಾಧಿಸಲಿಲ್ಲ. ಅರ್ಜುನನು ಪ್ರಯೋಗಿಸಿದ ವಾರುಣಾಸ್ತ್ರದಿಂದಲೂ, ಕೃಷ್ಣಾರ್ಜುನರಲ್ಲಿರತಕ್ಕ ಅಸಾಧಾರಣವೀರ್ಯದಿಂದಲೂ, ಅವರಿಬ್ಬರೂ ಅಗ್ನಿತಾಪದಿಂದ ಬಾಧೆಗೀಡಾಗದೆ, ಥಟ್ಟನೆ ಹೋಗಿ ಆ ಭೀಮನನ್ನು ರಥದಿಂದ ಕೆಳಕ್ಕಿಳಿಸಿ ಅವನ ಕೈಯಲ್ಲಿದ್ದ ಆಯುಧಗಳನ್ನೂ ಕಿತ್ತು ಕೆಳಗಿಟ್ಟರು. ಆಗಲೂ ಭೀಮನು ಕೋಪದಿಂದ ಮಹಾಧ್ವನಿಯೊಡನೆ ಗರ್ಜಿಸುತ್ತಿದ್ದನು. ಅವನು ಕೋಪದಿಂದ ಆರ್ಭಟಿಸುತ್ತಿದ್ದಷ್ಟೂ, ಅಶ್ವತ್ಥಾಮನ ಅಸ್ತ್ರವು ಭಯಂಕರಜ್ವಾಲೆಗಳನ್ನು ಕೆದರುತ್ತಿದ್ದಿತು. ಆಗ ಕೃಷ್ಣನು ಭೀಮನನ್ನು ಕುರಿತು, “ಭೀಮಸೇನಾ! ಏನಿದು? ನಿನ್ನನ್ನು ಎಷ್ಟುವಿಧವಾಗಿ ತಡೆದರೂ, ನೀನು ಯುದ್ಧದಿಂದ ಹಿಂಜರಿಯುವುದಿಲ್ಲ. ಈಗ ಯುದ್ಧದಿಂದಲೇ ಈ ಕೌರವರನ್ನು ನಾವು ಜಯಿಸುವಹಾಗಿದ್ದಪಕ್ಷದಲ್ಲಿ, ನಾವೂ, ಇತರರಾಜರೂ ಯುದ್ಧಮಾಡುತ್ತಲೇ ಇರುತ್ತಿದ್ದೆವೇಹೊರತು, ಹೀಗೆ ಯುದ್ಧಕ್ಕೆ ವಿಮುಖರಾಗಿರುತ್ತಿರಲಿಲ್ಲ. ನಿನ್ನ ಕಡೆಯವರೆಲ್ಲರೂ ರಥವನ್ನು ಬಿಟ್ಟು ನಿರಾಯುಧರಾಗಿರುವುದನ್ನು ನೋಡು. ನೀನೂ ರಥದಿಂದಿಳಿದು ನಿಲ್ಲು” ಎಂದು ಬಲಾತ್ಕಾರದಿಂದೆಳೆದು ಅವನನ್ನು ನೆಲದಮೇಲೆ ನಿಲ್ಲಿಸಿಟ್ಟರು. ಭೀಮನು ಕೋಪದಿಂದ ಸರ್ಪದಂತೆ ಬುಸುಗುಟ್ಟುತ್ತಲೇ ಇದ್ದನು. ಕೃಷ್ಣಾರ್ಜುನರು ಅವನನ್ನು ಕೆಳಕ್ಕಿಳಿಸಿ, ಅವನ ಆಯುಧವನ್ನು ತೆಗೆದಿರಿಸಿದಮೇಲೆ ನಾರಾಯಣಾಸ್ತ್ರವು ಶಾಂತವಾಯಿತು. ದಿಕ್ಕುವಿದಿಕ್ಕುಗಳೆಲ್ಲಾ ಸ್ವಚ್ಛವಾಗಿ ಪ್ರಕಾಶವಿಶಿಷ್ಟವಾದುವು! ತಂಪಾದ ಗಾಳಿಯು ಬೀಸಿತು! ಮೃಗಪಕ್ಷಿಗಳು ಶಾಂತಿಯನ್ನು ಹೊಂದಿದುವು. ವಾಹನಗಳೆಲ್ಲಾ ಸಂತೋಷಗೊಂಡುವು. ರಾತ್ರಿಯು ಕಳೆದು

ಬೆಳಗಾದಮೇಲೆ ಸೂರ್ಯನು ಹೇಗೋಹಾಗೆ, ಭೀಮನೂ ಅಸ್ತ್ರಜ್ವಾಲೆಯಿಂದ ಮುಕ್ತನಾದನು. ಪಾಂಡವಸೇನೆಯೆಲ್ಲಾ ಸಂತೋಷದಿಂದ ತಿರುಗಿ ಯುದ್ಧದಲ್ಲಿ ಉತ್ಸಾಹಗೊಂಡುವು. ಇಷ್ಟರಲ್ಲಿ ಅತ್ತಲಾಗಿ ದುರ್ಯೋಧನನು ಅಶ್ವತ್ಥಾಮನನ್ನು ಕುರಿತು, "ಓ ಅಶ್ವತ್ಥಾಮಾ! ಇನ್ನೊನ್ಮೆ ಅದೇ ಅಸ್ತ್ರವನ್ನು ಪ್ರಯೋಗಿಸು. ನೀನು ಮೊದಲು ಬಿಟ್ಟ ಅಸ್ತ್ರವು ಶಾಂತವಾದುದರಿಂದ, ಪಾಂಚಾಲರು ಉಬ್ಬಿ ಬರುತ್ತಿರುವರು ನೋಡು" ಎಂದನು. ಈ ಮಾತನ್ನು ಕೇಳಿ ಅಶ್ವತ್ಥಾಮನು ಬಹಳ ದೈನ್ಯದಿಂದ ನಿಟ್ಟುಸಿರುಬಿಡುತ್ತಾ, ನಿನ್ನ ಮಗನನ್ನು ಕುರಿತು "ರಾಜಾ! ಆ ಅಸ್ತ್ರಕ್ಕೆ ಪುನರಾವೃತ್ತಿಯಿಲ್ಲ. ಎರಡನೆಯಸಾರಿ ಅದು ನಮಗೆ ವಶವಾಗದು. ಎರಡನೇ ಆವರ್ತಿ ಪ್ರಯೋಗಿಸಿದರೆ, ಅದು ಹಿಂತಿರುಗಿ ಪ್ರಯೋಗಿಸಿದವನ ಕಡೆಗೇ ತಿರುಗಿಬರುವುದು. ಆದುದರಿಂದ ಆ ಪ್ರಯತ್ನದಿಂದ ಫಲವಿಲ್ಲ. ಈ ಅಸ್ತ್ರದ ಪ್ರತೀಕಾರವನ್ನು ಬಲ್ಲ ವಾಸುದೇವನು, ಅದರ ಶಾಂತಿಗೆ ತಕ್ಕ ಉಪಾಯವನ್ನು ಮಾಡಿದನು. ಆ ಅಸ್ತ್ರವನ್ನು ಕೊಟ್ಟವನೂ ಅವನೇ! ಮನುಷ್ಯರಲ್ಲಿ ಅಂತಹ ಶಕ್ತಿಯುಳ್ಳವನೇ ಇಲ್ಲ. ಅವನು ಲೋಕಗಳ ಪರಾವರವನ್ನು ತಿಳಿದವನು. ಲೋಕದಲ್ಲಿ ಅವನಿಗೆ ತಿಳಿಯದುದೊಂದೂ ಇಲ್ಲ. ಆ ಕೃಷ್ಣನ ತಂತ್ರದಿಂದ ಆ ಅಸ್ತ್ರವು ಶಾಂತಿಯನ್ನು ಹೊಂದಿತು. ರಾಜಾ! ಆದರೇನು? ಈ ಪಾಂಡವರು ನನಗೆ ಪರಾಜಿತರಾದಂತೆಯೇ ಹೊರತು, ಅವರಿಗೆ ಇದರಿಂದ ಜಯವೆಂದು ತಿಳಿಯಬೇಡ. ಯುದ್ಧದಲ್ಲಿ ಶತ್ರುವಿಗೆ ಪರಾಜಯವೊಂದು, ಅಥವಾ ವಧವೊಂದು ಇವೆರಡೇ ಪ್ರತೀಕಾರಗಳು. ಇವರಲ್ಲಿ ಯಾವುದೋ ಒಂದು ನಡೆಯಬೇಕಲ್ಲವೆ? ಶತ್ರುವಿಗೆ ಯುದ್ಧದಲ್ಲಿ ಪರಾಜಯಕ್ಕಿಂತಲೂ ಮರಣವೇ ಮೇಲೆಂದು ತಿಳಿ. ಸತ್ತವನಿಗೆ ಅಪಮಾನವಿಲ್ಲ. ಪರಾಜಿತನು ಮೃತಪ್ರಾಯನಾಗಿ ಅವಮಾನಿತನಾಗುವನು. ಈಗ ಪಾಂಡವರು ಆಯುಧವನ್ನು ಕೆಳಗಿಟ್ಟು ಯುದ್ಧಕ್ಕೆ ಹಿಂಜರಿದುದರಿಂದ, ಅವರು ಪರಾಜಿತರಾದಂತೆಯೇ! ಇದರಿಂದ ಅವರು ಮೃತಪ್ರಾಯರೇ ಆಗಿರುವರು" ಎಂದನು. ಆಗ ದುರ್ಯೋಧನನು "ಆಚಾರ್ಯಪುತ್ರಾ! ಈ ಅಸ್ತ್ರವನ್ನು ತಿರುಗಿ ಪ್ರಯೋಗಿಸುವುದಕ್ಕೆ ಸಾಧ್ಯವಿಲ್ಲದಿದ್ದರೆ, ನೀನು ಆ ಗುರುಘಾತುಕರನ್ನು ಕೊಲ್ಲುವುದಕ್ಕಾಗಿ ಬೇರೆ ಯಾವುದಾದರೂ ಅಸ್ತ್ರವನ್ನು ಪ್ರಯೋಗಿಸು. ಅಸ್ತ್ರಜ್ಞರಲ್ಲಿ

ಮೇಲೆನಿಸಿದ ನೀನು ಬೇರೆ ಅಸ್ತ್ರಗಳಿಂದ ಅವರನ್ನು ಕೊಲ್ಲುವುದಕ್ಕೆ ಪ್ರಯತ್ನಿಸು! ಮಹಾತ್ಮನಾದ ರುದ್ರನಲ್ಲಿ, ಮತ್ತು ನಿನ್ನಲ್ಲಿ, ಇಬ್ಬರಲ್ಲಿಯೇ ಅಂತಹ ದಿವ್ಯಾಸ್ತ್ರಗಳೆಲ್ಲವೂ ಸಮೃದ್ಧವಾಗಿರುವುವು. ನೀನು ಮನಸ್ಸಿಟ್ಟರೆ ಇಂದ್ರನಾದರೂ ನಿನ್ನ ಕೈಯಿಂದ ಬದುಕಿಹೋಗಲಾರನು. ಆದುದರಿಂದ ಈ ಶತ್ರುಗಳನ್ನೆಲ್ಲಾ ನೀನು ನಿನ್ನ ಅಸ್ತ್ರಪ್ರಭಾವದಿಂದ ಈಗಲೇ ವಧಿಸಿಬಿಡು" ಎಂದನು. ಈ ನಡುವೆ ಧೃತರಾಷ್ಟ್ರನು ಸಂಜಯನನ್ನು ಕುರಿತು "ಸಂಜಯಾ! ಏನಿದು? ದ್ರೋಣಪುತ್ರನ ಅಂತಹ ಮಹಾಸ್ತ್ರವೂ ವಿಫಲವಾಯಿತು! ಅವನ ತಂದೆಯಾದ ದ್ರೋಣನೂ ಮೋಸದಿಂದ ವಧಿಸಲ್ಪಟ್ಟನು. ಇಷ್ಟಾದಮೇಲೆಯೂ ಆ ಅಶ್ವತ್ಥಾಮನು ಸುಮ್ಮನಿದ್ದನೇ? ಇತ್ತಲಾಗಿ ನನ್ನ ಮಗನ ಮಾತನ್ನೂ, ಅತ್ತಲಾಗಿ ಯುದ್ಧಸನ್ನಾಹದಿಂದ ಆರ್ಭಟಿಸುತ್ತಿರುವ ಪಾಂಡವರ ಕೂಗನ್ನೂ ಕೇಳಿದಮೇಲೆ ಅಶ್ವತ್ಥಾಮನು ಮಾಡಿದುದೇನು?" ಎಂದನು. ಅದಕ್ಕಾ ಸಂಜಯನು "ಮಹಾರಾಜಾ! ಸಿಂಹಲಾಂಗೂಲಧ್ವಜವುಳ್ಳ ಆ ಅಶ್ವತ್ಥಾಮನಿಗೆ, ತನ್ನ ತಂದೆಯ ಮರಣದಿಂದುಂಟಾದ ಕೋಪವು ಆರಲೇ ಇಲ್ಲ. ಅವನು ತಿರುಗಿ ಆ ಧೃಷ್ಟದ್ಯುಮ್ನನನ್ನಿದಿರಿಸಿ ಅವನಮೇಲೆ ಮೊದಲು ಇಪ್ಪತ್ತೈದು ಬಾಣಗಳನ್ನು ಹೊಡೆದನು. ಪ್ರತಿಯಾಗಿ ಧೃಷ್ಟದ್ಯುಮ್ನನೂ, ಅರುವತ್ತು ಬಾಣಗಳನ್ನು ಬಿಟ್ಟು, ಇಪ್ಪತ್ತು ಬಾಣಗಳಿಂದ ಅವನ ಸಾರಥಿಯನ್ನೂ, ನಾಲ್ಕು ಬಾಣಗಳಿಂದ ಅವನ ನಾಲ್ಕು ರಥಾಶ್ವಗಳನ್ನೂ, ಬಲವಾಗಿ ನೋಯಿಸಿದನು. ಹೀಗೆ ಧೃಷ್ಟದ್ಯುಮ್ನನು ಅಶ್ವತ್ಥಾಮನಮೇಲೆ ಒಂದೊಂದು ಬಾಣವನ್ನು ಬಿಟ್ಟಾಗಲೂ, ಒಂದೊಂದಾವರ್ತಿ ಭೂಮಿಯು ನಡುಗುವಂತೆ ಗರ್ಜಿಸುತ್ತಿದ್ದನು. ಆಗ ಧೃಷ್ಟದ್ಯುಮ್ನನು ಸಮಸ್ತಲೋಕಗಳ ಪ್ರಾಣಗಳನ್ನೂ ಹೀರುವಂತೆ ಅತಿ ರೌದ್ರಭಾವದಿಂದಿದ್ದನು. ಮಹಾ ಬಲಾಢ್ಯನೂ, ಅಸ್ತ್ರಗಳಲ್ಲಿ ಸುಶಿಕ್ಷಿತನೂ, ಧೃಢಸಂಕಲ್ಪವುಳ್ಳವನೂ, ಆದ ಪಾಂಚಾಲನು ಮರಣಕ್ಕಂಜದೆ ಅಶ್ವತ್ಥಾಮನನ್ನು ವೇಗದಿಂದಿದಿರಿಸಿ ಎಡೆಬಿಡದೆ ಬಾಣವರ್ಷಗಳನ್ನು ಕರೆದನು. ದ್ರೋಣಪುತ್ರನೂ ಕೂಡ ಆ ಪಾಂಚಾಲನನ್ನು ಬಾಣಗಳಿಂದ ಮುಚ್ಚುತ್ತ, ಅವನ ಧ್ವಜವನ್ನೂ, ಬಿಲ್ಲನ್ನೂ ಕತ್ತರಿಸಿ, ಅವನ ರಥಾಶ್ವಗಳನ್ನೂ, ಸಾರಥಿಯನ್ನೂ ಕೊಂದುಕೆಡಹಿದನು. ಅವನ ಅನುಚರರನ್ನೆಲ್ಲ ಓಡಿಸಿದನು. ಆಗ ಪಾಂಚಾಲಸೈನ್ಯ

ಲ್ಲ ಕಣ್ಣೆತ್ತಿಯೂ ನೋಡಲಾರದೆ ದಿಕ್ಕುಗೆಟ್ಟು ಓಡಿದುವು. ಹೀಗೆ ೃಷ್ಟದ್ಯುಮ್ನನು ಅಶ್ವತ್ಥಾಮನಿಂದ ಪೀಡಿತನಾಗಿ, ಅವನ ಸೈನ್ಯಗಳೂ, ಡುತ್ತಿರುವುದನ್ನು ನೋಡಿ, ಸಾತ್ಯಕಿಯು ಅವನ ರಕ್ಷಣೆಗಾಗಿ ಓಡಿಬಂದು, ಶ್ವತ್ಥಾಮನನ್ನಿದಿರಿಸಿ ಎಂಟು ತೀವ್ರಬಾಣಗಳಿಂದ ಅವನನ್ನು ಹೊಡೆ ನು. ಇಪ್ಪತ್ತುಬಾಣಗಳಿಂದ ಅವನ ಸಾರಥಿಯನ್ನು ಕೆಡಹಿ, ನಾಲ್ಕು ಾಣಗಳಿಂದ ಅಶ್ವತ್ಥಾಮನ ನಾಲ್ಕು ಕುದುರೆಗಳನ್ನೂ ಕೊಂದುಬಿಟ್ಟನು. ಶ್ವತ್ಥಾಮನ ಬಿಲ್ಲನ್ನೂ, ಧ್ವಜವನ್ನೂ ಭೇದಿಸಿದನು. ರಥವನ್ನು ಮುರಿ ನು. ಬೇರೆ ಮೂವತ್ತುಬಾಣಗಳನ್ನು ಅಶ್ವತ್ಥಾಮನ ಎದೆಗೆ ಗುರಿಯಿಟ್ಟು ೊಡೆದನು. ಇದರಿಂದ ಅಶ್ವತ್ಥಾಮನಿಗೆ ಪ್ರಜ್ಞೆತಪ್ಪಿದಂತಾಯಿತು. ಅಶ್ವ ್ಥಾಮನ ಈ ಸ್ಥಿತಿಯನ್ನು ನೋಡಿ ದುರ್ಯೋಧನನು ಕರ್ಣಕೃಪಾದಿ ುಹಾರಥರೊಡನೆ ಬಂದು, ಸಾತ್ಯಕಿಯನ್ನಿದಿರಿಸಿ, ಅವನಮೇಲೆ ದುರ್ಯೋ ನನು ಇಪ್ಪತ್ತು, ಕೃಪನು ನೂರು, ಕೃತವರ್ಮನು ಹತ್ತು, ಕರ್ಣನು ವತ್ತು, ದುಶ್ಶಾಸನನು ನೂರು, ವೃಷಸೇನನು ಏಳು, ಹೀಗೆ ಏಕಕಾಲ ಲ್ಲಿ ಬಾಣಗಳನ್ನು ಪ್ರಯೋಗಿಸಿದರು. ಆದರೇನು? ಸಾತ್ಯಕಿಯು ಕ್ಷಣ ಾತ್ರದಲ್ಲಿ ಆ ಮಹಾರಥರನ್ನೆಲ್ಲಾ ವಿರಥರನ್ನಾಗಿ ಮಾಡಿ, ಅವರನ್ನೆಲ್ಲ ಂತಿರುಗಿಸಿಬಿಟ್ಟನು. ಇಷ್ಟರಲ್ಲಿಯೇ ಅಶ್ವತ್ಥಾಮನೂ ಚೇತರಿಸಿಕೊಂಡು ೇಲೆದ್ದು, ತನಗಾದ ಪರಿಭವಕ್ಕಾಗಿ ನಿಟ್ಟುಸಿರನ್ನು ಬಿಡುತ್ತ, ಕೊನೆಗೆ ೇರೊಂದು ರಥವನ್ನೇರಿ ಕುಳಿತು, ನೂರಾರು ಬಾಣಗಳನ್ನು ಪ್ರಯೋ ಸಿ, ತಿರುಗಿ ಸಾತ್ಯಕಿಯನ್ನಿದಿರಿಸಿದನು. ಸಾತ್ಯಕಿಯು ತಿರುಗಿ ಅವನ ಥವನ್ನು ಮುರಿದು, ಅವನು ಹಿಂತಿರುಗುವಂತೆ ಮಾಡಿದನು. ಸಾತ್ಯ ಯು ಈ ಅಸಾಧಾರಣಪರಾಕ್ರಮವನ್ನು ನೋಡಿ, ಪಾಂಡವರೆಲ್ಲಾ ಸಂ ೋಷದಿಂದ ಸಿಂಹನಾದಮಾಡಿ, ಜಯಶಂಖಗಳನ್ನೂದಿದರು. ಇಷ್ಟರ ್ಲಿಯೇ ಸಾತ್ಯಕಿಯು ವೃಷಸೇನನಿಗೆ ಬೆಂಬಲವಾಗಿ ಬಂದು, ಮೂರುಸಾವಿರ ುಂದಿ ಮಹಾರಥರನ್ನು ಕೊಂದುಬಿಟ್ಟನು. ಕೃಪನಿಗೆ ಸಹಾಯವಾಗಿ ಂದ ಹತ್ತುಸಾವಿರ ಆನೆಗಳನ್ನೂ, ಶಕುನಿಯ ಸೈನ್ಯದಲ್ಲಿದ್ದ ಐವತ್ತುಸಾ ರ ಕುದುರೆಗಳನ್ನೂ ಕೊಂದುಕೆಡಹಿದನು. ಇಷ್ಟರಲ್ಲಿಯೇ ಅಶ್ವತ್ಥಾ ುನು ಬೇರೊಂದು ರಥವನ್ನೇರಿ ಸಾತ್ಯಕಿಯನ್ನು ವಧಿಸುವ ಉದ್ದೇಶದಿಂದ

ಮುಂದೆಬಂದನು. ತಿರುಗಿ ಸಾತ್ಯಕಿಯು ಅಶ್ವತ್ಥಾಮನನ್ನು ತನ್ನ ತೀವ್ರ ಬಾಣಗಳಿಂದ ಬಲವಾಗಿ ನೋಯಿಸಿದನು. ಹೀಗೆ ಬಾರಿಬಾರಿಗೂ ಸಾತ್ಯಕಿಯ ಪ್ರಹಾರದಿಂದ ನೊಂದ ಅಶ್ವತ್ಥಾಮನು ಕೋಪದಿಂದ ಆ ಸಾತ್ಯಕಿಯನ್ನು ನೋಡಿ ನಗುತ್ತ "ಓ ಶಿನಿಕುಮಾರಾ! ಗುರುಹತ್ಯೆಮಾಡಿದ ಆ ಪಾಪಿ ಪಾಂಚಾಲನಲ್ಲಿ ನಿನಗಿರತಕ್ಕ ಕನಿಕರವನ್ನು ನಾನು ಬಲ್ಲೆನು. ಆದರೇನು? ಅವನನ್ನು ನೀನು ಹೇಗೂ ನನ್ನಿಂದ ಬದುಕಿಸಿಕೊಳ್ಳಲಾರೆ! ನೀನೂ ನನ್ನಿಂದ ಬದುಕಿಹೋಗಲಾರೆ. ನನ್ನ ಸತ್ಯದಮೇಲೆ, ತಪಸ್ಸಿನಮೇಲೆ, ನನ್ನಮೇಲೆ ಆಣೆಯಿಟ್ಟು ಹೇಳುವೆನು! ಪಾಂಚಾಲ್ಯರನ್ನೆಲ್ಲ ಕೊಂದಹೊರತು, ನನ್ನ ಮನಸ್ಸು ಶಾಂತಿಯನ್ನು ಹೊಂದುವುದಿಲ್ಲ. ಪಾಂಡವರಲ್ಲಿ, ಮತ್ತು ವೃಷ್ಣಿಗಳಲ್ಲಿ ಎಷ್ಟೆಷ್ಟು ಸೇನಾಬಲವುಂಟೋ ಅವೆಲ್ಲವೂ ಸೇರಿಬರಲಿ! ಅವರು ತಮ್ಮ ಪರಾಕ್ರಮಸರ್ವಸ್ವವನ್ನೂ ನನ್ನಮುಂದೆ ತೋರಿಸಲಿ! ನಾನು ಸೋಮಕರನ್ನೆಲ್ಲ ಕೊಂದೇ ತೀರಿಸುವೆನು" ಎಂದು ಹೇಳಿ, ಅಶ್ವತ್ಥಾಮನು ವೃತ್ರವಧಕ್ಕಾಗಿ ಇಂದ್ರನು ವಜ್ರಾಯುಧವನ್ನು ಪ್ರಯೋಗಿಸಿದಂತೆ, ಆ ಸಾತ್ಯಕಿಯಮೇಲೆ ತೀಕ್ಷ್ಣಬಾಣವನ್ನು ಪ್ರಯೋಗಿಸಿದನು. ಅಶ್ವತ್ಥಾಮನ ಬಾಣವು ಸಾತ್ಯಕಿಯ ಕವಚವನ್ನು ಭೇದಿಸಿಕೊಂಡುಹೋಗಿ, ಬಿಲದಲ್ಲಿ ಹುಗುವ ಸರ್ಪದಂತೆ ನೆಲದಲ್ಲಿ ನಾಟಿತು. ಸಾತ್ಯಕಿಯ ಕೈಯಿಂದ ಧನುರ್ಬಾಣಗಳು ಜಾರಿದುವು. ಅವನಿಗೆ ಬಹಳಗಾಯವಾಗಿ ಮೈಯಿಂದ ರಕ್ತವು ಸುರಿಯಿತು. ರಥದ ಗದ್ದುಗೆಯಮೇಲೆ ಕುಳಿತುಬಿಟ್ಟನು. ಒಡನೆ ಸಾರಥಿಯು ಅವನನ್ನು ಬೇರೆ ರಥಕ್ಕೇರಿಸಿಕೊಂಡು, ಹಿಂದಕ್ಕೆ ಸಾಗಿಸಿಬಿಟ್ಟನು. ಆಮೇಲೆ ಅಶ್ವತ್ಥಾಮನು ಧೃಷ್ಟದ್ಯುಮ್ನನ ಹುಬ್ಬುಗಳ ಮಧ್ಯಭಾಗಕ್ಕೆ ಗುರಿಯಿಟ್ಟು ಒಂದು ತೀಕ್ಷ್ಣಬಾಣವನ್ನು ಹೊಡೆದನು. ಮೊದಲೇ ನೊಂದಿದ್ದ ಧೃಷ್ಟದ್ಯುಮ್ನನು, ಈ ಬಾಣಪ್ರಹಾರದಿಂದ ಬಹಳವಾಗಿ ನೊಂದು, ರಥದಮೇಲೆಯೇ ಧ್ವಜವನ್ನೊರಗಿ ಕುಳಿತುಬಿಟ್ಟನು. ಸಿಂಹದ ಕೈಗೆ ಸಿಕ್ಕಿದ ಆನೆಯಂತೆ, ಅವನು ಅಶ್ವತ್ಥಾಮನಿಂದ ಪೀಡಿತನಾದುದನ್ನು ನೋಡಿ, ಪಾಂಡವರ ಕಡೆಯಲ್ಲಿ ಅರ್ಜುನನು, ಭೀಮನು, ಪುರುವಂಶದ ವೃದ್ಧಕ್ಷತ್ರನು, ಚೇದಿರಾಜಕುಮಾರನು, ಸುದರ್ಶನನೆಂಬ ಮಾಳವರಾಜನು, ಈ ಐದುಮಂದಿ ಮಹಾರಥರೂ ಧನುರ್ಧಾರಿಗಳಾಗಿ ಅಶ್ವತ್ಥಾಮನಿಗೆ ಇಷ್ಟ

ತ್ತುಹೆಜ್ಜೆಯ ದೂರದಲ್ಲಿ ನಿಂತು, ಒಬ್ಬೊಬ್ಬರೂ ಏಕಕಾಲದಲ್ಲಿ ಐದೈದು ಬಾಣಗಳನ್ನು ಪ್ರಯೋಗಿಸಿದರು. ಅಶ್ವತ್ಥಾಮನು ಇಪ್ಪತ್ತೈದು ಬಾಣಗಳಿಂದ ಅವರ ಬಾಣಗಳನ್ನೆಲ್ಲಾ ಭಂಗಿಸಿದುದಲ್ಲದೆ, ವೃದ್ಧಕ್ಷತ್ರನಿಗೆ ಏಳು, ಸುದರ್ಶನನಿಗೆ ಮೂರು, ಅರ್ಜುನನಿಗೆ ಒಂದು, ಭೀಮನಿಗೆ ಆರು, ಹೀಗೆ ಬೇರೆಬೇರೆಯಾಗಿ ಅವರಮೇಲೆ ಬಾಣಗಳನ್ನು ಹೊಡೆದನು. ಅವರೂ ಹಾಗೆಯೇ ಒಂದಾಗಿ ಸೇರಿಯೂ, ಬೇರೆಬೇರೆಯಾಗಿಯೂ, ಅಶ್ವತ್ಥಾಮನಮೇಲೆ ಬಾಣಗಳನ್ನು ಪ್ರಯೋಗಿಸಿದರು. ಚೇದಿಕುಮಾರನು ಇಪ್ಪತ್ತು, ಅರ್ಜುನನು ಎಂಟು, ಉಳಿದ ಮೂವರೂ ಮೂರುಮೂರು ಹೀಗೆ ಬಾಣಗಳನ್ನು ಪ್ರಯೋಗಿಸಿದರು. ಅದಕ್ಕೆ ಪ್ರತಿಯಾಗಿ ಅಶ್ವತ್ಥಾಮನು ಅರ್ಜುನನಿಗೆ ಆರು, ಕೃಷ್ಣನಿಗೆ ಹತ್ತು, ಭೀಮನಿಗೆ ಐದು, ಚೇದಿರಾಜಕುಮಾರನಿಗೆ ನಾಲ್ಕು, ಮಾಳವ ಪೌರವರಾಜರ ಮೇಲೆ ಎರಡೆರಡು ಬಾಣಗಳನ್ನು ಬಿಟ್ಟನು. ಆರು ಬಾಣಗಳಿಂದ ಭೀಮನ ಸಾರಥಿಯನ್ನೂ, ಎರಡುಬಾಣಗಳಿಂದ ಭೀಮನ ಛತ್ರಧ್ವಜಗಳನ್ನೂ ಭೇದಿಸಿದನು. ಅರ್ಜುನನಮೇಲೆ ಬಾಣವರ್ಷಗಳನ್ನು ಕರೆದು, ದೊಡ್ಡ ಸಿಂಹನಾದವನ್ನು ಮಾಡಿದನು. ಇದಿರಾದ ಶತ್ರುಗಳ ಹಿಂದೆಮುಂದೆಯೆಲ್ಲಾ ಬಾಣವರ್ಷವನ್ನು ಸುರಿಸಿದನು. ಭೂಮ್ಯಾಕಾಶದಿಕ್ಕುವಿದಿಕ್ಕುಗಳೆಲ್ಲ ಬಾಣಮಯವಾಯಿತು. ಈ ನಡುವೆ ಅಶ್ವತ್ಥಾಮನು ತನ್ನನ್ನಿದಿರಿಸಬೇಕೆಂದು ವೇಗದಿಂದ ಬರುತಿದ್ದ ಸುದರ್ಶನನೆಂಬ ಮಾಳವರಾಜನ ಭುಜಗಳನ್ನೂ, ತಲೆಯನ್ನೂ ಮೂರೇಬಾಣಗಳಿಂದ ಒಂದೇಸಲಕ್ಕೆ ಕತ್ತರಿಸಿ ಕೆಡಹಿದನು. ಅವನ ಸಾರಥಿ ರಥಾಶ್ವಗಳೊಡನೆ ಅವನನ್ನು ಮೃತ್ಯುವಿಗೆ ಬಲಿಯಾಗಿಸಿದನು. ಚೇದಿರಾಜಕುಮಾರನನ್ನೂ ತೀರಿಸಿಬಿಟ್ಟನು. ಹೀಗೆ ಅಶ್ವತ್ಥಾಮನಿಂದ ಮಾಳವ ಪೌರವರಾಜರಿಬ್ಬರೂ ಹತರಾದುದನ್ನು ನೋಡಿ, ಭೀಮನು ಮಿತಿಮೀರಿದ ಕೋಪದಿಂದ ಅಶ್ವತ್ಥಾಮನಮೇಲೆ ಅಸಂಖ್ಯಾತಬಾಣಗಳನ್ನು ಕರೆದನು. ಅಶ್ವತ್ಥಾಮನು ಅವನ್ನೆಲ್ಲಾ ತನ್ನ ಬಾಣಗಳಿಂದ ಭಂಗಿಸಲು, ಭೀಮನು ಮತ್ತಷ್ಟು ರೇಗಿ, ಒಂದು ತೀವ್ರಬಾಣದಿಂದ ಅಶ್ವತ್ಥಾಮನ ಬಿಲ್ಲನ್ನು ಕತ್ತರಿಸಿ, ಅವನನ್ನೂ ಬಹಳವಾಗಿ ನೋಯಿಸಿದನು. ಅಶ್ವತ್ಥಾಮನು ಒಡನೆಯೇ ಬೇರೆ ಬಿಲ್ಲನ್ನೆತ್ತಿಕೊಂಡು, ತಿರುಗಿ ಭೀಮನಮೇಲೆ ಬಾಣಗಳನ್ನು ಬಿಟ್ಟನು. ಇಬ್ಬರೂ

ಅನ್ಯೋನ್ಯವಾಗಿ ಬಾಣದ ಮಳೆಗಳನ್ನು ಕರೆಯುತ್ತಿದ್ದರು. ಅತ್ತಲಾಗಿ ಭೀಮನಾಮಾಂಕಿತಗಳಾದ ಬಾಣಗಳೂ, ಇತ್ತಲಾಗಿ ಅಶ್ವತ್ಥಾಮನಾಮಾಂಕಿತಗಳಾದ ಬಾಣಗಳೂ, ನೂರುಸಾವಿರ ಸಂಖ್ಯೆಯಲ್ಲಿ ಆಕಾಶವನ್ನೆಲ್ಲ ಆವರಿಸಿಕೊಂಡುವು. ಇಬ್ಬರಲ್ಲಿ ಯಾರೂ ಹಿಂಜರಿಯದೆ ಹೋರಾಡುತ್ತಿದ್ದರು. ಇವರ ಸಮಯುದ್ಧವು ಆಶ್ಚರ್ಯಕರವಾಯಿತು. ಈ ನಡುವೆ ಭೀಮನು ಯಮದಂಡಕ್ಕೆ ಸಮಾನವಾದ ಒಂದು ಬಾಣವನ್ನು ಅಶ್ವತ್ಥಾಮನ ಮೊಳಕಾಲಿಗೆ ಗುರಿಯಿಟ್ಟು ಹೊಡೆದನು. ಇದರಿಂದ ಅಶ್ವತ್ಥಾಮನು ಪ್ರಜ್ಞೆತಪ್ಪಿ, ಧ್ವಜದಂಡವನ್ನೊರಗಿ ಹಾಗೆಯೇ ಮಲಗಿಬಿಟ್ಟನು. ಅವನ ಕಣ್ಣುಗಳು ಮುಚ್ಚಿಹೋದುವು. ಅವನ ಮೈಯಲ್ಲಿ ರಕ್ತವು ಸುರಿಯಿತು. ಆದರೆ, ಒಂದು ಮುಹೂರ್ತಮಾತ್ರದಲ್ಲಿಯೇ ಅವನು ತಿರುಗಿ ಚೇತರಿಸಿಕೊಂಡು, ಅತ್ಯಾಕ್ರೋಶದಿಂದ ಭೀಮನ ರಥಕ್ಕಿದಿರಾಗಿ ಸರ್ಪದಂತೆ ಕ್ರೂರವಾದ ನೂರುಬಾಣಗಳನ್ನು ಕಿವಿಯವರೆಗೆ ಎಳೆದು, ಭೀಮನಮೇಲೆ ಪ್ರಯೋಗಿಸಿದನು. ಭೀಮನು ತನ್ನ ಬಾಣಗಳಿಂದ ಅವುಗಳನ್ನು ನಿವಾರಿಸುತ್ತಿದ್ದನು. ಇಷ್ಟರಲ್ಲಿಯೇ ಅಶ್ವತ್ಥಾಮನು ಭೀಮನ ಕೈಯಲ್ಲಿದ್ದ ಬಿಲ್ಲನ್ನು ಕತ್ತರಿಸಿ, ಅವನ ಎದೆಗೆ ಗುರಿಯಿಟ್ಟು ತೀವ್ರಬಾಣಗಳನ್ನು ಹೊಡೆದನು. ಭೀಮನು ಅದನ್ನು ಲಕ್ಷ್ಯಮಾಡದೆ, ಬೇರೆ ಬಿಲ್ಲನ್ನೆತ್ತಿಕೊಂಡು, ಅಶ್ವತ್ಥಾಮನಮೇಲೆ ಐದು ತೀವ್ರಬಾಣಗಳನ್ನು ಬಿಟ್ಟನು. ಇಬ್ಬರೂ ಅತಿಕ್ರೋಧದಿಂದ ಒಬ್ಬರನ್ನೊಬ್ಬರು ಬಾಣಗಳಿಂದ ಮುಚ್ಚುತ್ತಿದ್ದರು. ಸಿಂಹನಾದಗಳಿಂದಲೂ, ತಲಶಬ್ದಗಳಿಂದಲೂ ಒಬ್ಬರನ್ನೊಬ್ಬರು ಹೆದರಿಸುತ್ತ, ಒಬ್ಬರಿಗೊಬ್ಬರು ಸೋಲದೆ, ಪ್ರತಿಗೆ ಪ್ರತಿಯನ್ನು ಮಾಡುತ್ತಿದ್ದರು. ಇಷ್ಟರಲ್ಲಿ ಅಶ್ವತ್ಥಾಮನು ಬಹುಸಮೀಪದಲ್ಲಿ ನಿಂತು ತನ್ನಮೇಲೆ ಬಾಣಗಳನ್ನು ಹೊಡೆಯುತ್ತಿರುವ ಭೀಮನನ್ನು ದುರುದುರನೆ ನೋಡಿದನು. ಶರತ್ಕಾಲದ ಮಧ್ಯಾಹ್ನದ ಸೂರ್ಯನಂತೆ ಕೋಪದಿಂದ ಜ್ವಲಿಸುತ್ತ, ತನ್ನ ಧನುಸ್ಸನ್ನು ಟಂಕಾರಮಾಡಿ, ಅತಿವೇಗದಿಂದ ಬಾಣಗಳನ್ನು ಬಿಡಲಾರಂಭಿಸಿದನು. ಆಗ ಮಂಡಲಾಕಾರವಾಗಿ ಅಶ್ವತ್ಥಾಮನ ಕೈಯಲ್ಲಿ ಬಿಲ್ಲುಮಾತ್ರ ಅಲಾತಚಕ್ರದಂತೆ ಕಾಣಿಸುತ್ತಿದ್ದಿತೇ ಹೊರತು, ಅವನು ಬಾಣಗಳನ್ನು ತೆಗೆಯುವುದು, ಅವನ ಸಂಧಾನಮೋಕ್ಷಗಳು, ಇವೆರಡೂ ಯಾರಿಗೂ ತಿಳಿಯಲಿಲ್ಲ. ಅವನ ಧನುಸ್ಸಿನಿಂದ ಹೊರಟ

ಬಾಣಗಳುಮಾತ್ರ ಆಕಾಶದಲ್ಲಿ ಮಿಡಿತೆಗಳ ಹಿಂಡಿನಂತೆ ನೂರುಸಹಸ್ರ ಸಂಖ್ಯೆಯಿಂದ ಕಾಣಿಸುತ್ತಿದ್ದವು. ಆ ಬಾಣಗಳು ಭೀಮನ ರಥವನ್ನೆಲ್ಲಾ ಆವರಿಸಿಕೊಂಡುವು. ಆದರೇನು? ಭೀಮನ ಬಲ ವೀರ್ಯ ಪರಾಕ್ರಮ ಪ್ರಭಾವಗಳು ಆಗ ನಮಗೆ ತಿಳಿದುವು. ಅಷ್ಟು ಬಾಣವರ್ಷಗಳನ್ನೂ ಭೀಮನು ಕ್ಷಣಮಾತ್ರದಲ್ಲಿ ಅಡಗಿಸಿಬಿಟ್ಟನು. ಇದು ಆಶ್ಚರ್ಯಕರವಾಯಿತು. ಭೀಮನು ಮೇಲೆಮೇಲೆ ಕೋಪೋದ್ರಿಕ್ತನಾಗಿ, ಅಶ್ವತ್ಥಾಮನನ್ನು ಕೊಂದೇ ಬಿಡಬೇಕೆಂದು ಅನೇಕಸಂಖ್ಯೆಯ ಬಾಣಗಳನ್ನು ಬಿಟ್ಟನು, ಅಶ್ವತ್ಥಾಮನೂ ಬಾಣಗಳನ್ನು ಪ್ರಯೋಗಿಸುತ್ತಿದ್ದನು. ಇವರಿಬ್ಬರ ಬಾಣಗಳನಡುವೆ ಗಾಳಿಯ ಸಂಚಾರಕ್ಕೂ ಅವಕಾಶವಿಲ್ಲದಂತಾಯಿತು. ಅಶ್ವತ್ಥಾಮನ ಒಂದೊಂದು ಬಾಣವನ್ನೂ, ಭೀಮನು ಮೂರುಮೂರು ಬಾಣಗಳಿಂದ ಭೇದಿಸುತ್ತ, ಹಸ್ತಲಾಘವದಲ್ಲಿ ಅವನನ್ನು ಮೀರಿಸುತ್ತಿದ್ದನು. ಎಡೆಬಿಡದೆ ಅವನಮೇಲೆಯೂ ಬಾಣಗಳನ್ನು ಸುರಿದನು. ಇಷ್ಟರಲ್ಲಿ ಅಶ್ವತ್ಥಾಮನು ಭೀಮನ ಕೈಯಲ್ಲಿದ್ದ ಬಾಣಗಳನ್ನು ತಿರುಗಿ ತುಂಡುಮಾಡಿದನು. ಭೀಮನು ರಥದಲ್ಲಿದ್ದ ಶಕ್ತ್ಯಾಯುಧವನ್ನು ಕೈಗೆತ್ತಿಕೊಂಡು, ಅಶ್ವತ್ಥಾಮನಮೇಲೆ ಪ್ರಯೋಗಿಸಿದನು. ಅಶ್ವತ್ಥಾಮನು ಆ ಶಕ್ತಿಯನ್ನು ಭೇದಿಸಿ ಕೆಡಹಿದನು. ಇಷ್ಟರಲ್ಲಿ ಭೀಮನು ದೃಢವಾದ ಬೇರೊಂದು ಬಿಲ್ಲನ್ನು ಎತ್ತಿಕೊಂಡು, ತಿರುಗಿ ಅಶ್ವತ್ಥಾಮನಮೇಲೆ ಬಾಣಗಳನ್ನು ಬಿಟ್ಟನು. ಆಗ ಅಶ್ವತ್ಥಾಮನು ಒಂದು ತೀವ್ರಬಾಣವನ್ನು ಭೀಮನ ಸಾರಥಿಯ ಹಣೆಗೆ ಗುರಿಯಿಟ್ಟು ಪ್ರಯೋಗಿಸಲು, ಸಾರಥಿಯು ಮೂರ್ಛಿತನಾಗಿ ಬಿದ್ದನು. ಅವನ ಕೈಯಲ್ಲಿದ್ದ ಕುದುರೆಯ ಹಗ್ಗವು ಜಾರಿಬಿದ್ದಿತು. ಕುದುರೆಗಳು ಸ್ವಾಧೀನತಪ್ಪಿ ರಥವನ್ನೆಳೆದುಕೊಂಡು ಓಡಿಹೋದುವು. ಭೀಮನು ವಿಮುಖನಾದುದನ್ನು ನೋಡಿ ಅಶ್ವತ್ಥಾಮನು ಸಂತೋಷದಿಂದ ಶಂಖಧ್ವನಿಯನ್ನು ಮಾಡಿದನು. ಪಾಂಚಾಲರೆಲ್ಲರೂ ಹೆದರಿ ಓಡಿದರು. ಧೃಷ್ಟದ್ಯುಮ್ನನಿಗೆ ಬೆಂಬಲವಿಲ್ಲದಂತಾಯಿತು. ಅಶ್ವತ್ಥಾಮನು ಆಗಲೂ ಬಿಡದೆ ಅವರನ್ನು ಬೆನ್ನಟ್ಟಿ ಕೊಲ್ಲುತ್ತಿದ್ದನು. ಆ ಕೊಲೆಯನ್ನು ತಡೆಯಲಾರದೆ ಪಾಂಚಾಲರೆಲ್ಲ ಅಲ್ಲಲ್ಲಿ ತಲೆಮರೆಸಿಕೊಂಡರು.

ಇದು ಇನ್ನೂರ ಒಂದನೆಯ ಅಧ್ಯಾಯವು.

ನಾರಾಯಣಾಸ್ತ್ರವು ವಿಫಲವಾದುದಕ್ಕಾಗಿ ಅಶ್ವತ್ಥಾಮನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದುದು. ಅದೂ ಅರ್ಜುನನಿಂದ ಭಗ್ನವಾಗಲು, ಅಶ್ವತ್ಥಾಮನು ಮಹಾವ್ಯಸನದಿಂದ ತನ್ನ ಬಿಲ್ಲನ್ನು ರಣಾಂಗಣದಲ್ಲಿ ಬಿಸುಟು ಹೊರಟುಹೋದುದು. ದಾರಿಯಲ್ಲಿ ವ್ಯಾಸಮುನಿಯು ಅವನನ್ನು ಸಂಧಿಸಿ, ಕೃಷ್ಣಾರ್ಜುನರ ಪ್ರಭಾವವನ್ನು ಅವನಿಗೆ ತಿಳಿಸಿದುದು.

ಮಹಾರಾಜಾ! ಪಾಂಡವಸೈನ್ಯವು ಭಗ್ನವಾಗಿ ಹೋದುದನ್ನು ನೋಡಿ, ಕೃಷ್ಣಾರ್ಜುನರಿಬ್ಬರೂ ಬಹು ಪ್ರಯತ್ನದಿಂದ ಆ ಸೈನ್ಯಗಳಿಗೆ ಧೈರ್ಯವನ್ನು ಹೇಳಿ ತಡೆದರು. ಆಮೇಲೆ ಅವು ಅಲ್ಲಿಯೇ ನಿಂತುವು. ಆದರೆ, ಅರ್ಜುನನೊಬ್ಬನೇ ಕೆಲವುಮಂದಿ ಸೋಮಕ ಮಾತ್ಸ್ಯ ವೀರರೊಡಗೂಡಿ ಕೌರವರನ್ನು ಇದಿರಿಸುತ್ತಿದ್ದನು. ಆಗ ಅರ್ಜುನನು ಅಶ್ವತ್ಥಾಮನನ್ನು ಕುರಿತು, "ಓ ಬ್ರಾಹ್ಮಣಾ! ನಿನ್ನಲ್ಲಿರುವ ಶಕ್ತಿ, ಜ್ಞಾನ, ವೀರ್ಯ, ಪೌರುಷಗಳನ್ನೆಲ್ಲಾ ಈಗ ನನ್ನಲ್ಲಿ ತೋರಿಸು. ನಿನಗೆ ಕೌರವರಲ್ಲಿ ಎಷ್ಟು ಪ್ರೀತಿಯುಂಟೋ, ನಮ್ಮಲ್ಲಿ ಎಷ್ಟು ದ್ವೇಷವುಂಟೋ, ಅದರ ಪರಾಕಾಷ್ಠೆಯನ್ನೂ, ನಿನ್ನ ವೀರ್ಯಸರ್ವಸ್ವವನ್ನೂ ಈಗ ನನ್ನಲ್ಲಿ ತೋರಿಸು. ನಿನ್ನ ತಂದೆಯಾದ ದ್ರೋಣನನ್ನು ಕೊಂದವನೇ ಈಗ ನಿನ್ನ ಕೆಚ್ಚನ್ನೂ ಮುರಿಯುವನು. ಕಾಲಾಗ್ನಿಸಮಾನನೂ, ಶತ್ರುಗಳಿಗೆ ಯಮಪ್ರಾಯನೂ ಆದ ಆ ಪಾಂಚಾಲನನ್ನೂ, ಕೃಷ್ಣನೊಡಗೂಡಿದ ನನ್ನನ್ನೂ ಇದಿರಿಸಿ ನಿಲ್ಲು! ಗರ್ವಿತನಾದ ನಿನ್ನ ಕೆಚ್ಚನ್ನು ಈಗಲೇ ಮುರಿಯುವೆನು" ಎಂದನು.

ಈ ನಡುವೆ ಧೃತರಾಷ್ಟ್ರನು "ಸಂಜಯಾ! ಏನಿದು? ಅರ್ಜುನನ ಬಾಯಿಂದ ಇಂತಹ ಕ್ರೂರವಾಕ್ಯವು ಎಂದಿಗೂ ಹೊರಟುದಿಲ್ಲ. ಅದರಲ್ಲಿಯೂ ಅಶ್ವತ್ಥಾಮನು ಅವನಿಗೆ ಗುರುಪುತ್ರನು. ಅವನಿಗೆ ಬಹಳ ಗೌರವಾರ್ಹನು! ಅವನಿಗಿಂತಲೂ ಬಲಾಢ್ಯನು! ಅಶ್ವತ್ಥಾಮನಿಗೆ ಅರ್ಜುನನಲ್ಲಿ ವಿಶೇಷಪ್ರೀತಿಯುಂಟು. ಇಷನಿಗೂ ಅವನು ಅತ್ಯಂತಪ್ರಿಯನು. ಅಂತಹ ಅಶ್ವತ್ಥಾಮನೊಡನೆ ಧನಂಜಯನು ಹಾಗೆ ಕ್ರೂರವಾಗಿ ನುಡಿದು

ದೇಕೆ?" ಎಂದನು. ಅವಕ್ಕೆ ಸಂಜಯನು "ಮಹಾರಾಜಾ! ಚೇದಿರಾಜ ಪುತ್ರನು ಅಶ್ವತ್ಥಾಮನಿಂದ ಹತನಾದನು. ಹಾಗೆಯೇ ಪೂರುವಂಶದ ವೃದ್ಧಕ್ಷತ್ರನೂ, ಮಾಲವರಾಜನಾದ ಸುದರ್ಶನನೂ, ಅವನಿಂದ ಹತರಾದರು. ಧೃಷ್ಟದ್ಯುಮ್ನನೂ, ಸಾತ್ಯಕಿಯೂ, ಭೀಮನೂ, ಅಶ್ವತ್ಥಾಮನಿಂದ ಪರಾಜಿತರಾದರು. ಇದಲ್ಲದೆ ಧರ್ಮರಾಜನು ತನ್ನೊಡನೆಮರ್ಮಭೇದಕವಾಕ್ಯವಾಡಿದನು. ಇವೆಲ್ಲವನ್ನೂ, ನೆನಸಿಕೊಂಡು, ಅರ್ಜುನನಿಗೆ ಮನಸ್ಸಂಕಟವುಂಟಾಯಿತು, ಆದರಿಂದ ಅವನಿಗೆ ಹಿಂದೆ ಎಂದೂ ಇಲ್ಲದ ದುಃಖಾಕ್ರೋಶಗಳು ಹುಟ್ಟಿದುವು. ಈ ಕಾರಣದಿಂದಲೇ ಅನುಚಿತವೂ, ಅಶ್ಲೀಲವೂ, ಅಪ್ರಿಯವೂ ಆದ ಮಾತುಗಳು ಅವನ ಬಾಯಿಂದ ಹೊರಟುಬಂದುವು. ತನಗೆ ಅತ್ಯಂತಪೂಜ್ಯನಾದ ಆಚಾರ್ಯಪುತ್ರನನ್ನು ಕುರಿತು ಕುತ್ಸಿತಮನುಷ್ಯರನ್ನು ಆಡುವಹಾಗೆ ಆಡಿಬಿಟ್ಟನು. ಅವನು ಕೋಪಾವೇಶವಶನಾಗಿ ನುಡಿದ ಮಾತೇಹೊರತು ಬೇರೆಯಲ್ಲ. ಈ ಅರ್ಜುನನ ಪರುಷವಾಕ್ಯವನ್ನು ಕೇಳಿ ಅಶ್ವತ್ಥಾಮನಿಗೂ ಕೋಪವು ಉಕ್ಕಿಬಂದಿತು. ಕೃಷ್ಣಾರ್ಜುನರ ಮೇಲೆಯೂ ಅವನು ಅತ್ಯಂತ ಕೋಪಾವಿಷ್ಟನಾಗಿ, ಆ ರಥದಲ್ಲಿ ಕುಳಿತಿದ್ದಹಾಗೆಯೇ ಶುದ್ಧಾಚಮನವನ್ನು ಮಾಡಿ, ಆಗ್ನೇಯಮಂತ್ರವನ್ನು ಜಪಿಸಿ, ದೇವತೆಗಳಿಗೂ ತಡೆಯಲಸಾಧ್ಯವಾದ ಅಸ್ತ್ರವನ್ನು ಬಿಲ್ಲಿನಲ್ಲಿ ಸಂಧಿಸಿದನು. ಕಣ್ಣಿಗೆ ಗೋಚರಿಸಿದವರು, ಗೋಚರಿಸದಿದ್ದವರು, ಈ ಎಲ್ಲಾ ಶತ್ರುಗಳನ್ನೂ ಉದ್ದೇಶಿಸಿ, ಆ ಶಸ್ತ್ರವನ್ನು ಪ್ರಯೋಗಿಸಿಬಿಟ್ಟನು. ಕೂಡಲೇ ಆಕಾಶವೆಲ್ಲಾ ಉರಿಯೊಡಗೂಡಿದ ಬಾಣಗಳಿಂದ ತುಂಬಿಹೋಯಿತು. ಆ ಬಾಣಗಳೆಲ್ಲವೂ ಅರ್ಜುನನಿಗಿದಿರಾಗಿ ಬರುತಿದ್ದಾಗ, ಆಕಾಶದಿಂದ ಉಲ್ಕೆಗಳು ಬಿದ್ದುವು, ದಿಕ್ಕುಗಳೆಲ್ಲ ಪ್ರಕಾಶಹೀನವಾದುವು. ಅಂಧಕಾರವು ಆವರಿಸಿತು. ಪಿಶಾಚಿಗಳೂ, ರಾಕ್ಷಸಗಣಗಳೂ ವಿಕೃತಸ್ವರದಿಂದ ಅಲ್ಲಲ್ಲಿ ಕೂಗುತ್ತಿದ್ದುವು. ಅಮಂಗಳವಾದ ಗಾಳಿಯು ಬೀಸಿತು. ಸೂರ್ಯನಲ್ಲಿ ಉಷ್ಣವೇ ಇರಲಿಲ್ಲ. ದಿಕ್ಕುದಿಕ್ಕುಗಳಲ್ಲಿ ಕಾಗೆಗಳು ಭಯಂಕರವಾಗಿ ಕೂಗುತ್ತಿದ್ದುವು. ಆಕಾಶದಿಂದ ಮೇಘಗಳು ರಕ್ತವರ್ಷವನ್ನು ಸುರಿಸಿದುವು. ಆತ್ಮನಿಗ್ರಹವನ್ನು ಮಾಡಿದ ಯೋಗಿಗಳಿಗೂ ಮನಶ್ಶಾಂತಿಯು ಕದಲಿತು. ಪಂಚಮಹಾಭೂತಗಳೊಡನೆ ಸೂರ್ಯಬಿಂಬವೇ ಸುತ್ತುವಂತೆ ಕಾಣಿಸಿತು.

ತೀವ್ರಜ್ವರವು ಹಿಡಿದಹಾಗೆ ತ್ರೈಲೋಕ್ಯವೂ ತಪಿಸುತ್ತಿದ್ದಿತು. ಈ ಆಗ್ನೇಯಾಸ್ತ್ರದ ಕಾವಿನಿಂದ ಬೆಂದು, ಬಿಲದಲ್ಲಿದ್ದ ಹಾವುಗಳೆಲ್ಲವೂ ಬುಸುಗುಟ್ಟುತ್ತ ಮೇಲೆಬಂದುವು. ನೀರಿನಲ್ಲಿ ಅಡಗಿದ್ದ ಪ್ರಾಣಿಗಳೂ ಬೆಂದುಹೋದುವು. ಜಲಾಶಯಗಳೆಲ್ಲ ಕುದಿಯಲಾರಂಭಿಸಿದುವು. ಭೂಮ್ಯಾಕಾಶ ದಿಕ್ಕು ವಿದಿಕ್ಕುಗಳಲ್ಲೆಲ್ಲ ಗರುಡವಾಯುವೇಗವುಳ್ಳ ಬಾಣಗಳು ಮಳೆಯಂತೆ ಸುರಿಯಲಾರಂಭಿಸಿದುವು. ವಜ್ರವೇಗವುಳ್ಳ ಅಶ್ವತ್ಥಾಮನ ಆಗ್ನೇಯಾಸ್ತ್ರದಿಂದ ಶತ್ರುಗಳೆಲ್ಲರೂ ದಗ್ಧರಾಗಿ, ಕಾಡುಗಿಚ್ಚಿನಿಂದ ಬೆಂದ ಮರಗಳಂತೆ ಬಿದ್ದರು. ಒಬ್ಬೊಬ್ಬರೂ ಭಯಂಕರಧ್ವನಿಯಿಂದ ಅರಚಿಕೊಳ್ಳುತ್ತಿದ್ದರು. ಆನೆಗಳೂ, ಕುದುರೆಗಳೂ ದಾವಾಗ್ನಿದಗ್ಧಗಳಾದ ವೃಕ್ಷಶಿಖರಗಳಂತೆ ಉರುಳಿದುವು. ರಥಗಳು ಬೆಂದುಹೋದುವು. ಪ್ರಳಯಾಗ್ನಿಯು ಸಮಸ್ತಭೂತಗಳನ್ನೂ ದಹಿಸುವಂತೆ, ಆ ಅಸ್ತ್ರವು ಪಾಂಡವಸೈನ್ಯಗಳನ್ನೆಲ್ಲಾ ದಹಿಸುತ್ತಿದ್ದಿತು. ಇದನ್ನು ಕಂಡು ನಿನ್ನವರು ಸಂತೋಷದಿಂದ ಸಿಂಹನಾದಮಾಡಿದರು. ಜಯೋತ್ಸಾಹದಿಂದ ನಿನ್ನ ಕಡೆಯಲ್ಲಿ ನಾನಾವಿಧ ರಣವಾದ್ಯಗಳು ನುಡಿಸಲ್ಪಟ್ಟುವು. ಅಂಧಕಾರದಿಂದ ಲೋಕವೆಲ್ಲವೂ ಮರೆಸಿಹೋಗಿ, ಆ ಅಕ್ಷೋಹಿಣೀಸೈನ್ಯಗಳಾಗಲಿ, ಕೃಷ್ಣಾರ್ಜುನರ ರಥವಾಗಲಿ ಕಣ್ಣಿಗೆ ಕಾಣಿಸದಂತಾಯಿತು. ರಾಜಾ! ದ್ರೋಣಪುತ್ರನು ಆಗ ಪ್ರಯೋಗಿಸಿದ ಸರ್ವಸಂಹಾರಕವಾದ ಆಸ್ತ್ರದಂತೆ ಕ್ರೂರವಾದ ಅಸ್ತ್ರವನ್ನು ಹಿಂದೆ ನಾವು ಕಣ್ಣಿಂದ ನೋಡಿದುದೂ ಇಲ್ಲ. ಕಿವಿಯಿಂದ ಕೇಳಿದುದೂ ಇಲ್ಲ. ಇದನ್ನು ನೋಡಿ ಅರ್ಜುನನು ಸರ್ವಾಸ್ತ್ರಪ್ರತೀಕಾರರೂಪವಾಗಿ ಬ್ರಹ್ಮನಿಂದ ಕಲ್ಪಿತವಾದ ಬ್ರಾಹ್ಮವೆಂಬ ಅಸ್ತ್ರವನ್ನು ಪ್ರಯೋಗಿಸಿಬಿಟ್ಟನು. ಒಂದು ಮುಹೂರ್ತದಲ್ಲಿಯೇ ಮೊದಲಿದ್ದ ತಮಸ್ಸೂ, ತಾಪವೂ, ಅಡಗಿಹೋಯಿತು. ತಂಪಾದ ಗಾಳಿಯು ಬೀಸಿತು. ದಿಕ್ಕುಗಳು ಸ್ವಚ್ಛವಾದುವು. ಆದರೆ ಆಗ ಯಾವಕಡೆ ನೋಡಿದರೂ ಸೈನ್ಯಗಳು ಅಸ್ತ್ರಜ್ವಾಲೆಯಿಂದ ದಗ್ಧವಾಗಿ ಗುರುತೇ ತಿಳಿಯದಂತಾಯಿತು. ಪೂರ್ಣವಾಗಿ ಅಕ್ಷೋಹಿಣೀಸೈನ್ಯವೆಲ್ಲ ಕ್ಷೀಣಿಸಿಹೋಗಿದ್ದಿತು. ಅದು ನಮಗೆ ಅತ್ಯಾಶ್ಚರ್ಯಕರವಾಯಿತು. ಕೃಷ್ಣಾರ್ಜುನರಿಬ್ಬರುಮಾತ್ರ ನಿರಪಾಯವಾಗಿ ಸೂರ್ಯಚಂದ್ರರಂತೆ ಪ್ರಕಾಶಿಸುತ್ತಿದ್ದರು. ಅರ್ಜುನನ ರಥ ರಥಾಶ್ವಧ್ವಜಗಳಿಗಾಗಲಿ, ಆ ರಥದ ಹಿಂದಿನ ಬಂಡಿಗಾಗಲಿ, ಆಯುಧಗಳಿಗಾಗಲಿ,

ಏನೂ ಅಪಾಯವಿಲ್ಲದೆ ಅವೆಲ್ಲವುಗಳೊಡನೆ ಅವನು ನಿನ್ನ ಸೈನ್ಯಕ್ಕೆ ಭಯ ಕರನಾಗಿ ಕಾಣಿಸಿದನು. ಒಡನೆ ಅತ್ತಲಾಗಿ ಪಾಂಡವರಲ್ಲಿ ಸಂತೋಷಕೋ ಲಾಹಲಗಳೂ, ಶಂಖಭೇರೀಧ್ವನಿಗಳೂ ಹೊರಟುವು. ಕೃಷ್ಣಾರ್ಜುನ ಬ್ಬರೂ ಒಟ್ಟಿಗೆ ಮೃತರಾದರೆಂದೇ ತಿಳಿದಿದ್ದ ಪಾಂಡವಸೈನ್ಯಕ್ಕೆ, ಅವರಿಬ್ಬರು ಸ್ವಲ್ಪವೂ ಗಾಯವಿಲ್ಲದೆ ಹಸನ್ಮುಖರಾಗಿದ್ದುದನ್ನು ನೋಡಿ ಸಂತೋಷಹೆಚ್ಚಿ ತು. ನಿನ್ನವರೆಲ್ಲರೂ ಮಹಾ ವ್ಯಸನಕ್ಕೀಡಾದರು. ಆಗ ಅಶ್ವತ್ಥಾಮನು ತನ ಅಸ್ತ್ರವು ವಿಫಲವಾದುದನ್ನು ಮುಹೂರ್ತಕಾಲದವರೆಗೆ ನೋಡಿ, ತನ್ನ ತಾನು "ಆಹಾ ಏನಿದು?" ಎಂದು ಚಿಂತಿಸಿ, ಮಹಾ ವ್ಯಸನದಿಂ ಬಿಸಿಬಿಸಿಯಾಗಿ ನಿಟ್ಟುಸಿರನ್ನು ಬಿಟ್ಟನು. ಅವನಿಗೆ ಮುಂದೆ ಯುದ್ಧಕ ರ್ಯದಲ್ಲಿ ಮನಸ್ಸೇ ಬಾರದಂತಾಯಿತು. ಒಡನೆಯೇ ಅವನು ತನ್ನ ಕೈಯ ಲ್ಲಿದ್ದ ಬಿಲ್ಲನ್ನು ಕೆಳಗಿಟ್ಟು, ಥಟ್ಟನೆ ರಥದಿಂದ ಕೆಳಗಿಳಿದು, "ಛೀ! ಛೀ! ಇವೆಲ್ಲವೂ ಸುಳ್ಳು! ಈ ಮಂತ್ರಾಸ್ತ್ರವೆಂಬುದೇ ನಿಜವಲ್ಲ" ಎಂದು ಹೇಳುತ್ತ ರಣರಂಗವನ್ನು ಬಿಟ್ಟು ಹೊರಟುಹೋದನು. ಹೀಗೆ ಅಶ್ವತ್ಥಾಮನ ಜಿಹಾಸೆಯಿಂದ ಯುದ್ಧವನ್ನು ಬಿಟ್ಟು ಹೋಗುತ್ತಿರುವಾಗ, ನಡುವೆ ಕಾ ಮೇಘಶ್ಯಾಮನೂ, ವೇದನಿಧಿಯೂ, ನಿಷ್ಕಲ್ಮಷನೂ, ವೇದಗಳನ ಶಾಖೋಪಶಾಖೆಗಳನ್ನಾಗಿ ವಿಭಾಗಿಸಿದವನೂ, ವಾಗ್ದೇವತೆಗೆ ನಿವಾ ಭೂತನೂ ಆದ ವ್ಯಾಸಮುನಿಯು ಬರುವುದನ್ನು ಕಂಡನು. ಕುರುವ ಶೋದ್ಧಾರಕನಾದ ಅವನಿಗೆ ದೈನ್ಯದಿಂದ ನಮಸ್ಕರಿಸಿ ಗದ್ಗದಸ್ವರದಿಂ ಹೀಗೆಂದನು. "ಓ ಮಹಾತ್ಮಾ! ಇದೇನು ಮಾಯೆಯೋ? ದೈವಸಂ ಲ್ಪವೋ! ಏನೆಂದು ತಿಳಿಯಲಿಲ್ಲ. ನಾನು ಪ್ರಯೋಗಿಸಿದ ಶಸ್ತ್ರಗಳೆಲ್ಲಾ ವಿಫಲವಾದುವು. ಆ ಶಸ್ತ್ರಗಳಲ್ಲಿಯೇ ಶಕ್ತಿಯಿಲ್ಲವೋ, ಅಥವಾ ನನ ದೋಷವೇನಾದರೂ ಉಂಟೋ, ಅದೂ ತಿಳಿಯಲಿಲ್ಲ. ಈಗ ಲೋಕ ತಿಯೇ ತಲೆಕೆಳಗಾದಂತಿದೆ. ಈಗಲೂ ಕೃಷ್ಣಾರ್ಜುನರು ಜೀವಿಸುತ್ತಿರುವು ದನ್ನು ನೋಡಿದರೆ, ಲೋಕಸ್ವಭಾವಕ್ಕೇ ಅವರಿಂದ ಪರಾಭವವುಂಟಾಯಿ ತೆಂದು ತೋರುವುದು. ಮುನೀಂದ್ರಾ! ಈಗ ನಾನು ಬಿಟ್ಟ ಅಸ್ತ್ರವನ್ನು ದೇವ, ದಾನವ, ಗಂಧರ್ವ, ರಾಕ್ಷಸ, ಯಕ್ಷ, ಗರುಡ, ಪನ್ನಗ, ಮನುಷ್ಯ ರಲ್ಲಿ ಯಾರೂ ತಡೆದುಕೊಳ್ಳಲಾರರು. ಅದನ್ನು ಭಂಗಿಸಲು ಯಾರೂ ಸವ

ರ್ಥರಲ್ಲ. ಅಂತಹ ನನ್ನ ಆಗ್ನೇಯಾಸ್ತ್ರವು ಪಾಂಡವರ ಅಕ್ಷೌಹಿಣೀಸೈನ್ಯವನ್ನುಮಾತ್ರ ತನ್ನ ಜ್ವಾಲೆಯಿಂದ ದಹಿಸಿ, ಅಷ್ಟರಲ್ಲಿಯೇ ಶಾಂತವಾಯಿತು. ನಾನು ಸರ್ವಸಂಹಾರಾರ್ಥವಾಗಿ ಸಂಕಲ್ಪಿಸಿ ಬಿಟ್ಟ ಆ ಭಯಂಕರಾಸ್ತ್ರವು, ಆ ಸಂಕಲ್ಪದಂತೆ ಕೆಲಸವನ್ನು ಮಾಡಲಿಲ್ಲ. ಆ ಅಸ್ತ್ರವು ಸಾಮಾನ್ಯಮನುಷ್ಯರಂತಿರುವ ಕೃಷ್ಣಾರ್ಜುನರರ್ನು ದಹಿಸದೆ ಹೋದ ಕಾರಣವೇನು? ಇದರ ರಹಸ್ಯವನ್ನು ನೀನು ನನಗೆ ಯಥಾವತ್ತಾಗಿ ತಿಳಿಸಬೇಕು" ಎಂದನು. ಆದಕ್ಕಾ ವ್ಯಾಸನು "ಅಶ್ವತ್ಥಾಮಾ! ನೀನು ಕೇಳಿದುದೇನೋ ಘನವಾದ ವಿಷಯವೇ! ನೀನು ಆಶ್ಚರ್ಯಪಡುವುದೂ ಸಹಜವು! ಅದರ ತತ್ವವನ್ನು ಸಾವಧಾನವಾಗಿ ಕೇಳು. ಪುರಾತನರಿಗಿಂತಲೂ ಪುರಾತನನೆನಿಸಿ, ಆದಿದೇವನೆಂದೂ, ಸ್ವಯಂಪ್ರಭುವೆಂದೂ, ಜಗದಾದ್ಯನೆಂದೂ, ಆದ್ಯಂತಗಳಿಲ್ಲದವನೆಂದೂ, ಅಚ್ಯುತನೆಂದೂ ಪ್ರಸಿದ್ಧನಾದ ಶ್ರೀಮನ್ನಾರಾಯಣನುಂಟಲ್ಲವೆ? ಅವನ ತತ್ವವನ್ನು ಕುರಿತು ವೇದಗಳೂ, ಮಹರ್ಷಿಗಳೂ, ವಿಧವಿಧವಾಗಿ ವರ್ಣಿಸುತ್ತಿರುವರು. ಆ ಜಗತ್ಪತಿಯು ಎಂತಹ ಭೂತಗಳಿಗೂ, ಮನಸ್ಸಿನಿಂದಲೂ ಅಜೇಯನು. ಅಜ್ಞಾನವೆಂಬ ತಮಸ್ಸಿನಿಂದ ಆವೃತನಾದ ನೀನು, ಅಂತವನನ್ನು ಜಯಿಸಬೇಕೆಂದು ಬಯಸಿದರೆ, ನಿನಗೆ ಸಾಧ್ಯವೇ? ಆ ಕೃಷ್ಣನನ್ನು ನೀನು ಜಯಿಸಲಾರದೆ ಹೋದುದಕ್ಕಾಗಿ ಚಿಂತಿಸಬಾರದು. ಅರ್ಜುನನೂ ಅವನಂತೆಯೇ! ಅರ್ಜುನನೆಂಬವನು ಆ ನಾರಾಯಣನ ಶಕ್ತಿಯೇ. ಆದುದರಿಂದ, ನಿನ್ನ ಅಸ್ತ್ರವು ಅವನಲ್ಲಿ ವಿಫಲವಾದುದಕ್ಕಾಗಿ ನೀನು ದುಃಖಿಸಬಾರದು. ಆ ಭಗವಂತನು ಸಮಸ್ತ ಪ್ರಪಂಚಕ್ಕೂ ಪ್ರಭು! ಲೋಕಕ್ಕೆಲ್ಲಾ ಆದಿಪುರುಷನು! ಅವನೇ ಪರಮಾತ್ಮನು! ಇಂದ್ರಿಯಗಳಿಗೆಲ್ಲ ನಿಯಾಮಕನು! ಅಂತಹ ಮಹಾವಿಷ್ಣುವು, ದೇವಮಾನವರ ಹಿತಕ್ಕಾಗಿ ತನ್ನ ಅಂಶದ ಸಾವಿರದ ಒಂದು ಪಾಲಿನಿಂದ ಭೂಲೋಕದಲ್ಲಿ ಅವತರಿಸಿರುವನು. ಆ ಭಗವಂತನು ಹಿಂದೆ ಒಂದು ಕಾರ್ಯಾರ್ಥವಾಗಿ ಧರ್ಮನೆಂಬವನ ಪುತ್ರನಾಗಿ ಅವತರಿಸಿದ್ದು ಹಿಮಾಲಯದಲ್ಲಿ ನೆಲಸಿ, ಸೂರ್ಯಾಗ್ನಿಗಳಂತೆ ಜ್ವಲಿಸುತ್ತ, ಅರುವತ್ತಾರುಸಾವಿರ ವರ್ಷಗಳವರೆಗೆ ತೀವ್ರತಪಸ್ಸನ್ನು ಮಾಡಿದನು. ತೋಳುಗಳನ್ನು ಮೇಲಕ್ಕೆ ನೀಡಿ, ಕೇವಲ ವಾಯುಭಕ್ಷಕನಾಗಿ ತನ್ನ ದೇಹವನ್ನು ಶೋಷಿಸಿದನು. ಆಮೇಲೆ

ತಿರುಗಿ ಮೊದಲನೆಯದಕ್ಕಿಂತಲೂ ಉಗ್ರವಾದ ತಪಸ್ಸನ್ನು ಆರಂಭಿಸಿದನು. ಅವನ ತೇಜಸ್ಸು ಭೂಮ್ಯಾಕಾಶಗಳನ್ನೆಲ್ಲ ವ್ಯಾಪಿಸಿತು. ಆ ತಪಸ್ಸಿನ ಪರಿಪಾಕದಿಂದ ಅವನು ಬ್ರಹ್ಮಮಯನಾಗಿದ್ದನು. ಆಗ ವಿಶ್ವೇಶ್ವರನೂ, ಪ್ರಪಂಚಕ್ಕೆಲ್ಲ ಜನ್ಮಕಾರಣನೂ, ಸರ್ವದೇವಾರಾಧ್ಯನೂ, ದುರ್ಜಯನೂ, ಅಣುಗಿಂತಲೂ ಅಣುವಾಗಿ, ಮಹತ್ತಿಗಿಂತಲೂ ಮಹತ್ತೆನಿಸಿದ ರುದ್ರನನ್ನು ಕಂಡನು. ಅವನು ಬ್ರಹ್ಮಾದಿಗಳಿಗಿಂತಲೂ ಮೇಲಾದ ಪ್ರಭು! ಪಾಪಹಾರಕನು! ಶುಭಪ್ರದನು! ಕಪರ್ದವೆಂಬ ಜಟಾಭಾರವುಳ್ಳವನು! ಪ್ರಾಣಿಗಳಿಗೆ ಅಂತರ್ಯಾಮಿಯಾಗಿ ಜ್ಞಾನವನ್ನುಂಟುಮಾಡತಕ್ಕವನು! ಚರಾಚರಗಳಿಗೆಲ್ಲ ಮುಖ್ಯಕಾರಣನು! ಬೇರೆ ಯಾರಿಂದಲೂ, ತಡೆಯುವುದಕ್ಕೂ, ಜಯಿಸುವುದಕ್ಕೂ, ನೋಡುವುದಕ್ಕೂ, ಸಮೀಪದಲ್ಲಿ ನಿಲ್ಲುವುದಕ್ಕೂ ಸಾಧ್ಯವಿಲ್ಲದವನು! ಉಗ್ರಕೋಪಿ! ಮಹಾತ್ಮನು! ಸಮಸ್ತ ಭೂತಗಳ ಕರ್ಮಸಾಕ್ಷಿ! ಅವನು ಬಿಲ್ಲು, ಬತ್ತಳಿಕೆ, ಶೂಲ, ವಜ್ರ, ಪರಶು, ಗದೆ, ಇವುಗಳನ್ನು ಕೈಗಳಲ್ಲಿ ಧರಿಸಿರುವನು. ಪಿಂಗಳವರ್ಣದ ಜಟಾಮಂಡಲದಿಂದಲೂ, ಶಿರೋಭೂಷಣವಾದ ಚಂದ್ರನಿಂದಲೂ ಶೋಭಿಸುತ್ತಿರುವನು. ಹುಲಿಯ ಚರ್ಮವನ್ನು ಹೊದೆದಿರುವನು. ಪರಿಘವನ್ನೂ, ದಂಡವನ್ನೂ ಕೈಯಲ್ಲಿ ಹಿಡಿದಿರುವನು. ದಂಡಧಾರಿಯಾಗಿ ಯಜ್ಞೋಪವೀತವನ್ನು ಧರಿಸಿರುವನು. ಎಲ್ಲಾ ಭೂತಗಣಗಳಿಂದಲೂ, ಪ್ರಮಥಗಣಗಳಿಂದಲೂ ಪರಿವೃತನಾಗಿರುವನು. ಎಲ್ಲಾ ತಪಸ್ಸುಗಳಿಗೆ ನಿಧಿಯಂತಿರುವನು. ವಾಗ್ಮಿಗಳಾದ ವಿದ್ವಾಂಸರಿಂದ ಸ್ತುತಿಸಲ್ಪಡುವನು. ಪೃಥಿವಿ, ಅಪ್ಪು, ಆಕಾಶ, ದಿಕ್ಕು, ವಾಯು, ಸೂರ್ಯ, ಚಂದ್ರಾಗ್ನಿಗಳು, ಇವುಗಳನ್ನೇ ಶರೀರವಾಗಿ ಉಳ್ಳವನು. ದೇವತೆಗಳಿಗೆಲ್ಲಾ ಪ್ರಭು. ಬ್ರಾಹ್ಮಣದ್ವೇಷಿಗಳನ್ನು ಕೊಲ್ಲತಕ್ಕವನು. ಮೋಕ್ಷಕ್ಕೆ ಉತ್ಪತ್ತಿಸ್ಥಾನನು. ಧರ್ಮಭ್ರಷ್ಟರಾದವರಿಗೆ ಗೋಚರಿಸದವನು. ಪಾಪಕ್ಷಯವನ್ನು ಹೊಂದಿ, ಸುಖದುಃಖಾದಿ ದ್ವಂದ್ವಗಳನ್ನು ಕಳೆದು, ಸಾಧುಶೀಲರೆನಿಸಿದ ಬ್ರಾಹ್ಮಣರ ಮನಸ್ಸಿಗೆ ಮಾತ್ರವೇ ಗೋಚರಿಸತಕ್ಕವನು. ಧರ್ಮಸ್ವರೂಪನು! ಅವನಲ್ಲಿ ಪೂರ್ಣಭಕ್ತಿಯುಳ್ಳ ನಾರಾಯಣನು ಅವನನ್ನೇ ತನ್ನ ತಪಸ್ಸಿಗೆ ಲಕ್ಷ್ಯವಾಗಿಟ್ಟು, ವಿಶ್ವರೂಪಿಯಾದ ಅವನನ್ನು ಕಂಡು, ದೇಹ, ಬುದ್ಧಿ, ಮನಸ್ಸು, ವಾಕ್ಕುಗಳೆಂಬ ಎಲ್ಲಾ ಕರಣಗಳಲ್ಲಿಯೂ ಪೂರ್ಣ

ಸಂತೋಷಪರವಶನಾದನು. ಅಕ್ಷಮಾಲಿಕೆಯನ್ನು ಧರಿಸಿ, ತೇಜೋನಿಧಿಯಾಗಿ, ಪ್ರಪಂಚಕ್ಕೆಲ್ಲ ಜನ್ಮಸ್ಥಾನವೆನಿಸಿ, ಪಾರ್ವತೀಸಮೇತನಾಗಿ, ಭೂತಗಣಗಳೊಡನೆ ವಿನೋದಿಸುತ್ತಿರುವ ಆ ರುದ್ರನನ್ನು ವಂದಿಸಿದನು. ಜನ್ಮರಹಿತನೂ, ಈಶ್ವರನೂ, ಅವ್ಯಕ್ತನೂ, ಜಗತ್ಕಾರಣಭೂತನೂ, ಅಂಧಕಧ್ವಂಸಿಯೂ ಆದ ಆ ರುದ್ರನನ್ನು ಭಕ್ತಿಯಿಂದ ಸ್ತುತಿಸಲಾರಂಭಿಸಿದನು. “ ಓ ಪರಮೇಶ್ವರಾ! ಸೃಷ್ಟಿಕರ್ತರೂ, ಲೋಕರಕ್ಷಕರೂ ಆದ ದಕ್ಷಾದಿಗಳೆಲ್ಲರೂ ನಿನ್ನಿಂದಲೇ ಹುಟ್ಟಿದವರು. ದೇವ, ದಾನವ, ಯಕ್ಷ, ನಾಗ, ಪಿಶಾಚ, ಗರುಡ, ಗಂಧರ್ವ, ರಾಕ್ಷಸ, ಮನುಷ್ಯರೇ ಮೊದಲಾದ ಎಲ್ಲಾ ಜೀವವರ್ಗಗಳೂ ನಿನ್ನಿಂದಲೇ ಸೃಷ್ಟಿಸಲ್ಪಟ್ಟುವು. ಇಂದ್ರ ಯಮ ವರುಣ ಕುಬೇರರು, ಪಿತೃಗಳು, ತ್ವಷ್ಟನು, ಸೋಮನು, ಇವರನ್ನುದ್ದೇಶಿಸಿ ನಡೆಸತಕ್ಕ ದೈವಿಕಕರ್ಮಗಳೆಲ್ಲ ನಿನಗಾಗಿಯೇ! ಪಂಚಭೂತಗಳೂ, ಶಬ್ದ, ರೂಪ, ರಸ, ಗಂಧಗಳೂ, ಕಾಲವೂ, ವೇದಗಳೂ, ಯಾಗಗಳೂ, ಬ್ರಾಹ್ಮಣರೂ, ಸ್ಥಾವರಜಂಗಮಗಳೂ, ಎಲ್ಲವೂ ನಿನ್ನಿಂದಲೇ ಉಂಟಾದುವು. ಸಮುದ್ರಜಲದಿಂದ ಉಂಟಾದ ನೀರಿನ ಭಾಗಗಳೆಲ್ಲ ಬೇರೆಬೇರೆಯಾಗಿದ್ದು, ಪ್ರಳಯಕಾಲದಲ್ಲಿ ಎಲ್ಲವೂ ಹೇಗೆ ಒಂದಾಗಿ ಏಕಾರ್ಣವವೆನಿಸುವುದೋ, ಅದರಂತೆಯೇ ಪ್ರಪಂಚವೆಲ್ಲವೂ ನಿನ್ನಿಂದಲೇ ಉಂಟಾಗಿ, ತಿರುಗಿ ನಿನ್ನಲ್ಲಿಯೇ ಲಯಿಸುವುದೆಂದು ಅಭಿಜ್ಞರು ಹೇಳುವರು. ಪ್ರಪಂಚವೆಲ್ಲ ಕೊನೆಗೆ ನಿನ್ನ ಸಾಯುಜ್ಯವನ್ನೇ ಹೊಂದುವುದು. ಈ ಪ್ರಪಂಚದಲ್ಲಿ ಅದ್ಭುತಗಳೂ, ನಾಶರಹಿತಗಳೂ, ಪ್ರಾಣಿಹೃದಯದಲ್ಲಿ ವಸಿಸುವ ಸ್ವಭಾವದವುಗಳೂ ಆದ ಎರಡು ಪಕ್ಷಿಗಳುಂಟು. ಮೇಲೆ ಬೇರೂ, ಕೆಳಗೆ ಶಾಖೆಗಳೂ ಉಳ್ಳ ಸಂಸಾರರೂಪವಾದ ಅರಳಿಯ ಮರವೊಂದುಂಟು. ಅದಕ್ಕೆ ರಕ್ಷಕವಾಗಿ (ವಪೆ, ಮಾಂಸ, ರಕ್ತ, ಮೇದಸ್ಸು, ಮಜ್ಜೆ, ಅಸ್ಥಿ, ಶುಕ್ಲ)ವೆಂಬ ಏಳುಪಟ್ಟಿಗಳುಂಟು. ವಾಗರ್ಥಗಳೂ, ದೇವತೆಗಳೂ, ಲೋಕಪಾಲರೂ, ಮೊದಲು ಲೋಕವನ್ನೆಲ್ಲ ಧರಿಸುತ್ತಿದ್ದು, ಕೊನೆಗೆ ನಿನ್ನ ಸಾಯುಜ್ಯವನ್ನು ಹೊಂದಿದವರೇ! ಅವರಿಗಿಂತಲೂ ಮೇಲಾದ ವಸ್ತುಗಳೂ, ನಿನ್ನಿಂದ ಉಂಟಾದುವು. ಅವೆಲ್ಲಕ್ಕೂ ನೀನು ಮೇಲೆನಿಸಿದವನು. ಹಿಂದಿನದು, ಈಗಿನದು, ಮುಂದಿನದು ಎಲ್ಲವೂ ನೀನೇ! ನೀನು ದುರ್ಜಯನು! ದುರಾಸದನು! ನೀನು

ಪಿತಾಮಹನಿಗೂ ಪ್ರಭು! ಮಹೇಶ್ವರಾ! ಭಕ್ತನಾದ ನನ್ನನ್ನು ಪ್ರೀತಿಯಿಂದಾದರಿಸು. ಆತ್ಮಕ್ಕೂ ನೀನು ಅಂತರಾತ್ಮನೆಂಬುದನ್ನು ನಾನು ಬಲ್ಲೆನು. ಇದನ್ನು ತಿಳಿದವನೇ ಬ್ರಹ್ಮತ್ವವನ್ನು ಹೊಂದಿದವನು. ನಿನ್ನ ಮಹಿಮೆಯನ್ನು ತಿಳಿಯಬೇಕೆಂದೇ ಈಗ ನಾನು ನಿನ್ನನ್ನು ಸ್ತುತಿಸಿದೆನು. ಓ ದೇವಾ! ನಿನಗೆ ಉಚಿತವಾದ ಸ್ತೋತ್ರವನ್ನು ನಾನು ಎಷ್ಟೆಷ್ಟೋ ವಿಧದಿಂದ ಹುಡುಕಿದೆನು. ನನ್ನ ಈಗಿನ ಕೋರಿಕೆಗಳು ದುರ್ಲಭಗಳಾದರೂ, ನೀನು ಅವುಗಳನ್ನು ನಡೆಸಿಕೊಡಬೇಕು. ನನ್ನ ಸ್ತೋತ್ರಕ್ಕೆ ಪ್ರಸನ್ನನಾದಮೇಲೆ ನೀನು ನನ್ನನ್ನು ನಿನ್ನ ಮಾಯೆಯಿಂದ ಮರುಳಾಗಿಸಬಾರದು" ಎಂದನು. ಆಗ ಪಿನಾಕಿಯು ನಾರಾಯಣಮುನಿಗೆ ಪ್ರಸನ್ನನಾಗಿ, "ಮುನೀಂದ್ರಾ! ನನ್ನ ಅನುಗ್ರಹನಿಂದ ನೀನು ದೇವ ಗಂಧರ್ವ ಮನುಷ್ಯರೊಳಗೆಲ್ಲ ಅಪ್ರಮೇಯಬಲವುಳ್ಳವನಾಗುವೆ. ದೇವ, ದಾನವ, ಯಕ್ಷ, ರಾಕ್ಷಸ, ಪಿಶಾಚ, ಗಂಧರ್ವ, ನಾಗ, ಗರುಡರಲ್ಲಿ ಯಾರೂ ಪರಾಕ್ರಮದಲ್ಲಿ ನಿನ್ನನ್ನು ವಿರೋಧಿಸಲಾರರು. ಸಿಂಹ ವ್ಯಾಘ್ರಾದಿ ಕ್ರೂರಪ್ರಾಣಿಗಳೂ, ನಿನ್ನನ್ನು ಹಿಂಸಿಸಲಾರವು. ಯುದ್ಧಗಳಲ್ಲಿ ಶಸ್ತ್ರದಿಂದಾಗಲಿ, ವಜ್ರದಿಂದಾಗಲಿ, ಅಗ್ನಿಯಿಂದಾಗಲಿ, ಜಲದಿಂದಾಗಲಿ, ಒಣಗಿದ ಅಥವಾ ಹಸಿಯ ವಸ್ತುವಿನಿಂದಾಗಲಿ, ಸ್ಥಾವರ ಜಂಗಮಗಳಿಂದಾಗಲಿ ನಿನಗೆ ಹಾನಿಯಿರದು! ಕೈ, ಕಾಲು, ಕಾಷ್ಠ. ಲೋಷ್ಟ, ಪಾಷಾಣಾದಿಗಳಿಂದಲೂ ನಿನ್ನನ್ನು ಯಾರೂ ಬಾಧಿಸಲಾರರು. ನನ್ನ ಅನುಗ್ರಹದಿಂದ ನೀನು ಯುದ್ಧಕಾಲಗಳಲ್ಲಿ ನನಗಿಂತಲೂ ಒಂದು ಕೈ ಮೇಲೆನಿಸುವೆ" ಎಂದನು. ಓ ಅಶ್ವತ್ಥಾಮಾ! ರುದ್ರಾನುಗ್ರಹದಿಂದ ಆ ನಾರಾಯಣನು ಇವೇ ಮೊದಲಾಗಿ ಇನ್ನೂ ಅನೇಕವರಗಳನ್ನು ಪಡೆದು, ಮಾಯೆಯಿಂದ ಲೋಕವನ್ನು ಮೋಹಗೊಳಿಸುತ್ತಿರುವನು. ಆ ನಾರಾಯಣನ ತಪಸ್ಸಿಂದಲೇ ನರನೆಂಬ ಮಹರ್ಷಿಯುಂಟಾದನು. ಪುರಾತನ ದೇವತೆಗಳೆನಿಸಿದ ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ನರನಾರಾಯಣರಿಬ್ಬರೂ ವೈಷ್ಣವಾಂಶದವರು. ಉತ್ತಮ ತಪೋಬಲವುಳ್ಳವರು. ಲೋಕಕ್ಷೇಮಕ್ಕಾಗಿಯೂ, ದೈತ್ಯವಧಕ್ಕಾಗಿಯೂ, ಧರ್ಮಸಂಸ್ಥಾಪನೆಗಾಗಿಯೂ, ಒಂದೊಂದು ಯುಗದಲ್ಲಿಯೂ, ಬೇರೆಬೇರೆ ರೂಪಗಳಿಂದ ಅವತರಿಸುವರು. ಅಶ್ವತ್ಥಾಮಾ! ಅವರಂತೆ ನೀನೂ ನಿನ್ನ ಕರ್ಮಬಲದಿಂದಲೂ, ತಪೋಬಲದಿಂದಲೂ, ತೇಜಸ್ಸಿ

ನಿಂದಲೂ, ವಾಕ್ಕಿನಿಂದಲೂ, ಪೂರ್ಣವಾಗಿ ರುದ್ರಾಂಶದಿಂದ ಹುಟ್ಟಿದವನು. ನೀನೂ ಆ ನಾರಾಯಣನಂತೆಯೇ ಈ ಲೋಕವನ್ನೆಲ್ಲ ನಶ್ವರವೆಂದು ತಿಳಿದು, ಆ ಭಗವತ್ಪ್ರೀತಿಗಾಗಿ ನಿಯಮವನ್ನು ಹಿಡಿದು, ದೇಹವನ್ನು ದಂಡಿಸಿ ಶುದ್ಧವಾದ ಹವಿಸ್ಸನ್ನು ಕಲ್ಪಿಸಿ, ಜಪಹೋಮಾದಿಗಳಿಂದಲೂ, ಉಪಹಾರ ಗಳಿಂದಲೂ, ಆ ಮಹಾಪುರುಷನನ್ನು ಆರಾಧಿಸಿದೆ. ನಿನ್ನ ಪೂಜೆಯಿಂದ ಆದಿದೇವನೆನಿಸಿದ ಈಶ್ವರನು ಸಂತುಷ್ಟನಾಗಿ, ನಿನ್ನ ಕೋರಿಕೆಗಳನ್ನೆಲ್ಲ ಅನು ಗ್ರಹಿಸಿರುವನು. ಓ ಕುಮಾರಾ! ಆ ನರನಾರಾಯಣರಿಗೂ, ನಿನಗೂ ಸಮವಾಗಿ ಜನ್ಮ, ಕರ್ಮ, ತಪೋಯೋಗಗಳೆಲ್ಲವೂ ಪೂರ್ಣವಾಗಿ ಶುದ್ಧ ವಾಗಿರುವುವು. ಅವರಿಬ್ಬರಿಂದ ರುದ್ರನು ಲಿಂಗರೂಪದಿಂದ ಅರ್ಚಿಸಲ್ಪ ಟ್ಟನು. ದೇವದೇವನೂ, ಅಚಿಂತ್ಯಸ್ವರೂಪನೂ, ಅಜೇಯನೂ, ನಾರಾ ಯಣಮುನಿಗೆ ಉತ್ಪತ್ತಿಕಾರಣನೂ ಆದ ಆ ರುದ್ರನು, ಪ್ರತಿ ಯುಗದ ಲ್ಲಿಯೂ ಅರ್ಚಾರೂಪದಲ್ಲಿ ಪೂಜಿಸಲ್ಪಡತಕ್ಕವನು. ಆ ರುದ್ರನನ್ನು ಸರ್ವ ರೂಪಿಯೆಂದು ತಿಳಿದು ಯಾವನು ಲಿಂಗದಲ್ಲಿ ಅವನನ್ನು ಪೂಜಿಸುವನೋ ಅವ ನಲ್ಲಿ ಆತ್ಮಯೋಗಗಳೂ, ಶಾಸ್ತ್ರಯೋಗಗಳೂ, ಸ್ಥಿರವಾಗಿ ನೆಲೆಗೊಳ್ಳುವುವು. ದೇವತೆಗಳೂ, ಸಿದ್ಧರೂ, ಮಹಾತ್ಮರೂ, ಅವನನ್ನು ಪೂಜಿಸುವರು. ನೀನು ರುದ್ರನ ಪರಮಭಕ್ತನು. ಆ ಕೇಶವನೂ ರುದ್ರನಿಂದ ಅವತರಿಸಿದವನು ಆ ಕೃಷ್ಣನು ಯಜ್ಞಾರಾಧ್ಯನು! ಸರ್ವಭೂತಗಳಿಗೂ ಉತ್ಪತ್ತಿಸ್ಥಾನವೆಂದು ತಿಳಿದು, ಈಶ್ವರಲಿಂಗವನ್ನು ಪೂಜಿಸುವವನಲ್ಲಿ, ಋಷಭಧ್ವಜನು ಪ್ರೀತನಾ ಗುವನು" ಎಂದನು. ಮಹಾರಾಜಾ! ವ್ಯಾಸನ ಈ ಮಾತನ್ನು ಕೇಳಿದ ಮೇಲೆ ಅವನಿಗೆ ಕೃಷ್ಣನಲ್ಲಿ ಮಹತ್ತಾದ ಗೌರವಬುದ್ಧಿಯು ಹುಟ್ಟಿತು. ಅವನ ಮೈಯಲ್ಲಿ ರೋಮಾಂಚವೆದ್ದಿತು. ಆತನು ವ್ಯಾಸನಿಗೆ ನಮಸ್ಕರಿಸಿ, ಅಲ್ಲಿಂದ ಹೊರಟುಬಂದು, ಯುದ್ಧದಿಂದ ಸೈನ್ಯವನ್ನು ಹಿಂತಿರುಗಿಸಿಬಿ ಟ್ಟನು. ಪಾಂಡವಕೌರವ ಸೈನ್ಯಗಳೆರಡೂ ಯುದ್ಧದಿಂದ ನಿವೃತ್ತವಾದುವು. ಮಹಾರಾಜಾ! ವೇದಪಾರಂಗತನೂ, ವೃದ್ಧಬ್ರಾಹ್ಮಣನೂ ಆದ ದ್ರೋಣನು ಐದುದಿನಗಳವರೆಗೆ ಹೀಗೆ ಯುದ್ಧಮಾಡಿ, ಅನೇಕ ಸೈನ್ಯಗಳನ್ನು ಕೊಂದು, ಕಡೆಗೆ ಬ್ರಹ್ಮಲೋಕವನ್ನು ಹೊಂದಿದನು.

ಇದು ಇನ್ನೂರ ಎರಡನೆಯ ಅಧ್ಯಾಯವು.

ಯುದ್ಧಕಾಲದಲ್ಲಿ ಬೇರೆ ಯಾರಿಗೂ ತಿಳಿಯದಂತೆ ತನ್ನ ಮುಂದೆ ತನ್ನ ಪಕ್ಷಕ್ಕೆ ಯುದ್ಧಮಾಡುತ್ತಿದ್ದ ಶೂಲಪಾಣಿಯಾದ ಪುರುಷನನ್ನು ಕಂಡ ಅರ್ಜುನನು, ಅವನು ಯಾರೆಂದು ಪ್ರಶ್ನೆ ಮಾಡಿದುದಕ್ಕೆ ವ್ಯಾಸನು ಅವನೇ ಪಶುಪತಿಯೆಂದು ತಿಳಿಸಿ ಶತರುದ್ರೀಯಪಠನದಮೂಲಕವಾಗಿ ಅವನ ಗುಣಗಳನ್ನು ವರ್ಣಿಸಿದುದು.

ದ್ರೋಣವಧವಾದಮೇಲೆ ಪಾಂಡವಕೌರವರು ಮುಂದೆ ನಡೆಸಿದುದೇನೆಂದು ಧೃತರಾಷ್ಟ್ರನು ಕೇಳಲು, ಸಂಜಯನು "ರಾಜಾ! ದ್ರೋಣವಧವನ್ನು ನೋಡಿ ಕೌರವರೆಲ್ಲರೂ ಭಯಪಟ್ಟು ಓಡಿಹೋದಮೇಲೆ ಅರ್ಜುನನು ತನ್ನ ಯುದ್ಧಕಾಲದಲ್ಲಿ ಕಂಡ ಆಶ್ಚರ್ಯವೊಂದನ್ನು ನೆನೆಸಿಕೊಂಡು ಅದರ ರಹಸ್ಯವೇನೆಂದು ಯೋಚಿಸುತ್ತಿದ್ದನು. ಇಷ್ಟರಲ್ಲಿಯೇ ಮೇಘಶ್ಯಾಮಲನಾದ ವೇದವ್ಯಾಸಮುನಿಯು ಯಾದೃಚ್ಛಿಕವಾಗಿ ಬಂದು, ತನಗೆ ಕಾಣಿಸಲು, ಅವನಲ್ಲಿ ತನ್ನ ಆಶ್ಚರ್ಯವನ್ನು ಕುರಿತು ಪ್ರಶ್ನೆಮಾಡುತ್ತ "ಓ ಮಹಾತ್ಮಾ! ನಾನು ಯುದ್ಧದಲ್ಲಿ ಶತ್ರುಗಳನ್ನು ನನ್ನ ಬಾಣಗಳಿಂದ ಹೊಡೆಯುತ್ತಿದ್ದಾಗಲೆಲ್ಲ, ನನ್ನ ಮುಂಭಾಗದಲ್ಲಿ ಅಗ್ನಿತೇಜಸ್ಸುಳ್ಳ ಒಬ್ಬ ಪುರುಷನು, ಶೂಲವನ್ನು ಕೈಯಲ್ಲಿ ಹಿಡಿದು ಶತ್ರುಗಳನ್ನು ನಾಶಮಾಡುತ್ತಿದ್ದನು. ಅವನು ಯಾವಯಾವ ದಿಕ್ಕಿಗೆ ಹೋದರೆ, ಅಲ್ಲಲ್ಲಿ ನನ್ನ ಶತ್ರುಗಳು ಭೇದಿಸಲ್ಪಡುತ್ತಿದ್ದರು. ಆ ಯುದ್ಧದಲ್ಲಿ ನಾನು ನಡೆಸಿದ ಕಾರ್ಯವೇನೂ ನನಗೇ ತೋರಲಿಲ್ಲ. ಆದರೆ, ಅವನಿಂದ ಸಂಹೃತರಾದ ನನ್ನ ಶತ್ರುಗಳೆಲ್ಲ ನನ್ನಿಂದಲೇ ಹತರಾದಂತೆಯೂ, ನಾನು ಜಯಿಸಿದಂತೆಯೂ ಜನರೆಲ್ಲಾ ತಿಳಿದಿರುವರು. ನನ್ನ ಮುಂದೆ ಆ ಪುರುಷನು ಶತ್ರುಗಳನ್ನು ಕೊಲ್ಲುತ್ತ ಹೋಗುವಾಗ, ಅವನ ಹಿಂದೆ ನಾನು ಹೋಗುತ್ತಿದ್ದೆನೇ ಹೊರತು ಬೇರೆಯಲ್ಲ. ಆ ಮಹಾಪುರುಷನಾರೆಂದು ನನಗೆ ತಿಳಿಸಬೇಕು. ಶೂಲಧಾರಿಯಾಗಿ, ಸೂರ್ಯತೇಜಸ್ಸಿನಿಂದ ಜ್ವಲಿಸುತ್ತಿದ್ದ ಆ ದಿವ್ಯಪುರುಷನ ಪಾದವು ಭೂಮಿಯನ್ನೇ ಸ್ಪರ್ಶಿಸುತ್ತಿರಲಿಲ್ಲ. ಅವನು ತನ್ನ ಕೈಯಲ್ಲಿದ್ದ ಶೂಲವನ್ನು ಕೈಬಿಟ್ಟು ಪ್ರಯೋಗಿಸಿದವನೂ ಅಲ್ಲ. ಅವನ ಕೈಯಲ್ಲಿದ್ದ ಒಂದೇ ಶೂಲದಿಂದ ಸಾವಿರಾರು ಶೂಲಗಳು ಹೊರಡುತ್ತಿದ್ದುವು. ಇದೇನಾಶ್ಚರ್ಯವು?" ಎಂದನು.

ಆದಕ್ಕಾ ವ್ಯಾಸನು "ಅರ್ಜುನಾ! ಆ ದಿವ್ಯಪುರುಷನೇ ರುದ್ರನು. ಅವನು ಸೃಷ್ಟಿಕರ್ತರಾದ ಪ್ರಜಾಧಿಪತಿಗಳಲ್ಲಿ ಮೊದಲನೆಯವನು. ತೇಜೋರೂಪನು. ಸರ್ವಪ್ರಾಣಿಶರೀರದಲ್ಲಿ ಅಡಗಿರತಕ್ಕವನು. ಲೋಕಪ್ರಭು! ಲೋಕಸ್ವರೂಪಿ! ಭೂರ್ಭುವಗಳೆಂಬ ಲೋಕಗಳೆಲ್ಲ ಅವನ ಸ್ವರೂಪವೇ! ಅವನು ತೇಜಸ್ಸುಗಳಲ್ಲಿ ಮೇಲಾದವನು. ಅವನು ಸರ್ವೇಶ್ವರನು! ವರಪ್ರದನು! ನೀನು ನೋಡಿದುದು ಆ ಶಂಕರನನ್ನೇ! ಲೋಕೇಶ್ವರನೂ, ಮಹಾತ್ಮನೂ ಆದ ಆ ಮಹಾದೇವನನ್ನು ನೀನು ಶರಣುಹೊಂದು. ಜಟಾಧಾರಿಯೂ, ತ್ರಿನೇತ್ರನೂ, ಶಿಖೆಯುಳ್ಳವನೂ, ನಾರುಮಡಿಯನ್ನು ಧರಿಸಿದವನೂ, ಲೋಕೇಶ್ವರನೂ ಆದ ಆ ಸ್ಥಾಣುವನ್ನು ನೀನು ಶರಣುಹೊಂದು! ಅವನೇ ಜಗತ್ತಿಗೆಲ್ಲ ಪ್ರಧಾನನು! ಜಗದಾನಂದಕರನು! ಜಗದಧೀಶ್ವರನು! ಜಗತ್ತಿಗೆಲ್ಲ ಬೀಜಭೂತನು! ಅಜಿತನು! ಜಗತ್ತಿಗೆಲ್ಲ ಗತಿಯೆನಿಸಿದವನು. ಜಗತ್ ಸ್ವರೂಪನು. ವಿಶ್ವಸೃಷ್ಟಿಕರ್ತನು. ವಿಶ್ವೇಶ್ವರನು! ಪ್ರಪಂಚವನ್ನು ನಡೆಸತಕ್ಕವನು. ಸಮಸ್ತಕರ್ಮಗಳಿಗೂ ಪ್ರಭು! ಸರ್ವ ಶುಭಗಳಿಗೂ ಮೂಲಭೂತನು. ಸ್ವಯಂಭವನು. ಭೂತಪತಿ! ಭೂತ ಭವ್ಯ ವರ್ತಮಾನಗಳಿಗೆಲ್ಲ ಉತ್ಪತ್ತಿಸ್ಥಾನವಾದವನು. ಯೋಗಸ್ವರೂಪಿ! ಯೋಗೇಶ್ವರನು! ಸರ್ವಶ್ರೇಷ್ಠನು! ಲೋಕೇಶ್ವರರಿಗೂ ಈಶ್ವರನು! ಜಗತ್ತಿಗೆಲ್ಲ ಶ್ರೇಷ್ಠನು! ಮಹತ್ತಾದ ರೂಪವುಳ್ಳವನು! ಲೋಕತ್ರಯ ನಿರ್ಮಾಪಕನು! ಲೋಕತ್ರಯಾಧಾರನು! ಶುದ್ಧಾತ್ಮನು! ಶತ್ರುಭೀಕರನು! ಚಂದ್ರಶೇಖರನು! ಶಾಶ್ವತನು! ಭೂಮಿಯನ್ನು ಧರಿಸಿದವನು! ವಾಗೀಶ್ವರರಿಗೆಲ್ಲ ಈಶ್ವರನು! ದುರ್ಜಯನು! ಜನ್ಮ ಮೃತ್ಯು ಜರೆಗಳನ್ನೆಲ್ಲ ಮೀರಿದವನು. ಜ್ಞಾನಾತ್ಮಕನು! ಜ್ಞಾನಗಮ್ಯನು! ಜ್ಞಾನದಲ್ಲಿ ಮೇಲೆನಿಸಿದವನು! ಅವನನ್ನು ಯಾರಿಂದಲೂ ತಿಳಿಯುವುದು ಸಾಧ್ಯವಲ್ಲ. ಭಕ್ತವರಪ್ರದನು! ಅವನನ್ನು ಸುತ್ತಿಮುತ್ತಿ ಕುಳ್ಳರು, ಜಡೆಬೆಳೆಸಿದವರು, ತಲೆಯಲ್ಲಿ ಕೂದಲಿಲ್ಲದವರು, ಗುಜ್ಜುಗೊರಲಿನವರು, ದೊಡ್ಡ ಹೊಟ್ಟೆಯುಳ್ಳವರು, ಉಬ್ಬಿದ ಮೈ, ಎತ್ತರವಾದ ಆಕೃತಿ, ದೊಡ್ಡ ಕಿವಿ, ವಿಕಾರವಾದ ಮುಖ, ವಿಕಾರವಾದ ಕಾಲು, ವಿಕಾರವೇಷ, ಇಂತಹ ವಿಚಿತ್ರಾಕಾರವುಳ್ಳ ಪಾರ್ಷದಗಣಗಳುಂಟು. ಅವರಿಂದ ಅವನು ಸದಾ ಪೂಜಿಸಲ್ಪಡುತ್ತಿರುವನು. ಅರ್ಜುನಾ! ತೇಜಸ್ವಿ

ಯಾದ ಅವನು ಪರಮಶಿವನು. ನಿನ್ನಲ್ಲಿ ಅನುಗ್ರಹದಿಂದ ಯುದ್ಧಕಾಲದಲ್ಲಿ ನಿನ್ನ ಮುಂದೆ ಹೋಗುತ್ತಿರುವನು. ಅತಿಭಯಂಕರವಾದ ಆ ಘೋರ ಯುದ್ಧದಲ್ಲಿ, ಮಹಾಧನುರ್ಧಾರಿಗಳಾದ ಕರ್ಣ ಕೃಪಾಶ್ವತ್ಥಾಮರಿಂದ ರಕ್ಷಿತ ವಾದ ಆ ಕೌರವಸೈನ್ಯವನ್ನು ಮನಸ್ಸಿನಿಂದಲಾದರೂ ಜಯಿಸುವುದಕ್ಕೆ ಯಾವನುತಾನೇ ಶಕ್ತನು! ಬಹುರೂಪಿಯಾದ ಆ ಮಹೇಶ್ವರನುಹೊರತು, ಆ ಕೌರವಸೈನ್ಯದಮುಂದೆ ನಿಲ್ಲುವುದಕ್ಕೂ ಬೇರೊಬ್ಬನಿಗೆ ಶಕ್ತಿಯಿಲ್ಲ. ಆ ಮಹೇಶ್ವರನಿಗೆ ಸಮಾನವಾದ ಭೂತವು ಮೂರು ಲೋಕಗಳಲ್ಲಿಯೂ ಇಲ್ಲ. ಕೋಪಗೊಂಡ ಅವನ ಗಂಧಮಾತ್ರದಿಂದಲೇ ಯುದ್ಧದಲ್ಲಿ ಶತ್ರುಗಳು ಪ್ರಜ್ಞಾಹೀನರಾಗಿ ಸಾಯುವರು. ಭಯದಿಂದ ನಡುಗುವರು! ಮೂರ್ಛೆಬೀಳುವರು! ದೇವಲೋಕದಲ್ಲಿರುವ ದೇವತೆಗಳೂ, ಯಾವಾಗಲೂ ಅವನನ್ನು ನಮಸ್ಕರಿಸುತ್ತಿರುವರು! ಭೂಲೋಕದಲ್ಲಿರುವ ಮತ್ತು ಸ್ವರ್ಗವನ್ನು ಜಯಿಸಿರುವ ಮನುಷ್ಯರೆಲ್ಲರೂ ಅನನ್ಯಭಾವದಿಂದ ಸರ್ವೇಶ್ವರನಾದ ಆ ಉಮಾಪತಿಯನ್ನು ಭಕ್ತಿಯಿಂದ ಉಪಾಸಿಸುತ್ತಿರುವರು. ಅಂತಹ ಉಪಾಸಕರು ಎಲ್ಲಾ ಯುದ್ಧಗಳಲ್ಲಿ ಜಯಹೊಂದಿ, ಭೂಮಿಯಲ್ಲಿ ಈ ಲೋಕದ ಎಲ್ಲಾ ಸುಖವನ್ನೂ ಅನುಭವಿಸಿದಮೇಲೆ ಮೇಲಾದ ಪರಗತಿಯನ್ನೂ ಹೊಂದುವರು. ಓ ಕುಂತೀಕುಮಾರಾ! ವರಪ್ರದನೂ, ಶಾಂತನೂ, ಶಿತಿಕಂಠನೂ, ಯಾವಾಗಲೂ ಯುವಕನಂತೆ ಕಾಣುವವನೂ, ವರ್ಚಸ್ವಿಯೂ, ಕಪರ್ದವೆಂಬ ಜಟಾಮಂಡಲವನ್ನು ಧರಿಸಿದವನೂ, ಶತ್ರುಭಯಂಕರನೂ, ಪಿಂಗಳನೇತ್ರನೂ, ವರಪ್ರದನೂ ಆದ ಆ ರುದ್ರನಿಗೆ ನಮಸ್ಕರಿಸು. ಯಮನಿಗೆ ಪ್ರಿಯನೂ, ಅವ್ಯಕ್ತವಾದ ಆಕಾಶವನ್ನೇ ಕೇಶವಾಗಿ ಉಳ್ಳವನೂ, ಸಚ್ಚರಿತ್ರನೂ, ಶುಭಕರನೂ, ಎಲ್ಲರಿಂದಲೂ ಪ್ರಾರ್ಥಿಸಲ್ಪಡತಕ್ಕವನೂ, ಸಿಂಹದ ಕಣ್ಣುಗಳಂತೆ ಧೀರವಾದ ಕಣ್ಣುಳ್ಳವನೂ, ಪ್ರಾಣಿಗಳ ಹೃದಯಮಧ್ಯದಲ್ಲಿ ವಾಸಿಸತಕ್ಕವನೂ ಆದ ಆ ಸ್ಥಾಣುವನ್ನು ನಮಸ್ಕರಿಸು! ಪ್ರಾಣಿಸಂಹಾರಕನೂ, ಸೇನಾಪತಿಯೂ ಆದ ಆ ರುದ್ರನಿಗೆ ಬಾರಿಬಾರಿಗೂ ನನ್ನ ನಮಸ್ಕಾರವು. ಹರಿತ್ಕೇಶನೂ, ಕೇಶರಹಿತನೂ, ಕೃಶಾಂಗನೂ, ಆಪದುದ್ಧಾರಕನೂ, ಭಾಸ್ಕರಸ್ವರೂಪಿಯೂ, ಉತ್ತಮತೀರ್ಥಸ್ವರೂಪಿಯೂ, ದೇವದೇವನೂ, ಬಹುರೂಪನೂ, ಸರ್ವಸ್ವರೂಪನೂ, ಸರ್ವಪ್ರಿ

ಯನೂ, ವಸ್ತ್ರಪ್ರಿಯನೂ, ಉಷ್ಣೀಷಧಾರಿಯೂ, ಸುಂದರಮುಖನೂ, ಸಹಸ್ರಾಕ್ಷನೂ, ಭಕ್ತಾಭೀಷ್ಟಪ್ರದನೂ ಆದ ಆ ಶಿವನಿಗೆ ನನ್ನ ನಮಸ್ಕಾರವಿರಲಿ! ಪರ್ವತವಾಸಿಯೂ, ಶಾಂತನೂ, ಜಗತ್ಪತಿಯೂ, ಚೀರವಸ್ತ್ರಧಾರಿಯೂ, ಸುವರ್ಣಬಾಹುವೂ, ಉಗ್ರನೂ ಆದ ಆ ರುದ್ರನಿಗೆ ನಮಸ್ಕಾರವು! ದಿಕ್ಪತಿಯೂ, ಪರ್ಜನ್ಯಪತಿಯೂ, ಭೂತಪತಿಯೂ, ವೃಕ್ಷಪತಿಯೂ, ಗೋಪತಿಯೂ ಆದ ಶಿವನಿಗೆ ನಮಸ್ಕಾರವು. ವೃಕ್ಷಗಳಿಂದ ಆವೃತವಾದ ದೇಹವುಳ್ಳವನೂ, ಮಧ್ಯಸ್ಥನೂ, ಸ್ರುವವೆಂಬ ಯಜ್ಞದ ಸೌಟನ್ನು ಕೈಯಲ್ಲಿ ಹಿಡಿದವನೂ, ಧನುರ್ಧಾರಿಯೂ, ಭೃಗುಪ್ರಿಯನೂ, ಬಹುರೂಪನೂ, ವಿಶ್ವಪತಿಯೂ, ಮುಂಜವೆಂಬ ಹುಲ್ಲನ್ನು ವಸ್ತ್ರವಾಗಿ ಧರಿಸಿದವನೂ ಆದ ರುದ್ರನಿಗೆ ನಮಸ್ಕಾರವು. ಸಹಸ್ರಶೀರ್ಷನೂ, ಸಹಸ್ರಪಾದನೂ, ಸಹಸ್ರಬಾಹುವೂ, ಸಹಸ್ರಮುಖನೂ ಆದ ಆ ಮಹೇಶ್ವರನಿಗೆ ನಮಸ್ಕಾರವು. ಅರ್ಜುನಾ! ವಿರೂಪಾಕ್ಷನೂ, ದಕ್ಷಯಾಗಧ್ವಂಸಕನೂ, ಪ್ರಜಾಧಿಪತಿಯೂ. ಅವ್ಯಯನೂ, ಅವ್ಯಕ್ತನೂ ಆದ ಆ ರುದ್ರನನ್ನು ಶರಣುಹೊಂದು. ದುಃಖರಹಿತನೂ, ನಾಶರಹಿತನೂ, ಉತ್ತಮವಾದ ಸುಳಿಗಳುಳ್ಳವನೂ, ಉತ್ತಮನಾಭಿಯುಳ್ಳವನೂ. ವೃಷಭಧ್ವಜನೂ, ವೃಷಭದಂತೆ ದರ್ಪವುಳ್ಳವನೂ, ಧರ್ಮಗಳಿಗೆಲ್ಲ ಪತಿಯೂ, ಪುಣ್ಯಪ್ರಧಾನನೂ, ಪುಣ್ಯಪುರುಷರಲ್ಲಿ ಶ್ರೇಷ್ಠನೂ, ವೃಷಭಸ್ವರೂಪನೂ, ವೃಷಭದಂತೆ ಉದಾರಸ್ವಭಾವನೂ, ವೃಷಭದಂತೆ ಗಂಭೀರವಾದ ನೋಟವುಳ್ಳವನೂ, ಉತ್ತಮವಾದ ಧನುರ್ಬಾಣಗಳುಳ್ಳವನೂ, ಪುಣ್ಯಸ್ವರೂಪಿಯೂ, ಪುಣ್ಯೇಶ್ವರನೂ, ಲೋಕಗಳನ್ನೆಲ್ಲ ಗರ್ಭದಲ್ಲಿ ಅಡಗಿಸಿರತಕ್ಕವನೂ, ಮಹಾಕಾಯನೂ, ವ್ಯಾಘ್ರಚರ್ಮಧಾರಿಯೂ, ಆದ ಆ ಶಿವನನ್ನು ಶರಣುಹೊಂದು. ವೇದಪ್ರತಿಪಾದ್ಯನೂ, ಬ್ರಾಹ್ಮಣಪ್ರಿಯನೂ, ಶೂಲಪಾಣಿಯೂ, ಖಡ್ಗಚರ್ಮಧಾರಿಯೂ ಆದ ಆ ಪ್ರಭುವನ್ನು ಶರಣುಹೊಂದು. ಲೋಕಶರಣ್ಯನಾದ ಆ ದೇವನನ್ನು ನಾನು ಮರೆಹುಗುವೆನು ಸುರೇಶ್ವರನೂ, ಗಣಾಧಿಪತಿಯೂ ಆದ ಶಿವನಿಗೆ ನಮಸ್ಕಾರವು. ಉತ್ತಮವ್ರತನೂ, ಉತ್ತಮ ಧನುರ್ಧಾರಿಯೂ, ಧನುಃಪ್ರಿಯನೂ, ಧನುಸ್ಸ್ವರೂಪಿಯೂ, ಧನುರ್ವಿದ್ಯಾಚಾರ್ಯನೂ, ಉಗ್ರಾಯುಧನೂ ಆದ ಆವನಿಗೆ ನಮಸ್ಕಾರವು. ಓ ಮಹಾದೇವಾ! ಬಹುರೂಪನೂ, ಬಹುಧ

ಸ್ವನೂ, ತಪಸ್ವಿಯೂ, ಸ್ಥಾಣುವೂ ಆದ ನಿನಗೆ ನಮಸ್ಕಾರವು. ತ್ರಿಪುರಸಂಹಾರಿಯೂ, ಭಗನೆಂಬ ಸೂರ್ಯನ ಕಣ್ಣುಗಳನ್ನು ಕಿತ್ತವನೂ, ವನಸ್ಪತಿಗಳಿಗೂ, ಮಾತೃಗಣಗಳಿಗೂ ಪತಿಯೂ ಆದ ನಿನಗೆ ನಮಸ್ಕಾರವು. ಗೋಪತಿಯೂ, ಯಜ್ಞಪತಿಯೂ, ಜಲಪತಿಯೂ, ದೇವಪತಿಯೂ ಆದ ನಿನಗೆ ನಮಸ್ಕಾರವು. ವೃಷನೆಂಬ ಸೂರ್ಯನ ಹಲ್ಲುಗಳನ್ನು ಕಿತ್ತ ನಿನಗೆ ವಂದನವು! ನೀಲಕಂಠನೂ, ಪಿಂಗಳವರ್ಣನೂ, ಸ್ವರ್ಣಕೇಶನೂ ಆದ ನಿನಗೆ ನಮಸ್ಕಾರವು"

ಹೀಗೆ ವ್ಯಾಸನು ರುದ್ರನನ್ನು ತಾನೂ ಸ್ತುತಿಸಿದಮೇಲೆ, ತಿರುಗಿ ಅರ್ಜುನನನ್ನು ಕುರಿತು "ಪಾರ್ಥ! ಆ ಮಹಾದೇವನ ದಿವ್ಯಕರ್ಮಗಳು ಯಾವಯಾವುವುಂಟೋ ಅವುಗಳನ್ನು ನಾನು ಕೇಳಿದಮಟ್ಟಿಗೆ, ಮತ್ತು ನನಗೆ ತಿಳಿದಮಟ್ಟಿಗೆ, ನಿನಗೂ ತಿಳಿಸುವೆನು ಕೇಳು. ಅವನು ಕೋಪಗೊಂಡರೆ ದೇವ ದಾನವ ಗಂಧರ್ವ ರಾಕ್ಷಸಾದಿಗಳಲ್ಲಿ ಯಾರೇ ಆಗಲಿ ಪಾತಾಳದಲ್ಲಿದ್ದರೂ ಕೂಡ ಸುಖದಿಂದ ಬದುಕಲಾರರು. ಹಿಂದೆ ವಿಧ್ಯುಕ್ತವಾಗಿ ಸಿದ್ಧಪಡಿಸಲ್ಪಟ್ಟ ದಕ್ಷಯಾಗಸಂಭಾರಗಳನ್ನು ಆ ಮಹಾದೇವನು ಕ್ಷಣಮಾತ್ರದಲ್ಲಿ ನಾಶಮಾಡಿಬಿಟ್ಟನು. ಆ ಕಾಲದಲ್ಲಿ ತನ್ನ ಪಿನಾಕವೆಂಬ ಧನುಸ್ಸಿನಿಂದ ಬಾಣವನ್ನು ಬಿಡುತ್ತ, ಅವನು ದೊಡ್ಡ ಸಿಂಹನಾದವನ್ನು ಮಾಡಲು, ಆಗ ಯಜ್ಞದೇವತೆಯು, ರುದ್ರನ ಕೋಪಕ್ಕೆ ಹೆದರಿ ಓಡಿಹೋಯಿತು. ಆಗ ದೇವತೆಗಳಿಗೆ ಶಾಂತಿಯೇ ಇರಲಿಲ್ಲ! ಇನ್ನು ಅವರಿಗೆ ಯುದ್ಧದಲ್ಲಿ ಸಂತೋಷವೆಲ್ಲಿಯದು? ಆಗ ರುದ್ರನು ನಾಣನ್ನು ತಟ್ಟಿದ ಧ್ವನಿಗೆ ಲೋಕಗಳೆಲ್ಲ ನಡುಗಿದುವು! ತ್ರೈಲೋಕ್ಯವೇ ಬಂದು ಅವನಲ್ಲಿ ಮರೆಹೊಕ್ಕಿತು. ದೇವಾಸುರರು ಪ್ರಜ್ಞೆತಪ್ಪಿ ಬಿದ್ದರು! ಸಮುದ್ರಗಳು ಕಲಗಿದುವು! ಭೂಮಿಯು ನಡುಗಿತು! ಪರ್ವತಗಳು ಸೀಳಿಹೋದುವು! ದಿಗ್ಗಜಗಳು ಮೋಹಗೊಂಡುವು. ಲೋಕವೆಲ್ಲಾ ಅಂಧತಮಸ್ಸಿನಿಂದ ಆವೃತವಾಗಿ, ಯಾವುದೂ ಕಾಣದಂತಾಯಿತು. ಸೂರ್ಯನೊಡನೆ ಸಮಸ್ತಗ್ರಹಗಳ ಕಾಂತಿಯೂ ಕಂದಿಹೋಯಿತು. ಆಗ ಋಷಿಗಳು ಭೀತರಾಗಿ, ತಮಗೂ, ಲೋಕಕ್ಕೂ ಕ್ಷೇಮವಾಗಲೆಂದು ಹಾರೈಸುತ್ತ, ಶಾಂತಿಕರ್ಮಗಳನ್ನು ಮಾಡಿದರು. ಆಗ ಶಂಕರನು

ಅಟ್ಟಹಾಸದಿಂದ ಮುಂದುವರಿದು, ಆ ಯಜ್ಞದಲ್ಲಿ ಪುರೋಡಾಶವನ್ನು ಭಕ್ಷಿಸುತ್ತಿದ್ದ ವೃಷನ ಹಲ್ಲುಗಳನ್ನುದಿರಿಸಿಬಿಟ್ಟನು. ದೇವತೆಗಳೆಲ್ಲರೂ ಭಯದಿಂದೋಡಿದರು. ಮಿಂಚಿನೊಡಗೂಡಿದ ಮೇಘದಂತೆ ಧೂಮಜ್ವಾಲೆಗಳನ್ನು ಕೆದರುವ ಬಾಣಗಳನ್ನು ರುದ್ರನು ತಿರುಗಿ ಬಿಲ್ಲಿನಲ್ಲಿ ಸಂಧಿಸಿದನು. ಆಗ ದೇವತೆಗಳೆಲ್ಲರೂ ಹೆದರಿ, ಆ ರುದ್ರನಿಗೆ ಸೇರಬೇಕಾದ ಯಜ್ಞಭಾಗಗಳನ್ನೆಲ್ಲ ಸಂಪೂರ್ಣವಾಗಿ ಅವನಿಗಾಗಿ ವಿಭಾಗಿಸಿಟ್ಟು, ಅವನಲ್ಲಿಯೇ ಶರಣಾಗತರಾದರು. ಆಮೇಲೆ ಶಾಂತನಾದ ರುದ್ರನಿಂದ ಅದೇ ಯಜ್ಞವು ತಿರುಗಿ ಕೂಡಿಸಲ್ಪಟ್ಟಿತು. ದೇವತೆಗಳು ಈಗಲೂ ರುದ್ರನಿಗೆ ಭಯಪಡುವರು.

ಅರ್ಜುನಾ! ಆ ಮಹಾದೇವನ ಮತ್ತೊಂದು ಅದ್ಭುತ ಚರಿತ್ರವನ್ನು ಹೇಳುವೆನು ಕೇಳು. ಹಿಂದೆ ಪ್ರಬಲವೀರ್ಯವುಳ್ಳ ಮೂರುಮಂದಿ ದಾನವರಿದ್ದರು. ಅವರಿಗೆ ಬೇರೆಬೇರೆ ಮೂರು ನಗರಗಳಿದ್ದುವು. ಆ ಮೂರುಮಂದಿಗೂ ಕಮಲಾಕ್ಷ, ತಾರಕಾಕ್ಷ, ವಿದ್ಯುನ್ಮಾಲಿಗಳೆಂದು ಹೆಸರು. ಅವರಲ್ಲಿ ಕಮಲಾಕ್ಷನ ಪುರವು ಸುವರ್ಣಮಯವಾದುದು. ತಾರಕಾಕ್ಷನ ಪುರವು ರಜತಮಯವಾದುದು. ವಿದ್ಯುನ್ಮಾಲಿಯ ಮೂರನೆಯ ಪುರವು ಅಯೋಮಯವಾದುದು. ಅವುಗಳನ್ನು ಭೇದಿಸಲು ಇಂದ್ರನಿಗೆ ಯಾವ ಆಯುಧಗಳಿಂದಲೂ ಸಾಧ್ಯವಾಗಲಿಲ್ಲ. ಆಗ ದೇವತೆಗಳು ಮಹಾತ್ಮನಾದ ರುದ್ರನಲ್ಲಿಗೆ ಹೋಗಿ ಮೊರೆಯಿಡುತ್ತ "ಓ ದೇವಾ! ಬ್ರಹ್ಮವರದಿಂದ ಕೊಬ್ಬಿದ ಘೋರರಾಕ್ಷಸರು ಬೇರೆಬೇರೆ ಮೂರು ಪುರಗಳಲ್ಲಿ ನೆಲೆಗೊಂಡು, ಲೋಕವನ್ನೆಲ್ಲ ಪೀಡಿಸುತ್ತಿರುವರು. ನೀನು ಹೊರತು ಅವರನ್ನು ನಾಶಮಾಡಬಲ್ಲವನು ಬೇರೊಬ್ಬನಿಲ್ಲ. ನೀನೇ ಅವರನ್ನು ಕೊಲ್ಲಬೇಕು! ನೀನು ಅವರನ್ನು ಕೊಂದರೆ, ಎಲ್ಲಾ ಯಜ್ಞಕರ್ಮಗಳಲ್ಲಿಯೂ ಪಶುಗಳು ನಿನ್ನ ಹೆಸರಿನಿಂದ ರೌದ್ರವೆನಿಸಿಕೊಳ್ಳುವುವು" ಎಂದರು. ದೇವತೆಗಳ ಹಿತಕ್ಕಾಗಿ ರುದ್ರನು ಹಾಗೆಯೇ ಆಗಲೆಂದು ಹೇಳಿ, ವಿಂಧ್ಯ ಗಂಧಮಾದನಪರ್ವತಗಳೆರಡನ್ನೂ ತನಗೆ ಉಭಯಪಾರ್ಶ್ವದ ಧ್ವಜಗಳನ್ನಾಗಿಯೂ, ಸಮುದ್ರಾರಣ್ಯಗಳೊಡಗೂಡಿದ ಭೂಮಿಯನ್ನು ರಥವನ್ನಾಗಿಯೂ, ಆದಿಶೇಷನನ್ನು ರಥದ ಅಚ್ಚನ್ನಾಗಿಯೂ, ಚಂದ್ರಸೂರ್ಯರನ್ನು ರಥಚಕ್ರಗಳನ್ನಾಗಿಯೂ ಮಾಡಿಕೊಂ

ಡನು. ಬಲಭದ್ರ, ಪುಷ್ಪದಂತಗಳೆಂಬ ಸರ್ಪಗಳೆರಡನ್ನೂ ಎರಡು ಕಡಾಣಿಗಳನ್ನಾಗಿಯೂ, ಮಲಯವನ್ನು ನೊಗವನ್ನಾಗಿಯೂ, ತಕ್ಷಕನನ್ನು ನೊಗದ ಕಟ್ಟನ್ನಾಗಿಯೂ ಮಾಡಿಕೊಂಡನು. ಸರೀಸೃಪಗಳು, ಪರ್ವತಗಳು ಮೊದಲಾದುವನ್ನು ರಥದ ಕಟ್ಟು, ಕೀಲು ಮುಂತಾದುವುಗಳನ್ನಾಗಿಯೂ, ನಾಲ್ಕು ವೇದಗಳನ್ನು ನಾಲ್ಕು ಕುದುರೆಗಳನ್ನಾಗಿಯೂ, ಉಪವೇದಗಳನ್ನು ಕಡಿವಾಳಗಳನ್ನಾಗಿಯೂ, ಗಾಯತ್ರೀ ಸಾವಿತ್ರಿಗಳನ್ನು ಕುದುರೆಯ ಹಗ್ಗಗಳನ್ನಾಗಿಯೂ, ಓಂಕಾರವನ್ನು ಚಾಟಿಯನ್ನಾಗಿಯೂ, ಬ್ರಹ್ಮನನ್ನು ಸಾರಥಿಯನ್ನಾಗಿಯೂ, ಮಂದರಪರ್ವತವನ್ನು ಬಿಲ್ಲನ್ನಾಗಿಯೂ, ವಾಸುಕಿಯನ್ನು ಬಿಲ್ಲಿನ ನಾಣನ್ನಾಗಿಯೂ ಮಾಡಿಕೊಂಡನು. ವಿಷ್ಣುವನ್ನು ತೀವ್ರಬಾಣವನ್ನಾಗಿಯೂ, ಅಗ್ನಿಯನ್ನು ಅಲಗನ್ನಾಗಿಯೂ, ವಾಯುವನ್ನು ಬಾಣದ ಗರಿಗಳನ್ನಾಗಿಯೂ ಮಾಡಿಕೊಂಡನು. ಹಿಡಿಯಲ್ಲಿ ಯಮದೇವನನ್ನು ನೆಲೆಗೊಳಿಸಿದನು. ಮಿಂಚನ್ನು ಬಾಣದ ಮೊನೆಯನ್ನಾಗಿಯೂ, ಮೇರುವನ್ನು ರಥದ ಪ್ರಧಾನಧ್ವಜವನ್ನಾಗಿಯೂ ಮಾಡಿಟ್ಟನು. ಹೀಗೆ ಸರ್ವದೇವತಾತ್ಮಕವಾದ ರಥವನ್ನೇರಿ ರುದ್ರನು, ತ್ರಿಪುರವಧಕ್ಕಾಗಿ ಹೊರಟಾಗ, ದೇವತೆಗಳೂ, ಋಷಿಗಳೂ ಅವನ ಸುತ್ತಲೂ ಸ್ತುತಿಪಾಠಕರಾಗಿ ಸ್ತುತಿಸುತಿದ್ದರು. ಮಾಹೇಶ್ವರವೆಂಬ ಅಸಾಧಾರಣನಾದ ವ್ಯೂಹವನ್ನು ರಚಿಸಿ, ಅದರಲ್ಲಿ ತಾನು ನಿಶ್ಚಲನಾಗಿ ಕುಳಿತು, ಸಾವಿರವರ್ಷಗಳವರೆಗೆ ಆ ತ್ರಿಪುರಗಳನ್ನು ನಿರೀಕ್ಷಿಸುತಿದ್ದನು. ಆ ಮೂರು ದೈತ್ಯಪುರಗಳೂ ಒಂದಾಗಿ ಸೇರಿ ಬಂದಾಗ, ವಿಷ್ಣು, ವಾಯು, ಯಮರೆಂಬ ಮೂರು ಶಕ್ತಿಗಳಿಂದಲೂ, ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯಗಳೆಂಬ ಮೂರು ಅಲಗುಗಳಿಂದಲೂ ಕೂಡಿದ ತನ್ನ ಬಾಣಗಳಿಂದ, ಆ ಪಟ್ಟಣಗಳನ್ನು ಭೇದಿಸಿಕೆಡಹಿದನು. ಆಗ ಆ ರುದ್ರನನ್ನು ಕಣ್ಣಿಂದ ನೋಡಿ ನಿಲ್ಲುವುದಕ್ಕೂ ಆ ದಾನವರಿಗೆ ಸಾಧ್ಯವಾಗಲಿಲ್ಲ. ತ್ರಿಪುರಸಂಹಾರಿಯಾದ ಆ ಈಶ್ವರನ ಮುಂದೆ ಆಗ ಪಾರ್ವತೀದೇವಿಯು ಬಂದು ನಿಂತಳು.

ಧನಂಜಯಾ! ಆ ದೇವಿಯು ಸ್ವಯಂವರಕಾಲದಲ್ಲಿ ನಡೆದ ಮತ್ತೊಂದು ವಿಶೇಷವನ್ನು ಹೇಳುವೆನು ಕೇಳು. ಪಂಚಶಿಖೆಗಳುಳ್ಳ ಬಾಲನೊಬ್ಬನು

ತಾನಾಗಿ ಬಂದು ತನ್ನ ತೊಡೆಯಮೇಲೆ ಕುಳಿತುದನ್ನು ನೋಡಿ, ಉಮಾದೇವಿಯು ಅವನ ಪೂರ್ವೋತ್ತರವೇನೆಂದು ದೇವತೆಗಳನ್ನು ಪ್ರಶ್ನೆಮಾಡಿದಳು. ಪಾರ್ವತೀದೇವಿಯ ತೊಡೆಯಮೇಲೆ ಬಂದು ಕುಳಿತ ಆ ಬಾಲನನ್ನು ಕಂಡು ದೇವೇಂದ್ರನು, ತನ್ನ ವಜ್ರಾಯುಧವನ್ನು ಕೈಗೆತ್ತಿಕೊಂಡು ಆ ಬಾಲನನ್ನು ಪ್ರಹರಿಸುವುದಕ್ಕಾಗಿ ಹೋದನು. ವಜ್ರಾಯುಧದೊಡನೆ ಅವನ ತೋಳು ಹಾಗೆಯೇ ಸ್ತಂಭಿತವಾಯಿತು. ಆಗ ದೇವತೆಗಳೆಲ್ಲರೂ ಆ ಇಂದ್ರನನ್ನೂ ಮುಂದಿಟ್ಟುಕೊಂಡು ಬ್ರಹ್ಮನಬಳಿಗೆ ಹೋಗಿ ಕೈಮುಗಿದು ಮೊರೆಯಿಡುತ್ತ "ದೇವಾ! ಇದೇನಾಶ್ಚರ್ಯವೋ ತಿಳಿಯದು! ಪಾರ್ವತಿಯ ತೊಡೆಯಮೇಲೆ ಅದ್ಭುತವಾದ ಬಾಲರೂಪವುಳ್ಳ ಶಿಶುವೊಂದು ಬಂದು ಕುಳಿತಿರುವುದು. ಆ ಶಿಶುವು ಯಾರೆಂದು ತಿಳಿಯಲಿಲ್ಲ! ಆ ಬಾಲನು ಯುದ್ಧಮಾಡದೆಯೇ ನಮ್ಮನ್ನೂ, ನಮ್ಮ ಪ್ರಭುವಾದ ಇಂದ್ರನನ್ನೂ ಸೋಲಿಸಿ, ಈ ದುರವಸ್ಥೆಗೆ ತಂದಿಟ್ಟನು. ಅವನ ನಿಜಸ್ಥಿತಿಯನ್ನು ನಿನ್ನಿಂದ ತಿಳಿಯಬೇಕೆಂದಿರುವೆವು" ಎಂದರು. ಆಗ ಬ್ರಹ್ಮನು ಮನಸ್ಸಿನಲ್ಲಿ ಶಂಭುವನ್ನು ಧ್ಯಾನಿಸಿ, ಆ ದೇವತೆಗಳನ್ನು ಕುರಿತು "ದೇವತೆಗಳಿರಾ! ಆ ಬಾಲನೇ ಚರಾಚರಾತ್ಮಕವಾದ ಜಗತ್ತಿಗೆಲ್ಲಾ ಪ್ರಭುವೆನಿಸಿದ ರುದ್ರನು. ಆ ಮಹೇಶ್ವರನಿಗಿಂತಲೂ ಮೇಲಾದುದು ಲೋಕದಲ್ಲಿ ಬೇರೊಂದಿಲ್ಲ. ಉಮಾದೇವಿಯ ತೊಡೆಯಲ್ಲಿ ನೀವು ನೋಡಿದ ಆ ಬಾಲನು, ಪಾರ್ವತಿಗಾಗಿಯೇ ಆ ರೂಪದಿಂದ ಅಲ್ಲಿಗೆ ಬಂದಿರುವನು. ನಾನೂ ನಿಮ್ಮೊಡನೆ ಬರುವೆನು. ನಾವೆಲ್ಲರೂ ಹೋಗಿ ಅವನಲ್ಲಿಯೇ ಮರೆಹುಗುವೆವು. ಆ ಬಾಲನೇ ಸರ್ವಲೋಕೇಶ್ವರನಾದ ಶಂಕರನು" ಎಂದನು. ಎಲ್ಲರೂ ಬ್ರಹ್ಮನೊಡನೆ ತೇಜಸ್ವಿಯಾದ ಆ ಬಾಲನಿದ್ದಲ್ಲಿಗೆ ಬಂದರು. ಆಗ ಬ್ರಹ್ಮನು ಅವನ ಮಹಿಮೆಯನ್ನು ತಿಳಿದು ಹೀಗೆಂದು ಸ್ತುತಿಸಿದನು. "ಓ ದೇವಾ! ನೀನು ಯಜ್ಞಸ್ವರೂಪನು. ಈ ಪ್ರಪಂಚದ ಉತ್ಪತ್ತಿ ಸ್ಥಿತಿ ಲಯಗಳಿಗೆಲ್ಲ ನೀನು ಕಾರಣನು. ದೇವಶ್ರೇಷ್ಠನು. ನೀನೇ ಉತ್ತಮಸ್ಥಾನವೆನಿಸಿರುವೆ! ಚರಾಚರಪ್ರಪಂಚವನ್ನೆಲ್ಲ ನೀನು ವ್ಯಾಪಿಸಿರುವೆ. ಭೂತಭವಿಷ್ಯತ್ತುಗಳಿಗೆಲ್ಲ ಒಡೆಯನಾದ ಓ ಲೋಕನಾಥಾ! ನಿನ್ನ ಕೋಪಕ್ಕೆ ಪಾತ್ರನಾದ ಇಂದ್ರನಲ್ಲಿ ಪ್ರಸನ್ನನಾಗು" ಎಂದನು. ಬ್ರಹ್ಮನ ಈ ಪ್ರಾರ್ಥನೆಯನ್ನು ಕೇಳಿದೊಡನೆ, ಬಾಲರೂಪಿ

ಯಾದ ಆ ಮಹೇಶ್ವರನು ಪ್ರಸನ್ನಮುಖದಿಂದ ದೊಡ್ಡದಾಗಿ ನಕ್ಕನು. ಇಂದ್ರನ ಸ್ತಬ್ಧವಾಗಿದ್ದ ತೋಳು ಮೊದಲಿನ ಸ್ಥಿತಿಗೆ ಬಂದಿತು. ರುದ್ರನು ಪತ್ನೀಸಮೇತನಾಗಿ ಕಾಣಿಸಿ, ದೇವತೆಗಳನ್ನು ಅನುಗ್ರಹಿಸಿದನು. ಓ ಧನಂಜಯಾ! ದಕ್ಷಯಾಗಧ್ವಂಸಕನಾದ ರುದ್ರನೇ ಆ ಬಾಲನು! ಅಗ್ನಿ ವಾಯು ಚಂದ್ರರೂ ಅವನೇ! ಅವನು ಸರ್ವಸ್ವರೂಪನು. ಸರ್ವಜ್ಞನು! ಅಶ್ವಿನೀ ದೇವತೆಗಳೂ, ವಿದ್ಯುತ್ತುಗಳೂ ಅವನೇ! ಅವನೇ ಜಗತ್ತಿಗೆ ಉತ್ಪತ್ತಿ ಸ್ಥಾನವು! ಪರ್ಜನ್ಯನೂ, ಸೂರ್ಯ ವರುಣರೂ, ಈಶಾನನೂ ಅವನೇ! ಅವನೇ ಕಾಲನೆಂದೂ, ಅಂತಕನೆಂದೂ, ಮೃತ್ಯುವೆಂದೂ, ಯಮನೆಂದೂ ವ್ಯವಹರಿಸಲ್ಪಡುವನು. ರಾತ್ರಿ, ಹಗಲು, ಸಂಜೆ, ಪಕ್ಷ, ಮಾಸ, ಋತು, ಸಂವತ್ಸರಗಳೆಂಬ ಕಾಲವಿಭಾಗಗಳೂ ಅವನೇ! ಧಾತೃ ವಿಧಾತೃಗಳೂ ಅವನೇ! ಅವನು ವಿಶ್ವಾತ್ಮಕನು. ಸರ್ವಕಾರ್ಯಪ್ರೇರಕನು. ತಾನು ಶರೀರರಹಿತನಾಗಿ, ಎಲ್ಲಾ ದೇವತೆಗಳ ಶರೀರಗಳನ್ನೂ ತನ್ನಲ್ಲಿ ಧರಿಸಿರುವನು. ಎಲ್ಲಾ ದೇವತೆಗಳೂ ಅವನನ್ನು ಬಹುರೂಪದಿಂದಲೂ, ನೂರುಸಾವಿರಲಕ್ಷ ರೂಪಗಳಿಂದಲೂ ವಿಧವಿಧವಾಗಿ ಸ್ತುತಿಸುವರು. ವೇದಜ್ಞರು ಆ ದೇವನಿಗೆ ಘೋರರೂಪವೊಂದು, ಮಂಗಳಕರವಾದುದೊಂದು, ಈ ಎರಡುಬಗೆಯ ರೂಪಗಳಿರುವುದಾಗಿಯೂ, ಆ ಎರಡು ರೂಪಗಳೇ ಇನ್ನೂ ಎಷ್ಟೋ ರೂಪವಿಭಾಗಗಳಿಂದ ತೋರುವುವೆಂದೂ ಹೇಳುವರು. ಆ ಮುಖ್ಯಶರೀರಗಳೆರಡರಲ್ಲಿ ಅಗ್ನಿ, ವಿಷ್ಣು, ಭಾಸ್ಕರರೆಂಬಿವು ರಾಕ್ಷಸಸ್ವರೂಪಿಯಾದ ಆ ಭಗವಂತನ ಘೋರಸ್ವರೂಪಗಳು. ನೀರು, ತೇಜಸ್ಸು, ಚಂದ್ರನೆಂಬಿವು ಅವನ ಸೌಮ್ಯಶರೀರಗಳು. ವೇದ ವೇದಾಂಗ ಪುರಾಣಗಳಲ್ಲಿಯೂ, ಅಧ್ಯಾತ್ಮರಹಸ್ಯಗಳಲ್ಲಿಯೂ ಉತ್ತಮರಹಸ್ಯವೆಂದರೆ ಆ ಮಹೇಶ್ವರನೇ! ಇಂತಹ ಮಹಾಮಹಿಮೆಯುಳ್ಳ ಅವನ ಗುಣಗಳನ್ನು ಸಾವಿರಾರು ವರ್ಷಗಳವರೆಗೆ ಎಡೆಬಿಡದೆ ಹೇಳಿದರೂ, ನನ್ನಿಂದ ಪೂರ್ಣವಾಗಿ ಮುಗಿಸಲು ಸಾಧ್ಯವಲ್ಲ. ಎಲ್ಲಾವಿಧದ ದುಷ್ಟಗ್ರಹ ಪಿಶಾಚಗಳು ಮೆಟ್ಟಿದ್ದರೂ, ಎಷ್ಟೋ ಪಾಪಗಳನ್ನು ಮಾಡಿದ್ದರೂ ಆ ಭಗವಂತನನ್ನು ಮರೆಹೊಕ್ಕವರಿಗೆ, ಅವನ ಅನುಗ್ರಹದಿಂದ ಅವೆಲ್ಲ ಬಿಟ್ಟು ಹೋಗುವುವು. ಮನುಷ್ಯರಿಗೆ ಆಯುರಾರೋಗ್ಯೈಶ್ವರ್ಯಗಳನ್ನೂ, ಧನಸಮೃದ್ಧಿಯನ್ನೂ, ಪೂರ್ಣಾಭೀಷ್ಟಗಳನ್ನೂ ಕೊಡತಕ್ಕವನು ಅವನೇ!

ಅವನೇ ಅವುಗಳನ್ನು ಹಿಂತಿರುಗಿ ತೆಗೆದುಕೊಳ್ಳುವನು. ಇಂದ್ರಾದಿ ದೇವ
ಗಳಮೇಲೆಯೂ ಅವನಿಗೆ ಪ್ರಭುತ್ವವುಂಟು. ಮನುಷ್ಯರ ಶುಭಾಶುಭಗ
ನ್ನೆಲ್ಲ ಅವನು ಬಲ್ಲನು. ಅಭೀಷ್ಟಗಳಿಗೆಲ್ಲ ಪ್ರಭುವಾದುದರಿಂದ, ಅವನ
ಈಶ್ವರನೆಂದೂ, ಮಹಾಭೂತಗಳಿಗೆ ಪ್ರಭುವಾದುದರಿಂದ ಮಹೇಶ್ವರನೆಂದು
ಕರೆಯಲ್ಪಡುವನು. ವಿವಿಧರೂಪಗಳಿಂದ ಹಲವುಬಗೆಯಾಗಿ ಪ್ರಪಂಚ
ನ್ನೆಲ್ಲ ಅವನು ವ್ಯಾಪಿಸಿರುವನು. ಅವನ ಮುಖವೇ ಸಮುದ್ರದಲ್ಲಿ ಬಡವ
ಮುಖವೆಂಬ ಹೆಸರಿನಿಂದ ನೆಲೆಗೊಂಡು, ಜಲಮಯವಾದ ಹವಿಸ್ಸನ
ಪಾನಮಾಡುತ್ತಿರುವುದು. ಆ ಮಹಾದೇವನು ಶ್ಮಶಾನಗಳಲ್ಲಿ ನಿತ್ಯವಾ
ಮಾಡುತ್ತಿರುವನು. ಅಲ್ಲಿ ಇವನನ್ನು ಜನರು ವೀರಸ್ಥಾನನೆಂದು ಭಾವಿ
ಉಪಾಸಿಸುತ್ತಿರುವರು. ಇವನ ರೂಪಗಳು ಬಹುವಿಧವಾಗಿ ಮಹಾಘೋ
ವಾಗಿ ತೇಜೋವಿಶಿಷ್ಟವಾಗಿರುವುದು. ಆಯಾ ರೂಪಗಳಿಂದ ಜನರು ಅ
ನನ್ನು ಬೇರೆಬೇರೆ ವಿಧವಾಗಿ ಭಾವಿಸಿ ಪೂಜಿಸುವರು. ಬೇರೆಬೇರೆ ನಾಮ
ಳಿಂದ ಅವನನ್ನು ಕೀರ್ತಿಸುತ್ತಿರುವರು. ಅವನ ಮಹಿಮೆಗೂ, ವಿಭುತ್ವಕ್ಕೂ
ಅದ್ಭುತಕರ್ಮಗಳಿಗೂ ತಕ್ಕಂತೆ, ಅರ್ಥವತ್ತಾದ ಹಲವು ನಾಮಧೇಯಗಳ
ಅವನಿಗೆ ಪ್ರಸಿದ್ಧವಾಗಿರುವುವು. ಅವು ಆ ಅರ್ಥಗಳಿಂದ ನಿರ್ವಚನಮಾ
ಲ್ಪಡುವುವು. ವೇದದಲ್ಲಿ ಶತರುದ್ರೀಯವೆಂಬ ಮಂತ್ರಗಳು ಆ ಮಹಾದೆ
ವನ ವಿಷಯವಾದುದೇ! ಆ ಮಹಾತ್ಮನನ್ನುದ್ದೇಶಿಸಿ ಅನಂತರುದ್ರವೆಂ
ಉಪಸ್ಥಾನವುಂಟು. ದೈವ ಮಾನವ ಸಂಬಂಧವಾದ ಕಾಮಿತಗಳಿಗೆಲ್ಲಾ
ಅವನೇ ಪ್ರಭು! ಅವನು ಸರ್ವವ್ಯಾಪಿ! ಸರ್ವನಿಯಾಮಕನು! ಬ್ರಾಹ
ಣರೂ, ಮಹರ್ಷಿಗಳೂ ಅವನನ್ನು ಎಲ್ಲಕ್ಕಿಂತಲೂ ಮಹತ್ತಾದ ಭೂ
ವೆಂದು ನಿರೂಪಿಸುವರು. ಅವನು ಆದಿದೇವನು! ಅಗ್ನಿಯು ಅವನ ಮು
ದಿಂದ ಹುಟ್ಟಿದುದು. ಪಶುಗಳನ್ನೆಲ್ಲ (ಪ್ರಾಣಿಗಳನ್ನೆಲ್ಲ) ರಕ್ಷಿಸುತ್ತ, ಅವು
ಳೊಡನೆ ರಮಿಸುತ್ತಿರುವುದರಿಂದ, ಅವನನ್ನು ಪಶುಪತಿಯೆನ್ನುವರು. ಅವ
ದಿವ್ಯಲಿಂಗವು ಬ್ರಹ್ಮಚರ್ಯೆಯಿಂದ ಪ್ರತಿಷ್ಠಿತವಾದುದು. ಇವನು ಲೋ
ಗಳನ್ನೆಲ್ಲ ಮಹತ್ತಾಗಿಸುವುದರಿಂದ ಮಹೇಶ್ವರನೆಂದು ಕೀರ್ತಿಸಲ್ಪಡುವನ
ದೇವ ಗಂಧರ್ವ ಮಹೋರಗಾದಿಗಳೆಲ್ಲ ಅತ್ಯುಚ್ಚಸ್ಥಾನದಲ್ಲಿ ನೆಲೆಗೊಂ
ಇವನ ಲಿಂಗವನ್ನು ಅರ್ಚಿಸುತ್ತಿರುವರು. ಆ ಲಿಂಗಪೂಜೆಯಿಂದ ಮಹೇ

ರನು ಸಂತುಷ್ಟನಾಗಿ ಅವರಿಗೆ ಶುಭವನ್ನುಂಟುಮಾಡುವನು. ಸ್ಥಾವರ ಜಂಗಮಾತ್ಮಕವಾಗಿರುವ ಭೂತ ಭವಿಷ್ಯದ್ವರ್ತಮಾನಗಳೆಂಬ ಎಲ್ಲಾ ವಸ್ತುಗಳ ರೂಪವೂ ಅವನದೇ ಆಗಿರುವುದರಿಂದ, ಅವನನ್ನು ಬಹುರೂಪನೆನ್ನುವರು. ಅವನು ಒಂದೇ ಕಣ್ಣುಳ್ಳವನಾಗಿಯೂ, ಸರ್ವತೋಮುಖನಾದ ಕಣ್ಣುಳ್ಳವನಾಗಿಯೂ ಪ್ರಕಾಶಿಸುವನು. ಅವನು ಕ್ರೋಧದಿಂದ ಲೋಕಗಳನ್ನೆಲ್ಲ ಆವರಿಸುತ್ತಿರುವುದರಿಂದ ಸರ್ವನೆಂದು ಕರೆಯಲ್ಪಡುವನು. ಧೂಮ್ರವರ್ಣದ ರೂಪವುಳ್ಳವನಾದುದರಿಂದ, ಧೂರ್ಜಟಿಯೆನಿಸಿರುವನು. ವಿಶ್ವೇದೇವತೆಗಳು ಅವನಲ್ಲಿ ನೆಲೆಗೊಂಡಿರುವುದರಿಂದ ವಿಶ್ವರೂಪನೆಂದೂ, ಭೂವ್ಯಾಕಾಶ ಜಲಗಳೆಂಬ ಮೂರು ದೇವತೆಗಳಿಗೆ ವಾಸಭೂತನಾದುದರಿಂದ ತ್ರ್ಯಂಬಕನೆಂದೂ, ಮನುಷ್ಯರಿಗೆ ಕ್ಷೇಮವನ್ನು ಕೋರಿ ಅವರ ಕರ್ಮಗಳಲ್ಲಿ ಆಯಾ ಕೋರಿಕೆಗಳನ್ನು ವೃದ್ಧಿಗೊಳಿಸಿ, ಅವರಿಗೆ ಶುಭಕರನಾದುದರಿಂದ ಶಿವನೆಂದೂ ಕರೆಯಲ್ಪಡುವನು. ಸಾವಿರಕಣ್ಣುಗಳಿಂದಲೂ, ಹತ್ತುಸಾವಿರ ಕಣ್ಣುಗಳಿಂದಲೂ, ಸರ್ವತೋಮುಖವಾದ ಕಣ್ಣುಗಳಿಂದಲೂ ಕೂಡಿ, ಸಮಸ್ತಲೋಕಗಳ ಕ್ಷೇಮದಲ್ಲಿ ಕಣ್ಣಿಟ್ಟು ಅದನ್ನು ರಕ್ಷಿಸುವುದರಿಂದ ಅವನು ಮಹಾದೇವನೆನಿಸುವನು. ಮೊದಲು ಮಹತ್ತತ್ವವಾಗಿದ್ದು, ಪ್ರಾಣೋತ್ಪತ್ತಿಸ್ಥಾನದಲ್ಲಿ ನೆಲೆಗೊಂಡು, ಸ್ಥಿರವಾದ ಲಿಂಗದಲ್ಲಿ ಸದಾ ಸಾನ್ನಿಧ್ಯಮಾಡುವುದರಿಂದ ಅವನು ಸ್ಥಾಣುವೆನಿಸುವನು. ಸೂರ್ಯಚಂದ್ರರಲ್ಲಿರುವ ಕಾಂತಿಗಳಿಗೆ ಕೇಶವೆಂದು ಹೆಸರು. ಆ ತೇಜಸ್ಸೇ ರುದ್ರನಲ್ಲಿ ಅಡಗಿರುವುದರಿಂದ ಅವನು ವ್ಯೋಮಕೇಶನೆಂದು ಕೀರ್ತಿಸಲ್ಪಡುವನು. ಭೂತ ಭವ್ಯ ಭವಿಷ್ಯಗಳೆಂಬ ಸಮಸ್ತಜಗತ್ತೂ ಆ ಈಶ್ವರನಲ್ಲಿಯೇ ನೆಲೆಗೊಂಡು, ಅವನಿಂದಲೇ ಉತ್ಪನ್ನವಾಗುವುದರಿಂದ, ಅವನು ಭೂತ ಭವ್ಯ ಭವೋದ್ಭವನೆಂದು ಕೀರ್ತಿಸಲ್ಪಡುವನು. ಕಪಿಶಬ್ದವು ಶ್ರೇಷ್ಠವಾಚಕವು. ವೃಷವೆಂದರೆ ಧರ್ಮವು. ಅವನು ಉತ್ತಮಧರ್ಮಸ್ವರೂಪನಾದುದರಿಂದ ವೃಷಾಕಪಿಯೆಂದು ಕೀರ್ತಿಸಲ್ಪಡುವನು. ಬ್ರಹ್ಮೇಂದ್ರ ಯಮ ವರುಣ ಕುಬೇರಾದಿ ಸಮಸ್ತದೇವತೆಗಳನ್ನೂ ಅಡಗಿಸಿಟ್ಟು, ಅವರನ್ನು ಉಪಸಂಹರಿಸತಕ್ಕವನೂ ಅವನೇ ಆದುದರಿಂದ ಅವನು ಹರನೆಂದು ಕೀರ್ತಿಸಲ್ಪಡುವನು. ಅವನು ತನ್ನ ಕಣ್ಣುಗಳೆರಡನ್ನೂ ಮುಚ್ಚಿ, ತನ್ನ ಹಣೆಯಲ್ಲಿ ಬಲಾತ್ಕಾರದಿಂದ ಬೇರೊಂದು ಕಣ್ಣನ್ನು

ಸೃಷ್ಟಿಸಿದುದರಿಂದ ಅವನನ್ನು ತ್ರ್ಯಕ್ಷನೆನ್ನುವರು. ಈ ಲೋಕದ ಪ್ರಾಣಿಗಳಿಗೆಲ್ಲ ಅವನು ಸಮವಾಗಿಯೂ, ಅವುಗಳ ಪುಣ್ಯಪಾಪಸಂಬಂಧಗಳಿಂದ ವಿಷಮವಾಗಿಯೂ ತೋರುತ್ತ ನೆಲೆಗೊಂಡಿರತಕ್ಕವನು. ಮತ್ತು ಪ್ರಾಣಿಗಳಲ್ಲಿ ಪ್ರಾಣಾಪಾನಾದಿ ವಾಯುರೂಪದಿಂದ ಇರತಕ್ಕವನೂ ಅವನೇ! ಆ ಮಹಾತ್ಮನ ವಿಗ್ರಹವನ್ನೂ, ಲಿಂಗವನ್ನೂ ಪೂಜಿಸತಕ್ಕವನು ಮಹತ್ತಾದ ಐಶ್ವರ್ಯವನ್ನು ಪಡೆಯುವನು. ಆ ಈಶ್ವರನ ಶುಭಕರವಾದ ಶರೀರದಲ್ಲಿ ಎರಡು ತೊಡೆಗಳವರೆಗಿನ ಅರ್ಧಭಾಗವು ಅಗ್ನಿಸಂಬಂಧವಾದುದು. ಇನ್ನರ್ಧವು, ಸೌಮ್ಯವೆಂದರೆ, ಚಂದ್ರಮಯವಾದುದು. ಹೀಗೆ ಅವನ ಶರೀರದಲ್ಲಿ ಆಗ್ನೇಯವೆಂದೂ, ಸೌಮ್ಯವೆಂದೂ ಎರಡು ವಿಭಾಗವುಂಟು. ಆ ಈಶ್ವರನ ಸೌಮ್ಯವೆಂಬ ಶರೀರಭಾಗವು ದಿವ್ಯವೆನಿಸಿ, ಬೇರೆ ಎಲ್ಲಾ ದೇವಶರೀರಗಳಿಗಿಂತಲೂ ಅಧಿಕ ತೇಜಸ್ಸಿನಿಂದಲೂ, ಮಹತ್ವದಿಂದಲೂ ಬೆಳಗುತ್ತಿರುವುದು. ಆಗ್ನೇಯವೆಂಬ ಮಾನವಶರೀರಭಾಗವು ಭಯಂಕರವಾದುದು. ಅದು ಅಗ್ನಿಯೆಂದೇ ಕರೆಯಲ್ಪಡುವುದು. ಆ ಶಿವನು ತನ್ನ ಶುಭಕರವಾದ ಶರೀರಭಾಗದಿಂದ ಬ್ರಹ್ಮಚರ್ಯವನ್ನು ನಡೆಸುವನು. ಘೋರತರವಾದ ಶರೀರಭಾಗದಿಂದ ಪ್ರಪಂಚವನ್ನೆಲ್ಲ ಭಕ್ಷಿಸುವನು. ಸಮಸ್ತವನ್ನೂ ಸಂಹರಿಸತಕ್ಕವನಾಗಿ, ತೀಕ್ಷ್ಣನೂ, ಉಗ್ರರೂಪಿಯೂ, ಸಂತಾಪಕನೂ ಆಗಿರುವುದರಿಂದಲೂ, ರಕ್ತ ಮಾಂಸ ಮೇದಸ್ಸುಗಳನ್ನು ಭುಜಿಸುವುದರಿಂದಲೂ ರುದ್ರನೆನಿಸುವನು. ಓ ಅರ್ಜುನಾ! ಯುದ್ಧಕಾಲದಲ್ಲಿ ನಿನ್ನಮುಂದೆ ಪಿನಾಕಪಾಣಿಯಾಗಿ ನಿಂತು ಶತ್ರುಗಳನ್ನು ಕೊಲ್ಲುತ್ತಿರುವಹಾಗೆ ನಿನಗೆ ಯಾವನು ಕಾಣಿಸಿದನೋ ಅವನು ಆ ಮಹಾದೇವನೇ! ಅದುಮಾತ್ರವಲ್ಲ. ನೀನು ಸೈಂಧವನನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದಮೇಲೆ, ನಿನಗೆ ಸ್ವಪ್ನದಲ್ಲಿ ಕೃಷ್ಣನು ಪರ್ವತಾಗ್ರದಮೇಲೆ ತೋರಿಸಿದ ಪುರುಷನೂ ಆ ಮಹಾದೇವನೇ! ಹಿಂದೆ ಯಾವನು ನಿನಗೆ ಅನೇಕ ದಿವ್ಯಾಸ್ತ್ರಗಳನ್ನು ಅನುಗ್ರಹಿಸಿದನೋ ಅವನೇ ಈಗ ನಿನ್ನ ಮುಂದೆ ಕಾಣಿಸಿದನು. ನೀನು ಅನೇಕ ಪ್ರಬಲ ದಾನವರನ್ನು ಕೊಂದುದೂ ಆ ಅಸ್ತ್ರಗಳ ಮಹಿಮೆಯಿಂದಲೇ! ಧನವನ್ನೂ, ಯಶಸ್ಸನ್ನೂ, ಆಯುಸ್ಸನ್ನೂ ವೃದ್ಧಿಗೊಳಿಸತಕ್ಕುದಾಗಿ, ವೇದಸಮಾನವಾಗಿರುವ ಪವಿತ್ರವಾದ ಶತರುದ್ರೀಯವೆಂಬ ಸ್ತೋತ್ರವನ್ನೇ ನಿನಗೆ ಹೇಳಿದೆನು, ಇದು

ಸಮಸ್ತದುಃಖಗಳನ್ನೂ, ಸಮಸ್ತ ದೋಷಗಳನ್ನೂ ನೀಗಿಸಿ, ಸರ್ವಾಭೀಷ್ಟಗಳನ್ನೂ ಕೊಡತಕ್ಕುದು. ಅತ್ಯಂತಪವಿತ್ರವಾದುದು! ಪುಣ್ಯಪ್ರದವಾದುದು. ಎಲ್ಲಾ ಭಯವನ್ನೂ ನೀಗಿಸತಕ್ಕುದು. (ಶುದ್ಧ, ಶಬಲ, ಸೂಕ್ಷ್ಮ, ವಿರಾಟ್ಟುಗಳೆಂಬ) ನಾಲ್ಕುಬಗೆಯುಳ್ಳ ಈ ಸ್ತೋತ್ರವನ್ನು ಯಾವನು ಕಿವಿಯಿಂದ ಕೇಳುವನೋ, ಅವನು ಎಲ್ಲಾ ಶತ್ರುಗಳನ್ನೂ ಜಯಿಸಿ, ರುದ್ರಲೋಕದಲ್ಲಿ ಗೌರವಿಸಲ್ಪಡುವನು. ಯುದ್ಧಕಾಲದಲ್ಲಿ ಪಠನಯೋಗ್ಯವಾದ ಈ ಸ್ತೋತ್ರವನ್ನು ಪಠಿಸಿದವನೂ, ಕೇಳಿದವನೂ ಯುದ್ಧದಲ್ಲಿ ಜಯಹೊಂದುವನು. ಆ ವಿಶ್ವೇಶ್ವರನನ್ನು ಭಜಿಸಿ, ಅವನ ಪ್ರಸಾದಕ್ಕೆ ಪಾತ್ರರಾದವರು ಎಲ್ಲಾ ಕೋರಿಕೆಗಳನ್ನೂ ಹೊಂದುವರು. ಓ ಕುಂತೀಕುಮಾರಾ! ಇನ್ನು ನೀನು ಹೊರಡು! ಯುದ್ಧಮಾಡು. ನಿನಗೆ ಎಂದಿಗೂ ಪರಾಜಯವಿರುವುದಿಲ್ಲ. ಯಾವ ನಿನಗೆ ಸಾಕ್ಷಾಜ್ಜನಾರ್ದನನು ಮಂತ್ರಿಯಾಗಿಯೂ, ರಕ್ಷಕನಾಗಿಯೂ ನಿನ್ನ ಪಕ್ಕದಲ್ಲಿಯೇ ಇರುತ್ತಿರುವನೋ, ಅಂತಹ ನಿನಗೆ ಪರಾಜಯವೆಲ್ಲಿಯದು?" ಎಂದು ಹೇಳಿ ವ್ಯಾಸಮುನಿಯು ತಾನು ಬಂದ ದಾರಿಯನ್ನು ಹಿಡಿದು ಹೊರಟುಹೋದನು.

ಓ ಜನಮೇಜಯರಾಜಾ! ಈ ವೃತ್ತಾಂತವನ್ನು ಸಂಜಯನು ಧೃತರಾಷ್ಟ್ರನಿಗೆ ಪೂರ್ಣವಾಗಿ ತಿಳಿಸಿದಮೇಲೆ, ಮುಂದೆ ನಡೆಯತಕ್ಕ ಕರ್ಣನ ಯುದ್ಧವನ್ನು ನೋಡುವುದಕ್ಕಾಗಿ ಶಿಬಿರಕ್ಕೆ ಹೊರಟುಹೋದನು. ಬ್ರಾಹ್ಮಣನಾದರೂ ಮಹಾಬಲನೆನಿಸಿದ ದ್ರೋಣನು, ಹೀಗೆ ಐದುದಿನಗಳವರೆಗೆ ಘೋರಯುದ್ಧವನ್ನು ಮಾಡಿ, ಕೊನೆಗೆ ಯುದ್ಧದಲ್ಲಿ ತಾನೇ ಶರೀರವನ್ನು ನೀಗಿ, ಬ್ರಹ್ಮಲೋಕವನ್ನು ಹೊಂದಿದನು. ಓ ಜನಮೇಜಯರಾಜಾ! ವೇದಗಳನ್ನು ಚೆನ್ನಾಗಿ ಅಧ್ಯಯನಮಾಡುವುದರಿಂದ ಯಾವ ಫಲವೋ ಈ ಪರ್ವವನ್ನು ಪಠಿಸುವುದರಿಂದಲೂ ಅದೇ ಫಲವುಂಟು. ಕ್ಷತ್ರಿಯರು ಇದನ್ನು ಪಠಿಸುವುದರಿಂದ ಯುದ್ಧದಲ್ಲಿ ಭಯರಹಿತರಾಗಿ ದೊಡ್ಡ ಕೀರ್ತಿಯನ್ನು ಹೊಂದುವರು. ಈ ಪರ್ವವನ್ನು ಆಗಾಗ ಪಠಿಸಿದರೂ, ಕಿವಿಯಿಂದ ಕೇಳಿದರೂ ಮನುಷ್ಯನು ಅತ್ಯಂತ ಘೋರಪಾಪಗಳಿಂದಲೂ ಮುಕ್ತನಾಗುವನು. ಈ ಪರ್ವವನ್ನು ಪಠಿಸುವುದರಿಂದ ಬ್ರಾಹ್ಮಣರಿಗೆ ಯಜ್ಞಫಲವು ಲಭಿಸು

ವುದು. ಕ್ಷತ್ರಿಯರಿಗೆ ಯುದ್ಧದಲ್ಲಿ ಜಯವೂ, ಕೀರ್ತಿಯೂ ಉಂಟಾಗುವುದು. ಇತರವರ್ಣದವರು ತಮ್ಮ ಇಷ್ಟವರಗಳನ್ನೂ, ಪುತ್ರಪೌತ್ರರನ್ನೂ ಇನ್ನೂ ಎಲ್ಲಾ ಕೋರಿಕೆಗಳನ್ನೂ ಪಡೆಯುವರು.

ಇದು ಇನ್ನೂರ ಮೂರನೆಯ ಅಧ್ಯಾಯವು.

**ಇಲ್ಲಿಗೆ ನಾರಾಯಣಾಸ್ತ್ರಮೋಕ್ಷಪರ್ವವು ಮುಗಿದುದು.**

# ದ್ರೋಣಪರ್ವವು ಸಮಾಪ್ತವು.

ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ

ಭದ್ರಂ! ಶುಭಂ!! ಮಂಗಳಂ!!!

ಶ್ರೀರಸ್ತು.



Sreevathsa Press. 113. Big Street. Triplicane. Madras.